ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೩೮

# ಶ್ರೀಮದ್ವಾಯುಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೬

ಅನುವಾದಕ :

ಸಾಹಿತ್ಯ, ವೇದಾಂತ, ಕರ್ಣಾಟಕ, ಆಸ್ಥಾನ ವಿದ್ವಾನ್

**ಆರ್. ಸೇತುಮಾಧವಾಚಾರ್**

ಪಂಡಿತ, ಗೌ॥ ಟ್ರೈನಿಂಗ್ ಕಾಲೇಜ್, ಮೈಸೂರು.

Rs 6-5-0

ಮೈಸೂರು :

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್

೧೯೪೮

# ಪೀಠಿಕೆ



ಶ್ರೀಮದ್ವಾಯುಮಹಾಪುರಾಣದ ಆರನೆಯ ಸಂಚಿಕೆಯು ಮುದ್ರಿತವಾಗಿ ಈಗ ಪ್ರಕಾಶಕ್ಕೆ ಬಂದಿದೆ. ಇದರಲ್ಲಿ ಮುಖ್ಯವಾಗಿ ಕಲಿಯುಗದ ಧರ್ಮಗಳು, ಗಯಾ ಮಹಿಮೆ, ಗದಾಧರನ ಮಹಾತ್ಮ್ಯ ಇವುಗಳು ವಿಶೇಷವಾಗಿ ವರ್ಣಿತವಾಗಿವೆ. ಪುರುಮಹಾರಾಜನ ವಂಶವು- ಅಧಿಸಾಮಕೃಷ್ಣನೆಂಬ ರಾಜನವರೆಗೆ ಪ್ರಖ್ಯಾತ ವಾಗಿಯೂ, ಕ್ಷತ್ರಿಯಾಧಿಷ್ಠಿತವಾಗಿಯೂ ಇರುವುದು. ತರುವಾಯ ಆ ರಾಜ್ಯವು ಚಂದ್ರಗುಪ್ತಾದಿಗಳ ವಶವಾಗುವುದು. ಹೀಗೆ ಕಲಿಯುಗದ ಕೊನೆಯ ಭಾಗದಲ್ಲಿ ಪ್ರಜೆಗಳು ವರ್ಣಾಶ್ರಮಧರ್ಮಾಚಾರಗಳನ್ನು ತ್ಯಜಿಸುವರು. ವರ್ಣಾಶ್ರಮಧರ್ಮ ಗಳು, ತಪಸ್ಸು, ಸತ್ಯ ಇವೇ ಮೊದಲಾದುವು ನಷ್ಟವಾಗಿ, ವರ್ಣಸಾಂಕರ್ಯ ವಾಗುವುದು. ಬ್ರಾಹ್ಮಣಾದಿ ವರ್ಣದವರು, ತಮ್ಮ ಜೀವನಕ್ಕಾಗಿ ಶಯನಾಸನ ಭೋಜನಾದಿಗಳಲ್ಲಿ ಇತರರ ಸಂಸರ್ಗವನ್ನು ಹೊಂದಿ, ಧರ್ಮಭ್ರಷ್ಟರಾಗುವರು. ಇತರರು ಬ್ರಾಹ್ಮಣಾದಿಧರ್ಮಗಳನ್ನು ಆಶ್ರಯಿಸಿ, ಅಧ್ಯಾಪಕರೂ, ಯಾಜಕರೂ, ಅಧಿಕಾರಿಗಳೂ ಆಗಿ, ಮಹತ್ವವನ್ನು ಪಡೆಯುವರು. ಸತ್ಪುರುಷರು ನಾನಾ ಕಷ್ಟಗಳಿಗೆ ಸಿಕ್ಕಿ, ಆಶ್ರಯವಿಲ್ಲದೆಯೇ ಮನೆಮಠಗಳನ್ನು ತ್ಯಜಿಸಿ, ವನದುರ್ಗಗಳನ್ನೂ, ಬೆಟ್ಟ ಗುಡ್ಡಗಳನ್ನೂ, ನದೀನದಪರ್ವತಾದಿಗಳನ್ನೂ ಹೊಂದಿ, ಕಂದಮೂಲಫಲಪರ್ಣಾದಿ ಗಳಿಂದ ಜೀವಿಸುವರು. ಹೀಗೆ ಕಲಿಯುಗವು ಕೊನೆಯಾಗುವುದು.

ಹೀಗೆ ಕಲಿಯುಗವು ಕಳೆಯಲು, ಪ್ರಲಯವು ಸಂಭವಿಸುವುದು. ಆಗ ಮೂರು ಲೋಕಗಳೂ ನಾಶವಾಗುವುವು. ತರುವಾಯ ಸ್ವರ್ಗಲೋಕದಲ್ಲಿರುವ ದೇವಾದಿಗಳು ಮಹರ್ಲೋಕಕ್ಕೆ ಹೋಗುವರು. ಆ ಲೋಕವೂ ಕೂಡ ನಷ್ಟವಾದರೆ ಜನಲೋಕಕ್ಕೆ ಹೋಗುವರು. ಪ್ರಲಯದ ಆದಿಯಲ್ಲಿ, ಸಪ್ತಸೂರ್ಯರು ಏಕಕಾಲದಲ್ಲಿ ಉದಯಿಸು ವರು. ಆಗ ಈ ಭೂಗೋಳವು ಕಾಯ್ದು, ಕಾದ ಕಬ್ಬಿಣದ ಗುಂಡಿನಂತೆ ದುಂಡಾ ಗಿಯೂ, ಕೆಂಪಾಗಿಯೂ ಕಾಣುವುದು. ತರುವಾಯ ಪ್ರಲಯಕಾಲದ ಮೇಘಗಳು, ಧಾರಾಕಾರವಾಗಿಯೂ, ಅವಿಚ್ಛಿನ್ನವಾಗಿಯೂ ಮಳೆಯನ್ನು ಕರೆಯಲು, ಈ ಜಗತ್ತು ಪ್ರಲಯೋದಕದಲ್ಲಿ ಮುಳುಗಿಹೋಗುವುದು. ಆಗ ಪರಬ್ರಹ್ಮನೊಬ್ಬನೇ ಯೋಗ ನಿದ್ರಾರೂಢನಾಗಿಯೂ, ವಟಪತ್ರಶಾಯಿಯಾಗಿಯೂ ಇರುವನು. ತರುವಾಯ ಮಹರ್ಲೋಕವಾಸಿಗಳಾದ ದೇವತೆಗಳೆಲ್ಲರೂ, ಆ ಶ್ರೀಮನ್ನಾರಾಯಣನನ್ನು ಹೊಗಳು ವರು. ಹೀಗೆ ಬ್ರಹ್ಮದೇವನ ರಾತ್ರಿಯ ಕಾಲದಲ್ಲಿ ಪ್ರಲಯವೂ, ಹಗಲಲ್ಲಿ ಸೃಷ್ಟಿ ಕ್ರಮವೂ, ನಡೆಯುವುವು. ಲಯಕಾಲದಲ್ಲಿ, ಪೃಥ್ವಿಯು ಜಲದಲ್ಲಿಯೂ, ಜಲವು ಅಗ್ನಿಯಲ್ಲಿಯೂ, ಅಗ್ನಿಯು ವಾಯುವಿನಲ್ಲಿಯೂ, ಅದು ಆಕಾಶದಲ್ಲಿಯೂ ಲಯ

ವಾಗುವುವು. ಹೀಗೆ ಲಯವಾದ ಪಂಚಭೂತಗಳು ಅಹಂಕಾರತತ್ವದಲ್ಲಿಯೂ, ಅದು ಮಹತ್ತತ್ವದಲ್ಲಿಯೂ ಅದೂ ಸಹ ಪ್ರಕೃತಿಯಲ್ಲಿಯೂ ಲೀನವಾಗುವುವು. ಆಗ ಪ್ರಕೃತಿ ಮಾತ್ರವೇ ಜಲರೂಪವಾಗಿ ಉಳಿಯುವುದು ಹೀಗೆ ಪ್ರಲಯಕಾಲವು ಕಳೆದು ಸೃಷ್ಟಿಗೆ ಉಪಕ್ರಮವಾಗಲು, ಕೃತಯುಗವು ಪ್ರಾರಂಭವಾಗುವುದು. ಆಗ ಭಗವಂತನ ಇಚ್ಛಾನುಸಾರವಾಗಿ, ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿಯಿಂದ ಮಹತ್ತತ್ವಾದಿಗಳು ಸೃಷ್ಟವಾಗುವುವು. ಇದರಿಂದ ಮನುಷ್ಯರಲ್ಲಿಯೂ ಸಾತ್ವಿಕ, ರಾಜಸ ಮತ್ತು ತಾಮಸವೆಂಬ ಮೂರು ವೃತ್ತಿಗಳುಂಟಾಗುವುವು. ಸಾತ್ವಿಕವೃತ್ತಿಯಿಂದ ಸ್ವರ್ಗಾದ್ಯುತ್ತಮ ಪದವಿಗಳೂ, ರಾಜಸದಿಂದ ಭೂಮಿಯಲ್ಲಿ ಜನನಮರಣಗಳೂ, ತಾಮಸ ವೃತ್ತಿಯಿಂದ ನರಕಾದ್ಯನರ್ಥಗಳೂ ಸಂಭವಿಸುತ್ತವೆ. ಈ ರೀತಿಯಾಗಿ ಇವುಗಳಿಗೆ ಗುಣತ್ರಯಗಳೇ ಮುಖ್ಯಕಾರಣಗಳಾಗಿರುತ್ತವೆ.

ಈ ಸಂಪುಟದಲ್ಲಿ, ಗಯಾಮಹಿಮೆಯು ವಿಶೇಷವಾಗಿ ವರ್ಣಿತವಾಗಿದೆ. ಗಯಾಶ್ರಾದ್ಧದಿಂದ ಬ್ರಹ್ಮಹತ್ಯಾದಿ ಮಹಾಪಾತಕಗಳು ನಷ್ಟವಾಗಿ, ಮುಕ್ತಿಯುಂಟಾಗುವುದು. ಬ್ರಹ್ಮಜ್ಞಾನ, ಗಯಾಶ್ರಾದ್ಧ, ಗೋಗೃಹಮರಣ, ಕುರುಕ್ಷೇತ್ರಯಾತ್ರೆ ಇವು ನಾಲ್ಕೂ ಮುಕ್ತಿಯನ್ನು ಕೊಡುವುದರಲ್ಲಿ ಸಮವಾಗಿವೆ. ಈ ಕ್ಷೇತ್ರದಲ್ಲಿ, ಸಕಲ ತೀರ್ಥಾಭಿಮಾನಿದೇವತೆಗಳೂ, ಬ್ರಹ್ಮವಿಷ್ಣುಮಹೇಶ್ವರರೂ, ವೈತರಣೀ, ಕಾಮಧೇನು ಕಲ್ಪವೃಕ್ಷಾದಿಗಳೂ ಸದಾ ಸನ್ನಿಹಿತವಾಗಿರುವುವು. ಇದರಲ್ಲಿ ಮಾಡಿದ ಪಿತೃಕಾರ್ಯಾದಿಗಳು ಮಹಾಫಲದಾಯಕಗಳಾಗಿವೆ.

ಗಯಾಕ್ಷೇತ್ರವೆಂದು ನಾಮಬರಲು ಕಾರಣ:- ಪೂರ್ವದಲ್ಲಿ ಗಯಾನಾಮಕನಾದ ಒಬ್ಬ ಅಸುರನು, ಘೋರವಾದ ತಪಸ್ಸನ್ನು ಮಾಡಿ, ಬ್ರಹ್ಮವಿಷ್ಣುಮಹೇಶ್ವರಾದಿಗಳಿಂದ ಮಹಾವರಗಳನ್ನು ಪಡೆದು, ಲೋಕವಿಖ್ಯಾತನಾಗಿದ್ದನು. ಅವನ ದರ್ಶನಮಾತ್ರದಿಂದಲೇ ತ್ರಿಲೋಕವಾಸಿಗಳಾದ ಜನಗಳೆಲ್ಲರೂ ಮುಕ್ತಿಯನ್ನು ಹೊಂದುತ್ತಿದ್ದರು. ತರುವಾಯ ಭೂಲೋಕ, ಯಮಲೋಕಗಳು ಜನರಿಲ್ಲದೆ ಶೂನ್ಯವಾದುವು. ಆಗ ಯಮಾದಿ ದೇವತೆಗಳು ಬ್ರಹ್ಮನನ್ನು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯಂತೆ ಬ್ರಹ್ಮದೇವನು, ಅಸುರನ ಬಳಿಗೆ ಹೋಗಿ, ಯಾಗವನ್ನು ಮಾಡಲು ಪವಿತ್ರವಾದ ನಿನ್ನ ದೇಹವನ್ನು ಕೊಡು ಎಂದು ಬೇಡಿದನು. ಅಸುರನು ಅದಕ್ಕೊಪ್ಪಿ ತನ್ನ ದೇಹವನ್ನು ಬ್ರಹ್ಮನಿಗೆ ಅರ್ಪಿಸಿದನು. ಆಗ ಬ್ರಹ್ಮನು. ಅವನ ಶರೀರದ ಮೇಲೆ ಮಹಾಯಾಗವನ್ನು ಮಾಡಿದನು ಆ ಶರೀರವು ಚಲಿಸದೇ ಇರುವುದಕ್ಕಾಗಿ ಅದರ ಮೇಲೆ ಮಹಾಶಿಲೆಯನ್ನು ಸ್ಥಾಪಿಸಿ, ವಿಷ್ಣ್ವಾದಿ ದೇವತೆಗಳೊಡನೆ ತಾನೂ ನಿಂತನು. ಆ ಗಯಾಸುರನ ನಾಮದಿಂದಲೇ ಗಯಾಕ್ಷೇತ್ರವು ಪ್ರಖ್ಯಾತವಾಗಿದೆ.

ಗಯಾಶಿಲೆಯಮಹಿಮೆ:—ಮರೀಚಿಮುನಿಯು ತನ್ನ ಆಶ್ರಮದಲ್ಲಿ ಪತ್ನಿಯಾದ ಧರ್ಮವ್ರತೆಯೊಡನೆ ಸುಖವಾಗಿ ವಾಸಿಸುತ್ತಿದ್ದನು. ಹೀಗಿರುವಲ್ಲಿ ಒಂದು ದಿವಸ

ಆಯಾಸದಿಂದ ಪತ್ನಿಯ ತೊಡೆಯ ಮೇಲೆ ತಲೆಯನ್ನಿಟ್ಟುಕೊಂಡು ನಿದ್ರಿಸುತ್ತಿದ್ದನು. ಆಗ ಬ್ರಹ್ಮದೇವನು ಅಲ್ಲಿಗೆ ಬರಲು, ಆ ಧರ್ಮವ್ರತೆಯು ಎದ್ದು ಬ್ರಹ್ಮನಿಗೆ ಉಪಚಾರ ಮಾಡಿದಳು. ತರುವಾಯ ನಿದ್ರೆಯಿಂದ ಎದ್ದ ಮರೀಚಿಮುನಿಯು, ತನ್ನ ಸೇವೆಯನ್ನು ಬಿಟ್ಟ ಪತ್ನಿಯ ಮೇಲೆ ಕೋಪಿಸಿಕೊಂಡು, ಶಿಲೆಯಾಗೆಂದು ಶಾಪವನ್ನು ಕೊಟ್ಟನು. ಹೀಗೆ ಪತಿಯ ಶಾಪದಿಂದ ಧರ್ಮವ್ರತೆಯು ಶಿಲಾರೂಪಿಣಿಯಾದಳು. ಅವಳ ಪ್ರಾರ್ಥನೆಯಂತೆ ಬ್ರಹ್ಮಾದಿದೇವತೆಗಳು, ಸಕಲ ತೀರ್ಥಗಳು, ಮಹರ್ಷಿಗಳು ಮತ್ತು ಪಿತೃಗಳು ಇವರು ಅವಳಲ್ಲಿ ಸನ್ನಿಹಿತರಾಗಿರುವರು. ಆದುದರಿಂದ ಆ ಗಯಾ ಶಿಲೆಯಲ್ಲಿ ಜಪತಪಹೋಮಾದಿಗಳನ್ನೂ, ಶ್ರಾದ್ಧವನ್ನೂ ಮಾಡಿದರೆ ಪಿತೃಗಳು ಅಕ್ಷಯವಾದ ಪರಮಪದವಿಯನ್ನು ಹೊಂದುವರು.

ಶ್ರೀಹರಿಯು ಆದಿಗದಾಧರನಾಗಲು ಕಾರಣ :—ವಿಶ್ವಕರ್ಮನು, ಗದಾನಾಮಕ ಅಸುರನ ಮೂಳೆಯಿಂದ ಗದಾಯುಧವನ್ನು ನಿರ್ಮಿಸಿದನು. ಆಗ ಹೇತಿನಾಮಕ ಅಸುರನು, ತಪೋಮಹಿಮೆಯಿಂದ ವರಗಳನ್ನು ಪಡೆದು, ದೇವತೆಗಳನ್ನು ಪೀಡಿಸಿದನು. ಹೀಗೆ ಪೀಡಿತರಾದ ಇಂದ್ರಾದಿಗಳು ಶ್ರೀಹರಿಯನ್ನು ಮೊರೆಹೊಕ್ಕರು. ಆಗ ಶ್ರೀಹರಿಯು ಆ ಗದಾಯುಧವನ್ನು ಸ್ವೀಕರಿಸಿ, ಆ ಅಸುರನನ್ನು ಸಂಹರಿಸಿದನು. ಇದರಿಂದ ಭಗವಂತನು ಆದಿಗದಾಧರನಾಗಿ, ಆ ಶಿಲೆಯ ಮೇಲೆ ಸ್ಥಿರವಾಗಿ ನಿಂತನು. ಆಗ ಬ್ರಹ್ಮಾದಿದೇವತೆಗಳು ಶ್ರೀಹರಿಯನ್ನು ಹೊಗಳಿದರು. ಹೀಗೆ ಗದಾಧರನಿರುವ ಆ ಗಯಾಕ್ಷೇತ್ರವು, ಮೂರುಲೋಕವಿಖ್ಯಾತವಾಗಿಯೂ, ಸಕಲೇಷ್ಟಾರ್ಥಪ್ರದವಾಗಿಯೂ, ಮುಕ್ತಿದಾಯಕವಾಗಿಯೂ ಇರುತ್ತದೆ.

ಈ ಸಂಪುಟದಲ್ಲಿ ಅಷ್ಟಾದಶಪುರಾಣಗಳಲ್ಲಿರುವ ಗ್ರಂಥಗಳ ಸಂಖ್ಯೆಯು ನಿರೂಪಿತವಾಗಿದೆ. ಹೇಗೆಂದರೆ ಶ್ರೀಮತ್ಸ್ಯಪುರಾಣದಲ್ಲಿ ಹದಿನಾಲ್ಕು ಸಾವಿರ ಶ್ಲೋಕಗಳೂ, ಭವಿಷ್ಯತ್ ಪುರಾಣದಲ್ಲಿ ಹದಿನಾಲ್ಕುಸಾವಿರದ ಐನೂರು ಶ್ಲೋಕಗಳೂ, ಮಾರ್ಕಂಡೇಯಪುರಾಣದಲ್ಲಿ ಒಂಭತ್ತುಸಾವಿರ ಶ್ಲೋಕಗಳೂ, ಬ್ರಹ್ಮವೈವರ್ತಪುರಾಣದಲ್ಲಿ ಹದಿನೆಂಟುಸಾವಿರ ಗ್ರಂಥಗಳೂ, ಬ್ರಹ್ಮಾಂಡಪುರಾಣದಲ್ಲಿ ಹನ್ನೆರಡು ಸಾವಿರ ಪದ್ಯಗಳೂ, ಶ್ರೀಮದ್ಭಾಗವತಪುರಾಣದಲ್ಲಿ ಹದಿನೆಂಟುಸಾವಿರ ಶ್ಲೋಕಗಳೂ, ಬ್ರಹ್ಮಪುರಾಣದಲ್ಲಿ ಹತ್ತುಸಾವಿರ ಶ್ಲೋಕಗಳೂ, ಆದಿಪುರಾಣದಲ್ಲಿ ಹತ್ತುಸಾವಿರದ ಆರುನೂರ ಶ್ಲೋಕಗಳೂ, ವಾಯುಪುರಾಣದಲ್ಲಿ ಇಪ್ಪತ್ತಮೂರುಸಾವಿರ ಪದ್ಯಗಳೂ, ನಾರದೀಯಪುರಾಣದಲ್ಲಿ ಇಪ್ಪತ್ತಮೂರುಸಾವಿರ ಶ್ಲೋಕಗಳೂ, ಗರುಡಪುರಾಣದಲ್ಲಿ ಹತ್ತೊಂಭತ್ತುಸಾವಿರ ಗ್ರಂಥಗಳೂ, ಪದ್ಮಪುರಾಣದಲ್ಲಿ ಇಪ್ಪತ್ತೈದುಸಾವಿರ ಶ್ಲೋಕಗಳೂ, ಕೂರ್ಮಪುರಾಣದಲ್ಲಿ ಹದಿನೇಳುಸಾವಿರ ಶ್ಲೋಕಗಳೂ, ವರಾಹಪುರಾಣದಲ್ಲಿ ಇಪ್ಪತ್ತನಾಲ್ಕುಸಾವಿರ ಗ್ರಂಥಗಳೂ, ಸ್ಕಾಂದಪುರಾಣದಲ್ಲಿ ಎಂಭತ್ತೊಂದುಸಾವಿರ ಶ್ಲೋಕಗಳೂ ಇವೆಯೆಂದು ವರ್ಣಿತವಾಗಿವೆ.

ಇಂತಹ ವಾಯುಪುರಾಣವನ್ನು ಬ್ರಹ್ಮದೇವನು ಮೊದಲು ವಾಯುದೇವನಿಗೆ ಉಪದೇಶಿಸಿದನು. ತರುವಾಯ ವಾಯುದೇವನು ಬೃಹಸ್ಪತಿಗೂ, ಅವನು ಶುಕ್ರಾದಿಗಳಿಗೂ ಉಪದೇಶಮಾಡಿದರು. ಈ ಉಪದೇಶಪರಂಪರೆಯಿಂದ ವೇದವ್ಯಾಸರು ನನಗೆ ಉಪದೇಶಿಸಿದರೆಂದು, ಸೂತಮುನಿಯು, ಮಹರ್ಷಿಗಳಿಗೆ ತಿಳಿಸಿರುವರು. ಶ್ರೀ ವಾಯುಮಹಾಪುರಾಣದಲ್ಲಿ ಇಪ್ಪತ್ತಮೂರುಸಾವಿರ ಪದ್ಯಗಳಿವೆಯೆಂದು ಇದರಲ್ಲಿಯೇ ಹೇಳಿದೆ. ಆದರೆ ಇದರಲ್ಲಿ ಸುಮಾರು ಹನ್ನೊಂದುಸಾವಿರದ ಇನ್ನೂರ ಎಂಭತ್ತಾರು ಪದ್ಯಗಳು ಮಾತ್ರ ಇರುತ್ತವೆ. ಉಳಿದ ಭಾಗಗಳು ಕಂಡುಬರುವುದಿಲ್ಲ. ಇದರಲ್ಲಿ ವಾಯುದೇವನ ಅವತಾರಗಳೂ, ಶ್ರೀ ಲಕ್ಷ್ಮೀದೇವಿಯ ಮಹಾತ್ಮ್ಯಗಳೂ, ವರ್ಣಿತವಾಗಿವೆಯೆಂದು ಹಿರಿಯರು ಹೇಳುವರು. ಆದರೆ ಆ ವಿಷಯಗಳು ಇಲ್ಲಿ ಉಪಲಬ್ಧಿಯಿಲ್ಲ. ಇದರಿಂದ ವಾಯುಮಹಾಪುರಾಣದಲ್ಲಿ ಅನೇಕ ಭಾಗಗಳು ಆವಾಪೋದ್ವಾಪಗಳಾಗಿವೆಯೆಂದು ಹೇಳಬಹುದಾಗಿದೆ.

ಇಂತಹ ಶ್ರೀಮದ್ವಾಯುಮಹಾಪುರಾಣವನ್ನು ಯಾವನು ಶ್ರವಣಪಠನ ಮನನಾದಿಗಳನ್ನು ಮಾಡುವನೋ, ಅವನಿಗೆ ಸಕಲೇಷ್ಟಾರ್ಥಗಳೂ ಉಂಟಾಗುವುವು. ಈ ಪುರಾಣದ ಪುಸ್ತಕವು ಯಾರ ಮನೆಯಲ್ಲಿರುತ್ತದೆಯೋ, ಅವರಿಗೆ ಭೂತಪ್ರೇತ ಪಿಶಾಚಾದಿಗಳು, ಜಲಾಗ್ನಿಗಳು, ಸಿಂಹವ್ಯಾಘ್ರಾದಿ ದುಷ್ಟಮೃಗಗಳು, ಇವುಗಳ ಭಯವಿಲ್ಲದೆ ಸಕಲಮನೋರಥಗಳೂ ಕೈಗೂಡುವುವು.

ಇಂತಹ ಮಹಾಪುರಾಣಗಳ ಪ್ರಚಾರಕ್ಕೆ ಕಾರಣಕರ್ತರೂ, ಪರಮೋದಾರಿಗಳೂ, ರಾಜರ್ಷಿಗಳೂ, ಕರ್ಣಾಟಕ ಸಿಂಹಾಸನಾಧೀಶ್ವರರೂ ಆದ **ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರು, ಪುತ್ರಮಿತ್ರಕಳತ್ರಾದಿಗಳೊಡನೆ ಚಿರಕಾಲ ಸುಖವಾಗಿ ಧರ್ಮದಿಂದ ರಾಜ್ಯವನ್ನು ಪರಿಪಾಲಿಸಲೆಂದು ಶ್ರೀಭಗವಂತನನ್ನು ಪ್ರಾರ್ಥಿಸುವ,

ಅನುವಾದಕ :

ತಾ|| 16-7-48, **ಆರ್. ಸೇತುಮಾಧವಾಚಾರ್,**

ಆಸ್ಥಾನ ವಿದ್ವಾನ್.



# ವಿಷಯಾನುಕ್ರಮಣಿಕೆ

—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀ ಮದ್ವಾಯು ಮಹಾ ಪುರಾಣಂ

## ಸಪ್ತತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

**ತುರ್ವಸೋಸ್ತು ಸುತೋ ವಹ್ನಿರ್ವಹ್ನೇರ್ಗೋಭಾನುರಾತ್ಮಜಃ ।**
**ಗೋಭಾನೋಸ್ತು ಸುತೋ ವೀರಸ್ತ್ರಿಸಾನುರಪರಾಜಿತಃ ॥ ೧ ॥**

**ಕರಂಧಮಸ್ತ್ರಿಸಾನೋಸ್ತು ಮರುತ್ತಸ್ಯ ಚಾತ್ಮಜಃ ।**
**ಅನ್ಯಸ್ತ್ವವೀಕ್ಷಿತೋ ರಾಜಾ ಮರುತ್ತಃ ಕಥಿತಃ ಪುರಾ ॥ ೨ ॥**

**ಅನಪತ್ಯೋ ಮರುತ್ತಸ್ತು ಸ ರಾಜಾಸೀದಿತಿ ಶ್ರುತಂ ।**
**ದುಷ್ಕೃತಂ ಪೌರವಂ ಚಾಪಿ ಸರ್ವೇ ಪುತ್ರಮಕಲ್ಪಯತ್ ॥ ೩ ॥**

## ಮೂವತ್ತೇಳನೆಯ ಅಧ್ಯಾಯವು

೧–೨. ಸೂತಪುರಾಣಿಕನು ಹೇಳಿದನು :—ಪೂರ್ವದಲ್ಲಿ ತುರ್ವಸು ಮಹಾರಾಜನಿಗೆ ವಹ್ನಿಯೆಂಬ ಪುತ್ರನೂ, ಅವನಿಗೆ ಗೋಭಾನುವೆಂಬ ಸುತನೂ, ಅವನಿಗೆ ಶೂರನೂ, ಅಪರಾಜಿತನೂ ಆದ ತ್ರಿಸಾನುವೆಂಬ ಕುಮಾರನೂ, ಅವನಿಗೆ ಕರಂಧಮನೆಂಬ ತನಯನೂ, ಅವನಿಗೆ ಮರುತ್ತಮನೆಂಬ ತನೂಜನೂ ಹುಟ್ಟಿದರು. ಆ ಮರುತ್ತನ ವಿಷಯಗಳನ್ನು ನಾನು ನಿಮಗೆ ಮೊದಲೇ ತಿಳಿಸಿರುತ್ತೇನೆಯೆಂದು ಸೂತಮುನಿಯು ಹೇಳಿದನು.

೩. ಆ ಮರುತ್ತನಿಗೆ ಸಂತಾನವಿಲ್ಲದ ವಿಚಾರವು ನಿಮಗೆ ತಿಳಿದಿದೆಯಲ್ಲವೇ ? ಅವರೆಲ್ಲರೂ ಪುರವಂಶೋತ್ಪನ್ನನನ್ನೂ, ದುಷ್ಕೃತನನ್ನೂ ಪುತ್ರನನ್ನಾಗಿ ಮಾಡಿಕೊಂಡರು.

**ಏವಂ ಯುಯಾತಿಶಾಪೇನ ಜರಾಯಾಃ ಸಂಕ್ರಮೇಣ ತು ।**
**ತುರ್ವಸೋಃ ಪೌರವಂ ವಂಶಂ ಪ್ರವಿವೇಶ ಪುರಾ ಕಿಲ ॥ ೪ ॥**

**ದುಷ್ಕೃತಸ್ಯ ತು ದಾಯಾದಾಃ ಶರೂಥೋ ನಾಮ ಪಾರ್ಥಿವಃ ।**
**ಶರೂಥಾತ್ತು ಜನಾಪೀಡಶ್ಚತ್ವಾರಸ್ತಸ್ಯ ಚಾತ್ಮಜಾಃ ॥ ೫ ॥**

**ಪಾಂಡ್ಯಶ್ಚ ಕೇರಲಶ್ಚೈವ ಚೋಲಃ ಕುಲ್ಯಸ್ತಥೈವ ಚ ।**
**ತೇಷಾಂ ಜನಪದಾಃ ಕುಲ್ಯಾಃ ಪಾಂಡ್ಯಾಶ್ಚೋಲಾಃ ಸಕೇರಲಾಃ ॥ ೬ ॥**

**ದ್ರುಹ್ಯೋಸ್ತು ತನಯೌ ವೀರೌ ಬಭ್ರುಃ ಸೇತುಶ್ಚ ವಿಶ್ರುತೌ ।**
**ಅರುದ್ಧಃ ಸೇತುಪುತ್ರಸ್ತು ಬಾಭ್ರವೋ ರಿಪುರುಚ್ಯತೇ ॥ ೭ ॥**

**ಯೌವನಾಶ್ವೇನ ಸಮಿತಿ ಕೃಚ್ಛ್ರೇಣ ನಿಹತೋ ಬಲೀ ।**
**ಯುದ್ಧಂ ಸುಮಹದಾಸೀತ್ತು ಮಾಸಾ‌ನ್ ಪರಿ ಚತುರ್ದಶ ॥ ೮ ॥**

---

೪. ಹೀಗೆ ಯಯಾತಿ ಮಹಾರಾಜನ ಶಾಪದಿಂದಲೂ, ವೃದ್ಧನಾದುದರಿಂದಲೂ, ಪೂರ್ವಕಾಲದಲ್ಲಿ ತುರ್ವಸುವಿಗೆ ಸಂತಾನವಿಲ್ಲದೆ ಅವನ ವಂಶವು ಯದುರಾಯನ ವಂಶಕ್ಕೇ ಸೇರಿಹೋಯಿತು.

೫. ದುಷ್ಕೃತನಿಗೆ ಶರೂಧನೆಂಬ ರಾಜಕುಮಾರನೂ, ಆ ಶರೂಥನಿಗೆ ಜನಾಪೀಡನೆಂಬ ಮಗನೂ ಜನಿಸಿದರು ಅವನಿಗೆ ನಾಲ್ವರು ಸುಪ್ರಸಿದ್ಧರಾದ ಕುಮಾರರು ಜನಿಸಿದರು

೬. ಅವರು ಯಾರೆಂದರೆ—ಪಾಂಡ್ಯ, ಕೇರಳ, ಚೋಲ ಮತ್ತು ಕುಲ್ಯ ಇವರಾಗಿದ್ದರು. ಇವರು ಜನಾಪೀಡನ ಕುಮಾರರಾಗಿ ಕುಲ್ಯ, ಪಾಂಡ್ಯ, ಚೋಲ ಮತ್ತು ಕೇರಳವೆಂಬ ದೇಶಗಳನ್ನು ಸುಖವಾಗಿ ಆಳುತ್ತಿದ್ದರು.

೭. ಆ ದ್ರುಹ್ಯನಿಗೆ ಬಭ್ರು ಸೇತುವೆಂಬ ಪ್ರಖ್ಯಾತರೂ, ಶೂರರೂ ಆದ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಸೇತುವೆಂಬುವನಿಗೆ ಅರುದ್ಧನೆಂಬ ಮಗನೂ ಹುಟ್ಟಿದನು. ಅವನಿಗೆ ಬಾಭ್ರವನೆಂಬ ಶತ್ರುವು ಇದ್ದನು.

೮. ಅವರಿಬ್ಬರಿಗೂ ಹದಿನಾಲ್ಕುತಿಂಗಳುಕಾಲ ಘೋರವಾದ ಯುದ್ಧವು ಸಂಭವಿಸಿತು. ಆಗ ಶೂರನಾದ ಯೌವನಾಶ್ವನು ಬಲಶಾಲಿಯಾದ ಆ ಮಹಾರಾಜನನ್ನು ಯುದ್ಧರಂಗದಲ್ಲಿ ಸಂಹರಿಸಿದನು

ಅರುದ್ಧಸ್ಯ ತು ದಾಯಾದೋ ಗಾಂಧಾರೋ ನಾಮ ಪಾರ್ಥಿವಃ ।
ಖ್ಯಾಯತೇ ಯಸ್ಯ ನಾಮ್ನಾ ತು ಗಾಂಧಾರವಿಷಯೋ ಮಹಾನ್ ॥ ೯ ॥

ಗಾಂಧಾರದೇಶಜಾಶ್ಚಾಪಿ ತುರಗಾ ವಾಜಿನಾಂ ವರಾಃ ।
ಗಾಂಧಾರಪುತ್ರೋ ಧರ್ಮಸ್ತು ಘೃತಸ್ತಸ್ಯ ಸುತೋಽಭವತ್ ॥ ೧೦ ॥

ಘೃತಸ್ಯ ದುರ್ದಮೋ ಜಜ್ಞೇ ಪ್ರಚೇತಾಸ್ತಸ್ಯ ಚಾತ್ಮಜಃ ।
ಪ್ರಚೇತಸಃ ಪುತ್ರಶತಂ ರಾಜಾನಃ ಸರ್ವ ಏವ ತೇ ॥ ೧೧ ॥

ಮ್ಲೇಚ್ಛರಾಷ್ಟ್ರಾಧಿಪಾಃ ಸರ್ವೇ ಹ್ಯುದೀಚೀಂ ದಿಶಮಾಶ್ರಿತಾಃ ।
ಅನೋಃ ಪುತ್ರಾ ಮಹಾತ್ಮಾನಸ್ತ್ರಯಃ ಪರಮಧಾರ್ಮಿಕಾಃ ॥ ೧೨ ॥

ಸಭಾನರಶ್ಚ ಪಕ್ಷಶ್ಚ ಪರಪಕ್ಷಸ್ತಥೈವ ಚ ।
ಸಭಾನರಸ್ಯ ಪುತ್ರಸ್ತು ವಿದ್ವಾನ್ ಕಾಲಾನಲೋ ನೃಪಃ ॥ ೧೩ ॥

---

೯. ಆ ಅರುದ್ಧನಿಗೆ ಗಾಂಧಾರರಾಜನೆಂಬ ಪ್ರಸಿದ್ಧನಾದ ಕುಮಾರನಿದ್ದನು. ಅವನು ಗಾಂಧಾರದೇಶಕ್ಕೆ ದೊರೆಯಾಗಿ ಸುಖವಾಗಿ ಪ್ರಜೆಗಳನ್ನು ಪಾಲಿಸುತ್ತಿದ್ದನು.

೧೦. ಗಾಂಧಾರದೇಶದಲ್ಲಿ ಹುಟ್ಟಿದ ಅಶ್ವಗಳೂ ಕೂಡ ಸುಪ್ರಸಿದ್ಧವಾಗಿಯೂ, ಉತ್ತಮವಾಗಿಯೂ ಇದ್ದುವು. ಆ ಗಾಂಧಾರರಾಜನಿಗೆ ಧರ್ಮನೆಂಬ ಕುಮಾರನೂ, ಅವನಿಗೆ ಘೃತನೆಂಬ ಸುತನೂ ಹುಟ್ಟಿದರು.

೧೧. ಆ ಘೃತನಿಗೆ ದುರ್ದಮನೂ, ಅವನಿಗೆ ಪ್ರಚೇತಸನೂ, ಆ ಪ್ರಚೇತಸನಿಗೆ ನೂರುಜನ ಕುಮಾರರೂ ಜನಿಸಿದರು. ಅವರೆಲ್ಲರೂ ರಾಜರಾಗಿಯೇ ಇರುವರು.

೧೨–೧೩. ಆ ರಾಜಕುಮಾರರೆಲ್ಲರೂ ಮ್ಲೇಂಛದೇಶಕ್ಕೆ ರಾಜರಾಗಿ ಉತ್ತರ ದಿಗ್ಭಾಗದಲ್ಲಿ ವಾಸಿಸುತ್ತಿದ್ದರು. ಆ ಮಹಾರಾಜನಿಗೆ ಸಭಾನರ, ಪಕ್ಷ, ಪರಪಕ್ಷರೆಂಬ ಮಹಾತ್ಮರೂ, ಪರಮ ಧಾರ್ಮಿಕರೂ ಆದ ಮೂವರು ಪುತ್ರರು ಹುಟ್ಟಿದರು. ಆ ಸಭಾನರನಿಗೆ ಪಂಡಿತನಾದ ಕಾಲಾನಲನಾಮಕನಾದ ಕುಮಾರನು ಹುಟ್ಟಿದನು.

ಕಾಲಾನಲಸ್ಯ ಧರ್ಮಾತ್ಮಾ ಸೃಂಜಯೋ ನಾಮ ಧಾರ್ಮಿಕಃ ।
ಸೃಂಜಯಸ್ಯಾಭವತ್ ಪುತ್ರೋ ವೀರೋ ರಾಜ ಪುರಂಜಯಃ ॥ ೧೪ ॥

ಜನಮೇಜಯೋ ಮಹಾಸತ್ವಃ ಪುರಂಜಯಸುತೋಽಭವತ್ ।
ಜನಮೇಜಯಸ್ಯ ರಾಜರ್ಷಿರ್ಮಹಾಶಾಲೋಽಭವನ್ನೃಪಃ ॥ ೧೫ ॥

ಆಸೀದಿಂದ್ರಸಮೋ ರಾಜಾ ಪ್ರತಿಷ್ಠಿತಯಶಾ ದಿವಿ ।
ಮಹಾಮಾನಾಃ ಸುತಸ್ತಸ್ಯ ಮಹಾಶಾಲಸ್ಯ ಧಾರ್ಮಿಕಃ ॥ ೧೬ ॥

ಸಪ್ತದ್ವೀಪೇಶ್ವರೋ ರಾಜಾ ಚಕ್ರವರ್ತೀ ಮಹಾಯಶಾಃ ।
ಮಹಾಮನಾಸ್ತು ಪುತ್ರೌ ದ್ವೌ ಜನಯಾಮಾಸ ವಿಶ್ರುತೌ ॥ ೧೭ ॥

ಉಶೀನರಂ ಚ ಧರ್ಮಜ್ಞಂ ತಿತಿಕ್ಷುಂ ಚೈವ ಧಾರ್ಮಿಕಂ ।
ಉಶೀನರಸ್ಯ ಪತ್ನ್ಯಸ್ತು ಪಂಚ ರಾಜರ್ಷಿವಂಶಜಾಃ ॥ ೧೮ ॥

---

೧೪. ಆ ಕಾಲಾನಲನಿಗೆ ಧರ್ಮಿಷ್ಠನೂ ಜ್ಞಾನಿಯೂ ಆದ ಸೃಂಜಯನೆಂಬ ಸುತನೂ, ಅವನಿಗೆ ವೀರನಾದ ಪುರಂಜಯನೆಂಬ ಕುಮಾರನೂ ಹುಟ್ಟಿದರು.

೧೫. ಆ ಪುರಂಜಯನಿಗೆ ಅತ್ಯಂತ ಬಲಶಾಲಿಯೂ ಖ್ಯಾತನೂ ಆದ ಜನಮೇಜಯರಾಜನೂ, ಆ ರಾಜರ್ಷಿಗೆ ಮಹಾಶಾಲನೆಂಬ ಸುತನೂ ಉದ್ಭವಿಸಿದರು.

೧೬. ಆ ಕುಮಾರನು ಇಂದ್ರನಿಗೆ ಸಮಾನವಾದ ಕೀರ್ತಿವಂತನೂ, ಪ್ರಖ್ಯಾತವಾದ ಪರಾಕ್ರಮವುಳ್ಳವನೂ ಆಗಿದ್ದನು. ಆ ಮಹಾಶಾಲನಿಗೆ ಧಾರ್ಮಿಕನಾದ ಮಹಾಮನಸ್ಸೆಂಬ ಸುತನೂ ಜನಿಸಿದನು.

೧೭. ಸಪ್ತದ್ವೀಪಗಳಿಗೆ ಒಡೆಯನೂ, ಚಕ್ರವರ್ತಿಯೂ, ಕೀರ್ತಿವಂತನೂ, ಶೂರನೂ ಆದ ಆ ಮಹಾಮನಸ್ಸನಿಗೆ ಪ್ರಖ್ಯಾತರಾದ ಇಬ್ಬರು ಮಕ್ಕಳು ಹುಟ್ಟಿದರು.

೧೮. ಅವರಿಬ್ಬರಲ್ಲಿ ಉಶೀನರನೆಂಬುವನು ಧರ್ಮಜ್ಞನೂ, ತಿತಿಕ್ಷುವೆಂಬುವನು ಅತ್ಯಂತ ಧರ್ಮಿಷ್ಠನೂ ಆಗಿದ್ದರು. ಆ ಉಶೀನರನಿಗೆ ರಾಜರ್ಷಿಗಳ ಕುಮಾರಿಯರಾದ ಐವರು ಪತ್ನಿಯರಿದ್ದರು.

ಮೃಗಾ ಕೃಮಿಾ ನವಾ ದರ್ವಾ ಪಂಚಮಿಾ ಚ ದೃಷದ್ವತೀ ।
ಉಶೀನರಸ್ಯ ಪುತ್ರಾಸ್ತು ಪಂಚ ತಾಸು ಕುಲೋದ್ವಹಾಃ ॥
ತಪಸಾ ತೇ ಸುಮಹತಾ ಜಾತವೃದ್ಧಾಶ್ಚ ಧಾರ್ಮಿಕಾಃ ॥ ೧೯ ॥

ಮೃಗಾಯಾಸ್ತು ಮೃಗಃ ಪುತ್ರೋ ನವಾಯಾ ನವ ಏವ ತು ।
ಕೃಮ್ಯಾಃ ಕೃಮಿಸ್ತು ದರ್ವಾಯಾಃ ಸುವ್ರತೋ ನಾಮ ಧಾರ್ಮಿಕಃ ॥ ೨೦ ॥

ದೃಷದ್ವತೀಸುತಶ್ಚಾಪಿ ಶಿವಿರೌಶೀನರೋ ದ್ವಿಜಾಃ ।
ಶಿವೇಃ ಶಿವಪುರಃ ಖ್ಯಾತಂ ಯೌಧೇಯಂ ತು ಮೃಗಸ್ಯ ತು ॥ ೨೧ ॥

ನವಸ್ಯ ನವರಾಷ್ಟ್ರಂ ತು ಕೃಮೇಸ್ತು ಕೃಮಿಲಾಪುರೀ ।
ಸುವ್ರತಸ್ಯ ತಥಾ ವೃಷ್ಟಾ ಶಿವಿಪುತ್ರಾನ್ನಿಬೋಧತ ॥ ೨೨ ॥

ಶಿವೇಸ್ತು ಶಿವಯಃ ಪುತ್ರಾಶ್ಚತ್ವಾರೋ ಲೋಕಸಮ್ಮತಾಃ ।
ವೃಷದರ್ಭಃ ಸುವೀರಸ್ತು ಕೇಕಯೋ ಮದ್ರಕಸ್ತಥಾ ॥ ೨೩ ॥

---

೧೯. ಆ ಉಶೀನರನಿಗೆ ಮೃಗ, ಕ್ರಮಿ, ನವ, ದೂರ್ವ ಮತ್ತು ದೃಷದ್ವತಿ ಎಂಬ ಐದು ಜನ ಹೆಂಡತಿಯರಿದ್ದರು. ಅವರಲ್ಲಿ ವಂಶೋದ್ಧಾರಕರಾದ ಐದು ಜನ ಮಕ್ಕಳು ಹುಟ್ಟಿದರು. ಅವರು ಮಹಾ ತಪಸ್ಸಿನಿಂದ ವೃದ್ಧಿಯನ್ನು ಹೊಂದಿ ಧಾರ್ಮಿಕರಾಗಿದ್ದರು

೨೦. ಅವರಲ್ಲಿ ಮೃಗೆಯೆಂಬುವಳಿಗೆ ಮೃಗನೆಂಬ ಕುಮಾರನೂ, ನವೆಯೆಂಬ ಪತ್ನಿಗೆ ನವನೆಂಬ ಸುತನೂ, ಕ್ರಿಮಿಗೆ ಕ್ರಿಮಿಯೆಂಬ ತನಯನೂ, ದಾರುವಿಗೆ ಸುವ್ರತನೆಂಬ ಧಾರ್ಮಿಕನಾದ ಮಗನೂ ಜನಿಸಿದರು.

೨೧. ದೃಷದ್ವತಿಗೆ ಶಿವಿ ಎಂಬ ಪುತ್ರನು ಜನಿಸಿ ಖ್ಯಾತಿವಂತನಾಗಿ ಶಿವಪುರದಲ್ಲಿ ರಾಜ್ಯವಾಳುತ್ತಿದ್ದನು. ಮೃಗನೆಂಬ ಕುಮಾರನು ಯೌಧೇಯವೆಂಬ ನಗರದಲ್ಲಿ ಪ್ರಜೆಗಳನ್ನು ಪಾಲಿಸುತ್ತಿದ್ದನು.

೨೨. ನವನಿಗೆ ನವವೆಂಬ ದೇಶವೂ, ಕ್ರಿಮಿಗೆ ಕ್ರಿಮಿಲಾಪುರಿಯೂ, ಸುವ್ರತನಿಗೆ ವೃಷ್ಟಾನಗರವೂ ರಾಜಧಾನಿಯಾಗಿದ್ದುವು. ಈ ಶಿವನ ಪುತ್ರರನ್ನು ಹೇಳುವೆನು ಕೇಳಿರಿ.

೨೩. ಅಂತಹ ಶಿವನಿಗೆ ಪ್ರಜಾಪ್ರೇಮಿಗಳೂ ಶೂರರೂ ಆದ ವೃಷದರ್ಭ, ಸುವೀರ, ಕೇಕೆಯ, ಮದ್ರಕಂರೆಬ ನಾಲ್ವರು ಕುಮಾರರು ಪ್ರಖ್ಯಾತರಾಗಿದ್ದರು.

ತೇಷಾಂ ಜನಪದಾಃ ಸ್ಫೀತಾಃ ಕೇಕಯಾ ಮಾದ್ರಕಾಸ್ತಥಾ ।
ವೃಷದರ್ಭಾಃ ಸೂಚಿದರ್ಭಾಸ್ತಿತಿಕ್ಷೋಃ ಶೃಣುತ ಪ್ರಜಾಃ ॥ ೨೪ ॥

ತೈತಿಕ್ಷುರಭವದ್ರಾಜಾ ಪೂರ್ವಸ್ಯಾಂದಿಶಿ ವಿಶ್ರುತಃ ।
ಉಶದ್ರಥೋ ಮಹಾಬಾಹುಸ್ತಸ್ಯ ಹೇಮಃ ಸುತೋಽಭವತ್ ॥ ೨೫ ॥

ಹೇಮಸ್ಯ ಸುತಪಾ ಜಜ್ಞೇ ಸುತಃ ಸುತಯಶಾ ಬಲೀ ।
ಜಾತೋ ಮನುಷ್ಯಯೋನ್ಯಾಂ ವೈ ಕ್ಷೀಣೇ ವಂಶೇ ಪ್ರಜೇಪ್ಸಯಾ ॥ ೨೬ ॥

ಮಹಾಯೋಗೀ ಸ ತು ಬಲಿರ್ಬದ್ಧೋ ಯಃ ಸ ಮಹಾಮನಾಃ ।
ಪುತ್ರಾನುತ್ಪಾದಯಾಮಾಸ ಚಾತುರ್ವರ್ಣ್ಯಕರಾನ್ ಭುವಿ ॥ ೨೭ ॥

---

೨೪. ಅವರ ರಾಜಧಾನಿಗಳು ಸರ್ವಸಂಪತ್ಸಂಮೃದ್ಧಿಗಳಿಂದ ಕೂಡಿ ಸುಂದರವಾಗಿಯೂ, ಕೇಕಯ, ಮಾದ್ರಕ, ವೃಷದರ್ಭ, ಸೂಚಿದರ್ಭ ಎಂಬ ನಾಮಗಳಿಂದ ಸುಪ್ರಸಿದ್ಧಗಳಾಗಿಯೂ ಇದ್ದುವು. ಈಗ ತಿತಿಕ್ಷುವಿನ ವಂಶವನ್ನು ಹೇಳುವೆನು ಕೇಳಿರೆಂದನು.

೨೫. ಆ ತಿತಿಕ್ಷು ಮಹಾರಾಜನು ಪೂರ್ವದಿಕ್ಕಿನಲ್ಲಿ ಪ್ರಖ್ಯಾತನಾದ ಪ್ರಭುವಾಗಿದ್ದನು. ಅವನಿಗೆ ಉಪದ್ರವನೆಂಬ ಶೂರನಾದ ಪುತ್ರನೂ, ಅವನಿಗೆ ಹೇಮನೆಂಬ ಸುಂದರನಾದ ಕುಮಾರನೂ ಜನಿಸಿದರು.

೨೬. ಆ ಹೇಮನಿಗೆ ಸಂತಾನವಿಲ್ಲದೇ ಆ ವಂಶವು ಕ್ಷೀಣವಾಗಲಾಗಿ ಮಹಾತ್ಮರ ವರಪ್ರಸಾದದಿಂದ ಕೊನೆಗೆ ಅವನಿಗೆ ಸುತಪನೆಂಬ ಕುಮಾರನೂ, ಆತನಿಗೆ ಬಲಿಯೆಂಬುವನೂ ಮನುಷ್ಯಯೋನಿಯಲ್ಲಿ ಹುಟ್ಟಿದರು.

೨೭. ಮಹಾ ಯೋಗಿಯೂ ಮಹಾತ್ಮನೂ ಆದ ಯಾವ ಬಲಿರಾಯನು ಪೂರ್ವದಲ್ಲಿ ವಾಮನನಿಂದ ಬದ್ಧನಾದನೋ ಅಂತಹ ಬಲಿಮಹಾರಾಯನಿಗೆ ಈ ಭೂಮಂಡಲದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಯ ಕುಮಾರರು ಸುಪ್ರಸಿದ್ಧರಾಗಿದ್ದರು. ಆ ಕುಮಾರರಿಂದ ಚಾತುರ್ವರ್ಣ್ಯಗಳೂ ವೃದ್ಧಿಯಾದುವು.

ಅಂಗಂ ಸ ಜನಯಾಮಾಸ ವಂಗಂ ಸುಹ್ಮಂ ತಥೈವ ಚ ।
ಪುಂಡ್ರಂ ಕಲಿಂಗಂ ಚ ತಥಾ ಬಾಲೇಯಂ ಕ್ಷತ್ರಮುಚ್ಯತೇ ॥ ೨೮ ॥

ಬಾಲೇಯಾ ಬ್ರಾಹ್ಮಣಾಶ್ಚೈವ ತಸ್ಯ ವಂಶಕರಾಃ ಪ್ರಭೋಃ ।
ಬಲೇಸ್ತು ಬ್ರಹ್ಮಣಾ ದತ್ತಾ ವರಾಃ ಪ್ರೀತೇನ ಧೀಮತೇ ॥ ೨೯ ॥

ಮಹಾಯೋಗಿತ್ವಮಾಯುಶ್ಚ ಕಲ್ಪಾಯುಃ ಪರಿಮಾಣಕಂ ।
ಸಂಗ್ರಾಮೇ ಚಾಪ್ಯಜೇಯತ್ವಂ ಧರ್ಮೇ ಚೈವ ಪ್ರಭಾವನಾ ॥ ೩೦ ॥

ತ್ರೈಲೋಕ್ಯದರ್ಶನಂ ಚೈವ ಪ್ರಾಧಾನ್ಯಂ ಪ್ರಸವೇ ತಥಾ ।
ಬಲೇ ಚಾಪ್ರತಿಮತ್ವಂ ವೈ ಧರ್ಮತತ್ತ್ವಾರ್ಥದರ್ಶನಂ ॥ ೩೧ ॥

ಚತುರೋ ನಿಯತಾನ್ ವರ್ಣಾನ್ ತ್ವಂ ವೈ ಸ್ಥಾಪಯಿತೇತಿ ಚ ।
ಇತ್ಯುಕ್ತೋ ವಿಭುನಾ ರಾಜಾ ಬಲಿಃ ಶಾಂತಿಂ ಪರಾಂ ಯಯೌ ॥ ೩೨ ॥

---

೨೮. ಅವನಿಗೆ ಅಂಗ, ವಂಗ, ಸುಹ್ಮ, ಪುಂಡ್ರ, ಕಲಿಂಗರೆಂಬ ಕುಮಾರರೂ, ಮತ್ತು ಬಾಲೇಯರೆಂಬ ಕ್ಷತ್ರಿಯ ಕುಮಾರರೂ ಸುಪ್ರಸಿದ್ಧರಾಗಿದ್ದರು. ಬಾಲೇಯರು ಬ್ರಾಹ್ಮಣರಾಗಿಯೂ ಇರುವರು.

೨೯. ಪ್ರಭುವಾದ ಬಲಿಮಹಾರಾಜನಿಗೆ ವಂಶವಿಸ್ತಾರಕರಾದ ಬ್ರಾಹ್ಮಣ ಕುಮಾರರೂ ಮತ್ತು ಕ್ಷತ್ರಿಯ ಕುಮಾರರೂ ಇದ್ದರು. ಹೀಗೆ ಇರಲು ಕಾರಣ ವೇನೆಂದರೆ—ತಪಸ್ಸಿನಿಂದ ಪ್ರೀತನಾದ ಬ್ರಹ್ಮದೇವನು ಅವನಿಗೆ ಅದೇ ಪ್ರಕಾರವೇ ವರಗಳನ್ನು ಕೊಟ್ಟಿದ್ದನು

೩೦–೩೨. ಸುಪ್ರೀತನಾದ ಬ್ರಹ್ಮದೇವನು ಆ ಬಲಿಮಹಾರಾಯನಿಗೆ ಮಹಾ ಯೋಗಿತನವೂ, ದೀರ್ಘಾಯುಷ್ಯವೂ, ಕಲ್ಪದವರೆಗೂ ವಿಶಾಲವಾದ ಆಡಳಿತವೂ, ಯುದ್ಧದಲ್ಲಿ ವಿಜಯವೂ, ಧರ್ಮದಲ್ಲಿ ಆಸಕ್ತಿಯೂ, ಮೂರು ಲೋಕಗಳ ವಿಚಾರಗಳೂ, ಪ್ರಜಾಸೃಷ್ಟಿಯಲ್ಲಿ ಪ್ರಾಮುಖ್ಯವೂ, ಅಸಮಾನತೆಯೂ, ಧರ್ಮತತ್ತ್ವ ಜ್ಞಾನವೂ, ಚಾತುರ್ವರ್ಣ್ಯಗಳ ಸ್ಥಾಪನೆಯೂ ಇವೇ ಮೊದಲಾದವನ್ನು ವರರೂಪ ವಾಗಿ ಕೊಟ್ಟನು. ಹೀಗೆ ಬಲಿರಾಯನು ಬ್ರಹ್ಮದೇವನಿಂದ ಇಂತಹ ಮಹಾವರ ಗಳನ್ನು ಪಡೆದಿರುವುದರಿಂದ ಪರಮಶಾಂತನಾಗಿದ್ದನು. ಶಾಂತಮೂರ್ತಿಯಾಗಿದ್ದನು.

ಕಾಲೇನ ಮಹತಾ ವಿದ್ವಾನ್ ಸ್ವಂ ವೈ ಸ್ಥಾನಮುಪಾಗತಃ ।
ತೇಷಾಂ ಜನಪದಾಃ ಸ್ಫೀತಾ ವಂಗಾಂಗಸುಹ್ಲಕಾಸ್ತಥಾ ॥ ೩೩ ॥

ಪುಂಡ್ರಾಃ ಕಲಿಂಗಾಶ್ಚ ತಥಾ ತೇಷಾಂ ವಂಶಂ ನಿಬೋಧತ ।
ತಸ್ಯ ತೇ ತನಯಾಃ ಸರ್ವೇ ಕ್ಷೇತ್ರಜಾ ಮುನಿಸಂಭವಾಃ ॥
ಸಂಭೂತಾ ದೀರ್ಘತಮಸಃ ಸುದೇಷ್ಣಾಯಾಂ ಮಹೌಜಸಃ ॥ ೩೪ ॥

॥ ಋಷಯ ಊಚುಃ ॥

ಕಥಂ ಬಲೇಃ ಸುತಾಃ ಪಂಚ ಜನಿತಾಃ ಕ್ಷೇತ್ರಜಾಃ ಪ್ರಭೋ ।
ಋಷಿಣಾ ದೀರ್ಘತಮಸಾ ಏತನ್ನೋ ಬ್ರೂಹಿ ಪೃಚ್ಛತಾಂ ॥ ೩೫ ॥

---

೩೩. ಜ್ಞಾನಿಯಾದ ಬಲಿಮಹಾರಾಯನು ಬಹುಕಾಲದ ಮೇಲೆ ತನ್ನ ಸ್ಥಾನವನ್ನು ಅಂದರೆ ರಾಜ್ಯವನ್ನು ಹೊಂದಿದನು. ಅವನು ಆಳುತ್ತಿದ್ದ ಅಂಗ, ವಂಗ, ಕಲಿಂಗ, ಸುಹ್ಲಕವೆಂಬ ದೇಶಗಳು ಧನಧಾನ್ಯಾದಿಗಳಿಂದ ಸಮೃದ್ಧವಾಗಿಯೂ, ಪ್ರಖ್ಯಾತವಾಗಿಯೂ ಇದ್ದವು.

೩೪. ಮೇಲೆ ಹೇಳಿದ ದೇಶಗಳಂತೆಯೇ ಪುಂಡ್ರ, ಕಲಿಂಗವೆಂಬ ದೇಶಗಳೂ ಕೂಡ ಸಮೃದ್ಧಿಯಾಗಿದ್ದುವು. ಈಗ ಅವನ ವಂಶವನ್ನು ವರ್ಣಿಸುವೆನು ಕೇಳಿ ರೆಂದನು. ಅವನ ಮಕ್ಕಳೆಲ್ಲರೂ ಉತ್ತಮಕ್ಷೇತ್ರಜರೂ, ಮುನಿಸಂಭೂತರೂ ಆಗಿದ್ದರು. ಮತ್ತು ಅವರು ಮಹಾತೇಜಸ್ವಿಯೂ, ದೀರ್ಘತಮಸನಾಮಕನೂ ಆದ ಮುನಿವರ್ಯನಿಗೆ ಸುದೇಷ್ಣಾದೇವಿಯಲ್ಲಿ ಸಂಭೂತರೂ, ಪ್ರಖ್ಯಾತರೂ ಆಗಿದ್ದರು.

೩೫. ಮುನಿಗಳು ಸೂತನನ್ನು ಪ್ರಶ್ನೆಮಾಡಿದರು:—ಎಲೈ ಸೂತಪುರಾಣೀಕನೇ, ಆ ಬಲಿಮಹಾರಾಯನಿಗೆ ಐದುಜನ ಸತ್ಪ್ರಜೆಗಳು ಹೇಗೆ ಉತ್ಪನ್ನರಾದರು ? ಆ ಸಂತಾನವು ದೀರ್ಘತಮಸನೆಂಬ ಮಹಾಮುನಿಯಿಂದ ಹೇಗೆ ಉತ್ಪನ್ನವಾಯಿತು ? ಈ ವಿಷಯವನ್ನು ನಮಗೆ ತಿಳಿಸಬೇಕೆಂದು ಕೇಳಿಕೊಂಡರು.

|| ಸೂತ ಉವಾಚ ||

ಅಶಿಜೋ ನಾಮ ವಿಖ್ಯಾತೋ ಆಸೀದ್ಧೀಮಾನ್ನೃಷಿಃ ಪುರಾ ।
ಭಾರ್ಯಾ ವೈ ಸಮತಾ ನಾಮ ಬಭೂವಾಸ್ಯ ಮಹಾತ್ಮನಃ || ೩೬ ||

ಅಶಿಜಸ್ಯ ಕನೀಯಾಂಸ್ತು ಪುರೋಧಾಯೋ ದಿವೌಕಸಾಂ ।
ಬೃಹಸ್ಪತಿರ್ಬೃಹತ್ತೇಜಾಃ ಮಮತಾಂ ಸೋಽಭ್ಯಪದ್ಯತ || ೩೭ ||

ಉವಾಚ ಮಮತಾ ತಂತು ಬೃಹಸ್ಪತಿಮನಿಚ್ಛತೀ ।
ಅಂತರ್ವತ್ನ್ಯಸ್ಮಿ ತೇ ಭ್ರಾತುರ್ಜ್ಯೇಷ್ಠಸ್ಯಾಷ್ಟಮಿತಾ ಇತಿ || ೩೮ ||

ಅಯಂ ಹಿ ಮೇ ಮಹಾಗರ್ಭೋ ರೋದತೇಽತಿ ಬೃಹಸ್ಪತೇ ।
ಅಶಿಜಂ ಬ್ರಹ್ಮ ಚಾಭ್ಯಸ್ಯ ಷಡಂಗಂ ವೇದಮುದ್ಗಿರನ್ || ೩೯ ||

---

೩೬. ಸೂತಮುನಿಯು ಹೇಳಿದನು :—ಎಲೈ ಮುನಿವರ್ಯರೇ, ಪೂರ್ವದಲ್ಲಿ ಮಹಾಜ್ಞಾನಿಯೂ ಮಹಾತ್ಮನೂ ಆದ ಅಶಿಜನಾಮಕನಾದ ಒಬ್ಬ ಮುನಿಯು ಇದ್ದನು. ಮಹಾನುಭಾವನಾದ ಆ ಮುನಿವರ್ಯನಿಗೆ ಸಮತಾನಾಮಕಳಾದ ಪತ್ನಿಯು ಸುಪ್ರಸಿದ್ಧಳಾಗಿದ್ದಳು.

೩೭. ಅಶಿಜನ ಸಹೋದರನೂ, ದೇವಪುರೋಹಿತನೂ, ಮಹಾತೇಜಸ್ವಿಯೂ ಆದ ಬೃಹಸ್ಪತಿಯು ಮಮತೆಯೆಂಬ ನಾರೀಮಣಿಯನ್ನು ಮದುವೆಯಾದನು.

೩೮. ಆಗ ಆ ಮಮತೆಯೆಂಬಾಕೆಯು ತನ್ನ ಪತಿಯಾದ ಬೃಹಸ್ಪತಿಯಲ್ಲಿ ಮನಸ್ಸಿಲ್ಲದೆ ಎಲೈ ಪ್ರಿಯನೇ, ನಾನು ಪ್ರೀತಿಗೆ ಪಾತ್ರನಾದ ನಿನ್ನ ಅಣ್ಣನಿಂದ ಗರ್ಭವತಿಯಾಗಿರುವೆನೆಂದು ಪತಿಗೆ ಹೇಳಿದಳು

೩೯ ಎಲೈ ಪ್ರಿಯನಾದ ಬೃಹಸ್ಪತಿಯೇ, ಆ ನನ್ನ ಗರ್ಭಗತವಾದ ಶಿಶುವು ಬೆಳದು ರೋದಿಸುತ್ತಿದೆ. ನೀನಾದರೋ ಅಶಿಜನಿಂದ ನಾಲ್ಕುವೇದಗಳನ್ನೂ, ಷಡಂಗಗಳನ್ನೂ ಓದಿದ ಮಹಾನುಭಾವನೂ, ಸರ್ವದಾ ವಿದ್ಯಾವಂತನೂ ಆದ ಜ್ಞಾನಿಯಾಗಿರುತ್ತೀ.

**ಅಮೋಘರೇತಾಸ್ತ್ವಂಚಾಪಿ ನ ಮಾಂ ಭಜಿತುಮರ್ಹಸಿ |**
**ಅಸ್ಮಿನ್ನೇವ ಗತೇ ಕಾಲೇ ಯಥಾ ವಾ ಮನ್ಯಸೇ ಪ್ರಭೋ || ೪೦ ||**

**ಏವಮುಕ್ತಸ್ತಯಾ ಸಂಮ್ಯಗ್ ಬೃಹತ್ತೇಜಾ ಬೃಹಸ್ಪತಿಃ |**
**ಕಾಮಾತ್ಮಾನಂ ಮಹಾತ್ಮಾ ಚ ನಾತ್ಮಾನಂ ಸೋಭ್ಯಧಾರಯತ್ || ೪೧ ||**

**ಸಂಬಭೂವೈವ ಧರ್ಮಾತ್ಮಾ ತಯಾ ಸಾರ್ಧಂ ಬೃಹಸ್ಪತಿಃ |**
**ಉತ್ಸೃಜಂತಂ ತದಾ ರೇತೋ ಗರ್ಭಸ್ಥಃ ಸೋಽಭ್ಯಭಾಷತ || ೪೨ ||**

**ನೋ ಸ್ನಾತಕೋ ನ್ಯಸೇದ್ಧ್ಯಸ್ಮಿನ್ ದ್ವಯೋರ್ನೇಹಾಸ್ತಿ ಸಂಭವಃ |**
**ಅಮೋಘರೇತಾಸ್ತ್ವಂಚಾಪಿ ಪೂರ್ವಂ ಚಾಹಮಿಹಾಗತಃ || ೪೩ ||**

---

೪೦. ಮತ್ತು ಇಂತಹ ನೀನು ಅಮೋಘವಾದ ವೀರ್ಯವುಳ್ಳವನಾಗಿರುತ್ತೀಯೆ. ಅಂದರೆ ನಿನ್ನ ವೀರ್ಯವೂ ವ್ಯರ್ಥವಾಗದೇ ಕಾರ್ಯಜನಕವಾಗುವುದು. ಆದುದರಿಂದ ಗರ್ಭವತಿಯಾದ ನನ್ನನ್ನು (ಭಜಿಸುವುದು) ಕೋರುವುದು ಯುಕ್ತವಾಗಿ ಕಾಣುವುದಿಲ್ಲ. ಈಗ ನೀವು ಪ್ರಭುಗಳೂ ಸ್ವತಂತ್ರರೂ ಆಗಿರುತ್ತೀರಿ. ನಿಮ್ಮಿಷ್ಟದಂತೆ ನಡೆದುಕೊಳ್ಳಬಹುದೆಂದು ಹೇಳಿದಳು.

೪೧. ಪತ್ನಿಯು ಹೀಗೆ ಹೇಳಲಾಗಿ ಆ ಮಾತುಗಳನ್ನು ಕೇಳಿದ ಮಹಾತೇಜಸ್ವಿಯೂ ಮಹಾತ್ಮನೂ ಆದ ಬೃಹಸ್ಪತಿಯು ಕಾಮುಕವಾದ ಆತ್ಮರೂಪವನ್ನು ತಡೆದುಕೊಳ್ಳಲು ಸಾಧ್ಯವಾಗದೇ ಹೋದನು.

೪೨. ತರುವಾಯ ಧರ್ಮಾತ್ಮನಾದ ಬೃಹಸ್ಪತಿಯು ತನ್ನ ಕಾಮವನ್ನು ತಡೆಯಲಾರದೇ ಆಕೆಯೊಡನೆ ಸಂಭೋಗ ಮಾಡಿದನು. ಅನಂತರ ರೇತಸ್ಸೇಚನೆಯಾಗುವ ಸಂದರ್ಭದಲ್ಲಿ ಗರ್ಭದಲ್ಲಿದ್ದ ಶಿಶುವು ಅವನಿಗೆ ಇಂತೆಂದಿತು.

೪೩. ಒಬ್ಬ ಯೋಗಿಯು ಒಂದು ಕ್ಷೇತ್ರದಲ್ಲಿ ಬೀಜಾವಾಪಮಾಡಿ ಅದೇ ಕ್ಷೇತ್ರದಲ್ಲಿ ಮತ್ತೊಂದುಸಲ ಆ ಬೀಜವು ಅಂಕುರಿಸುತ್ತಿರುವಾಗ ಬೇರೊಬ್ಬ ಸ್ನಾತಕನು ಬೀಜಾವಾಪವನ್ನು ಮಾಡುವನೇ ? ಒಂದು ಜಾಗದಲ್ಲಿ ಇಬ್ಬರಿಗೆ ಏಕಕಾಲದಲ್ಲಿ ಬೀಜಾವಾಪ ಮಾಡಲು ಸಾಧ್ಯವೇ ? ನೀನು ಅಮೋಘರೇತಸ್ಕನೂ ಆಗಿರುತ್ತೀ. ಆ ರೇತಸ್ಸು ವ್ಯರ್ಥವಾಗುವುದಿಲ್ಲ. ನಾನು ಮೊದಲೇ ಇಲ್ಲಿಗೆ ಬಂದಿರುತ್ತೇನೆ ಎಂಬುದಾಗಿ ಹೇಳಿದನು.

ಶಶಾಪ ತಂ ತದಾ ಕ್ರುದ್ಧ ಏವಮುಕ್ತೋ ಬೃಹಸ್ಪತಿಃ ।
ಆಶಿಜಂತಂ ಸುತಂ ಭ್ರಾತುರ್ಗರ್ಭಸ್ಥಂ ಭಗವಾನೃಷಿಃ ॥ ೪೪ ॥

ಯಸ್ಮಾತ್ತ್ವಮೀದೃಶೇ ಕಾಲೇ ಸರ್ವಭೂತೇಪ್ಸಿತೇ ಸತಿ ।
ಮಾಮೇವಮುಕ್ತವಾನ್ ಮೋಹಾತ್ತಮೋ ದೀರ್ಘಂ ಪ್ರವೇಕ್ಷ್ಯಸಿ ॥ ೪೫ ॥

ತತೋ ದೀರ್ಘತಮಾ ನಾಮ ಶಾಪಾದೃಷಿರಜಾಯತ ।
ಅಥಾಶಿಜೋ ಬೃಹತ್ಕೀರ್ತಿರ್ಬೃಹಸ್ಪತಿರಿವೌಜಸಾ ॥ ೪೬ ॥

ಊರ್ಧ್ವರೇತಾಸ್ತತಶ್ಚಾಪಿ ನ್ಯವಸದ್ಭ್ರಾತುರಾಶ್ರಮೇ ।
ಗೋಧರ್ಮಂ ಸೌರಭೇಯಾತ್ತು ವೃಷಭಾಚ್ಛ್ರುತವಾನ್ ಪ್ರಭೋ ॥ ೪೭ ॥

ತಸ್ಯ ಭ್ರಾತಾ ಪಿತೃವ್ಯಸ್ತು ಚಕಾರ ಭವನಂ ತದಾ ।
ತಸ್ಮಿನ್ ಹಿ ತತ್ರ ವಸತಿ ಯದೃಚ್ಛಾಭ್ಯಾಗತೋ ವೃಷಃ ॥ ೪೮ ॥

---

೪೪. ಹೀಗೆ ಗರ್ಭಗತನಾದ ಪುರುಷನು ಹೇಳಲಾಗಿ, ಆ ಮಾತುಗಳನ್ನು ಕೇಳಿದ ಪೂಜ್ಯನಾದ ಬೃಹಸ್ಪತಿಯು ಬಹಳವಾಗಿ ಕೋಪಗೊಂಡು, ಗರ್ಭಗತನಾದ ತನ್ನ ಭ್ರಾತುಪುತ್ರನಿಗೆ ಶಾಪವನ್ನು ಕೊಟ್ಟನು.

೪೫. ಸರ್ವಪ್ರಾಣಿಗಳಿಗೂ ಸುಖಕರವಾದ ಇಂತಹ ಸಮಯದಲ್ಲಿ ನೀನು ಅಜ್ಞಾನದಿಂದ ನಿಷೇಧವಾಡಿದ್ದರಿಂದ ದೀರ್ಘವಾದ ತಮಸ್ಸನ್ನು ಹೊಂದು ಎಂದು ಶಾಪವನ್ನು ಕೊಟ್ಟನು.

೪೬-೪೭. ಅನಂತರ ಆ ಋಷಿಶಾಪದಿಂದ ಶಿಶುವು ದೀರ್ಘತಮೋನಾಮಕವಾಗಿ ಜನಿಸಿತು. ಅನಂತರ ಅಶಿಜನಾದ ಬೃಹತ್ಕೀರ್ತಿಯು ಬೃಹಸ್ಪತಿಯಂತೆ ಮಹಾ ತೇಜಸ್ವಿಯೂ ಊರ್ಧ್ವರೇತಸ್ಕನೂ ಆಗಿ ಅಣ್ಣನ ಆಶ್ರಮದಲ್ಲಿಯೇ ವಾಸಿಸಿದನು. ತರುವಾಯ ಅವನು ಪ್ರಭುವೂ ಸುರಭಿಯ ಕುಮಾರನೂ ಆದ ವೃಷಭನಿಂದ ಗೋಧರ್ಮವನ್ನು ಕೇಳಿದನು.

೪೮. ತನ್ನ ತಂದೆಯ ಸಹೋದರನೂ, ಚಿಕ್ಕಪ್ಪನೂ ಆದ ಮುನಿಯು ಅವನಿಗೆ ಒಂದು ಗೃಹವನ್ನು ಕಟ್ಟಿಸಿಕೊಟ್ಟನು. ಅವನು ಅದರಲ್ಲಿ ವಾಸಿಸುತ್ತಿರಲಾಗಿ ಅಲ್ಲಿಗೆ ಒಂದು ವೃಷಭವು ಅಕಸ್ಮಾತ್ತಾಗಿ ಬಂದಿತು. ಅದನ್ನು ನೋಡಿದನು.

ದರ್ಶಾರ್ಥಮಾಹೃತಾನ್ ದರ್ಭಾಂಶ್ಚಚಾರ ಸುರಭೀವೃತಃ ।
ಜಗ್ರಾಹ ತಂ ದೀರ್ಘತಮಾ ವಿಸ್ಫುರಂತಂ ಚ ಶೃಂಗಯೋಃ ॥ ೪೯ ॥

ಸ ತೇನ ನಿಗೃಹೀತಸ್ತು ನ ಚಚಾಲ ಪದಾತ್ಪದಂ ।
ತತೋಽಬ್ರವೀದ್ವೃಷಸ್ತಂ ವೈ ಮುಂಚ ಮಾಂ ಬಲಿನಾಂ ವರ ॥ ೫೦ ॥

ನ ಮಯಾಸಾದಿತಸ್ತಾತ ಬಲವಾಂಸ್ತ್ವದ್ವಿಧಃ ಕ್ವಚಿತ್ ।
ತ್ರ್ಯಂಬಕಂ ವಹತಾ ದೇವಂ ಯತೋ ಜಾತೋಽಸ್ಮಿ ಭೂತಲೇ ॥ ೫೧ ॥

ಮುಂಚ ಮಾಂ ಬಲಿನಾಂ ಶ್ರೇಷ್ಠ ಪ್ರೀತಸ್ತೇಽಹಂ ವರಂ ವೃಣು ।
ಏವಮುಕ್ತೋಽಬ್ರವೀದೇನಂ ಜೀವಂಸ್ತ್ವಂ ಮೇ ಕ್ವ ಯಾಸ್ಯಸಿ ॥ ೫೨ ॥

---

೪೯. ತರುವಾಯ ಆ ಎತ್ತು ಹಸುಗಳ ಸಂಗಡ ಸೇರಿಕೊಂಡು ದರ್ಶಕ್ಕಾಗಿ ಇಟ್ಟಿದ್ದ ದರ್ಭೆಯ ಹುಲ್ಲನ್ನು ತಿಂದಿತು. ಆಗ ದೀರ್ಘತಮನು ಕೊಂಬುಗಳಿಂದ ಪ್ರಕಾಶಿಸುವ ಆ ಎತ್ತನ್ನು ಹಿಡಿದುಕೊಂಡನು.

೫೦. ಅವನು ಅದನ್ನು ಹಿಡಿದುಕೊಳ್ಳಲಾಗಿ ಆ ವೃಷಭವು ಒಂದು ಹೆಜ್ಜೆಯೂ ಮುಂದಕ್ಕೆ ನಡೆಯಲಾಗದೇ ಹೋಯಿತು. ಆಗ ಅದು ರಾಯನನ್ನು ನೋಡಿ ಎಲೈ ಶೂರನೇ ನಿನ್ನಂತಹ ಬಲಿಷ್ಠರನ್ನು ನಾನು ಕಾಣೆನು ನನ್ನನ್ನು ದಯಪಾಲಿಸಿ ಬಿಡಬೇಕೆಂದು ಬೇಡಿಕೊಂಡಿತು.

೫೧. ಎಲೈ ಶೂರನೇ, ನಿನ್ನಂತಹ ಬಲಿಷ್ಠನನ್ನು ನಾನು ಎಲ್ಲಿಯೂ ನೋಡಿರುವುದಿಲ್ಲ. ದೇವನಾದ ಪರಮೇಶ್ವರನಿಗೆ ವಾಹನನಾದ ನಾನು ಈ ಭೂಮಿಯಲ್ಲಿ ಅವತರಿಸಿರುತ್ತೇನೆ ಎಂದು ಹೇಳಿದನು.

೫೨. ಬಲಿಷ್ಠರಲ್ಲಿ ಉತ್ತಮನಾದ ಮಹರ್ಷಿಯೇ, ನಿನಗೆ ನಾನು ಬಹಳ ಪ್ರೀತನಾಗಿರುವೆನು ವರಗಳನ್ನು ಕೇಳು ಕೊಡುತ್ತೇನೆಂದನು. ಹೀಗೆ ಆ ನಂದೀಶ್ವರನು ಹೇಳಲಾಗಿ ಮುನಿಯು ಜೀವಂತನಾದ ನೀನು ಎಲ್ಲಿಗೆ ತಪ್ಪಿಸಿಕೊಂಡು ಹೋಗುತ್ತೀಯೆ ಎಂದನು.

ತೇನ ತ್ವಾಹಂ ನ ಮೋಕ್ಷ್ಯಾಮಿ ಪರಸ್ವಾಹಂ ಚತುಷ್ಪದಂ ।
ತತಸ್ತಂ ದೀರ್ಘತಮಸಂ ಸ ವೃಷಃ ಪ್ರತ್ಯುವಾಚ ಹ ॥ ೫೩ ॥

ನಾಸ್ಮಾಕಂ ವಿದ್ಯತೇ ತಾತ ಪಾತಕಂ ಸ್ತೇಯಮೇವ ವಾ ।
ಭಕ್ಷ್ಯಾಭಕ್ಷ್ಯಂ ನ ಜಾನೀಮಃ ಪೇಯಾಪೇಯಂ ಚ ಸರ್ವಶಃ ॥ ೫೪ ॥

ಕಾರ್ಯಾಕಾರ್ಯಂ ನ ವೈ ವಿದ್ಮೋ ಗಮ್ಯಾಗಮ್ಯಂ ತಥೈವ ಚ ।
ನ ಪಾಪ್ಮಾನೋ ವಯಂ ವಿಪ್ರ ಧರ್ಮೋ ಹ್ಯೇಷ ಗವಾಂ ಸ್ಮೃತಃ ॥ ೫೫ ॥

ಗವಾಂ ನಾಮ ಸ ವೈ ಶ್ರುತ್ವಾ ಸಂಭ್ರಾಂತಸ್ತ್ವನುಮುಚ್ಯ ತಂ ।
ಭಕ್ತ್ಯಾ ಚಾನುಶ್ರಿವಿಕಯಾ ಗೋಷು ತಂ ವೈ ಪ್ರಸಾದಯತ್ ॥ ೫೬ ॥

ಪ್ರಸಾದಿತೇ ಗತೇ ತಸ್ಮಿನ್ ಗೋಧರ್ಮಂ ಭಕ್ತಿತಸ್ತು ತಂ ।
ಮನಸೈವ ತದಾದತ್ತೇ ತನ್ನಿಷ್ಠಸ್ತತ್ಪರಾಯಣಃ ॥ ೫೭ ॥

---

೫೩. ನಾನು ಪರರ ದ್ರವ್ಯವನ್ನು ಅಪಹರಿಸುವ ಚತುಷ್ಪಾದಿಯಾದ ನಿನ್ನನ್ನು ಜೀವಸಹಿತ ಬಿಡುವುದಿಲ್ಲವೆಂದು ದೀರ್ಘತಮಸನು ಹೇಳಿದನು. ಅನಂತರ ಆ ವೃಷಭವು ದೀರ್ಘತಮಸನಿಗೆ ಇಂತೆಂದು ಹೇಳಿತು.

೫೪. ಎಲೈ ಪೂಜ್ಯನೇ, ಚತುಷ್ಪಾದ ಪ್ರಾಣಿಗಳಾದ ನಮಗೆ ಪುಣ್ಯಪಾಪಗಳೂ ಚೋರತನವೂ ಇಲ್ಲ. ನಮಗೆ ಇದು ತಿನ್ನಬಹುದು ತಿನ್ನಬಾರದೆಂಬ ಜ್ಞಾನವೂ, ಇದು ಕುಡಿಯಬಹುದು ಕುಡಿಯಬಾರದೆಂಬ ವಿವೇಕವೂ ಸಹ ಇಲ್ಲವೆಂದಿತು.

೫೫. ನಾವು ಕಾರ್ಯಾಕಾರ್ಯಗಳನ್ನೂ, ಗಮ್ಯಾಗಮ್ಯಗಳನ್ನೂ ತಿಳಿಯಲಾರೆವು. ಆದುದರಿಂದ ಎಲೈ ವಿಪ್ರವರ್ಯನೇ, ನಮಗೆ ಪುಣ್ಯಪಾಪಗಳಿಲ್ಲ. ಇದು ಪ್ರಾಣಿಗಳಾದ ನಮಗೆ ಸಹಜಧರ್ಮವಾಗಿದೆಯೆಂದು ತಿಳಿಸಿತು.

೫೬. ತರುವಾಯ ಅವನು ಆ ಪಶುಗಳ ಧರ್ಮವನ್ನರಿತು ಭ್ರಾಂತನಾಗಿ ಆ ವೃಷಭವನ್ನು ಬಿಟ್ಟನು. ಅನಂತರ ಅವುಗಳಲ್ಲಿ ಪ್ರೀತಿಯಿಂದಲೂ ಭಕ್ತಿಯಿಂದಲೂ ವರ್ತಿಸಿ ಅದನ್ನು ಬಹಳವಾಗಿ ಪೂಜಿಸಿದನು.

೫೭. ಹೀಗೆ ಆ ವೃಷಭವು ಅನುಗ್ರಹಿಸಿ ಹೋಗಲಾಗಿ ಭಕ್ತಿಯಿಂದ ಆ ಗೋಧರ್ಮವನ್ನು ಮನಸ್ಸಿನಲ್ಲಿಯೇ ಚಿಂತಿಸುತ್ತಾ ಧ್ಯಾನಿಸಿದನು.

ತತೋ ಯವೀಯಸಃ ಪತ್ನೀಮೌತಥ್ಯಸ್ಯಾಭ್ಯಮನ್ಯತ ।
ವಿಚೇಷ್ಟಮಾನಾಂ ರುದತೀಂ ದೈವಾತ್ ಸ ಮೂಢಚೇತನಃ ॥ ೫೮ ॥

ಅವಲೇಪಂ ತು ತಂ ಮತ್ವಾ ಶರದ್ವಾಂಸ್ತಸ್ಯ ನಾಕ್ಷಮತ್ ।
ಗೋಧರ್ಮಂ ವೈ ಬಲಂ ಕೃತ್ವಾ ಸ್ನುಷಾಂ ಸ ಸಮುಮನ್ಯತ ॥ ೫೯ ॥

ವಿಪರ್ಯಯಂ ತು ತಂ ದೃಷ್ಟ್ವಾ ಶರದ್ವಾನ್ ಪ್ರತ್ಯಚಿಂತಯತ್ ।
ಭವಿಷ್ಯಮರ್ಥಂ ಜ್ಞಾತ್ವಾ ಚ ಮಹಾತ್ಮಾ ಚ ನ ಮೃತ್ಯುತಾಂ ॥ ೬೦ ॥

ಪ್ರೋವಾಚ ದೀರ್ಘತಮಸಂ ಕ್ರೋಧಾತ್ ಸಂರಕ್ತಲೋಚನಃ ।
ಗಮ್ಯಾಗಮ್ಯಂ ನ ಜಾನೀಷೇ ಗೋಧರ್ಮಾತ್ ಪ್ರಾರ್ಥಯತ್ ಸ್ನುಷಾಂ ॥

ದುರ್ವೃತ್ತಸ್ತ್ವಂ ತ್ಯಜಾಮ್ಯೇವ ಗಚ್ಛಸ್ತ್ವಂ ಸ್ವೇನ ಕರ್ಮಣಾ ।
ಯಸ್ಮಾತ್ತ್ವಮಂಧೋ ವೃದ್ಧಶ್ಚ ಭರ್ತವ್ಯೋ ದುರನುಷ್ಟಿತಃ ॥
ತೇನಾಸಿ ತ್ವಂ ಪರಿತ್ಯಕ್ತೋ ದುರಾಚಾರೋಽಸ್ಮಿ ಮೇ ಮತಿಃ ॥ ೬೧ ॥

---

೫೮. ಅನಂತರ ಅವನು ತಮ್ಮನಾದ ಔತಥ್ಯನ ಪತ್ನಿಯನ್ನು ಮೋಹಿಸಿದನು. ಅವನು ಮೂರ್ಖತನದಿಂದ ದುರ್ದೈವವಶಾತ್ ಅಳುತ್ತಿರುವ ಆಕೆಯ ಬಳಿಗೆ ಹೋದನು.

೫೯. ಆಗ ಶರದ್ವಂತನು ಅವನ ಗರ್ವವನ್ನರಿತು ಕ್ಷಮಿಸದೇ ಪ್ರಾಣಿಯಂತೆ ಗೋಧರ್ಮವನ್ನು ಹೊಂದಿರುತ್ತೀಯೇ ಎಂದು ಅವನನ್ನು ಅತಿಯಾಗಿ ದೂಷಿಸಿದನು.

೬೦. ಮಹಾತ್ಮನೂ ತ್ರಿಕಾಲಜ್ಞಾನಿಯೂ ಆದ ಶರದ್ವಂತನು (ಆ ವಿಪರ್ಯಯವನ್ನು) ವ್ಯತ್ಯಾಸವನ್ನರಿತು ಆಲೋಚಿಸಿದನು. ಮತ್ತು ಭವಿಷ್ಯಾರ್ಥವನ್ನರಿತು ಮೃತನಾಗುವಂತೆ ಶಾಪವನ್ನು ಕೊಡಲಿಲ್ಲ.

೬೧. ಮತ್ತು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ದೀರ್ಘತಮಸನನ್ನು ಕುರಿತು ನೀನು ಗಮ್ಯಾಗಮ್ಯಗಳನ್ನೂ, ಯುಕ್ತಾಯುಕ್ತಗಳನ್ನೂ ಪಶುವಿನಂತೆ ಅರಿಯದೇ ಸೊಸೆಯನ್ನು ಆಶಿಸುತ್ತೀಯೆ.

೬೨. ಎಲೈ ದೀರ್ಘತಮಸನೇ, ನೀನು ದುರಾಚಾರಿಯಾಗಿರುವೆ ಆದುದರಿಂದ ನಿನ್ನನ್ನು ತ್ಯಾಗಮಾಡುವೆನು. ನೀನು ಸ್ವೇಚ್ಛೆಯಾಗಿ ಹೊರಡು. ನೀನು ಅಂಧನಾಗಿಯೂ ವೃದ್ಧನಾಗಿಯೂ ಇರುವುದರಿಂದ ರಕ್ಷಿಸಲು ಯೋಗ್ಯನಾಗಿದ್ದರೂ ನಿನ್ನನ್ನು ತ್ಯಾಗಮಾಡುತ್ತೇನೆ. ನೀನು ದುರಾಚಾರಿಯೆಂದು ನನ್ನ ಮತವಾಗಿದೆ ಎಂದನು.

॥ ಸೂತ ಉವಾಚ ॥

ಕರ್ಮಣ್ಯಸ್ಮಿಂಸ್ತತಃ ಕ್ರೂರೇ ತಸ್ಯ ಬುದ್ಧಿರಜಾಯತ ।
ನಿರ್ಭರ್ತ್ಸ್ಯ ಚೈವ ಬಹುಶೋ ಬಾಹುಭ್ಯಾಂ ಪರಿಗೃಹ್ಯ ಚ ॥
ಕೋಷ್ಠೇ ಸಮುದ್ರೇ ಪ್ರಕ್ಷಿಪ್ಯ ಗಂಗಾಂಭಸಿ ಸಮುತ್ಸೃಜತ್ ॥ ೬೩ ॥

ಉಹ್ಯಮಾನಃ ಸಮುದ್ರಸ್ತು ಸಪ್ತಾಹಂ ಸ್ರೋತಸಾ ತದಾ ।
ತಂ ಸಸ್ತ್ರೀಕೋ ಬಲಿರ್ನಾಮ ರಾಜಾ ಧರ್ಮಾರ್ಥತತ್ವವಿತ್ ॥
ಅಪಶ್ಯನ್ಮಜ್ಜಮಾನಂ ತು ಸ್ರೋತಸಾಭ್ಯಾಶಮಾಗತಂ ॥ ೬೪ ॥

ತಂ ಗೃಹೀತ್ವಾ ಸ ಧರ್ಮಾತ್ಮಾ ಬಲಿರ್ವೈರೋಚನಸ್ತದಾ ।
ಅಂತಃಪುರೇ ಜುಗೋಪೈನಂ ಭಕ್ಷ್ಯೈರ್ಭೋಜ್ಯೈಶ್ಚ ತರ್ಪಯನ್ ॥ ೬೫ ॥

ಪ್ರೀತಃ ಸ ವೈ ವರೇಣಾಥ ಚ್ಛಂದಯಾಮಾಸ ವೈ ಬಲಿಂ ।
ಸ ಚ ತಸ್ಮಾದ್ವರಂ ವವ್ರೇ ಪುತ್ರಾರ್ಥಂ ದಾನವರ್ಷಭಃ ॥ ೬೬ ॥

---

೬೩. ಸೂತಮುನಿಯು ಹೇಳಿದನು :—ಅವನಿಗೆ ಇಂತಹ ಕ್ರೂರಕರ್ಮದಲ್ಲಿ ದುರ್ಬುದ್ಧಿಯುಂಟಾಗಿದೆ. ಆದುದರಿಂದ ಅವನನ್ನು ಹೆದರಿಸಿ, ಎರಡು ಕೈಗಳನ್ನು ಕಟ್ಟಿ ಸಮುದ್ರ ಮಧ್ಯಕ್ಕೆ ಹೋಗುವಂತೆ ಗಂಗಾನದಿಯಲ್ಲಿ ಹಾಕಿದರು.

೬೪. ಹೀಗೆ ಗಂಗೆಯ ಮೂಲಕ ಸಮುದ್ರಕ್ಕೆ ಹೋಗಿ ಏಳುದಿವಸಗಳವರೆಗೂ ತೇಲಾಡುತ್ತಿರುವಲ್ಲಿ ಸ್ತ್ರೀಯರೊಂದಿಗೆ ಸಹಿತನೂ, ಧರ್ಮಾಧರ್ಮಗಳನ್ನು ತಿಳಿದ ಬಲಿಮಹಾರಾಯನು ನೋಡಿದನು. ಆಗ ಅವನು ಸಮುದ್ರದಲ್ಲಿ ಮುಳುಗಿ ತೇಲುತ್ತ ದಡದ ಸಮೀಪಕ್ಕೆ ಬಂದನು

೬೫. ವಿರೋಚನನಕುಮಾರನೂ, ಧರ್ಮಾತ್ಮನೂ ಆದ ಬಲಿಮಹಾರಾಯನು ಅವನನ್ನು ನೋಡಿ ಕನಿಕರದಿಂದ ಕರೆದುಕೊಂಡು ಅರಮನೆಗೆ ಹೋಗಿ ಭಕ್ಷ್ಯ ಭೋಜ್ಯಗಳನ್ನು ಕೊಟ್ಟು ತೃಪ್ತಿಗೊಳಿಸುತ್ತಾ ಅರಮನೆಯಲ್ಲಿಯೇ ರಕ್ಷಿಸುತ್ತಿದ್ದನು.

೬೬. ಅನಂತರ ಪ್ರೀತನಾದ ಮುನಿಯು ಎಲೈ ಬಲಿರಾಯನೇ ನಾನು ಬಹಳವಾಗಿ ಪ್ರೀತನಾಗಿರುವೆನು. ಆದುದರಿಂದ ಉತ್ತಮವಾದ ವರಗಳನ್ನು ಕೊಡುವೆನು ಕೇಳೆಂದು ಹೇಳಿದನು. ಆಗ ರಾಕ್ಷಸೋತ್ತಮನಾದ ಬಲಿರಾಯನು ಸಂತಾನಾಕಾಂಕ್ಷೆಯಿಂದ ಅವನಿಂದ ವರಗಳನ್ನು ಬೇಡಿಕೊಂಡನು.

|| ಬಲಿರುವಾಚ ||

ಸಂತಾನಾರ್ಥಂ ಮಹಾಭಾಗ ಭಾರ್ಯಯಾ ಮಮ ಮಾನದ ।
ಪುತ್ರಾನ್ ಧರ್ಮಾರ್ಥಸಂಯುಕ್ತಾನ್ ಉತ್ಪಾದಯಿತುಮರ್ಹಸಿ || ೬೭ ||

ಏವಮುಕ್ತಸ್ತು ತೇನರ್ಷಿಸ್ತಥಾಸ್ತ್ವಿತ್ಯುಕ್ತವಾನ್ ಹಿ ತಂ ।
ಸುದೇಷ್ಣಾಂ ನಾಮ ಭಾರ್ಯಾಂ ವೈ ರಾಜಾಸ್ಮೈ ಪ್ರಾಹಿಣೋತ್ತದಾ || ೬೮ ||

ಅಂಧಂ ವೃದ್ಧಂ ಚ ತಂ ದೃಷ್ಟ್ವಾ ನ ಸಾ ದೇವೀ ಜಗಾಮ ಹ ।
ಸ್ವಾಂ ಚ ಧಾತ್ರೇಯಿಕೀಂ ತಸ್ಮೈ ಭೂಷಯಿತ್ವಾ ವ್ಯಸರ್ಜಯತ್ || ೬೯ ||

ಕಕ್ಷೀವಚಕ್ಷುಷೌ ತಸ್ಯಾಂ ಶೂದ್ರಯೋನ್ಯಾಮೃಷಿರ್ವಶೀ ।
ಜನಯಾಮಾಸ ಧರ್ಮಾತ್ಮಾ ಪುತ್ರಾವೇತೌ ಮಹೌಜಸೌ || ೭೦ ||

---

೬೭. ಬಲಿರಾಯನು ಹೇಳಿದನು.—ಮಹಾನುಭಾವರಾದ ಮುನಿವರ್ಯರೇ, ಸಂತಾನಾಪೇಕ್ಷಿಯೂ, ಭಾರ್ಯಾಸಮೇತನೂ ಆದ ನನಗೆ ಪುತ್ರಸಂತಾನವಾಗುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡನು.

೬೮. ಬಲಿರಾಯನು ಹೀಗೆ ಕೇಳಲಾಗಿ ಆ ಮುನಿಯು ಹಾಗೆಯೇ ಆಗಲೆಂದು ಅವನಿಗೆ ವರಗಳನ್ನು ಕೊಟ್ಟನು. ತರುವಾಯ ರಾಜನು ತನ್ನ ಪತ್ನಿಯಾದ ಸುದೇಷ್ಣೆಯನ್ನು ಅವರ ಬಳಿಗೆ ಕಳುಹಿಸಿಕೊಟ್ಟನು.

೬೯. ಆಗ ಮಹಾರಾಣಿಯು ಈ ಮುನಿಯು ಅಂಧನೂ, ವೃದ್ಧನೂ ಆಗಿರುವನೆಂದು ತಿಳಿದು ತಾನು ಹೋಗದೆ ತನ್ನ ದಾದಿಯ ಕುಮಾರಿಗೆ ಅಲಂಕರಿಸಿ ಅವನ ಬಳಿಗೆ ಕಳುಹಿಸಿದಳು.

೭೦. ಧರ್ಮಾತ್ಮನಾದ ಆ ಮುನಿಯು ಆ ಶೂದ್ರಸ್ತ್ರೀಯಲ್ಲಿ ಆಸಕ್ತನಾಗಿ ಕಕ್ಷೀವ, ಚಕ್ಷುಷರೆಂಬ ಮಹಾತೇಜಸ್ವಿಗಳೂ, ವಶಿಗಳೂ ಆದ ಇಬ್ಬರು ಪುತ್ರರನ್ನು ಸೃಷ್ಟಿಸಿದನು.

ಕಕ್ಷೀವಚಕ್ಷುಷೌ ತೌ ತು ದೃಷ್ಟ್ವಾ ರಾಜಾ ಬಲಿಸ್ತದಾ ।
ಪ್ರಾಧೀತೌ ವಿಧಿವತ್ಸಮ್ಯಗೀಶ್ವರೌ ಬ್ರಹ್ಮವಾದಿನೌ ॥ ೭೧ ॥

ಸಿದ್ಧೌ ಪ್ರತ್ಯಕ್ಷಧರ್ಮಾಣೌ ಬುದ್ಧೌ ಶ್ರೇಷ್ಠತಮಾವಪಿ ।
ಮಮೈತಾವಿತಿ ಹೋವಾಚ ಬಲಿರ್ವೈರೋಚನಸ್ತ್ವೃಷಿಂ ॥ ೭೨ ॥

ನೇತ್ಯುವಾಚ ತತಸ್ತಂ ತು ಮಮೈತಾವಿತಿ ಚಾಬ್ರವೀತ್ ।
ಉತ್ಪನ್ನೌ ಶೂದ್ರಯೋನೌ ತು ಭವಚ್ಛದ್ಮಾ ಸುರೋತ್ತಮೌ ॥ ೭೩ ॥

ಅಂಧಂ ವೃದ್ಧಂ ಚ ಮಾಂ ಮತ್ವಾ ಸುದೇಷ್ಣಾ ಮಹಿಷೀ ತವ ।
ಪ್ರಾಹಿಣೋದವಮಾನಾಯ ಶೂದ್ರಾಂ ಧಾತ್ರೇಯಿಕೀಂ ಮಮ ॥ ೭೪ ॥

---

೭೧. ತರುವಾಯ ಮಹಾರಾಜನಾದ ಬಲಿಚಕ್ರವರ್ತಿಯು, ಮಹಾತ್ಮರಾದ ಆ ಇಬ್ಬರು ಪುತ್ರರನ್ನು ನೋಡಿ, ಕ್ರಮವಾಗಿ ವಿದ್ಯಾಭ್ಯಾಸವನ್ನು ಮಾಡಿಸಲಾಗಿ ಆ ಕುಮಾರರು ಮಹಾಜ್ಞಾನಿಗಳಾದರು

೭೨. ಅನಂತರ ಬಲಿಮಹಾರಾಯನು ಸಿದ್ಧಿಯ ವಿಷಯದಲ್ಲಿ ಪ್ರತ್ಯಕ್ಷರಾದ ಧರ್ಮಿಗಳೂ, ಬುದ್ಧಿಯ ವಿಷಯದಲ್ಲಿ ಶ್ರೇಷ್ಠತಮರಾದ ಬೃಹಸ್ಪತಿಗಳೂ, ಆದ ಆ ಮಕ್ಕಳನ್ನು ನೋಡಿ, ಈ ಕುಮಾರರು ನನ್ನವರೇ ಆಗಿರುವರೆಂದು ಮುನಿಗೆ ಹೇಳಿದನು.

೭೩. ಎಲೈ ರಾಜನೇ, ಆ ಮಕ್ಕಳು ನಿನ್ನವರಲ್ಲ ನನ್ನದೇ ಆಗಿವೆ. ಇವರು ಉತ್ತಮರೂ ಶೂದ್ರಯೋನಿಯಲ್ಲಿ ನನ್ನಿಂದ ಜನಿಸಿದ ಪುತ್ರರೂ ಆಗಿರುವರೆಂದನು.

೭೪. ಎಲೈ ರಾಯನೇ, ನಿನ್ನ ಪತ್ನಿಯಾದ ಸುದೇಷ್ಣೆಯು ನನ್ನನ್ನು ಅಂಧನೆಂದೂ, ವೃದ್ಧನೆಂದೂ, ಭಾವಿಸಿ ಅಪಮಾನಮಾಡುವುದಕ್ಕಾಗಿ ತನ್ನ ದಾಸಿಯಾದ ಶೂದ್ರಸ್ತ್ರೀಯನ್ನು ನನ್ನ ಬಳಿಗೆ ಕಳುಹಿಸಿದಳು. ಇವರು ಆಕೆಯಲ್ಲಿ ಉತ್ಪನ್ನರಾಗಿರುವರು ಎಂದು ಹೇಳಿದನು.

**ತತಃ ಪ್ರಸಾದಯಾಮಾಸ ಪುನಸ್ತಮೃಷಿಸತ್ತಮಂ ।**
**ಬಲಿರ್ಭಾರ್ಯಾಂ ಸುದೇಷ್ಣಾಂ ಚ ಭರ್ತ್ಸಯಾಮಾಸ ವೈ ಪ್ರಭುಃ ॥ ೭೫ ॥**

**ಪುನಶ್ಚೈನಾಮಲಂಕೃತ್ಯ ಋಷಯೇ ಪ್ರತ್ಯಪಾದಯತ್ ।**
**ತಾಂ ಸ ದೀರ್ಘತಮಾ ದೇವೀಮಬ್ರವೀದ್ಯದಿ ಮಾಂ ಶುಭೇ ॥ ೭೬ ॥**
**ದಧ್ನಾ ಲವಣಮಿಶ್ರೇಣ ಸ್ವಭ್ಯಕ್ತಂ ನಗ್ನಕಂ ತಥಾ ।**

**ಲಿಹಿಷ್ಯಸ್ಯಜುಗುಪ್ಸಂತೀ ಹ್ಯಾಪಾದತಲಮಸ್ತಕಂ ॥ ೭೭ ॥**
**ತತಸ್ತ್ವಂ ಪ್ರಾಪ್ಸ್ಯಸೇ ದೇವೀ ಪುತ್ರಾಂಶ್ಚ ಮನಸೇಪ್ಸಿತಾನ್ ।**
**ತಸ್ಯ ಸಾ ತದ್ವಚೋ ದೇವೀ ಸರ್ವಂ ಕೃತವತೀ ತಥಾ ॥ ೭೮ ॥**

**ಅಪಾನಂ ಚ ಸಮಾಸಾದ್ಯ ಜುಗುಪ್ಸಂತೀ ನ್ಯವರ್ಜಯತ್ ।**
**ತಾಮುವಾಚ ತತಃ ಸರ್ಷಿರ್ಯತ್ತೇ ಪರಿಹೃತಂ ಶುಭೇ ॥**
**ವಿನಾಪಾನಂ ಕುಮಾರಂ ತ್ವಂ ಜನಯಿಷ್ಯಸಿ ಪೂರ್ವಜಂ ॥ ೭೯ ॥**

---

೭೫. ಆ ಮಾತುಗಳನ್ನು ಕೇಳಿದ ಪ್ರಭುವಾದ ಬಲಿಮಹಾರಾಯನು ಆ ಋಷಿಗೆ ಸಮಾಧಾನವನ್ನು ಮಾಡಿ ಪತ್ನಿಯ ಬಳಿಗೆ ಬಂದು ಬಹಳವಾಗಿ ಹೆದರಿಸಿದನು.

೭೬ ತರುವಾಯ ಆಕೆಯನ್ನು ಅಂದವಾಗಿ ಅಲಂಕರಿಸಿ ಋಷಿಯ ಬಳಿಗೆ ಕಳುಹಿಸಿಕೊಟ್ಟನು. ಆಗ ಅವಳು ಮುನಿಗಳ ಬಳಿಗೆ ಬರಲು ಅವರು ಅವಳಿಗೆ ಮುಂದೆ ಹೇಳುವಂತೆ ನಿರೂಪಿಸಿದರು.

೭೭--೭೮. ಎಲೌ ಮಹಾರಾಣಿಯೇ, ಲವಣಮಿಶ್ರವಾದ ಮೊಸರನ್ನು ನನ್ನ ಶರೀರಕ್ಕೆ ಲೇಪನೆಮಾಡಿ ನೀನು ದಿಗಂಬರಳಾಗಿ ಕಾಲಿನಿಂದ ತಲೆಯವರೆಗೂ ಅಸಹ್ಯ ಪಡದೇ ನಾಲಿಗೆಯಿಂದ ನೆಕ್ಕಿದರೆ ನಿನಗೆ ಸತ್ಪುತ್ರರು ಜನಿಸುವರೆಂದು ಹೇಳಿದನು. ತರುವಾಯ ರಾಣಿಯು ಮಹರ್ಷಿಗಳು ಹೇಳಿದಂತೆಯೇ ಎಲ್ಲವನ್ನೂ ಮಾಡಿದಳು.

೭೯. ಅವಳು ಹಾಗೆ ಮಾಡುವಾಗ ಅಪಾನಸ್ಥಾನವನ್ನು ನೋಡಿ ಅಸಹ್ಯಪಟ್ಟು ನೆಕ್ಕದೇಯಿರಲಾಗಿ ಮುನಿಗಳು ಕೋಪಿಸಿಕೊಂಡು ಎಲೌ ಮಂಗಳಾಂಗಿಯೇ, ಯಾವ ಸ್ಥಾನವನ್ನು ನೀನು ಅಸಹ್ಯತೆಯಿಂದ ಬಿಟ್ಟಿರುವಿಯೋ ಅಂತಹ ಅಪಾನ ಪ್ರವೇಶವಿಲ್ಲದ ಜ್ಯೇಷ್ಠಕುಮಾರನನ್ನು ಪಡೆಯೆಂದು ಹೇಳಿದನು.

ತತಸ್ತಂ ದೀರ್ಘತಮಸಂ ಸಾ ದೇವೀ ಪ್ರತ್ಯುವಾಚ ಹ ।
ನಾರ್ಹಸಿ ತ್ವಂ ಮಹಾಭಾಗ ಪುತ್ರಂ ದಾತುಂ ಮಮೇದೃಶಂ ॥ ೬೦ ॥

॥ ಋಷಿರುವಾಚ ॥

ತವಾಪರಾಧೋ ದೇವ್ಯೇಷ ನಾನ್ಯಥಾ ಭವಿತಾನು ವೈ ।
ದೇವೀದಾನೀಂ ಚ ತೇ ಪುತ್ರಮಹಂ ದಾಸ್ಯಾಮಿ ಸುವ್ರತೇ ॥ ೬೧ ॥

ತಸ್ಯಾಪಾನಂ ವಿನಾ ಚೈವ ಯೋಗ್ಯಾಭಾವೋ ಭವಿಷ್ಯತಿ ।
ತಾಂ ಸ ದೀರ್ಘತಮಾಶ್ಚೈವ ಕುಕ್ಷೌ ಸ್ಪೃಷ್ಟ್ವೇದಮಬ್ರವೀತ್ ॥ ೬೨ ॥

ಪ್ರಾಶಿತಂ ದಧಿ ಯತ್ತೇಽದ್ಯ ಮಮಾಂಗಾದ್ವೈ ಶುಚಿಸ್ಮಿತೇ ।
ತೇನ ತೇ ಪೂರಿತೋ ಗರ್ಭಃ ಪೌರ್ಣಮಾಸ್ಯಾಮಿವೋದಧಿಃ ॥ ೬೩ ॥

---

೬೦. ತರುವಾಯ ಮಹಾರಾಣಿಯು, ದೀರ್ಘತಮಸನೆಂಬ ಮುನಿಯನ್ನು ಕುರಿತು—ಸ್ವಾಮಿ, ತಾವು ನನಗೆ ಅಂತಹ ಪುತ್ರನನ್ನು ಕೊಡಬಾರದು. ಅನುಗ್ರಹಿಸಬೇಕೆಂದು ಮುನಿಯನ್ನು ಪ್ರಾರ್ಥಿಸಿಕೊಂಡಳು.

೬೧. ಮುನಿಯು ಹೇಳಿದನು :—ಎಲೌ ದೇವಿಯೇ, ಇದು ನಿನ್ನ ಅಪರಾಧವೇ ಹೊರತು ನನ್ನ ತಪ್ಪಲ್ಲ. ನಾನು ಹೇಳಿದ ಮಾತು ಅನ್ಯಥಾ ಆಗುವುದಿಲ್ಲ. ನಿನಗೆ ಈಗ ಬೇರೆ ಯೋಗ್ಯರಾದ ಪುತ್ರರನ್ನೂ ಮಕ್ಕಳನ್ನೂ ಕೊಡುವೆನೆಂದನು.

೬೨. ಆಗ ದೀರ್ಘತಮಸನು, ಎಲೌ ದೇವಿಯೇ, ನೀನು ಮಾಡಿದ ಕಾರ್ಯಾನುಗುಣವಾಗಿ, ಅಪಾನರಹಿತನಾದ ಯೋಗ್ಯನಾದ ಕುಮಾರನು ಜನಿಸುವನು. ತರುವಾಯ ಮುನಿಯು ಅವಳ ನಾಭಿಯನ್ನು ಸ್ಪರ್ಶಮಾಡಿ, ಮುಂದೆ ಹೇಳುವಂತೆ ಹೇಳಿದನು.

೬೩. ಎಲೌ, ಮಂದಹಾಸಯುಕ್ತಳಾದ ದೇವಿಯೇ, ನನ್ನ ದೇಹದ ಮೇಲಿದ್ದ ಮೊಸರನ್ನು ನೀನು ಪ್ರಾಶನಮಾಡಿದ್ದರಿಂದ ನಿನ್ನ ಗರ್ಭವು ಹುಣ್ಣಿಮೆಯ ಚಂದ್ರದರ್ಶನದಿಂದ ಸಮುದ್ರವು ಉಕ್ಕುವಂತೆ, ವೃದ್ಧಿಯಾಗುವುದು.

ಭವಿಷ್ಯಂತಿ ಕುಮಾರಾಸ್ತೇ ಪಂಚ ದೇವಸುತೋಪಮಾಃ ।
ತೇಜಸ್ವಿನಃ ಪರಾಕ್ರಾಂತಾ ಯಜ್ವಾನೋ ಧಾರ್ಮಿಕಾಸ್ತಥಾ ॥ ೮೪ ॥

ತತೋಂಗಸ್ತು ಸುದೇಷ್ಣಾಯಾ ಜ್ಯೇಷ್ಠಪುತ್ರೋ ವ್ಯಜಾಯತ ।
ವಂಗಸ್ತಸ್ಮಾತ್ಕಲಿಂಗಸ್ತು ಪುಂಡ್ರೋ ಬ್ರಹ್ಮಸ್ತಥೈವ ಚ ॥ ೮೫ ॥

ವಂಶಭಾಜಸ್ತು ಪಂಚೈತೇ ಬಲೇಃ ಕ್ಷೇತ್ರೇಽಭವಂಸ್ತದಾ ।
ಇತ್ಯೇತೇ ದೀರ್ಘತಮಸಾ ಬಲೇರ್ದತ್ತಾಃ ಸುತಾಃ ಪುರಾ ॥ ೮೬ ॥

ಪ್ರಜಾಸ್ತ್ವಪಹತಾಸ್ತಸ್ಯ ಬ್ರಹ್ಮಣಾ ಕಾರಣಂ ಪ್ರತಿ ।
ಅಪತ್ಯಾಮಾತ್ಯದಾರೇಷು ಸ್ವೇಷು ಮಾ ಭೂನ್ಮಹಾತ್ಮನಃ ॥ ೮೭ ॥

---

೮೪. ಎಲೌ ಮಹಾರಾಣಿಯೇ, ನಿನಗೆ ಇಂದ್ರನ ಕುಮಾರನಾದ ಜಯಂತನಿಗೆ ಸಮಾನರೂ, ಅತಿ ತೇಜಸ್ವಿಗಳೂ, ಪರಾಕ್ರಮಿಗಳೂ, ಯಾಗಶೂರರೂ, ಧಾರ್ಮಿಕರೂ ಆದ ಐವರು ಕುಮಾರರು ಜನಿಸುವರು.

೮೫. ಅನಂತರ, ಸುದೇಷ್ಣಾದೇವಿಗೆ ಅಂಗರಾಜನು ಹಿರಿಯ ಮಗನಾಗಿಯೂ ವಂಗನು ದ್ವಿತೀಯ ಪುತ್ರನಾಗಿಯೂ, ಕಳಿಂಗನು ತೃತೀಯ ಕುಮಾರನಾಗಿಯೂ, ಪುಂಡ್ರಕನು ನಾಲ್ಕನೆಯವನಾಗಿಯೂ, ಮತ್ತು ಬ್ರಹ್ಮನು ಐದನೆಯವನಾಗಿಯೂ, ಜನಿಸಿದರು.

೮೬. ಪೂರ್ವಕಾಲದಲ್ಲಿ ವಂಶೋದ್ಧಾರಕರಾದ ಈ ಐವರು ಕುಮಾರರೂ ಬಲಿಯ ಪತ್ನಿಯಲ್ಲಿ ಮುನಿಯ ಅನುಗ್ರಹದಿಂದ ಜನಿಸಿದ ಕುಮಾರರಾಗಿರುವರು. ಈ ಐವರು ಕುಮಾರರನ್ನೂ ದೀರ್ಘತಮಸನೆಂಬ ಮುನಿಯು ಬಲಿಮಹಾರಾಜನಿಗೆ ಕೊಟ್ಟನು.

೮೭. ಮಹಾತ್ಮನಾದ ಬಲಿರಾಯನ ಆ ಕುಮಾರರನ್ನು, ಬ್ರಹ್ಮದೇವನು ಕಾರಣಾಂತರದಿಂದ ಅಪಹರಿಸಿದನು. ಏಕೆಂದರೆ—ಬಲಿರಾಯನಿಗೂ ಅವನ ಮಂತ್ರಿಗಳಿಗೂ ಸಂತಾನವಾಗಬಾರದೆಂಬುದೇ ಅವನ ಮತವಾಗಿತ್ತು. ಆದುದರಿಂದಲೇ ಅಪಹರಿಸಿದನು.

ತತೋ ಮನುಷ್ಯಯೋನ್ಯಾಂ ವೈ ಜನಯಾಮಾಸ ಸ ಪ್ರಜಾಃ ।
ಸುರಭಿರ್ದೀರ್ಘತಮಸಮಥ ಪ್ರೀತೋ ವಚೋಽಬ್ರವೀತ್ ॥ ೮೮ ॥

ವಿಚಾರ್ಯ ಯಸ್ಮಾದ್ಗೋಧರ್ಮಂ ತ್ವಮೇವಂ ಕೃತವಾನಸಿ ।
ತೇನ ನ್ಯಾಯೇನ ಮುಮುಚೇ ಹ್ಯಹಂ ಪ್ರೀತೋಽಸ್ಮಿ ತೇನ ತೇ ॥ ೮೯ ॥

ತಸ್ಮಾತ್ತವ ತಮೋ ದೀರ್ಘಂ ನಿಸ್ತುದಾಮ್ಯದ್ಯ ಪಶ್ಯ ವೈ ।
ಬಾರ್ಹಸ್ಪತ್ಯಂ ಚ ಯತ್ತೇಽನ್ಯತ್ಪಾಪಂ ಸಂತಿಷ್ಠತೇ ತನೌ ॥ ೯೦ ॥

ಜರಾಮೃತ್ಯುಭಯಂ ಚೈವ ಆಘ್ರಾಯ ಪ್ರಣುದಾಮಿ ತೇ ।
ಹ್ಯಾಘ್ರಾತಮಾತ್ರಃ ಸೋಽಪಶ್ಯತ್ ಸದ್ಯಸ್ತಮಸಿ ನಾಶಿತೇ ॥ ೯೧ ॥

---

೮೮. ಅನಂತರ ಅವನು ಮನುಷ್ಯರಲ್ಲಿಯೇ ಸಂತಾನವನ್ನು ಸೃಷ್ಟಿಸಿದನು. ಹೀಗಿರುವಲ್ಲಿ ಒಂದಾನೊಂದು ದಿವಸ ಕಾಮಧೇನುವು (ಸುರಭಿಯು) ದೀರ್ಘತಮಸನ ಬಳಿಗೆ ಬಂದು ಮುಂದೆ ಹೇಳುವಂತೆ ತಿಳಿಸಿತು.

೮೯. ಎಲೈ ಮುನಿಯೇ, ನೀನು ಗೋಧರ್ಮವನ್ನು ಚೆನ್ನಾಗಿ ವಿಚಾರಿಸಿ ಅದರಂತೆ ಕಾರ್ಯವನ್ನು ಮಾಡಿರುತ್ತೀ ಇದರಿಂದ ಪ್ರೀತಳಾದ ನಾನು, ಪ್ರೀತಿಯಿಂದ ನಿನಗೆ ವರಗಳನ್ನು ಕೊಡುವೆನೆಂದು ಕಾಮಧೇನುವು ಮುನಿಗೆ ತಿಳಿಸಿತು.

೯೦. ಆದುದರಿಂದ ನಿನ್ನಲ್ಲಿರುವ ಅತಿಮಹತ್ತಾದ ಪಾಪಗಳನ್ನು ನಾನು ಪರಿಹರಿಸುವೆನು. ನನ್ನ ಸಾಮರ್ಥ್ಯವನ್ನು ನೋಡು. ಮತ್ತು ಬೃಹಸ್ಪತಿಯ ಶಾಪದಿಂದ ಯಾವ ಪಾತಕವು ನಿನ್ನಲ್ಲಿದೆಯೋ ಅವೆಲ್ಲವನ್ನೂ ಪರಿಹರಿಸುವೆನೆಂದು ಹೇಳಿತು.

೯೧. ಎಲೈ ಮುನಿಯೇ, ನಾನು ನಿನ್ನನ್ನು ಆಘ್ರಾಣಿಸಿ, ಜರಾಮರಣ ಗಳಿಂದುಂಟಾಗುವ ಭಯವನ್ನು ಪರಿಹರಿಸುವೆನೆಂದು ಹೇಳಿ, ಆಘ್ರಾಣಿಸಲು ಪಾಪಗಳೆಲ್ಲವೂ ಪರಿಹಾರವಾಗಿ ಆ ಮುನಿಗೆ ಅಂಧತನವು ಹೋಗಿ, ದಿವ್ಯದೃಷ್ಟಿ ಯುಂಟಾಯಿತು.

ಆಯುಷ್ಮಾಂಶ್ಚ ಯುವಾ ಚೈವ ಚಕ್ಷುಷ್ಮಾಂಶ್ಚ ತತೋಽಭವತ್ ।
ಗವಾ ದೀರ್ಘತಮಾಃ ಸೋಽಥ ಗೌತಮಃ ಸಮಪದ್ಯತ ॥ ೯೨ ॥

ಕಕ್ಷೀವಾಂಸ್ತು ತತೋ ಗತ್ವಾ ಸಹ ಪಿತ್ರಾ ಗಿರಿವ್ರಜಾಂ ।
ಯಥೋದ್ದಿಷ್ಟಂ ಹಿ ಪಿತ್ರರ್ಥೇ ಚಚಾರ ವಿಫಲಂ ತಪಃ ॥ ೯೩ ॥

ತತಃ ಕಾಲೇನ ಮಹತಾ ತಪಸಾ ಭಾವಿತಃ ಸ ವೈ ।
ವಿಧೂಯ ಮನುಜೋ ದೋಷಾನ್ ಬ್ರಹ್ಮಣ್ಯಂ ಪ್ರಾಪ್ತವಾನ್ ಪ್ರಭುಃ ॥ ೯೪ ॥

ತತೋಽಬ್ರವೀತ್ ಪಿತಾ ಚೈನಂ ಪುತ್ರವಾನಸ್ಮ್ಯಹಂ ಪ್ರಭೋ ।
ಸತ್ಪುತ್ರೇಣ ತ್ವಯಾ ತಾತ ಕೃತಾರ್ಥೋಽಸ್ಮಿ ಯಶಸ್ವಿನಾ ॥ ೯೫ ॥

ಯುಕ್ತಾತ್ಮಾ ಹಿ ತತಃ ಸೋಽಥ ಪ್ರಾಪ್ತವಾನ್ ಬ್ರಹ್ಮಣಾ ಕ್ಷಯಂ ।
ಬ್ರಹ್ಮಣ್ಯಂ ಪ್ರಾಪ್ಯ ಕಕ್ಷೀವಾನ್ ಸಹಸ್ರಮಸೃಜತ್ ಸುತಾನ್ ॥ ೯೬ ॥

---

೯೨. ತರುವಾಯ ಮುನಿಯು, ಆಯುಷ್ಮಂತನೂ, ತರುಣನೂ, ದಿವ್ಯದೃಷ್ಟಿಯುಳ್ಳವನೂ ಆದನು. ಹೀಗೆ ಆ ದೀರ್ಘತಮಸನಾಮಕಮುನಿಯು ಕಾಮಧೇನುವಿನ ಅನುಗ್ರಹದಿಂದ ತನ್ನ ಗೌತಮರೂಪವನ್ನು ಹೊಂದಿದನು.

೯೩. ತರುವಾಯ ಕಕ್ಷೀವಂತನು ತನ್ನ ತಂದೆಯ ಸಂಗಡ ತಪಸ್ಸಿಗಾಗಿ ವನಕ್ಕೆ ಹೋಗಿ ತಂದೆಗೋಸ್ಕರವಾಗಿ ಘೋರವಾದ ತಪಸ್ಸನ್ನು, ಜನಕನ ಸಂಗಡವೇ ಮಾಡಿದನು.

೯೪. ಅನಂತರ ಬಹುಕಾಲ ಕಳೆಯಲಾಗಿ ಆ ರಾಯನು ಅಜ್ಞಾನದಿಂದ ಮುಕ್ತನಾಗಿ ಮನುಷ್ಯದೋಷಗಳನ್ನು ತಿರಸ್ಕರಿಸಿ ಬ್ರಾಹ್ಮಣ್ಯವನ್ನು ಹೊಂದಿದನು.

೯೫. ಅನಂತರ ತಂದೆಯು, ಎಲೈ ಕುಮಾರನೇ, ನಿನ್ನಿಂದ ನಾನು ಪುತ್ರವಂತರಲ್ಲಿ ಉತ್ತಮನಾಗಿರುವೆನು. ಕೀರ್ತಿವಂತನೂ, ಸತ್ಪುತ್ರನೂ ಆದ ನಿನ್ನಿಂದ ನಾನು ಕೃತಾರ್ಥನೂ, ಧನ್ಯನೂ ಆಗಿರುವೆನೆಂದನು.

೯೬. ತರುವಾಯ ಕಕ್ಷೀವಂತನು ತಪಸ್ಸನ್ನು ಮಾಡಿ ಬ್ರಹ್ಮದೇವನ ವರದಿಂದ ಕ್ಷೀಣಕಲ್ಮಿಷನಾದನು. ಅನಂತರ ಬ್ರಾಹ್ಮಣ್ಯವನ್ನು ಪಡೆದು ಸಾವಿರಾರು ಪುತ್ರರನ್ನು ಪಡೆದಿದನು.

ಕೃಷ್ಣಾಂಗಾ ಗೌತಮಾಸ್ತೇ ವೈ ಸ್ಮೃತಾಃ ಕಕ್ಷೀವತಃ ಸುತಾಃ ।
ಇತ್ಯೇಷ ದೀರ್ಘತಮಸೋ ಬಲೇರ್ವೈರೋಚನಸ್ಯ ವೈ ॥ ೯೭ ॥

ಸಮಾಗಮಃ ಸಮಾಖ್ಯಾತಃ ಸಂತಾನಂಚೋಭಯೋಸ್ತಯೋಃ ।
ಬಲಿಸ್ತಾನಭಿಷಿಚ್ಯೇಹ ಪಂಚ ಪುತ್ರಾನಕಲ್ಮಷಾನ್ ॥ ೯೮ ॥

ಕೃತಾರ್ಥಃ ಸೋಽಪಿ ಯೋಗಾತ್ಮಾ ಯೋಗಮಾಶ್ರಿತ್ಯ ಚ ಪ್ರಭುಃ ।
ಅದೃಶ್ಯಃ ಸರ್ವಭೂತಾನಾಂ ಕಾಲಾಕಾಂಕ್ಷೀ ಚರತ್ಯುತ ॥ ೯೯ ॥

ತತ್ರಾಂಗಸ್ಯ ತು ರಾಜರ್ಷೇ ರಾಜಾಸೀದ್ದಧಿವಾಹನಃ ।
ಸಾಪರಾಧಸುದೇಷ್ಣಾಯಾ ಅನಪಾನೋಽಭವನ್ನೃಪಃ ॥ ೧೦೦ ॥

---

೯೭. ಆ ಕಕ್ಷೀವಂತನ ಸುತರು ಕೃಷ್ಣಾಂಗರೆಂದೂ, ಗೌತಮರೆಂದೂ ಪ್ರಖ್ಯಾತರಾದರು. ಹೀಗೆ ದೀರ್ಘತಮಸನಿಗೂ, ವಿರೋಚನನ ಸುತನಾದ ಬಲಿರಾಯನಿಗೂ ಸಮಾಗಮವಾಗಿ ಸಂತಾನವು ವೃದ್ಧಿಯಾಯಿತು.

೯೮. ಹೀಗೆ ಇವರ ಸಮಾಗಮದಿಂದ, ಇವರಿಬ್ಬರ ಸಂತಾನವು ಬೆಳೆಯಲು ಅವಕಾಶವಾಯಿತು. ಬಲಿಮಹಾರಾಯನು ನಿರ್ದೋಷಿಗಳಾದ ತನ್ನ ಐದು ಜನ ಮಕ್ಕಳಿಗೂ ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದನು.

೯೯. ಹೀಗೆ ಕೃತಕೃತ್ಯನಾದ ಬಲಿಮಹಾರಾಯನು, ಯೋಗಾಭ್ಯಾಸದಲ್ಲಿ ಆಸಕ್ತನಾಗಿ ಆತ್ಮಾರಾಮರಂತೆ ಸರ್ವಭೂತಗಳಿಗೂ ಅದೃಶ್ಯನಾಗಿ, ಆಯುಃಪ್ರಮಾಣ ವನ್ನು ಎದುರುನೋಡುತ್ತಾ ಧ್ಯಾನಾಸಕ್ತನಾಗಿದ್ದನು.

೧೦೦. ಅವರಲ್ಲಿ ಅಂಗನೆಂಬ ರಾಜರ್ಷಿಗೆ ದಧಿವಾಹನನೆಂಬ ಪುತ್ರನು ಹುಟ್ಟಿದನು. ಅವನು ಸುದೇಷ್ಣೆಯ ಅಪರಾಧದಿಂದ ಅಪಾನಾಂಗರಹಿತನಾದನು.

ಅನಪಾನಸ್ಯ ಪುತ್ರಸ್ತು ರಾಜಾ ದಿವಿರಥಃ ಸ್ಮೃತಃ ।
ಪುತ್ರೋ ದಿವಿರಥಸ್ಯಾಸೀದ್ವಿದ್ವಾನ್ ಧರ್ಮರಥೋ ನೃಪಃ ॥ ೧೦೧ ॥

ಸ ವೈ ಧರ್ಮರಥಃ ಶ್ರೀಮಾನ್ ಯೇನ ವಿಷ್ಣುಪದೇ ಗಿರೌ ।
ಸೋಮಃ ಶಕ್ರೇಣ ಸಹ ವೈ ಯಜ್ಞೇ ಪೀತೋ ಮಹಾತ್ಮನಾ ॥ ೧೦೨ ॥

ಶೃಣು ಧರ್ಮರಥಸ್ಯಾಪಿ ರಾಜಾ ಚಿತ್ರರಥೋಽಭವತ್ ।
ಲೋಮಪಾದ ಇತಿ ಖ್ಯಾತೋ ಯಸ್ಯ ಶಾಂತಾ ಸುತಾಭವತ್ ॥ ೧೦೩ ॥

ಜಜ್ಞೇ ವೈ ಚಂಡಿಕಸ್ತಸ್ಯ ವಾರಣಃ ಶಕ್ರವಾರಣಃ ।
ಆನಯಾಮಾಸ ಸ ಮಹೀಂ ಮಂಥೋರ್ವಾಹನಮುತ್ತಮಂ ॥ ೧೦೪ ॥

---

೧೦೧. ಅನಪಾನನಿಗೆ ದಿವರಥನೆಂಬ ರಾಜಕುಮಾರನೂ, ಆ ದಿವರಥನಿಗೆ ಪಂಡಿತನಾದ ಧರ್ಮರಥನೆಂಬ ಮಗನೂ, ಜನಿಸಿದರು.

೧೦೨. ಶ್ರೀಮಂತನೂ, ಮಹಾತ್ಮನೂ ಆದ ಧರ್ಮರಥನು ವಿಷ್ಣುಪದವೆಂಬ ಗಿರಿಯಲ್ಲಿ ಯಾಗವನ್ನು ಮಾಡಿ, ದೇವೇಂದ್ರನ ಸಂಗಡ ಸೋಮಪಾನವನ್ನು ಮಾಡಿದನು.

೧೦೩. ಎಲೈ ಮುನಿಗಳೇ, ಕೇಳಿರಿ. ಧರ್ಮರಥನಿಗೆ ಚಿತ್ರರಥನೆಂಬ ರಾಜಕುಮಾರನು ಉತ್ಪನ್ನನಾದನು. ಆ ಚಿತ್ರರಥನಿಗೆ ಮಹಾತ್ಮನೂ, ಲೋಮಪಾದ ನಾಮಕನೂ ಆದ ಪುತ್ರನು ಜನಿಸಿ ಪ್ರಸಿದ್ಧನಾದನು. ಅವನಿಗೆ ಶಾಂತಿಯೆಂಬ ಕುಮಾರಿಯು ಉತ್ಪನ್ನಳಾದಳು.

೧೦೪ ಅವನಿಗೆ ಚಂಡಿಕನೆಂಬ ಕುಮಾರನೂ, ಅವನಿಗೆ ಇಂದ್ರನಿಗೆ ಸಮಾನಶೂರನಾದ ವಾರಣನೆಂಬ ಪುತ್ರನೂ ಜನಿಸಿದರು. ಆ ವಾರಣನು ಮಂಥುವೆಂಬ ದೇವನ ಉತ್ತಮವಾದ ವಾಹನವನ್ನು ಲೋಕಾಂತರದಿಂದ ಈ ಭೂಮಿಗೆ ತಂದನು.

ಹರ್ಯಂಗಸ್ಯ ತು ದಾಯಾದೋ ರಾಜಾ ಭದ್ರರಥಃ ಕಿಲ ।
ಅಥ ಭದ್ರರಥಸ್ಯಾಸೀತ್ ಬೃಹತ್ಕರ್ಮಾ ಪ್ರಜೇಶ್ವರಃ ॥ ೧೦೫ ॥

ಬೃಹದ್ರಥಃ ಸುತಸ್ತಸ್ಯ ತಸ್ಮಾಜ್ಜಜ್ಞೇ ಬೃಹನ್ಮನಾಃ ।
ಬೃಹನ್ಮನಾಸ್ತು ರಾಜೇಂದ್ರಂ ಜನಯಾಮಾಸ ವೈ ಸುತಂ ॥ ೧೦೬ ॥

ನಾಮ್ನಾ ಜಯದ್ರಥಂ ನಾಮ ತಸ್ಮಾದ್ದೃಢರಥೋ ನೃಪಃ ।
ಆಸೀದ್ದೃಢರಥಸ್ಯಾಪಿ ವಿಶ್ವಜಿಜ್ಜನಮೇಜಯಃ ॥ ೧೦೭ ॥

ದಾಯಾದಸ್ತಸ್ಯ ಚಾಂಗೇಭ್ಯೋ ಯಸ್ಮಾತ್ ಕರ್ಣೋಽಭವನ್ನೃಪಃ ।
ಕರ್ಣಸ್ಯ ಶೂರಸೇನಸ್ತು ದ್ವಿಜಸ್ತಸ್ಯಾತ್ಮಜಃ ಸ್ಮೃತಃ ॥ ೧೦೮ ॥

॥ ಋಷಯ ಊಚುಃ ॥

ಸೂತಾತ್ಮಜಃ ಕಥಂ ಕರ್ಣಃ ಕಥಂ ಚಾಂಗಸ್ಯ ವಂಶಜಃ ।
ಏತದಿಚ್ಛಾಮಹೇ ಶ್ರೋತುಮತ್ಯರ್ಥಂ ಕುಶಲೋ ಹ್ಯಸಿ ॥ ೧೦೯ ॥

---

೧೦೫. ಆ ಹರ್ಯಂಗಮಹಾರಾಜನಿಗೆ ಭದ್ರರಥನೆಂಬ ರಾಜಕುಮಾರನೂ, ಆ ಭದ್ರರಥನಿಗೆ ಬೃಹತ್ಕರ್ಮನೆಂಬ ಪ್ರಸಿದ್ಧನಾದ ರಾಜಕುಮಾರನೂ, ಜನಿಸಿದರು.

೧೦೬. ಆ ಬೃಹತ್ಕರ್ಮನಿಗೆ ಬೃಹನ್ಮನಸನೆಂಬ ಕುಮಾರನೂ ಅವನಿಗೆ ರಾಜೇಂದ್ರನೆಂಬ ಸುತನೂ ಜನಿಸಿ ಸುಪ್ರಸಿದ್ಧರಾದರು.

೧೦೭. ಆ ರಾಜೇಂದ್ರನಿಗೆ ಜಯದ್ರಥನೆಂಬ ಸುತನೂ, ಅವನಿಗೆ ದೃಢರಥನೆಂಬ ತನಯನೂ, ಅವನಿಗೆ ವಿಶ್ವಜಿನ್ನಾಮಕ ಯಾಗವನ್ನು ಮಾಡಿದ ಜನಮೇಜಯನೆಂಬ ಸುಪ್ರಸಿದ್ಧನಾದ ಪುತ್ರನೂ, ಜನಿಸಿ ಮಾನ್ಯರಾಗಿದ್ದರು.

೧೦೮. ಆ ಜನಮೇಜಯ ಮಹಾರಾಜನಿಗೆ ಅಂಗನಾಮಕ ಕುಮಾರನೂ, ಅವನಿಗೆ ಕರ್ಣನೆಂಬ ರಾಜಪುತ್ರನೂ, ಉದ್ಭವಿಸಿದರು. ಆ ಕರ್ಣನಿಗೆ ಶೂರಸೇನನೆಂಬ ಮಗನೂ, ಅವನಿಗೆ ದ್ವಿಜನೆಂಬ ಕುಮಾರನೂ ಜನಿಸಿದರು.

೧೦೯. ಮಹರ್ಷಿಗಳು ಹೇಳಿದರು :—ಎಲೈ ಸೂತಮುನಿಯೇ, ನೀನು ಪುರಾಣಜ್ಞರಲ್ಲಿ ಅಗ್ರಗಣ್ಯನೂ, ಪಂಡಿತನೂ ಆಗಿರುವುದರಿಂದ ನಿನ್ನನ್ನು ಕೇಳುತ್ತೇವೆ. ಸೂತಕುಮಾರನಾದ ಕರ್ಣನು ರಾಜನಾದ ಅಂಗನ ವಂಶದಲ್ಲಿ ಹುಟ್ಟಲು ಕಾರಣವೇನು ? ಇದನ್ನು ತಿಳಿಸಬೇಕೆಂದು ಕೇಳಿದರು.

|| ಸೂತ ಉವಾಚ ||

ಬೃಹದ್ಭಾನೋಃ ಸುತೋ ಜಜ್ಞೇ ನಾಮ್ನಾ ರಾಜಾ ಬೃಹನ್ಮನಾಃ |
ತಸ್ಯ ಪತ್ನೀದ್ವಯಂ ಚಾಸೀಚ್ಚೈದ್ಯಸ್ಯೋಭೇ ಚ ತೇ ಸುತೇ || ೧೧೦ ||

ಯಶೋದೇವೀ ಚ ಸತ್ಯಾ ಚ ತಾಭ್ಯಾಂ ವಂಶಸ್ತು ಭಿದ್ಯತೇ |
ಜಯದ್ರಥಸ್ತು ರಾಜೇಂದ್ರೋ ಯಶೋದೇವ್ಯಾಂ ವ್ಯಜಾಯತ || ೧೧೧ ||

ಬ್ರಹ್ಮಕ್ಷತ್ರಾಂತರಃ ಸತ್ಯಾ ವಿಜಯೋ ನಾಮ ವಿಶ್ರುತಃ |
ವಿಜಯಸ್ಯ ಧೃತಿಃ ಪುತ್ರಸ್ತಸ್ಯ ಪುತ್ರೋ ಧೃತವ್ರತಃ || ೧೧೨ ||

ಧೃತವ್ರತಸ್ಯ ಪುತ್ರಸ್ತು ಸತ್ಯಕರ್ಮಾ ಮಹಾಯಶಾಃ |
ಸತ್ಯಕರ್ಮಸುತಶ್ಚಾಪಿ ಸೂತಸ್ತ್ವಧಿರಥಸ್ತು ವೈ || ೧೧೩ ||

---

೧೧೦. ಸೂತಮುನಿಯು ಹೇಳಿದನು :—ಬೃಹದ್ಭಾನುವಿಗೆ ಬೃಹನ್ಮನಸನೆಂಬ ಕುಮಾರನು ಉತ್ಪನ್ನನಾದನು. ಅವನಿಗೆ ಇಬ್ಬರು ಪತ್ನಿಯರಿದ್ದರು. ಆ ಕುಮಾರಿಯರು ಚೈದ್ಯರಾಜನ ಪುತ್ರಿಯರಾಗಿದ್ದರು.

೧೧೧. ಅವರಲ್ಲಿ ಹಿರಿಯವಳು ಯಶೋದೇವಿನಾಮಕಳೂ, ಕಿರಿಯವಳು ಸತ್ಯಾನಾಮಕಳೂ ಆಗಿರುವರು. ಅವರಿಂದ ವಂಶಗಳು ಭಿನ್ನಭಿನ್ನಗಳಾದುವು. ಆ ಯಶೋದೇವಿಯಲ್ಲಿ ಜಯದ್ರಥನೆಂದು ಪ್ರಖ್ಯಾತನಾದ ನೃಪೋತ್ತಮನು ಉತ್ಪನ್ನನಾದನು.

೧೧೨ ಸತ್ಯಳಿಗೆ ಬ್ರಹ್ಮ ಕ್ಷತ್ರಿಯರಲ್ಲಿ ಉತ್ತಮನಾದ ವಿಜಯನೆಂಬ ಕುಮಾರನು ಉದ್ಭವಿಸಿದನು. ಆ ವಿಜಯನಿಗೆ ಧೃತಿಯೆಂಬ ಸುತನೂ, ಅವನಿಗೆ ಧೃತವ್ರತನೆಂಬ ತನಯನೂ ಹುಟ್ಟಿದರು.

೧೧೩. ಆ ಧೃತವ್ರತನಿಗೆ ಮಹಾಕೀರ್ತಿವಂತನಾದ ಸತ್ಯಕರ್ಮನೆಂಬ ಮಗನೂ, ಅವನಿಗೆ ಅಧಿರಥನೂ ನಿಪುಣನೂ, ಆದ ಸೂತನೆಂಬ ಕುಮಾರನೂ ಉದ್ಭವಿಸಿದರು.

ಸ ಕರ್ಣಂ ಪರಿಜಗ್ರಾಹ ತೇನ ಕರ್ಣಸ್ತು ಸೂತಜಃ ।
ಏತದ್ವಃ ಕಥಿತಂ ಸರ್ವಂ ಕರ್ಣೇ ಯದ್ವ್ಯೈ ಪ್ರಚೋದಿತಂ ॥ ೧೧೪ ॥

ಏತೇಽಂಗವಂಶಜಾಃ ಸರ್ವೇ ರಾಜಾನಃ ಕೀರ್ತಿತಾ ಮಯಾ ।
ವಿಸ್ತರೇಣಾನುಪೂರ್ವ್ಯಾ ಚ ಪೂರೋಸ್ತು ಶೃಣುತ ಪ್ರಜಾಃ ॥ ೧೧೫ ॥

॥ ಸೂತ ಉವಾಚ ॥

ಪೂರೋಃ ಪುತ್ರೋ ಮಹಾಬಾಹು ರಾಜಾಸೀಜ್ಜನಮೇಜಯಃ ।
ಅವಿದ್ಧಸ್ತು ಸುತಸ್ತಸ್ಯ ಯಃ ಪ್ರಾಚೀಮಜಯದ್ದಿಶಂ ॥ ೧೧೬ ॥

ಅವಿದ್ಧತಃ ಪ್ರವೀರಸ್ತು ಮನಸ್ಯುರಭವತ್ಸುತಃ ।
ರಾಜಾಥೋ ಜಯದೋ ನಾಮ ಮನಸ್ಯೋರಭವತ್ಸುತಃ ॥ ೧೧೭ ॥

---

೧೧೪. ಅಂತಹ ಸೂತನು ಕರ್ಣನನ್ನು ಸ್ವೀಕರಿಸಿದನು. ಅದರಿಂದ ಕರ್ಣನು ಸೂತಪುತ್ರನೆಂದು ಪ್ರಖ್ಯಾತನಾದನು. ಎಲೈ ಮುನಿಗಳಿರಾ, ನೀವು ಕರ್ಣನ ವಿಷಯವನ್ನು ಕೇಳಿದ್ದರಿಂದ, ಅದನ್ನು ನಿಮಗೆ ತಿಳಿಸಿರುತ್ತೇನೆಂದು ಸೂತನು ಹೇಳಿದನು.

೧೧೫. ಈ ರೀತಿಯಲ್ಲಿ ಅಂಗವಂಶಜರಾದ ರಾಜರೆಲ್ಲರನ್ನೂ ನಿರೂಪಿಸಿರುವೆನು. ಈಗ ಪೂರುಮಹಾರಾಜನ ವಂಶವನ್ನು ವಿಸ್ತಾರವಾಗಿಯೂ, ಕ್ರಮವಾಗಿಯೂ ನಿರೂಪಿಸುವೆನು ಕೇಳಿರೆಂದನು.

೧೧೬. ಸೂತಮುನಿಯು ಹೇಳಿದನು:—ಪೂರುಮಹಾರಾಜನಿಗೆ ಮಹಾಶೂರನಾದ ಜನಮೇಜಯ ಮಹಾರಾಜನೂ, ಅವನಿಗೆ ಅವಿದ್ಧನೆಂಬ ಪ್ರಖ್ಯಾತನಾದ ರಾಜಕುಮಾರನೂ ಜನಿಸಿ, ಪೂರ್ವದಿಗ್ಭಾಗದಲ್ಲಿದ್ದ ರಾಜರನ್ನು ಜಯಿಸಿ ಆಳುತ್ತಿದ್ದನು.

೧೧೭. ಆ ಅವಿದ್ಧತನಿಗೆ ಪ್ರವೀರನೆಂಬ ಕುಮಾರನೂ, ಅವನಿಗೆ ಮನಸ್ಯುವೆಂಬ ಸುತನೂ, ಅವನಿಗೆ ಜಯದನೆಂಬ ರಾಜಕುಮಾರನೂ ಜನಿಸಿದರು. ಇವರು ಸುಪ್ರಸಿದ್ಧರಾಗಿದ್ದರು.

ದಾಯಾದಸ್ತಸ್ಯ ಚಾಪ್ಯಾಸೀದ್ದುಂಧುರ್ನಾಮ ಮಹೀಪತಿಃ ।
ಧುಂಧೋರ್ಬಹುಗವೀ ಪುತ್ರಃ ಸಂಜಾತಿಸ್ತಸ್ಯ ಚಾತ್ಮಜಃ ॥ ೧೧೮ ॥

ಸಂಜಾತೇರಥ ರೌದ್ರಾಶ್ವಸ್ತಸ್ಯ ಪುತ್ರಾನ್ನಿಬೋಧತ ।
ರೌದ್ರಾಶ್ವಸ್ಯ ಘೃತಾಚ್ಯಾಂ ವೈ ದಶಾಪ್ಸರಸಿ ಸೂನವಃ ॥ ೧೧೯ ॥

ರಜೇಯುಶ್ಚ ಕೃತೇಯುಶ್ಚ ವಕ್ಷೇಯುಃ ಸ್ಥಂಡಿಲೇಯು ಚ ।
ಘೃತೇಯುಶ್ಚ ಜಲೇಯುಶ್ಚ ಸ್ಥಲೇಯುಶ್ಚೈವ ಸಪ್ತಮಃ ॥ ೧೨೦ ॥

ಧರ್ಮೇಯುಃ ಸನ್ನತೇಯುಶ್ಚ ವನೇಯುರ್ದಶಮಸ್ತು ಸಃ ।
ರುದ್ರಾ ಶೂದ್ರಾ ಚ ಮದ್ರಾ ಚ ಶುಭಾ ಜಾಮಲಜಾ ತಥಾ ॥ ೧೨೧ ॥

ತಲಾ ಖಲಾ ಚ ಸಪ್ತೈತಾ ಯಾ ಚ ಗೋಪಜಲಾ ಸ್ಮೃತಾ ।
ತಥಾ ತಾಮ್ರರಸಾ ಚೈವ ರತ್ನಕೂಟೀ ಚ ತಾದೃಶೀ ॥ ೧೨೨ ॥

ಆತ್ರೇಯೋ ವಂಶತಸ್ತಾಸಾಂ ಭರ್ತಾ ನಾಮ್ನಾ ಪ್ರಭಾಕರಃ ।
ಅನಾಧೃಷ್ಟಸ್ತು ರಾಜರ್ಷಿ ರಿವೇಯುಸ್ತಸ್ಯ ಚಾತ್ಮಜಃ ॥ ೧೨೩ ॥

---

೧೧೮. ಆ ಜಯದನಿಗೆ ದುಂಧುವೆಂಬ ಮಹಾರಾಜನೂ, ಆ ದುಂಧುರಾಜನಿಗೆ ಬಹುಗವೀ ಎಂಬ ಮಗನೂ, ಅವನಿಗೆ ಸಂಜಾತಿಯೆಂಬ ತನಯನೂ ಉದ್ಭವಿಸಿದರು.

೧೧೯. ಆ ಸಂಜಾತಿಗೆ ರೌದ್ರಾಶ್ವನೆಂಬ ಮಗನೂ ಜನಿಸಿದನು. ಅವನ ವಂಶವನ್ನು ಈಗ ನಿರೂಪಿಸುವೆನು ಕೇಳಿರಿ. ಆ ರೌದ್ರಾಶ್ವನಿಗೆ ಘೃತಾಚಿ ಎಂಬ ಅಪ್ಸರಸಿಯಲ್ಲಿ ಹತ್ತು ಜನ ಮಕ್ಕಳು ಜನಿಸಿದರು.

೧೨೦-೧೨೨. ಆ ರೌದ್ರಾಶ್ವನಿಗೆ ಘೃತಾಚಿಯಲ್ಲಿ ರಜೇಯು, ಕೃತೇಯು, ವಕ್ಷೇಯು, ಸ್ಥಂಡಿಲೇಯು, ಘೃತೇಯು, ಜಲೇಯು, ಸ್ಥಲೇಯು, ಧರ್ಮೇಯು, ಸನ್ನತೇಯು ಮತ್ತು ವನೇಯು ಎಂಬ ಈ ಹತ್ತು ಜನ ಮಕ್ಕಳು ಹುಟ್ಟಿದರು. ಮತ್ತು ರುದ್ರಾ, ಮದ್ರಾ, ಶುಭಾ, ಜಾಮಲಜಾ, ತಲಾ, ಖಲಾ, ಗೋಪಜಾಲಾ, ತಾಮ್ರರಸಾ, ಮತ್ತು, ರತ್ನಕೂಟೀ ಎಂಬ ಎಂಬ ಹತ್ತು ಜನ ಹೆಣ್ಣುಮಕ್ಕಳೂ ಹುಟ್ಟಿದರು.

೧೨೩. ಆತ್ರೇಯವಂಶಜನಾದ, ಪ್ರಭಾಕರನು ಆ ಸ್ತ್ರೀಯರಿಗೆ ಪ್ರಿಯ ಪತಿಯಾದನು. ಆ ಪ್ರಭಾಕರನಿಗೆ ಅನಾಧೃಷ್ಟನೆಂಬ ರಾಜರ್ಷಿಯೂ, ಅವನಿಗೆ ರಿವೇಯುನೆಂಬ ಸುತನೂ ಹುಟ್ಟಿದರು.

ರಿವೇಯೋಽಜ್ವಲನಾ ನಾಮ ಭಾರ್ಯಾ ವೈ ತಕ್ಷಕಾತ್ಮಜಾ ।
ಯಸ್ಯಾಂ ದೇವ್ಯಾಂ ಸ ರಾಜರ್ಷೀ ರಂತಿಂ ನಾಮ ತ್ವಜೀಜನತ್ ॥ ೧೨೪ ॥

ರಂತಿರ್ನಾರಃ ಸರಸ್ವತ್ಯಾಂ ಪುತ್ರಾನಜನಯಚ್ಛುಭಾ ।
ತ್ರಸುಂ ತಥಾ ಪ್ರತಿರಥಂ ಧ್ರುವಂಚೈವಾತಿಧಾರ್ಮಿಕಂ ॥ ೧೨೫ ॥

ಗೌರೀ ಕನ್ಯಾ ಚ ವಿಖ್ಯಾತಾ ಮಾಂಧಾತುರ್ಜನನೀ ಶುಭಾ ।
ಧುರ್ಯಾಃ ಪ್ರತಿರಥಸ್ಯಾಪಿ ಕಂಠಸ್ತಸ್ಯಾಭವತ್ ಸುತಃ ॥ ೧೨೬ ॥

ಮೇಧಾತಿಥಿಃ ಸುತಸ್ತಸ್ಯ ಯಸ್ಮಾತ್ ಕಾಂಠಾಯನಾ ದ್ವಿಜಾಃ ।
ಇತಿನಾನುಯಮಸ್ಯಾಸೀತ್ ಕನ್ಯಾ ಸಾಜನಯತ್ಸುತಾನ್ ॥ ೧೨೭ ॥

---

೧೨೪. ಆ ರಿವೇಯು ಮಹಾರಾಯನಿಗೆ, ತಕ್ಷಕನ ಮಗಳಾದ ಜ್ವಲನೆಯು ಪತ್ನಿಯಾದಳು. ಅವನು ಜ್ವಲನೆಯಲ್ಲಿ ರಂತಿನಾಮಕ ಸುತನನ್ನು ಪಡೆದನು.

೧೨೫. ಆ ರಂತಿಮಹಾರಾಜನು ಸರಸ್ವತೀನಾಮಕಳಾದ ಪತ್ನಿಯಲ್ಲಿ ತ್ರಸು, ಪ್ರತಿರಥ, ಧ್ರುವರೆಂಬ ಮೂವರು ಸುಪ್ರಸಿದ್ಧರಾದ ಕುಮಾರರನ್ನು ಪಡೆದನು.

೧೨೬. ರಂತೀ, ಸರಸ್ವತೀ ಎಂಬ ದಂಪತಿಗಳಿಗೆ ಮಾಂಧಾತಮಹಾರಾಜನ ತಾಯಿಯೂ, ಮಂಗಳಾಂಗಿಯೂ ಪ್ರಖ್ಯಾತಳೂ ಆದ ಗೌರೀನಾಮಕಕುಮಾರಿಯು ಉದ್ಭವಿಸಿದಳು. ಮತ್ತು ಧುರಂಧರನೂ, ಪ್ರತಿರಥನೂ ಆದ ಕಂಠನೆಂಬ ಮಗನೂ ಹುಟ್ಟಿದರು.

೧೨೭. ಎಲೈ ಮುನಿವರ್ಯರೇ, ಆ ಕಂಠಮಹಾರಾಯನಿಗೆ ಮೇಧಾತಿಥಿ ಯೆಂಬ ಕುಮಾರನೂ, ಅವನಿಗೆ ಕಾಂಠಾಯನನಾಮಕರಾದ ಪುತ್ರರೂ ಹುಟ್ಟಿದರು. ಆ ಕುಮಾರಿಯು ಸುಪ್ರಸಿದ್ಧರಾದ ಸುತರನ್ನು ಪಡೆದಳು. ಅವರಿಗೆ ಯಾವ ನಿಯಮವೂ ಇರಲಿಲ್ಲ.

ತ್ರಸುಃ ಸುದಯಿತಂ ಪುತ್ರಂ ಮಲಿನಂ ಬ್ರಹ್ಮವಾದಿನಂ ।
ಉಪದಾತಂ ತತೋ ಲೇಭೇ ಚತುರಸ್ತ್ವತಿ ಸಾತ್ಮಜಾನ್ ॥ ೧೨೮ ॥

ಸುಷ್ಮಂತಮಥ ದುಷ್ಮಂತಂ ಪ್ರವೀರಮನಘಂ ತಥಾ ।
ಚಕ್ರವರ್ತೀ ತತೋ ಜಜ್ಞೇ ದೌಷ್ಯಂತಿರ್ನೃಪಸತ್ತಮಃ ॥ ೧೨೯ ॥

ಶಕುಂತಲಾಯಾಂ ಭರತೋ ಯಸ್ಯ ನಾಮ್ನಾ ತು ಭಾರತಂ ।
ದುಷ್ಮಂತಂ ಪ್ರತಿ ರಾಜಾನಂ ವಾಗುವಾಚಾಶರೀರಿಣೀ ॥ ೧೩೦ ॥

ಮಾತಾ ಭಸ್ತ್ರಾ ಪಿತುಃ ಪುತ್ರೋ ಯೇನ ಜಾತಃ ಸ ಏವ ಸಃ ।
ಭರಸ್ವ ಪುತ್ರಂ ದುಷ್ಮಂತಂ ಸತ್ಯಮಾಹ ಶಕುಂತಲಾ ॥ ೧೩೧ ॥

---

೧೨೮. ತ್ರಸುನಾಮಕಳಾದ ಆ ಕುಮಾರಿಯು, ದಯಿತ, ಮಲಿನ, ಬ್ರಹ್ಮವಾದೀ, ಉಪದಾತರೆಂಬ ನಾಲ್ಕುಜನ ಪುತ್ರರನ್ನು ಪಡೆದಳು.

೧೨೯. ತರುವಾಯ ಸುಷ್ಮಂತ, ದುಷ್ಯಂತ, ಪ್ರವೀರ, ಅನಘರೆಂಬ ಕುಮಾರರು ಜನಿಸಿ ಸುಪ್ರಸಿದ್ಧರಾಗಿದ್ದರು. ಅನಂತರ ದುಷ್ಯಂತಮಹಾರಾಜನಿಗೆ ಚಕ್ರವರ್ತಿ ಸಾರ್ವಭೌಮನೂ, ನೃಪೋತ್ತಮನೂ, ದೌಷ್ಯಂತಿನಾಮಕನೂ ಆದ ಕುಮಾರನು ಅವತರಿಸಿದನು.

೧೩೦. ಆ ದುಷ್ಯಂತಮಹಾರಾಜನಿಗೆ ಶಕುಂತಲೆಯಲ್ಲಿ ಭರತನಾಮಕ ಕುಮಾರನು ಉತ್ಪನ್ನನಾದನು. ಅವನ ನಾಮದಿಂದಲೇ, ಈ ದೇಶವು ಭಾರತ ನಾಮಕವಾಗಿರುವುದು. ಆ ದುಷ್ಯಂತನಾಮಕವಾಗಿ ಒಂದು ಆಕಾಶವಾಣಿಯು ಉತ್ಪನ್ನವಾಯಿತು.

೧೩೧. ಯಾವ ಕುಮಾರನು, ತಂದೆತಾಯಿಗಳನ್ನು ಪುಂನಾಮಕ ನರಕದಿಂದ ರಕ್ಷಣಮಾಡುವನೋ, ಅವನೇ ನಿಜವಾದ ಪುತ್ರನಾಗಿರುವನು. ಯಾವನು ಪ್ರಜೆಗಳನ್ನು ಚೆನ್ನಾಗಿ ಭರಣಮಾಡುವನೋ, ಅಂದರೆ ರಕ್ಷಿಸುವನೋ, ಅಂತಹ ಸುಪುತ್ರನಾದ ಭರತನನ್ನು ಹೊಂದು ಎಂಬುದಾಗಿ ಹೇಳಿದ ಶಕುಂತಲೆಯು ಮಾತು, ಸತ್ಯವಾಗಿರುವುದೆಂದು ಆಕಾಶವಾಣಿಯುಂಟಾಯಿತು.

ರೇತೋಧಾಃ ಪುತ್ರಂ ನಯತಿ ನರದೇವ ಯಮಕ್ಷಯಾತ್ ।
ತ್ವಂಚಾಸ್ಯ ಧಾತಾ ಗರ್ಭಸ್ಯ ಮಾವಮಂಸ್ಥಾಃ ಶಕುಂತಲಾಂ ॥ ೧೩೨ ॥

ಭರತಸ್ತ್ರಿಸೃಷು ಸ್ತ್ರೀಷು ನವ ಪುತ್ರಾನಜೀಜನತ್ ।
ನಾಭ್ಯನಂದಚ್ಚ ತಾನ್ ರಾಜಾ ನಾನುರೂಪಾನ್ಮಯೇತ್ಯುತ ॥ ೧೩೩ ॥

ತತಸ್ತಾ ಮಾತರಃ ಕ್ರುದ್ಧಾಃ ಪುತ್ರಾನ್ನಿನ್ಯುರ್ಯಮಕ್ಷಯಂ ।
ತತಸ್ತಸ್ಯ ನರೇಂದ್ರಸ್ಯ ವಿತತಂ ಪುತ್ರಜನ್ಮ ತತ್ ॥ ೧೩೪ ॥

ತತೋ ಮರುದ್ಭಿರಾನೀಯ ಪುತ್ರಸ್ತು ಸ ಬೃಹಸ್ಪತೇಃ ।
ಸಂಕ್ರಾಮಿತೋ ಭರದ್ವಾಜೋ ಮರುದ್ಭಿಃ ಕ್ರತುಭಿರ್ವಿಭುಃ ॥ ೧೩೫ ॥

---

೧೩೨. ಎಲೈ ಮಹಾರಾಜನೇ, ತಂದೆಯು ಯಾವ ಪುತ್ರನನ್ನು ಅಕ್ಷಯವಾದ ಲೋಕಕ್ಕೆ ಹೋಗುವಂತೆ ಮಾಡುವನೋ ನೀನು ಅಂತಹ ಗರ್ಭವನ್ನು ಸ್ಥಾಪಿಸಿರುವುದರಿಂದ ಶಕುಂತಲೆಯನ್ನು ಅವಮಾನಪಡಿಸಬೇಡವೆಂದು ಅಶರೀರವಾಣಿಯಾಯಿತು.

೧೩೩. ಭರತಮಹಾರಾಜನು, ಮೂವರು ಪತ್ನಿಯರಲ್ಲಿ ಒಂಬತ್ತು ಜನ ಮಕ್ಕಳನ್ನು ಪಡೆದಿದ್ದರೂ, ತೃಪ್ತನಾಗಲಿಲ್ಲ. ಏಕೆಂದರೆ ಅವರು ತನಗೆ ಅನುರೂಪರಲ್ಲವೆಂದು ಭಾವಿಸಿದ್ದನು. ಅದರಿಂದ ಅವನಿಗೆ ತೃಪ್ತಿಯಿರಲಿಲ್ಲ.

೧೩೪. ಅನಂತರ ಆ ಮಕ್ಕಳ ಮಾತೆಯರು ಕುಪಿತರಾಗಿ, ಆ ಕುಮಾರರನ್ನು ಯಮನಿಂದ ಕ್ಷಯವನ್ನು ಹೊಂದಿಸಿದರು. ಅನಂತರ ನೃಪಶ್ರೇಷ್ಠನಾದ ಭರತನ ಸಂತಾನಜನನವು ಲೋಕವಿಖ್ಯಾತವಾಯಿತು.

೧೩೫. ತರುವಾಯ ಮರುತ್ತುಗಳು ಬೃಹಸ್ಪತಿಯ ಪುತ್ರನಾದ ಭರದ್ವಾಜನನ್ನು ಕರೆತಂದು ಯಾಗದಲ್ಲಿ ಬಿಟ್ಟರು. ಪ್ರಭುವಾದ ಭರದ್ವಾಜನಿಗೂ ಯಾಗಕ್ಕೆ ಸಂಬಂಧವು ಏರ್ಪಟ್ಟಿತು.

ತತ್ರ್ಯಪ್ಯುದಾಹರಂತೀದಂ ಭರದ್ವಾಜಸ್ಯ ಧೀಮತಃ ।
ಜನ್ಮಸಂಕ್ರಮಣಂಚೈವ ಮರುದ್ಭಿರ್ಭರತಾಯ ವೈ ॥ ೧೩೬ ॥

ಪತ್ನ್ಯಾಮಾಸನ್ನಗರ್ಭಾಯಾಮುಶಿಜಃ ಸಂಸ್ಥಿತಃ ಕಿಲ ।
ಭ್ರಾತುರ್ಭಾರ್ಯಾಂ ಸ ದೃಷ್ಟ್ವಾಥ ಬೃಹಸ್ಪತಿರುವಾಚ ಹ ॥
ಅಲಂಕೃತ್ಯ ತನುಂ ಸ್ವಾಂ ತು ಮೈಥುನಂ ದೇಹಿ ಮೇ ಶುಭೇ ॥ ೧೩೭ ॥

ಏವಮುಕ್ತಾಬ್ರವೀದೇನಮಂತರ್ವತ್ನೀ ಹ್ಯಯಂ ವಿಭೋ ।
ಗರ್ಭಃ ಪರಿಣತಶ್ಚಾಯಂ ಬ್ರಹ್ಮ ವ್ಯಾಹರತೇ ಗಿರಾ ॥ ೧೩೮ ॥

ಅಮೋಘರೇತಾಸ್ತ್ವಂಚಾಪಿ ಧರ್ಮಶ್ಚೈವ ವಿಗರ್ಹಿತಃ ।
ಏವಮುಕ್ತೋಽಬ್ರವೀದೇನಾಂ ಸ್ಮಯಮಾನೋ ಬೃಹಸ್ಪತಿಃ ॥ ೧೩೯ ॥

---

೧೩೬. ಹೀಗೆ ಮರುತ್ತುಗಳು ಭರದ್ವಾಜನಿಗೆ ಮಾಡಿಸಿದ ಜನ್ಮಸಂಕ್ರಾಂತ ವಿಷಯಗಳನ್ನು ಭರತಮಹಾರಾಜನಿಗೆ ತಿಳಿಸಿದರೆಂಬುದಾಗಿ ಈ ಉದಾಹರಣೆಯನ್ನು ಮಹಾತ್ಮರು ಹೇಳುವರು.

೧೩೭. ಪೂರ್ಣಗರ್ಭಿಣಿಯಾದ ಸಹೋದರನ ಪತ್ನಿಯ ಗರ್ಭದಲ್ಲಿ, ಆಶಿಜನು ಮೊದಲೇ ಇದ್ದನು. ಆಗ ಬೃಹಸ್ಪತಿಯು ಅಂತಹ ಭಾತೃಭಾರ್ಯೆಯನ್ನು ನೋಡಿ, ಎಲೌ ಮಂಗಳಾಂಗಿ ನೀನು ಸುಂದರವಾಗಿ ಅಲಂಕೃತಳಾಗಿ ನನಗೆ ಸುಖಪ್ರದಳಾಗು ಎಂದು ಹೇಳಿದನು.

೧೩೮. ಈ ಮಾತುಗಳನ್ನು ಅವಳು ಕೇಳಿ, ಸ್ವಾಮಿ ಈಗ ನಾನು ಪೂರ್ಣ ಗರ್ಭವತಿಯಾಗಿರುವೆನು. ಈಗ ಗರ್ಭವು ಪೂರ್ಣವಾಗಿದೆ. ಗರ್ಭಗತನಾದ ಪುತ್ರನು ವೇದಗಳನ್ನು ಉಚ್ಚರಿಸುತ್ತಿರುವನೆಂದು ಹೇಳಿದಳು.

೧೩೯. ಎಲೈ ಪೂಜ್ಯನೇ ನಾನು ಹೇಗೆ ಪೂರ್ಣಗರ್ಭಿಣಿಯಾಗಿರುವೆನು. ತಾವು ಅಮೋಘರೇತಸ್ಕರಾಗಿರುವಿರಿ, ಅದು ವ್ಯರ್ಥವಾಗುವುದಿಲ್ಲ. ಹೀಗೆ ಮಾಡುವುದು ಧರ್ಮಕ್ಕೆ ವಿರುದ್ಧವೂ ನಿಂದ್ಯವೂ ಆಗಿರುವುದು. ಎಂದು ಹೇಳಲಾಗಿ ಬೃಹಸ್ಪತಿಯು ನಗುತ್ತಾ ಇಂತೆಂದನು.

ವಿನಯೋ ನೋಪದೇಷ್ಟವ್ಯಸ್ತ್ವಯಾ ಮಮ ಕಥಂಚನ ।
ಧರ್ಷಮಾಣಃ ಪ್ರಸಹ್ಯೈನಂ ಮೈಥುನಾಯೋಪಚಕ್ರಮೇ ॥ ೧೪೦ ॥

ತತೋ ಬೃಹಸ್ಪತಿಂ ಗರ್ಭೋ ಧರ್ಷಮಾಣಮುವಾಚ ಹ ।
ಸನ್ನಿವಿಷ್ಟೋ ಹ್ಯಹಂ ಪೂರ್ವಮಿಹ ತಾತ ಬೃಹಸ್ಪತೇ ॥ ೧೪೧ ॥

ಅಮೋಘರೇತಾಶ್ಚ ಭವಾನ್ನಾವಕಾಶೋಽಸ್ತಿ ಚ ದ್ವಯೋಃ ।
ಏವಮುಕ್ತಃ ಸ ಗರ್ಭೇಣ ಕುಪಿತಃ ಪ್ರತ್ಯುವಾಚ ಹ ॥ ೧೪೨ ॥

ಯಸ್ಮಾನ್ಮಾಮೀದೃಶೇ ಕಾಲೇ ಸರ್ವಭೂತೇಪ್ಸಿತೇ ಸತಿ ।
ಪ್ರತಿಷೇಧಸಿ ತತ್ತಸ್ಮಾತ್ ತಮೋ ದೀರ್ಘಂ ಪ್ರವೇಕ್ಷ್ಯಸಿ ॥ ೧೪೩ ॥

ಪಾದಾಭ್ಯಾಂ ತೇನ ತಚ್ಛನ್ನಂ ಮಾತುರ್ದ್ವಾರಂ ಬೃಹಸ್ಪತೇಃ ।
ತದ್ರೇತಸ್ತು ತಯೋರ್ಮಧ್ಯೇ ನಿವಾರ್ಯಃ ಶಿಶುಕೋಽಭವತ್ ॥ ೧೪೪ ॥

---

೧೪೦. ಎಲೌ ಸುಂದರೀ, ನೀನು ನನಗೆ ಧರ್ಮೋಪದೇಶವನ್ನು ಮಾಡಬೇಡ. ನನಗೆ ಎಲ್ಲವೂ ಗೊತ್ತಿದೆ ಹೇಳಿದ್ದನ್ನು ಕೇಳೆಂದು ಹೇಳಿ ಬಲಾತ್ಕಾರದಿಂದ ಸ್ವೀಕರಿಸಿ ಸಂತೋಷದಿಂದ ಅತ್ಯಾಚಾರಮಾಡಲು ಯತ್ನಿಸಿದನು.

೧೪೧. ಅನಂತರ ಗರ್ಭಗತನಾದ ಅಶಿಜನು ಹೀಗೆ ಬಲಾತ್ಕಾರದಿಂದ ಸ್ವೀಕರಿಸಿ ಸುಖಿಯಾಗಿರುವುದನ್ನು ತಿಳಿದು, ಎಲೈ ತಂದೆಯಾದ ಬೃಹಸ್ಪತಿಯೇ, ನಾನು ಮೊದಲೇ ಗರ್ಭದಲ್ಲಿ ಪ್ರವೇಶಿಸಿರುವೆನೆಂದು ಹೇಳಿದನು.

೧೪೨. ಓ ಪೂಜ್ಯರೇ, ನಿಮ್ಮ ರೇತಸ್ಸು ವ್ಯರ್ಥವಾಗುವುದಿಲ್ಲ. ಈ ಪೂರ್ಣ ಗರ್ಭದಲ್ಲಿ ಇಬ್ಬರಿಗೆ ಅವಕಾಶವಿಲ್ಲ ಎಂದು ಅಶಿಜನು ಹೇಳಲಾಗಿ ಕೋಪಗೊಂಡ ಬೃಹಸ್ಪತಿಯು ಇಂತೆಂದನು.

೧೪೩. ಎಲೈ ಕುಮಾರನೇ, ಸರ್ವಭೂತಗಳಿಗೆ ಸುಖಕರವಾದ ಇಂತಹ ಕಾಲದಲ್ಲಿ ನೀನು ನಿಷೇಧಮಾಡುವುದರಿಂದ ನಿನಗೆ ಘೋರ ನರಕವಾಗಲೆಂದು ಶಾಪವನ್ನು ಕೊಟ್ಟನು.

೧೪೪. ಯೋನಿಯಲ್ಲಿ ನಿಹಿತವಾದ ಬೃಹಸ್ಪತಿಯ ಆ ದಿವ್ಯತೇಜಸ್ಸು ಎರಡು ತೊಡೆಗಳಿಂದ ತಡೆಯಲ್ಪಟ್ಟಿತು. ಅದು ಅಮೋಘವಾದ ಕಾರಣ ವ್ಯರ್ಥವಾಗದೇ ಅಲ್ಲಿಯೇ ಮಗುವಾಗಿ ಜನಿಸಿತು.

ಸದ್ಯೋಜಾತಂ ಕುಮಾರಂ ತಂ ದೃಷ್ಟ್ವಾಽಥ ಮಮತಾಬ್ರವೀತ್ |
ಗಮಿಷ್ಯಾಮಿ ಗೃಹಂ ಸ್ವಂ ವೈ ಭರದ್ವಾಜಂ ಬೃಹಸ್ಪತೇ || ೧೪೫ ||

ಏವಮುಕ್ತ್ವಾ ಗತಾಯಾಂ ಸ ಪುತ್ರಂ ತ್ಯಜತಿ ತತ್ಕ್ಷಣಾತ್ |
ಭರಸ್ವ ಬಾಢಮಿತ್ಯುಕ್ತೋ ಭರದ್ವಾಜಸ್ತತೋಽಭವತ್ || ೧೪೬ ||

ಮಾತಾಪಿತೃಭ್ಯಾಂ ಸಂತ್ಯಕ್ತಂ ದೃಷ್ಟ್ವಾಽಥ ಮರುತಃ ಶಿಶುಂ |
ಗೃಹೀತ್ವೈನಂ ಭರದ್ವಾಜಂ ಜಗ್ಮುಸ್ತೇ ಕೃಪಯಾ ತತಃ || ೧೪೭ ||

ತಸ್ಮಿನ್ ಕಾಲೇ ತು ಭರತೋ ಮರುದ್ಭಿಃ ಕ್ರತುಭಿಃ ಕ್ರಮಾತ್ |
ಕಾಮ್ಯನೈಮಿತ್ತಿಕೈರ್ಯಜ್ಞೈರ್ಯಜತೇ ಪುತ್ರಲಿಪ್ಸಯಾ || ೧೪೮ ||

ಯದಾ ಸ ಯಜಮಾನೋ ವೈ ಪುತ್ರಾನ್ನಾಸದಯತ್ ಪ್ರಭುಃ |
ಯಜ್ಞಂ ತತೋ ಮರುತ್ಸೋಮಂ ಪುತ್ರಾರ್ಥೇ ಪುನರಾಹರತ್ || ೧೪೯ ||

---

೧೪೫. ತರುವಾಯ ಆಕೆಯು ಸದ್ಯೋಜಾತನಾದ ಕುಮಾರನನ್ನು ನೋಡಿ ಪೂಜ್ಯರೇ, ನಿಮ್ಮ ಕುಮಾರನನ್ನು ಸ್ವೀಕರಿಸಿ. ನಾನು ಮನೆಗೆ ಹೋಗುವೆನೆಂದು ಹೇಳಿ ಹೋದಳು.

೧೪೬. ಆ ನಾರೀಮಣಿಯು ಹೀಗೆ ಹೇಳಿ ಆ ಮಗುವನ್ನು ಅಲ್ಲಿಯೇ ಬಿಟ್ಟು ಹೊರಡಲಾಗಿ, ಬೃಹಸ್ಪತಿಯು ಅವನನ್ನು ಕುರಿತು—ಮಗು, ನೀನೇ ನಿನ್ನ ರಕ್ಷಣೆಯನ್ನು ಮಾಡಿಕೋ ಎಂದು ಹೇಳಿದನು. ಅದರಿಂದ ಅವನು ಭರದ್ವಾಜನಾದನು.

೧೪೭. ಹೀಗೆ ಮಾತಾಪಿತೃಗಳಿಬ್ಬರಿಂದಲೂ ತ್ಯಕ್ತವಾದ ಆ ಶಿಶುವನ್ನು ಮರುತ್ತುಗಳು ನೋಡಿ ಕನಿಕರಗೊಂಡು, ಆ ಮಗುವನ್ನು ಕೃಪೆಯಿಂದ ಕರೆದು ಕೊಂಡು ಹೋದರು.

೧೪೮. ಅದೇ ಸಮಯದಲ್ಲಿಯೇ ಭರತ ಮಹಾರಾಜನು ಸಂತಾನವಿಲ್ಲದೇ, ಸಂತಾನಕ್ಕಾಗಿ ನಿತ್ಯನೈಮಿತ್ತಿಕಕಾಮ್ಯರೂಪವಾದ ಯಜ್ಞಯಾಗಾದಿ ಕರ್ಮಗಳನ್ನು ಮರುತ್ತುಗಳಿಂದ ಮಾಡಿಸುತ್ತಿದ್ದನು.

೧೪೯. ಯಾವಾಗ ಪ್ರಭುವಾದ ಯಜಮಾನನಿಗೆ ಸಂತಾನವಾಗಲಿಲ್ಲವೋ ಆಗ ಪುನಃ ಪುತ್ರಾಪೇಕ್ಷೆಯಿಂದ ಮರುತ್ತುಗಳ ಮೂಲಕ ಯಾಗವನ್ನು ಮಾಡಿಸುತ್ತಿದ್ದನು. ಹೀಗೆ ಯಾಗವು ಸಂತಾನಾಕಾಂಕ್ಷೆಯಿಂದ ನಡೆಯಿತು.

ತೇನ ತೇ ಮರುತಸ್ತಸ್ಯ ಮರುತ್ಸ್ತೋಮೇನ ತೋಷಿತಾಃ ।
ಭರದ್ವಾಜಂ ತತಃ ಪುತ್ರಂ ಬಾರ್ಹಸ್ಪತ್ಯಂ ಮನೀಷಿಣಂ ॥ ೧೫೦ ॥

ಭರತಸ್ತು ಭರದ್ವಾಜಂ ಪುತ್ರಂ ಪ್ರಾಪ್ಯ ತದಾಬ್ರವೀತ್ ।
ಪ್ರಜಾಯಾಂ ಸಂಹೃತಾಯಾಂ ವೈ ಕೃತಾರ್ಥೋಽಹಂ ತ್ವಯಾ ವಿಭೋ ॥

ಪೂರ್ವಂ ತು ವಿತಥಂ ತಸ್ಯ ಕೃತಂ ವೈ ಪುತ್ರಜನ್ಮ ಹಿ ।
ತತಃ ಸ ವಿತಥೋ ನಾಮ ಭರದ್ವಾಜಸ್ತಥಾಽಭವತ್ ॥ ೧೫೨ ॥

ತಸ್ಮಾದ್ದಿವ್ಯೋ ಭರದ್ವಾಜೋ ಬ್ರಾಹ್ಮಣ್ಯಾತ್ ಕ್ಷತ್ರಿಯೋಽಭವತ್ ।
ದ್ವಿಮುಖ್ಯಾಯನನಾಮಾ ಸ ಸ್ಮೃತೋ ದ್ವಿಪಿತೃಕಸ್ತು ವೈ ॥ ೧೫೩ ॥

---

೧೫೦. ಅನಂತರ ಮಹಾರಾಜನು ಸೋಮಯಾಗದಿಂದ ಆ ಮರುತ್ತುಗಳನ್ನು ಸಂಪೂರ್ಣವಾಗಿ ತೃಪ್ತಿಗೊಳಿಸಿದನು. ಹೀಗೆ ರಾಜನಿಂದ ತೃಪ್ತರಾದ ಮರುತ್ತುಗಳು ಆ ಸಮಯದಲ್ಲಿ ಬೃಹಸ್ಪತಿಯ ಕುಮಾರನೂ, ಜ್ಞಾನಿಯೂ ಆದ ಭರದ್ವಾಜನನ್ನು ಕರೆತಂದು ಪುತ್ರನನ್ನು ಸ್ವೀಕರಿಸೆಂದು ಹೇಳಿಕೊಟ್ಟರು.

೧೫೧. ಆಗ ಭರತಮಹಾರಾಜನು ದೇವತೆಗಳು ತಂದುಕೊಟ್ಟ ಆ ಕುಮಾರನನ್ನು ನೋಡಿ ಸ್ವೀಕರಿಸಿ ಸಂತೋಷದಿಂದ ಇಂತೆಂದನು—ಎಲೈ ಪ್ರಭುಗಳಿರಾ, ಸಂತಾನವಿಲ್ಲದೇ ಖಿನ್ನನಾಗಿರುವ ನನಗೆ ಈ ಕುಮಾರನು ಸಿಕ್ಕಿರುವುದರಿಂದ (ಕೃತಾರ್ಥನಾದೆನು) ಧನ್ಯನಾದೆನೆಂದು ಹೇಳಿದನು.

೧೫೨. ಆ ಭರದ್ವಾಜನ ಮೊದಲನೆಯ ಜನ್ಮವು ವ್ಯರ್ಥವಾಯಿತು. ಎರಡನೆಯ ಜನ್ಮವು ಸಾರ್ಥಕವಾಯಿತು. ಮೊದಲನೆಯ ಜನ್ಮವು ವ್ಯರ್ಥವಾದುದರಿಂದ ಭರದ್ವಾಜನು ವಿತಥನಾಮಕನಾದನು.

೧೫೩. ಅನಂತರ ಭರದ್ವಾಜನು ದಿವ್ಯವಾದ ಬ್ರಾಹ್ಮಣ್ಯದಿಂದ ಕ್ಷತ್ರಿಯನಾದನು. ಹೀಗೆ ಬ್ರಾಹ್ಮಣ ಕ್ಷತ್ರಿಯೋಭಯನಾಮಗಳಿಂದ ಪ್ರಸಿದ್ಧನಾದ ಭರದ್ವಾಜನಿಗೆ ಬೃಹಸ್ಪತಿ, ಭರತನೆಂಬ ಇಬ್ಬರು ಜನಕರು ಸುಪ್ರಸಿದ್ಧರಾಗಿರುವರು. ಒಬ್ಬನು ಜನಕ ತಂದೆಯು. ಇನ್ನೊಬ್ಬನು ಸಾಕುತಂದೆಯು ಆದರು.

**ತತೋಽಥ ವಿತಥೇ ಜಾತೇ ಭರತಃ ಸ ದಿವಂ ಯಯೌ |**
**ವಿತಥಸ್ಯ ತು ದಾಯಾದೋ ಭುವಮನ್ಯುರ್ಬಭೂವ ಹ || ೧೫೪ ||**

**ಮಹಾಭೂತೋಪಮಾಶ್ಚಾ ಸಂಶ್ಚ ತ್ವಾರೋ ಭುವಮನ್ಯುಜಾಃ |**
**ಬೃಹತ್ ಕ್ಷತೋ ಮಹಾವೀರ್ಯೋ ನರೋ ಗಾಗ್ರಶ್ಚ ವೀರ್ಯವಾನ್ ||**

**ನರಸ್ಯ ಸಾಂಕೃತಿಃ ಪುತ್ರಸ್ತಸ್ಯ ಪುತ್ರೌ ಮಹೌಜಸೌ |**
**ಗುರುವೀರ್ಯಸ್ತ್ರಿದೇವಶ್ಚ ಸಾಂಕೃತ್ಯಾವವರೌ ಸ್ಮೃತೌ || ೧೫೬ ||**

**ದಾಯಾದಾಶ್ಚಾಪಿ ಗಾಗ್ರಸ್ಯ ಶಿನಿಬದ್ಧಾ ಬಭೂವ ಹ |**
**ಸ್ಮೃತಾಶ್ಚೈತೇ ತತೋ ಗಾಗ್ರ್ಯಾಃ ಕ್ಷತ್ರೋಪೇತಾ ದ್ವಿಜಾತಯಃ || ೧೫೭ ||**

**ಮಹಾವೀರ್ಯಸುತಶ್ಚಾಪಿ ಭೀಮಸ್ತಸ್ಮಾದುಭಕ್ಷಯಃ |**
**ತಸ್ಯ ಭಾರ್ಯಾ ವಿಶಾಲಾ ತು ಸುಷುವೇ ವೈ ಸುತಾಂಸ್ತ್ರಯಃ || ೧೫೮ ||**

---

೧೫೪. ಅನಂತರ ವಿತಥನು ಜನಿಸಿ ಪ್ರಖ್ಯಾತನಾಗಲು, ಭರತನು ಸ್ವರ್ಗಕ್ಕೆ ಹೋದನು. ಆ ವಿತಥನಿಗೆ ಭುವಮನ್ಯುವೆಂಬ ಕುಮಾರನು ಹುಟ್ಟಿದನು. ಇವನಿಂದ ಭರತವಂಶವು ವಿಸ್ತಾರವಾಯಿತು.

೧೫೫. ಅಂತಹ ಭುವಮನ್ಯುವಿಗೆ, ಮಹಾಭೂತಗಳಿಗೆ| ಸಮಾನರೂ, ಅತಿ ಕೀರ್ತಿವಂತರೂ ಆದ ಬೃಹಕ್ಷೇತ್ರ, ಮಹಾವೀರ್ಯ, ನರ, ಗಾಗ್ರರೆಂದು ಪ್ರಖ್ಯಾತರಾದ ನಾಲ್ವರು ಕುಮಾರರು ಜನಿಸಿದರು.

೧೫೬. ಅವರಲ್ಲಿ ನರನಿಗೆ ಸಂಸ್ಕೃತಿಯೆಂಬ ಕುಮಾರನೂ, ಅವನಿಗೆ ಮಹಾ ತೇಜಸ್ವಿಗಳೂ, ಗುರುವೀರ್ಯ, ತ್ರಿದೇವರೆಂಬ ನಾಮಕರೂ ಆದ ಸಹೋದರರು ಜನಿಸಿ ಸುಪ್ರಸಿದ್ಧರಾದರು.

೧೫೭. ಗಾಗ್ರನಿಗೆ ಶಿನಿಬದ್ಧನೇ ಮೊದಲಾದ ಪುತ್ರರು ಜನಿಸಿ ಪ್ರಸಿದ್ಧರಾದರು. ಇವರೆಲ್ಲರೂ ಗಾರ್ಗ್ಯರೆಂದೂ ಗರ್ಗವಂಶಸಂಭೂತರೆಂದೂ ಪ್ರಖ್ಯಾತರಾದ ಬ್ರಾಹ್ಮಣರಾಗಿದ್ದರೂ ಕ್ಷತ್ರಿಯ ಧರ್ಮವನ್ನು ಹೊಂದಿರುವುದರಿಂದ ಕ್ಷತ್ರಿಯರೆಂದು ಕರೆಯಲ್ಪಟ್ಟರು.

೧೫೮. ಆ ಮಹಾವೀರ್ಯನಿಗೆ ಭೀಮನೆಂಬ ಕುಮಾರನೂ, ಅವನಿಗೆ ಉಭಕ್ಷಯನೆಂಬ ತನಯನೂ ಜನಿಸಿದರು. ಆ ಉಭಕ್ಷಯನ ಪತ್ನಿಯು ಮೂವರು ಕುಮಾರರನ್ನು ಪಡೆದಳು.

ತ್ರಯ್ಯಾರುಣಿಂ ಪುಷ್ಕರಿಣಂ ತೃತೀಯಂ ಸುಷುವೇ ಕಪಿಂ ।
ಕಪೇಃ ಕ್ಷತ್ರವರಾ ಹ್ಯೇತೇ ತಯೋಃ ಪ್ರೋಕ್ತಾ ಮಹರ್ಷಯಃ ॥ ೧೪೯ ॥

ಗಾರ್ಗ್ಯಾಃ ಸಾಂಕೃತಯೋ ವೀರ್ಯಾಃ ಕ್ಷಾತ್ರೋಪೇತಾ ದ್ವಿಜಾತಯಃ ।
ಸಂಶ್ರಿತಾಂಗಿರಸಂ ಪಕ್ಷಂ ಬೃಹತ್ಕ್ಷತ್ರಸ್ಯ ವಕ್ಷ್ಯತಿ ॥ ೧೫೦ ॥

ಬೃಹತ್ಕ್ಷತ್ರಸ್ಯ ದಾಯಾದಃ ಸುಹೋತ್ರೋ ನಾಮ ಧಾರ್ಮಿಕಃ ।
ಸುಹೋತ್ರಸ್ಯಾಪಿ ದಾಯಾದೋ ಹಸ್ತೀ ನಾಮ ಬಭೂವ ಹ ॥
ತೇನೇದಂ ನಿರ್ಮಿತಂ ಪೂರ್ವಂ ನಾಮ್ನಾ ವೈ ಹಾಸ್ತಿನಂ ಪುರಂ ॥ ೧೫೧ ॥

ಹಸ್ತಿನಶ್ಚಾಪಿ ದಾಯಾದಸ್ತ್ರಯಃ ಪರಮಧಾರ್ಮಿಕಾಃ ।
ಅಜಮೀಢೋ ದ್ವಿಮೀಢಶ್ಚ ಪುರಮೀಢಸ್ತಥೈವ ಚ ॥ ೧೫೨ ॥

---

೧೪೯. ಉಭಕ್ಷಯನಿಗೆ ತ್ರಯ್ಯಾರುಣಿ, ಪುಷ್ಕರಿಣ, ಕಪಿಯೆಂಬ ಮೂವರು ತನಯರು ಉದ್ಭವಿಸಿದರು. ಕಪಿರಾಜನ ವಂಶಜರಾದ ಇವರು ಕ್ಷತ್ರಿಯರಾಗಿದ್ದರೂ ಮಹರ್ಷಿಗಳೆಂದೇ ಪ್ರಖ್ಯಾತರಾಗಿರುವರು.

೧೫೦. ಗಾರ್ಗ್ಯರೂ, ಸಾಂಕೃತಿಗಳೂ ಎಂದು ಪ್ರಖ್ಯಾತರೂ, ಮಹಾಶೂರರೂ ಆದ ಕ್ಷತ್ರಿಯರು ಕ್ಷತ್ರಿಯಧರ್ಮಗಳಿಂದ ಪ್ರಖ್ಯಾತರಾಗಿದ್ದರೂ ಪೂರ್ವದಲ್ಲಿ ಬ್ರಾಹ್ಮಣರಾಗಿದ್ದರು. ಅವರು ಅಂಗಿರಸನ ಪಕ್ಷವನ್ನು ಹೊಂದಿರುವರು. ಈಗ ಬೃಹತ್ಕ್ಷತ್ರನ ವಂಶವನ್ನು ಹೇಳುವೆನು ಕೇಳಿರೆಂದನು.

೧೫೧. ಆ ಬೃಹತ್ಕ್ಷತ್ರನಿಗೆ ಸುಹೋತ್ರನೆಂಬ ಧಾರ್ಮಿಕನಾದ ಕುಮಾರನು ಜನಿಸಿದನು. ಅವನಿಗೆ ಪರಮ ಶುದ್ಧನಾದ ಹಸ್ತಿನಾಮಕ ಕುಮಾರನು ಜನಿಸಿದನು. ಅವನು ಲೋಕವಿಖ್ಯಾತವಾದ ಹಸ್ತಿನಾವತೀ ನಗರಿಯನ್ನು ನಿರ್ಮಿಸಿದನು.

೧೫೨. ಆ ಹಸ್ತಿನ ಮಹಾರಾಜನಿಗೆ ಪರಮಧಾರ್ಮಿಕರೂ, ವಿಶಾಲಹೃದಯರೂ ಆದ ಅಜಮೀಢ, ದ್ವಿಮೀಢ, ಪುರುಮೀಢರೆಂಬ ಮೂವರು ಕುಮಾರರು ಜನಿಸಿ ವಿಖ್ಯಾತರಾಗಿದ್ದರು.

ಅಜಮೀಢಸ್ಯ ಪುತ್ರಾಸ್ತು ಶುಭಾಃ ಶುಭಕುಲೋದ್ವಹಾಃ ।
ತಪಸೋಽಂತೇ ಸುಮಹತೋ ರಾಜ್ಞೋ ವೃದ್ಧಸ್ಯ ಧಾರ್ಮಿಕಾಃ ॥ ೧೬೩ ॥

ಭರದ್ವಾಜಪ್ರಸಾದೇನ ಶೃಣುಧ್ವಂ ತಸ್ಯ ವಿಸ್ತರಂ ।
ಅಜಮೀಢಸ್ಯ ಕೇಶಿನ್ಯಾಂ ಕಂಠಃ ಸಮಭವತ್ಕಿಲ ॥ ೧೬೪ ॥

ಮೇಧಾತಿಥಿಃ ಸುತಸ್ತಸ್ಯ ತಸ್ಮಾತ್ ಕಂಠಾಯನಾ ದ್ವಿಜಾಃ ।
ಅಜಮೀಢಸ್ಯ ಧೂಮಿನ್ಯಾಂ ಜಜ್ಞೇ ಬೃಹದ್ವಸುರ್ನೃಪಃ ॥ ೧೬೫ ॥

ಬೃಹದ್ವಸೋರ್ಬೃಹದ್ವಿಷ್ಣುಃ ಪುತ್ರಸ್ತಸ್ಯ ಮಹಾಬಲಃ ।
ಬೃಹತ್ಕರ್ಮಾ ಸುತಸ್ತಸ್ಯ ಪುತ್ರಸ್ತಸ್ಯ ಬೃಹದ್ರಥಃ ॥ ೧೬೬ ॥

---

೧೬೩. ಅಜಮೀಢ ಮಹಾರಾಜನಿಗೆ ಬಹುಕಾಲ ಸಂತಾನವಿರಲಿಲ್ಲ. ಅವನು ಅತಿಮಹತ್ತೂ ಆಶ್ಚರ್ಯಕರವೂ ಆದ ಮಹಾಯಾಗವನ್ನು ಮಾಡಿದನು. ತರುವಾಯ ವೃದ್ಧನಾದ ಆ ರಾಯನಿಗೆ ಶುಭಕರರೂ, ಸದ್ವಂಶೋತ್ಪನ್ನರೂ, ಪರಮಧಾರ್ಮಿಕರೂ ಆದ ಸತ್ಪುತ್ರರು ಜನಿಸಿದರು.

೧೬೪. ಕೊನೆಗೆ ಭರದ್ವಾಜಮುನಿಯ ಅನುಗ್ರಹದಿಂದ ಜನಿಸಿದ ಅವನ ಪರಮಕಲ್ಯಾಣಕರವಾದ ಸಂತಾನವನ್ನು ನಿರೂಪಿಸುವೆನು ಕೇಳಿರಿ. ಆ ಅಜಮೀಢ ರಾಜನಿಗೆ ಕೇಶಿನಿಯಲ್ಲಿ ಕಂಠನೆಂಬ ಸುತನು ಜನಿಸಿದನು.

೧೬೫. ಅವನಿಗೆ ಮೇಧಾತಿಥಿಯೆಂಬ ಸುತನೂ, ಅವನಿಗೆ ಕಂಠಾಯನ ನಾಮಕರಾದ ದ್ವಿಜರು ಉತ್ಪನ್ನರಾದರು. ಆ ಅಜಮೀಢನಿಗೆ ಈ ಭೂಮಿಯಲ್ಲಿ ಸುಪ್ರಸಿದ್ಧನಾದ ಬೃಹದ್ವಸುನಾಮಕನಾದ ಪುತ್ರನು ಉದ್ಭವಿಸಿದನು.

೧೬೬. ಆ ಬೃಹದ್ವಸುವಿಗೆ ಮಹಾಬಲಿಷ್ಠನಾದ ಬೃಹದ್ವಿಷ್ಣುವೆಂಬ ಮಗನೂ, ಅವನಿಗೆ ಬೃಹದ್ರಥನೆಂಬ ಕುಮಾರನೂ, ಅವನಿಗೆ ಬೃಹತ್ಕರ್ಮನೆಂಬ ಮಗನೂ ಜನಿಸಿದರು.

**ವಿಶ್ವಜಿತ್ತನಯಸ್ತಸ್ಯ ಸೇನಜಿತ್ತಸ್ಯ ಚಾತ್ಮಜಃ ।**
**ಅಥ ಸೇನಜಿತಃ ಪುತ್ರಾಶ್ಚತ್ವಾರೋ ಲೋಕವಿಶ್ರುತಾಃ ॥ ೧೬೭ ॥**

**ರುಚಿರಾಶ್ವಸ್ಯ ಕಾವ್ಯಶ್ಚ ರಾಮೋ ದೃಢಧನುಸ್ತಥಾ ।**
**ವತ್ಸಶ್ಚಾವಂತಕೋ ರಾಜಾ ಯಸ್ಯ ತೇ ಪರಿವತ್ಸರಾಃ ॥ ೧೬೮ ॥**

**ರುಚಿರಾಶ್ವಸ್ಯ ದಾಯಾದಃ ಪೃಥುಷೇಣೋ ಮಹಾಯಶಾಃ ।**
**ಪೃಥುಶೇಣಸ್ಯ ಪಾರಸ್ತು ಪಾರಾನ್ನೀಪೋಽಥ ಜಜ್ಞಿವಾನ್ ॥ ೧೬೯ ॥**

**ಯಸ್ಯ ಚೈಕಶತಂ ಚಾಸೀತ್ ಪುತ್ರಾಣಾಮಿತಿ ನಃ ಶ್ರುತಂ ।**
**ನೀಪಾ ಇತಿ ಸಮಾಖ್ಯಾತಾ ರಾಜಾನಃ ಸರ್ವ ಏವ ತೇ ॥ ೧೭೦ ॥**

---

೧೬೭. ಆ ಬೃಹದ್ರಥನಿಗೆ ವಿಶ್ವಜಿತೆಂಬ ಕುಮಾರನೂ, ಅವನಿಗೆ ಸೇನಜಿತನೆಂಬ ಪುತ್ರನೂ, ಆ ಸೇನಜಿತನಿಗೆ ಲೋಕವಿಖ್ಯಾತರೂ ಮಹಾಶೂರರೂ ಆದ ತನಯರೂ ಉತ್ಪನ್ನರಾದರು.

೧೬೮. ಸೇನಜಿತನಿಗೆ ರುಚಿರಾಶ್ವ, ಕಾವ್ಯ, ಮಹಾಧನುರ್ಧಾರಿಯಾದ ರಾಮ, ಅವಂತಿಯ ರಾಜನಾದ ವತ್ಸ ಇವರೆಂಬ ನಾಲ್ವರು ಕುಮಾರರು ಇದ್ದರು. ಈ ವತ್ಸರಾಜನಿಂದಲೇ ಪರಿವತ್ಸರಗಳು ಪ್ರಖ್ಯಾತವಾದುವು.

೧೬೯. ಆ ರುಚಿರಾಶ್ವಮಹಾರಾಜನಿಗೆ ಅತಿಕೀರ್ತಿವಂತನಾದ ಪೃಥುಷೇಣನೆಂಬ ಕುಮಾರನೂ, ಅವನಿಗೆ ಪಾರನೆಂಬ ಪುತ್ರನೂ, ಆ ಪಾರನಿಗೆ ನೀಪನೆಂಬ ತನಯನೂ ಉದ್ಭವಿಸಿದರು.

೧೭೦. ಆ ನೀಪಮಹಾರಾಯನಿಗೆ ನೂರೊಂದುಜನ ಮಕ್ಕಳಿದ್ದರೆಂದೂ ನಾವು ಕೇಳುತ್ತೇವೆ. ಆ ನೂರೊಂದು ರಾಜರೂ ಕೂಡ ನೀಪರೆಂದೇ ಪ್ರಖ್ಯಾತರಾದರು.

ತೇಷಾಂ ವಂಶಕರಃ ಶ್ರೀಮಾನ್ ರಾಜಾಸೀತ್ಕೀರ್ತಿವರ್ಧನಃ ।
ಕಾಂಪಿಲ್ಯೇ ಸಮರೋ ನಾಮ ಸ ಚೇಷ್ಟಸಮರೋಽಭವತ್ ॥ ೧೭೧ ॥

ಸಮರಸ್ಯ ಪರಃ ಪಾರಃ ಸತ್ವದಶ್ವ ಇತಿ ತ್ರಯಃ ।
ಪುತ್ರಾಃ ಸರ್ವಗುಣೋಪೇತಾಃ ಪಾರಪುತ್ರೋ ವೃಷುರ್ಬಭೌ ॥ ೧೭೨ ॥

ವೃಷೋಸ್ತು ಸುಕೃತಿರ್ನಾಮ ಸುಕೃತೇನೇಹಕರ್ಮಣಾ ।
ಜಜ್ಞೇ ಸರ್ವಗುಣೋಪೇತೋ ವಿಭ್ರಾಜಸ್ತಸ್ಯ ಚಾತ್ಮಜಃ ॥ ೧೭೩ ॥

ವಿಭ್ರಾಜಸ್ಯ ತು ದಾಯಾದಸ್ತ್ವಣುಹೋ ನಾಮ ಪಾರ್ಥಿವಃ ।
ಬಭೂವ ಶುಕಜಾಮಾತಾ ಋಚೀಭರ್ತಾ ಮಹಾಯಶಾಃ ॥ ೧೭೪ ॥

---

೧೭೧. ಅವರಿಗೆ ವಂಶಾಭಿವೃದ್ಧಿಕರನೂ, ಶ್ರೀಮಂತನೂ, ಕೀರ್ತಿವಂತನೂ ಆದ ಕೀರ್ತಿವರ್ಧನನೆಂಬ ರಾಜಕುಮಾರನು ಜನಿಸಿದನು. ಅವನಿಗೆ ಯುದ್ಧಪ್ರಿಯನಾದ ಸಮರನೆಂಬ ಪುತ್ರನು ಜನಿಸಿ ಕಾಂಪಿಲ್ಯದೇಶದಲ್ಲಿ ರಾಜ್ಯವನ್ನು ಪಾಲಿಸುತ್ತಿದ್ದನು.

೧೭೨. ಅಂತಹ ಸಮರರಾಜನಿಗೆ ಸರ್ವಗುಣೋಪೇತರೂ ಪ್ರಖ್ಯಾತರೂ ಆದ ಪರ, ಪಾರ ಮತ್ತು ಸತ್ವದಶ್ವರೆಂಬ ಮೂವರು ಕುಮಾರರು ಜನಿಸಿದರು ಅವರಲ್ಲಿ ಪಾರನೆಂಬುವನಿಗೆ ವೃಷುವೆಂಬ ಪುತ್ರನು ಜನಿಸಿ ಪ್ರಕಾಶಿಸುತ್ತಿದ್ದನು.

೧೭೩. ಆ ವೃಷುರಾಜನಿಗೆ ಸುಕೃತಿಯೆಂಬ ಸುತನೂ, ಆ ಸುಕೃತಿಗೆ ನೇಹಕರ್ಮಣನೆಂಬುವನೂ, ಅವನಿಗೆ ಸರ್ವಗುಣೊಪೇತನೂ, ಪರಮದಯಾಳುವೂ ಆದ ವಿಭ್ರಾಜನೆಂಬ ತನಯನೂ ಉದ್ಭವಿಸಿದರು.

೧೭೪. ಆ ವಿಭ್ರಾಜನಿಗೆ ಅಣುಹನೆಂಬ ಪ್ರಖ್ಯಾತನಾದ ರಾಜಕುಮಾರನು ಉದ್ಭವಿಸಿದನು. ಅವನು ಶುಕನಿಗೆ ಅಳಿಯನಾಗಿಯೂ, ಋಚಿಗೆ ಪತಿಯಾಗಿಯೂ, ಕೀರ್ತಿಯುತನಾಗಿಯೂ ಇದ್ದನು.

ಅಣುಹಸ್ಯ ತು ದಾಯಾದೋ ಬ್ರಹ್ಮದತ್ತೋ ಮಹಾತಪಾಃ ।
ಯೋಗಸೂನುಃ ಸುತಸ್ತಸ್ಯ ವಿಷ್ವಕ್‍ಸೇನೋಽಭವನ್ನೃಪಃ ॥ ೧೭೫ ॥

ವಿಭ್ರಾಜಪುತ್ರಾ ರಾಜಾನಃ ಸುಕೃತೇನೇಹ ಕರ್ಮಣಾ ।
ವಿಷ್ವಕ್‍ಸೇನಸ್ಯ ಪುತ್ರಸ್ತು ಉದಕ್‍ಸೇನೋ ಬಭೂವ ಹ ॥ ೧೭೬ ॥

ಭಲ್ಲಾಟಸ್ತಸ್ಯ ದಾಯಾದೋ ಯೇನ ರಾಜಾ ಪುರಾ ಹತಃ ।
ಭಲ್ಲಾಟಸ್ಯ ತು ದಾಯಾದೋ ರಾಜಾಸೀಜ್ಜನಮೇಜಯಃ ॥
ಉಗ್ರಾಯುಧೇನ ತಸ್ಯಾರ್ಥೇ ಸರ್ವೇ ನೀಪಾಃ ಪ್ರಣಾಶಿತಾಃ ॥ ೧೭೭ ॥

॥ ಋಷಯ ಊಚುಃ ॥

ಉಗ್ರಾಯುಧಃ ಕಸ್ಯ ಸುತಃ ಕಸ್ಮಿನ್ ವಂಶೇ ಚ ಕೀರ್ತ್ಯತೇ ।
ಕಿಮರ್ಥಂ ಚೈವ ನೀಪಾಸ್ತೇ ತೇನ ಸರ್ವೇ ಪ್ರಣಾಶಿತಾಃ ॥ ೧೭೮ ॥

---

೧೭೫. ಆ ಅಣುಹನಿಗೆ ಮಹಾತಪಸ್ವಿಯಾದ ಬ್ರಹ್ಮದತ್ತನೆಂಬ ಕುಮಾರನೂ, ಅವನಿಗೆ ಯೋಗಸೂನುವೆಂಬ ತನಯನೂ, ಅವನಿಗೂ ಕೂಡ ವಿಷ್ವಕ್ಸೇನನೆಂಬ ಪುತ್ರನೂ ಜನಿಸಿ ಪ್ರಸಿದ್ಧರಾದರು.

೧೭೬. ಆ ವಿಭ್ರಾಜನ ಪುತ್ರರಾದ ರಾಜಕುಮಾರರೆಲ್ಲರೂ ಯಜ್ಞಯಾಗಾದಿ ಸತ್ಕರ್ಮಗಳನ್ನು ಮಾಡಿ ಸುಪ್ರಸಿದ್ಧರಾಗಿದ್ದರು. ಪ್ರಸಿದ್ಧನಾದ ವಿಷ್ವಕ್ಸೇನನಿಗೆ ಉದಕ್ಸೇನನೆಂಬ ಕುಮಾರನು ಉದ್ಭವಿಸಿದನು.

೧೭೭. ಆ ಉದಕ್ಸೇನನಿಗೆ ಭಲ್ಲಾಟನೆಂಬ ಕುಮಾರನು ಹುಟ್ಟಿದನು. ಅವನು ಪೂರ್ವದಲ್ಲಿ ಅನೇಕರಾದ ರಾಜರನ್ನು ಜಯಿಸಿದ್ದನು ಅಂತಹ ಭಲ್ಲಾಟನಿಗೆ ಜನಮೇಜಯನೆಂಬ ರಾಜಕುಮಾರನು ಉದ್ಭವಿಸಿದನು. ಅವನು ಮಹಾಶೂರನಾದುದರಿಂದ ಸಮಸ್ತರಾದ ನೀಪರಾಜರೆಲ್ಲರನ್ನೂ (ಉಗ್ರಾಯುಧದಿಂದ) ಉಗ್ರವಾದ ಆಯುಧಗಳಿಂದ ನಾಶಮಾಡಿದನು.

೧೭೮. ಋಷಿಗಳು ಪುನಃ ಕೇಳಿದರು :— ಎಲೈ ಸೂತಪುರಾಣಿಕನೇ, ಆ ಉಗ್ರಾಯುಧನು ಯಾರ ಸುತನು ? ಅವನು ಯಾವ ವಂಶದಲ್ಲಿ ಹುಟ್ಟಿದ್ದನು ? ಅವನು (ಏತಕ್ಕಾಗಿ) ಯಾವ ಕಾರಣದಿಂದ ಸಮಸ್ತ ನೀಪರಾಜರನ್ನು ಸಂಹರಿಸಿದನೆಂದು ಕೇಳಿದರು.

|| ಸೂತ ಉವಾಚ ||

ದ್ವಿಮೀಢಸ್ಯ ತು ದಾಯಾದೋ ವಿದ್ವಾನ್ ಜಜ್ಞೇ ಯವೀನರಃ |
ಧೃತಿಮಾಂಸ್ತಸ್ಯ ಪುತ್ರಸ್ತು ತಸ್ಯ ಸತ್ಯಧೃತಿಃ ಸುತಃ || ೧೭೯ ||

ಅಥ ಸತ್ಯಧೃತೇಃ ಪುತ್ರೋ ದೃಢನೇಮಿಃ ಪ್ರತಾಪವಾನ್ |
ದೃಢನೇಮಿಸುತಶ್ಚಾಪಿ ಸುವರ್ಮಾನಾಮ ಪಾರ್ಥಿವಃ || ೧೮೦ ||

ಆಸೀತ್ಸುವರ್ಮಣಃ ಪುತ್ರಃ ಸಾರ್ವಭೌಮಃ ಪ್ರತಾಪವಾನ್ |
ಸಾರ್ವಭೌಮ ಇತಿ ಖ್ಯಾತಃ ಪೃಥಿವ್ಯಾಮೇಕರಾಡ್ಬಭೌ || ೧೮೧ ||

ತಸ್ಯಾನ್ವಯೇ ಚ ಮಹತಿ ಮಹತ್ಪೌರವನಂದನಃ |
ಮಹತ್ಪೌರವಪುತ್ರಸ್ತು ರಾಜಾ ರುಕ್ಮರಥಃ ಸ್ಮೃತಃ || ೧೮೨ ||

---

೧೭೯. ಸೂತಪುರಾಣೀಕಸಿಂತೆಂದನು :—ದ್ವಿಮೀಢಮಹಾರಾಜನಿಗೆ ಮಹಾಜ್ಞಾನಿಯೂ ಶೂರನೂ ಆದ ಯವೀನರನೆಂಬ ಕುಮಾರನು ಹುಟ್ಟಿದನು. ಅವನಿಗೆ ಧೃತಿಮಂತನೆಂಬ ಮಗನೂ, ಅವನಿಗೆ ಸತ್ಯಧೃತಿಯೆಂಬ ಸುತನೂ ಜನಿಸಿ ಖ್ಯಾತಿವಂತರಾಗಿದ್ದರು.

೧೮೦. ತರುವಾಯ ಸತ್ಯಧೃತಿಗೆ ಮಹಾಪರಾಕ್ರಮಿಯಾದ ದೃಢನೇಮಿಯೆಂಬ ಸುತನೂ, ಆ ದೃಢನೇಮಿಗೆ ಶೂರನಾದ ಸುವರ್ಮನೆಂಬ ರಾಜಕುಮಾರನೂ ಉತ್ಪನ್ನರಾದರು.

೧೮೧. ಆ ಸುವರ್ಮನಿಗೆ ಮಹಾಪ್ರತಾಪಶಾಲಿಯಾದ ಸಾರ್ವಭೌಮನೆಂಬ ರಾಜಪುತ್ರನು ಜನಿಸಿದನು. ಅವನಿಗೆ ಸಾರ್ವಭೌಮನೆಂಬ ನಾಮವು ಅನ್ವರ್ಥಕವಾಗಿತ್ತು. ಏಕೆಂದರೆ ಅವನು ಸಮಸ್ತರಾದ ರಾಜರನ್ನೂ ಜಯಿಸಿ ಚಕ್ರವರ್ತಿಯಾಗಿದ್ದನು.

೧೮೨. ಚಕ್ರವರ್ತಿಯಾದ ಆ ಸಾರ್ವಭೌಮನ ಮಹಾವಂಶದಲ್ಲಿ ಮಹತ್ಪೌರನೆಂಬ ರಾಜಕುಮಾರನು ಜನಿಸಿದನು. ಆ ಮಹತ್ಪೌರನಿಗೆ ರುಕ್ಮರಥನೆಂದು ಪ್ರಖ್ಯಾತನಾದ ರಾಜಕುಮಾರನು ಸಂಭವಿಸಿದನು.

ಅಥ ರುಕ್ಮರಥಸ್ಯಾಪಿ ಸುಪಾರ್ಶ್ವೋ ನಾಮ ಪಾರ್ಥಿವಃ ।
ಸುಪಾರ್ಶ್ವತನಯಶ್ಚಾಪಿ ಸುಮತಿರ್ನಾಮ ಧಾರ್ಮಿಕಃ ॥ ೧೮೩ ॥

ಸುಮತೇರಪಿ ಧರ್ಮಾತ್ಮಾ ರಾಜಾ ಸನ್ನತಿವಾನ್ ಪ್ರಭುಃ ।
ತಸ್ಯಾಸೀತ್ಸನತಿರ್ನಾಮ ಕೃತಸ್ತಸ್ಯ ಸುತೋಽಭವತ್ ॥ ೧೮೪ ॥

ಶಿಷ್ಯೋ ಹಿರಣ್ಯನಾಭೇಸ್ತು ಕೌಥುಮಸ್ಯ ಮಹಾತ್ಮನಃ ।
ಚತುರ್ವಿಂಶತಿಧಾತೇನ ಪ್ರೋಕ್ತಾಸ್ತಾಃ ಸಾಮಸಂಹಿತಾಃ ॥ ೧೮೫ ॥

ಸ್ಮೃತಾಸ್ತೇ ಪ್ರಾಚ್ಯನಾಮಾನಃ ಕಾರ್ತಾಃ ಸಾಮ್ನಾಂತು ಸಾಮಗಃ ।
ಕಾರ್ತಿರುಗ್ರಾಯುಧಃ ಸೋಽಥ ವೀರಃ ಪೌರವನಂದನಃ ॥ ೧೮೬ ॥

---

೧೮೩. ತರುವಾಯ ಆ ರುಕ್ಮರಥನಿಗೆ ಸುಪಾರ್ಶ್ವನೆಂಬ ರಾಜಕುಮಾರನು ಜನಿಸಿದನು. ಆ ಸುಪಾರ್ಶ್ವನಿಗೆ ಧಾರ್ಮಿಕನಾದ ಸುಮಿತಿಯೆಂಬ ಪುತ್ರನು ಜನಿಸಿದನು.

೧೮೪. ಅಂತಹ ಸುಮತಿಗೆ ಧರ್ಮಾತ್ಮನೂ ಪ್ರಭುವೂ ಆದ ಸನ್ನತಿಮಂತನೆಂಬ ರಾಜಕುಮಾರನು ಹುಟ್ಟಿದನು. ಆ ಸನ್ನತಿಯೆಂಬುವನಿಗೆ ಸನತಿನಾಮಕ ಪುತ್ರನೂ, ಅವನಿಗೆ ಕೃತನೆಂಬ ಮಗನೂ ಜನಿಸಿದನು.

೧೮೫. ಆ ಕೃತನೆಂಬುವನು ಹಿರಣ್ಯನಾಭನಾಮಕನೂ, ಮಹಾತ್ಮನೂ ಆದ ಕೌಥುಮನಿಗೆ ಶಿಷ್ಯನಾಗಿದ್ದನು. ಅವನು ಸಾಮವೇದದ ಸಂಹಿತೆಗಳನ್ನು ಇಪ್ಪತ್ತು ನಾಲ್ಕು ಪಂಗಡಗಳನ್ನಾಗಿ ವಿಂಗಡಿಸಿದನು.

೧೮೬. ಅವರು ಪ್ರಾಚ್ಯದೇಶದವರೆಂದು ಪ್ರಖ್ಯಾತರೂ, ಸಾಮವೇದದ ಸಂಹಿತಾಕರ್ತೃಗಳೂ, ಸಾಮವೇದವೇತ್ತೃಗಳೂ ಆಗಿರುವರು ಅವರಲ್ಲಿ ಭಯಂಕರಾಯುಧಧಾರಿಯೂ, ವೀರನೂ, ಪೌರವನಂದನನೂ ಆದ ಕೀರ್ತಿಯೆಂಬುವನು ಪ್ರಖ್ಯಾತನಾಗಿರುವನು.

ಬಭೂವ ಯೇನ ವಿಕ್ರಮ್ಯ ಪೃಷತಸ್ಯ ಪಿತಾಮಹಃ ।
ನೀಲೋ ನಾಮ ಮಹಾಬಾಹುಃ ಪಂಚಾಲಾಧಿಪತಿರ್ಹತಃ ॥ ೧೮೭ ॥

ಉಗ್ರಾಯುಧಸ್ಯ ದಾಯಾದಃ ಕ್ಷೇಮೋ ನಾಮ ಮಹಾಯಶಾಃ ।
ಕ್ಷೇಮಾತ್ಸುವೀರಃ ಸಂಜಜ್ಞೇ ಸುವೀರಸ್ಯ ನೃಪಂಜಯಃ ॥
ನೃಪಂಜಯಾದ್ವೀರರಥೋ ಇತ್ಯೇತೇ ಪೌರವಾಃ ಸ್ಮೃತಾಃ ॥ ೧೮೮ ॥

ಅಜಮೀಢಸ್ಯ ನೀಲಿನ್ಯಾಂ ನೀಲಃ ಸಮಭವನ್ನೃಪಃ ।
ನೀಲಸ್ಯ ತಪಸೋಗ್ರೇಣ ಸುಶಾಂತಿರಭ್ಯಜಾಯತ ॥ ೧೮೯ ॥

ಪುರುಜಾನುಃ ಸುಶಾಂತೇಸ್ತು ರಿಕ್ಷಸ್ತು ಪುರುಜಾನುಜಃ ।
ತತಸ್ತು ರಿಕ್ಷದಾಯಾದಾ ಭೇದಾಶ್ಚ ತನಯಾಸ್ತ್ವಿಮೇ ॥ ೧೯೦ ॥

---

೧೮೭. ಆ ಮಹಾರಾಜನು ಮಹಾಶೌರ್ಯವಂತನಾದುದರಿಂದ ಪೃಷತನ ಪಿತಾಮಹನೂ, ಮಹಾಭುಜಪರಾಕ್ರಮಿಯೂ, ಪಾಂಚಾಲದೇಶದ ಅಧಿಪತಿಯೂ ಆದ ನೀಲನೆಂಬ ರಾಜನನ್ನು ಸಂಹರಿಸಿದನು.

೧೮೮. ಉಗ್ರಾಯುಧನಿಗೆ ಮಹಾಕೀರ್ತಿವಂತನಾದ ಕ್ಷೇಮನಾಮಕನಾದ ಕುಮಾರನು ಹುಟ್ಟಿದನು. ಆ ಕ್ಷೇಮನಿಗೆ ಸುವೀರನೆಂಬ ನಂದನನೂ ಅವನಿಗೆ ನೃಪಂಜಯನೆಂಬ ಸುತನೂ ಅವನಿಗೆ ವೀರರಥನೆಂಬ ಪುತ್ರನೂ ಹುಟ್ಟಿದರು. ಇವರೆಲ್ಲರೂ ಪೌರವರೆಂದು ಪುರುವಂಶದವರೆಂದು ಪ್ರಖ್ಯಾತರಾಗಿರುವರು.

೧೮೯. ಅಜಮೀಢಮಹಾರಾಜನಿಗೆ ನೀಲಿನಿಯಲ್ಲಿ ನೀಲನೆಂಬ ರಾಜ ಕುಮಾರನು ಉದ್ಭವಿಸಿದನು. ಆ ನೀಲಮಹಾರಾಜನು ಘೋರವಾದ ತಪಸ್ಸನ್ನು ಮಾಡಿದನು. ಅದರಿಂದ ಅವನಿಗೆ ಸುಶಾಂತಿಯೆಂಬ ಕುಮಾರನು ಉದ್ಭವಿಸಿದನು.

೧೯೦. ಆ ಸುಶಾಂತಿಗೆ ಪುರಜಾನು ಮತ್ತು ರಿಕ್ಷರೆಂಬ ಇಬ್ಬರು ಕುಮಾರರು ಜನಿಸಿದರು. ಇವರಿಬ್ಬರೂ ಸಹೋದರರಾಗಿದ್ದರು. ಈ ಮೇಲೆ, ಹೇಳಿದ ಕುಮಾರರೆಲ್ಲರೂ ರಿಕ್ಷನ ವಂಶದವರಾಗಿ ಪ್ರಖ್ಯಾತರಾಗಿರುವರು.

ಮುದ್ಗಲಃ ಸೃಂಜಯಶ್ಚೈವ ರಾಜಾ ಬೃಹದಿಷುಸ್ತಥಾ ।
ಯವೀಯಾಂಶ್ಚಾಪಿ ವಿಕ್ರಾಂತಃ ಕಂಪಿಲ್ಯಶ್ಚೈವ ಪಂಚಮಃ ॥ ೯೧ ॥

ಪಂಚಾನಾಂ ರಕ್ಷಣಾರ್ಥಾಯ ಪಿತೈತಾನಭ್ಯಭಾಷತ ।
ಪಂಚಾನಾಂ ವಿದ್ಧಿ ಪಂಚೈತಾನ್ ಸ್ಫೀತಾ ಜನಪದಾ ಯುತಾಃ ॥ ೯೨ ॥

ಅಲಂ ಸಂರಕ್ಷಣೇ ತೇಷಾಂ ಪಂಚಾಲಾ ಇತಿ ವಿಶ್ರುತಾಃ ।
ಮುದ್ಗಲಸ್ಯಾಪಿ ಮೌದ್ಗಲ್ಯಾಃ ಕ್ಷಾತ್ರೋಪೇತದ್ವಿಜಾಯತಃ ॥ ೯೩ ॥

ಏತೇ ಹ್ಯಂಗಿರಸಃ ಪಕ್ಷೇ ಸಂಶ್ರಿತಾಃ ಕಂಠಮುದ್ಗಲಾಃ ।
ಮುದ್ಗಲಸ್ಯ ಸುತೋ ಜ್ಯೇಷ್ಠೋ ಬ್ರಹ್ಮಿಷ್ಠಃ ಸುಮಹಾಯಶಾಃ ॥ ೯೪ ॥

---

೯೧-೯೨. ಮುದ್ಗಲ, ಸೃಂಜಯ, ಬೃಹದಿಷು, ವಿಕ್ರಾಂತ, ಕಂಪಿಲ್ಯ ಇವರು ಐವರೂ ಏಕೋದರರಾಗಿ ದಾಯಾದಿಗಳಾಗಿರುವರು. ಈ ಐವರನ್ನೂ ನೋಡಿ ತಂದೆಯು ಅವರ ರಕ್ಷಣೆಗಾಗಿ ಇಂತೆಂದನು. ಎಲೈ ಕುಮಾರರೇ, ನಿಮ್ಮ ಐದು ಜನಗಳಿಗೂ ಸರ್ವಸಂಪತ್ಸಮೃದ್ಧವಾದ ಐದು ದೇಶಗಳೂ ಸಿದ್ಧವಾಗಿವೆ. ನೀವು ಅವುಗಳನ್ನು ಒಟ್ಟುಗೂಡಿ ರಕ್ಷಿಸುವಿರೆಂದನು

೯೩. ನೀವು ಏಕಮತಿಕರಾದರೇ ಆ ದೇಶಗಳನ್ನು ಸುಖವಾಗಿ ರಕ್ಷಿಸಬಹುದು. ಇವರೆಲ್ಲರೂ ಪಾಂಚಾಲರೆಂದು ಪ್ರಖ್ಯಾತರಾಗಿರುವರು. ಅದರಂತೆ ಮುದ್ಗಲನವಂಶೀಕರು ಮೌದ್ಗಲ್ಯರೆಂದು ಪ್ರಖ್ಯಾತರಾಗಿರುವರು. ಅವರು ಬ್ರಾಹ್ಮಣರಾಗಿದ್ದರೂ ಕ್ಷಾತ್ರಧರ್ಮೋಪೇತರಾಗಿರುವರು.

೯೪. ಇವರು ಅಂಗಿರಸನ ಪಕ್ಷವನ್ನಾಶ್ರಯಿಸಿದ ಕಂಠ ಮುದ್ಗಲರಾಗಿರುವರು. ಮುದ್ಗಲನಿಗೆ ಬ್ರಹ್ಮಜ್ಞಾನಿಯೂ ಅತ್ಯಂತ ಕೀರ್ತಿವಂತನೂ ಆದ ಹಿರಿಯ ಮಗನು ಸುಪ್ರಸಿದ್ಧನಾಗಿರುವನು.

ಇಂದ್ರಸೇನಾ ಯತೋ ಗರ್ಭಂ ಬಧ್ಯಶ್ವಂ ಪ್ರತ್ಯಪದ್ಯತ ।
ಬಧ್ಯಶ್ವಾತ್ ಮಿಥುನಂ ಜಜ್ಞೇ ಮೇನಕಾ ಇತಿ ನಃ ಶ್ರುತಿಃ ॥ ೧೯೫ ॥

ದಿವೋದಾಸಶ್ಚ ರಾಜರ್ಷಿರಹಲ್ಯಾ ಚ ಯಶಸ್ವಿನೀ ।
ಶಾರದ್ವತಸ್ತು ದಾಯಾದಮಹಲ್ಯಾ ಸಮಸೂಯತ ॥ ೧೯೬ ॥

ಶತಾನಂದಮೃಷಿಶ್ರೇಷ್ಠಂ ತಸ್ಯಾಪಿ ಸುಮಹಾಯಶಾಃ ।
ಪುತ್ರಃ ಸತ್ಯಧೃತಿರ್ನಾಮ ಧನುರ್ವೇದಸ್ಯ ಪಾರಗಃ ॥ ೧೯೭ ॥

ಅಥ ಸತ್ಯ ಧೃತೇಃ ಶುಕ್ರಂ ದೃಷ್ಟ್ವಾಪ್ಸರಸಮಗ್ರತಃ ।
ಪ್ರಚಸ್ಕಂಧೇ ಶರಸ್ತಂಬೇ ಮೈಥುನಂ ಸಮಪದ್ಯತ ॥ ೧೯೮ ॥

---

೧೯೫. ಆ ಬೃಹ್ಮಿಸ್ವನಿಗೆ ಇಂದ್ರಸೇನೆಯಲ್ಲಿ ಬಧ್ಯಶ್ವನಾಮಕನಾದ ಕುಮಾರನು ಉತ್ಪನ್ನನಾದನು. ಅವನಿಗೆ ಅವಳಿಮಕ್ಕಳು ಹುಟ್ಟಿದರು. ಅವರಲ್ಲಿ ಮೇನಕೆಯು ಒಬ್ಬಳಾಗಿರುವಳೆಂದು ನಾವು ಕೇಳುತ್ತೇವೆ. ಅಂದರೆ ಮೇನಕೆಯು ಬಧ್ಯಶ್ವನಿಂದ ಅವಳಿ ಮಕ್ಕಳನ್ನು ಪಡೆದಳು.

೧೯೬. ಅವರು ಯಾರೆಂದರೆ—ದಿವೋದಾಸನೆಂಬ ರಾಜರ್ಷಿಯೂ, ಕೀರ್ತಿವಂತಳಾದ ಅಹಲ್ಯಾದೇವಿಯೂ ಉತ್ಪನ್ನರಾದರು. ಅಹಲ್ಯೆಯು ಶಾರದ್ವತನಿಂದ ಪುತ್ರಸಂತಾನವನ್ನು ಪಡೆದಳು.

೧೯೭. ಅವನಿಗೆ ಋಷಿಶ್ರೇಷ್ಠನಾದ ಶತಾನಂದನೆಂಬ ಮಗನೂ, ಅವನಿಗೆ ಮಹಾಕೀರ್ತಿವಂತನೂ, ಧನುರ್ವೇದಪಾರಂಗತನೂ ಆದ ಸತ್ಯಧೃತಿಯೆಂಬ ಕುಮಾರನು ಉತ್ಪನ್ನನಾದನು.

೧೯೮. ತರುವಾಯ ಸತ್ಯಧೃತಿಯು ಮುಂಭಾಗದಲ್ಲಿ ಅಪ್ಸರಸಜನಕವಾದ ಶುಕ್ರವನ್ನು ನೋಡಿದನು. ತರುವಾಯ ಜಾರತಕ್ಕ ಶರಸ್ತಂಭದಲ್ಲಿ ಮೈಥುನವನ್ನು ಹೊಂದಿದನು.

**ಕೃಪಯಾ ತಚ್ಚ ಜಗ್ರಾಹ ಶಂತನುರ್ಮೃಗಯಾಂ ಗತಃ |**
**ಕೃಪಃ ಸ್ಮೃತಃ ಸ ವೈ ತಸ್ಮಾದ್ಗೌತಮೀ ಚ ಕೃಪೀ ತಥಾ || ೧೯೯ ||**

**ಏತೇ ಶಾರದ್ವತಾಃ ಪ್ರೋಕ್ತಾಃ ಉತಥ್ಯೋ ಗೌತಮಾನ್ವಯಃ |**
**ಅತ ಊರ್ಧ್ವಂ ಪ್ರವಕ್ಷ್ಯಾಮಿ ದಿವೋದಾಸಸ್ಯ ಸಂತತಿಂ || ೨೦೦ ||**

**ದಿವೋದಾಸಸ್ಯ ದಾಯಾದೋ ಬ್ರಹ್ಮಿಷ್ಠೋ ಮಿತ್ರಯುರ್ನೃಪಃ |**
**ಮೈತ್ರೇಯಸ್ತು ತತೋ ಜಜ್ಞೇ ಸ್ಮೃತಾ ಏತೇಽಪಿ ಸಂಶ್ರಿತಾಃ || ೨೦೧ ||**

**ಏತೇಽಪಿ ಸಂಶ್ರಿತಾಃ ಪಕ್ಷಂ ಕ್ಷತ್ರೋಪೇತಾಸ್ತು ಭಾರ್ಗವಾಃ |**
**ರಾಜಾಪಿ ಚ್ಯವನೋ ವಿದ್ವಾಂಸ್ತತಃ ಪ್ರತಿರಥೋಽಭವತ್ || ೨೦೨ ||**

**ಅಥ ವೈ ಚ್ಯವನಾದ್ಧೀಮಾನ್ ಸುದಾಸಃ ಸಮಪದ್ಯತ |**
**ಸೌದಾಸಃ ಸಹದೇವಶ್ಚ ಸೋಮಕಸ್ತಸ್ಯ ಚಾತ್ಮಜಃ || ೨೦೩ ||**

---

೧೯೯. ಆಗ ಬೇಟೆಗಾಗಿ ಹೋಗಿದ್ದ ಶಂತನುಚಕ್ರವರ್ತಿಯು ದಯೆಯಿಂದ ಅದನ್ನು ಸ್ವೀಕರಿಸಿದನು. ಆಗ ಕೃಪನೆಂಬ ಋಷಿಯೂ, ಕೃಪೀ ಎಂಬ ಗೌತಮಿಯೂ ಕೂಡ ಸ್ಮರಿಸಲ್ಪಟ್ಟರು.

೨೦೦. ಮೇಲೆ ನಿರೂಪಿತರಾದವರೆಲ್ಲರೂ, ಶಾರದ್ವತರೆಂದು ಪ್ರಖ್ಯಾತವಾದರು. ಉತಥ್ಯನು ಗೌತಮವಂಶದವನಾಗಿರುವನು. ಇನ್ನುಮುಂದೆ ದಿವೋದಾಸನ ಸಂತಾನವನ್ನು ವರ್ಣಿಸುವೆನು ಕೇಳಿರೆಂದನು.

೨೦೧. ಆ ದಿವೋದಾಸನಿಗೆ ಬ್ರಹ್ಮಜ್ಞಾನಿಯಾದ ಮಿತ್ರಯುವೆಂಬ ಕುಮಾರನು ಜನಿಸಿದನು. ಅನಂತರ ಅವನಿಗೆ ಮೈತ್ರೇಯನೆಂಬ ಕುಮಾರನು ಉದ್ಭವಿಸಿದನು. ಇವರು ಮೈತ್ರೇಯರೆಂದು ಪ್ರಖ್ಯಾತರಾದರು.

೨೦೨. ಇವರೆಲ್ಲರೂ ಏಕಾಭಿಪ್ರಾಯರಾಗಿ ಭೃಗುವಂಶೋತ್ಪನ್ನರಾಗಿರುವರು. ಅನಂತರ ಜ್ಞಾನಿಯಾದ ಚ್ಯವನನೂ, ಅವನಿಗೆ ಪ್ರತಿರಥನೆಂಬ ಕುಮಾರನೂ ಅವತರಿಸಿದರು.

೨೦೩. ತರುವಾಯ ಚ್ಯವನನಿಗೆ ಜ್ಞಾನಿಯಾದ ಸುದಾಸನು ಉತ್ಪನ್ನನಾದನು. ಆ ಸುದಾಸನಿಗೆ ಸೌದಾಸನೂ, ಸಹದೇವನೂ ಮತ್ತು ಸೋಮಕನೂ ಸಹ ಉತ್ಪನ್ನರಾದರು.

**ಅಜಮೀಢಃ ಪುನರ್ಜಾತಃ ಕ್ಷೀಣೇ ವಂಶೇ ಸಸೋಮಕಃ ।**
**ಸೋಮಕಸ್ಯ ಸುತೋ ಜಂತುರ್ಹತೇ ತಸ್ಮಿಚ್ಛತಂ ವಿಭೋ ॥ ೨೦೪ ॥**

**ಪುಷಾಣಾಮಜಮೀಢಸ್ಯ ಸೋಮಕತ್ವೇ ಮಹಾತ್ಮನಃ ।**
**ತೇಷಾಂ ಯವೀಯಾನ್ ಪೃಷತೋ ದ್ರುಪದಸ್ಯ ಪಿತಾಮಹಃ ॥ ೨೦೫ ॥**

**ಧೃಷ್ಟದ್ಯುಮ್ನಃ ಸುತಸ್ತಸ್ಯ ಧೃಷ್ಟಕೇತುಶ್ಚ ತತ್ಸುತಃ ।**
**ಮಹಿಷೀ ಚಾಜಮೀಢಸ್ಯ ಧೂಮಿನೀ ಪುತ್ರಗಾರ್ಧಿನೀ ॥ ೨೦೬ ॥**

**ಪುನರ್ಭವೇ ತಪಸ್ತೇಪೇ ಶತಂ ವರ್ಷಾಣಿ ದುಶ್ಚರಂ ।**
**ಹುತಾಗ್ನ್ಯನಿದ್ರಾ ಹ್ಯಭವತ್ ಪವಿತ್ರಮಿತಭೋಜನಾ ॥ ೨೦೭ ॥**

---

೨೦೪. ಆ ವಂಶವು ಕ್ಷೀಣವಾಗಲು ಆ ವಂಶದಲ್ಲಿ ಅಜಮೀಢನು ಉತ್ಪನ್ನನಾದನು. ಅವನ ನಂತರ ಸೋಮಕನು ಹುಟ್ಟಿದನು. ಆ ಸೋಮಕನಿಗೆ ಜಂತುವೆಂಬ ಕುಮಾರನು ಉತ್ಪನ್ನನಾದನು. ಅವನು ಮೃತನಾಗಲು ಆ ವಂಶದಲ್ಲಿ ನೂರಾರು ಮಕ್ಕಳು ಉದ್ಭವಿಸಿದರು.

೨೦೫. ಸೋಮಕವಂಶೋತ್ಪನ್ನನೂ, ಮಹಾತ್ಮನೂ ಆದ ಅಜಮೀಢನಿಗೆ ಪುಷಾಣನೆಂಬ ಕುಮಾರನು ಜನಿಸಿದನು. ಆ ವಂಶದಲ್ಲಿ ಶೂರನಾದ ಪೃಷದನು ಹುಟ್ಟಿದನು. ಆ ಪೃಷದನು ದ್ರುಪದನ ತಾತನಾಗಿದ್ದನು.

೨೦೬. ಆ ಪೃಷದಮಹಾರಾಜನಿಗೆ ಧೃಷ್ಟದ್ಯುಮ್ನನು ಮಗನಾಗಿಯೂ, ಅವನಿಗೆ ಧೃಷ್ಟಕೇತುವು ಪುತ್ರನಾಗಿಯೂ ಜನಿಸಿದರು. ಅಜಮೀಢನ ಪತ್ನಿಯಾದ ಧೂಮಿನೀ ಎಂಬುವಳು ಪುತ್ರಾಕಾಂಕ್ಷಿತಳಾಗಿದ್ದಳು.

೨೦೭. ಆ ಧೂಮಿನಿಯು ಮತ್ತೊಂದು ಜನ್ಮದಲ್ಲಿ ನೂರಾರು ವರ್ಷಗಳು ಭಯಂಕರವಾದ ತಪಸ್ಸನ್ನು ಮಾಡಿದಳು. ಮತ್ತು ಅಗ್ನಿಯಲ್ಲಿ ಹೋಮಮಾಡುತ್ತಲೂ, ನಿದ್ರಾರಹಿತಳೂ, ಪವಿತ್ರವೂ, ಮಿತವೂ ಆದ ಆಹಾರವುಳ್ಳವಳೂ ಆಗಿ ತಪಸ್ಸನ್ನು ಮಾಡಿದಳು.

ಅಹೋರಾತ್ರಂ ಕುಶೇಷ್ವೇಹ ಸುಷ್ವಾಪ ಸುಮಹವ್ರತಾ ।
ತಾಸ್ಯಾಂ ವೈ ಧೂಮ್ರವರ್ಣಾಯಾಮಜಮೀಢಶ್ಚ ವೀರ್ಯವಾನ್ ॥ ೨೦೮ ॥

ಋಕ್ಷಂ ಸಂಜನಯಾಮಾಸ ಧೂಮ್ರವರ್ಣಂ ಸಿತಾಗ್ರಜಂ ।
ಋಕ್ಷಾತ್ ಸಂವರಣೋ ಜಜ್ಞೇ ಕುರುಃ ಸಂವರಣಾದಭೂತ್ ॥ ೨೦೯ ॥

ಯಃ ಪ್ರಯಾಗಂ ಪದಾಕ್ರಮ್ಯ ಕುರುಕ್ಷೇತ್ರಂಚಕಾರ ಹ ।
ಕೃಷ್ಟ್ವೈನಂ ಸುಮಹಾತೇಜಾ ವರ್ಷಾಣಿ ಸುಬಹೂನ್ಯಥ ॥ ೨೧೦ ॥

ಕೃಷ್ಯಮಾಣೇ ತದಾ ಶಕ್ರಸ್ತತ್ರಾಸ್ಯ ವರದೋ ಬಭೌ ।
ಪುಣ್ಯಂ ಚ ರಮಣೀಯಂ ಚ ಪುಣ್ಯಕೃದ್ಭಿರ್ನಿಷೇವಿತಂ ॥ ೨೧೧ ॥

---

೨೦೮. ಅವಳು ತಪಸ್ಸು ಮಾಡುವಾಗ ಅಹೋರಾತ್ರಿಗಳಲ್ಲಿಯೂ ಮಹಾವ್ರತವುಳ್ಳವಳಾಗಿ ದರ್ಭಶಯನವನ್ನು ಮಾಡಿದಳು. ಧೂಮ್ರವರ್ಣವುಳ್ಳ ಅವಳಿಗೆ ಮಹಾಶೂರನಾದ ಅಜಮೀಢಮಹಾರಾಯನು ಉದ್ಭವಿಸಿದನು.

೨೦೯. ಅನಂತರ ಧೂಮ್ರವರ್ಣನೂ, ಬಿಳಿಯ ಕೇಶವುಳ್ಳವನೂ ಆದ ಋಕ್ಷನೆಂಬ ಕುಮಾರನನ್ನು ಪಡೆದಳು. ಈ ಋಕ್ಷನಿಗೆ ಸಂವರಣನೆಂಬ ಕುಮಾರನೂ, ಅವನಿಗೆ ಕುರುವೆಂಬ ಸುತನೂ ಉದ್ಭವಿಸಿದರು.

೨೧೦. ಆ ಮಹಾತೇಜಸ್ವಿಯಾದ ಕುರುಮಹಾರಾಜನು ಅನೇಕ ವರ್ಷಗಳು ಈ ಪ್ರಯಾಗ ಕ್ಷೇತ್ರವನ್ನು ಉತ್ತು, ಅದನ್ನು ಆಕ್ರಮಿಸಿಕೊಂಡು ಕುರುಕ್ಷೇತ್ರವೆಂದು ಲೋಕವಿಖ್ಯಾತವನ್ನಾಗಿ ಮಾಡಿದನು.

೨೧೧. ಹೀಗೆ ಕುರುಮಹಾರಾಜನು ಆ ಕ್ಷೇತ್ರವನ್ನು ಉತ್ತು ಶುದ್ಧಿಮಾಡಲಾಗಿ ದೇವೇಂದ್ರನು ಅಲ್ಲಿಗೆ ಬಂದು ಈ ಕ್ಷೇತ್ರವು ಪುಣ್ಯಕರವಾಗಿಯೂ, ರಮಣೀಯವಾಗಿಯೂ, ಮಹಾತ್ಮರಿಂದ ಸೇವಿಸಲ್ಪಡುವುದಾಗಿಯೂ ಆಗಲೆಂದು ವರವನ್ನು ಕೊಟ್ಟನು.

ತಸ್ಯಾನ್ವವಾಯಜಾಃ ಖ್ಯಾತಾಃ ಕುರವೋ ನೃಪಸತ್ತಮಾಃ ।
ಕುರೋಸ್ತು ದಯಿತಾಃ ಪುತ್ರಾಃ ಸುಧನ್ವಾ ಜಹ್ನುರೇವ ಚ ॥ ೨೧೨ ॥

ಪರಿಕ್ಷಿತೋ ಮಹಾರಾಜಃ ಪುತ್ರಕಶ್ಚಾರಿಮರ್ದನಃ ।
ಸುಧನ್ವನಸ್ತು ದಾಯಾದಃ ಸುಹೋತ್ರೋ ಮತಿಮಾನ್ ಸ್ಮೃತಃ ॥ ೨೧೩ ॥

ಚ್ಯವನಸ್ತಸ್ಯ ಪುತ್ರಸ್ತು ರಾಜಾ ಧರ್ಮಾರ್ಥಕೋವಿದಃ ।
ಚ್ಯವನಸ್ಯ ಕೃತಃ ಪುತ್ರಃ ಇಷ್ಟ್ವಾ ಯಜ್ಞೈರ್ಮಹಾತಪಾಃ ॥ ೨೧೪ ॥

ವಿಶ್ರುತಂ ಜನಯಾಮಾಸ ಪುತ್ರಮಿಂದ್ರಸಖಂ ನೃಪಃ ।
ವಿದ್ಯೋಪರಿಚರಂ ವೀರಂ ವಸುಂ ನಾಮಾಂತರಿಕ್ಷಗಂ ॥ ೨೧೫ ॥

---

೨೧೨. ಆ ಮಹಾರಾಜನ ವಂಶದಲ್ಲಿ ಪ್ರಖ್ಯಾತರಾದ ಅನೇಕ ರಾಜರ್ಷಿಗಳು ಉದ್ಭವಿಸಿದರು. ಅಂತಹ ಕುರುಮಹಾರಾಜನಿಗೆ ಸುಧನ್ವ ಮತ್ತು ಜಹ್ನುವೆಂಬ ಇಬ್ಬರು ಕುಮಾರರು ಜನಿಸಿದರು

೨೧೩. ಅದೇ ವಂಶದಲ್ಲಿ(ಯೇ) ಶತ್ರುಸಂಹಾರಕನೂ, ಮಹಾತೇಜಸ್ವಿಯೂ, ಪರಮಧಾರ್ಮಿಕನೂ ಆದ ಪರೀಕ್ಷಿನ್ಮಹಾರಾಜನು ಉದ್ಭವಿಸಿದನು. ಆ ಸುಧನ್ವ ಮಹಾರಾಜನಿಗೆ ಜ್ಞಾನಿಯಾದ ಸುಹೋತ್ರನೆಂಬ ಸುತನು ಜನಿಸಿ ಮಾನ್ಯನಾಗಿದ್ದನು.

೨೧೪. ಆ ಸುಹೋತ್ರನಿಗೆ ಧರ್ಮಾರ್ಥಗಳಲ್ಲಿ ಕುಶಲನಾದ ಚ್ಯವನನೆಂಬ ರಾಜಕುಮಾರನೂ, ಆ ಚ್ಯವನರಾಜನಿಗೆ ಮಹಾತೇಜಸ್ವಿಯೂ, ಮಹಾಯಾಗ ಶೀಲನೂ ಆದ ಕೃತನೆಂಬ ನಂದನನೂ ಅವತರಿಸಿದರು.

೨೧೫. ಆ ಕೃತಮಹಾರಾಜನು ಲೋಕವಿಖ್ಯಾತನೂ, ಇಂದ್ರನಿಗೆ ಮಿತ್ರನೂ, ವಿದ್ಯಾಮಾನ್ಯನೂ, ಶೂರನೂ, ಅಂತರಿಕ್ಷಚಾರಿಯೂ ಆದ ವಸುವೆಂಬ ಪುತ್ರನನ್ನು ಪಡೆದನು.

ವಿದ್ಯೋಽಪರಿಚರಾಜ್ಜಜ್ಞೇ ಗಿರಿಕಾ ಸಪ್ತ ಸೂನವಃ ।
ಮಹಾರಥೋ ಭಗಧರೋ ವಿಶ್ರುತೋ ಯೋ ಬೃಹದ್ರಥಃ ॥ ೨೧೬ ॥

ಪ್ರತ್ಯಗ್ರಹಃ ಕುಶಶ್ಚೈವ ಯಮಾಹುರ್ಮಣಿವಾಹನಂ ।
ಮಾಥೈಲ್ಯಶ್ಚ ಲಲಿತ್ಥಶ್ಚ ಮತ್ಸ್ಯಕಾಲಶ್ಚ ಸಪ್ತಮಃ ॥ ೨೧೭ ॥

ಬೃಹದ್ರಥಸ್ಯ ದಾಯಾದಃ ಕುಶಾಗ್ರೋ ನಾಮ ವಿಶ್ರುತಃ ।
ಕುಶಾಗ್ರಸ್ಯಾತ್ಮಜಶ್ಚೈವ ಋಷಭೋ ನಾಮ ವೀರ್ಯವಾನ್ ॥ ೨೧೮ ॥

ಋಷಭಸ್ಯಾಪಿ ದಾಯಾದಃ ಪುಷ್ಪವಾನ್ನಾಮ ಧಾರ್ಮಿಕಃ ।
ವಿಕ್ರಾಂತಸ್ತಸ್ಯ ದಾಯಾದೋ ರಾಜಾ ಸತ್ಯಹಿತಃ ಸ್ಮೃತಃ ॥ ೨೧೯ ॥

ತಸ್ಯ ಪುತ್ರಃ ಸುಧನ್ವಾ ಚ ತಸ್ಮಾದೂರ್ಜಃ ಪ್ರತಾಪವಾನ್ ।
ಊರ್ಜಸ್ಯನಭಸಃ ಪುತ್ರಸ್ತಸ್ಮಾಜ್ಜಜ್ಞೇ ಸ ವೀರ್ಯವಾನ್ ॥ ೨೨೦ ॥

---

೨೧೬–೨೧೭. ಆ ವಿದ್ಯೋಽಪರಿಚರನಿಗೆ ಗಿರಿಕಾನಾಮಕರಾದ ಏಳುಜನ ಮಕ್ಕಳು ಹುಟ್ಟಿದರು. ಮಹಾರಥ, ಭಗಧರ ಪ್ರಖ್ಯಾತನಾದ ಬೃಹದ್ರಥ, ಪ್ರತ್ಯಗ್ರಹ, ಮಣಿವಾಹನ, ಪ್ರಸಿದ್ಧನಾದ, ಕುಶ, ಮಾಥೈಲ್ಯ, ಲಿಲಿತ ಮತ್ತು ಮತ್ಸ್ಯಕಾಲ ಎಂಬ ಏಳುಜನ ಮಕ್ಕಳು ಉತ್ಪನ್ನರಾದರು.

೨೧೮. ಆ ಬೃಹದ್ರಥನಿಗೆ ಲೋಕಪ್ರಸಿದ್ಧನಾದ ಕುಶಾಗ್ರನೆಂಬ ಕುಮಾರನೂ, ಅವನಿಗೆ ಅತ್ಯಂತ ಶೂರನೂ, ಪಿತೃಸಮಾನನೂ ಆದ ಋಷಭನೆಂಬ ಕುಮಾರನು ಜನಿಸಿದನು.

೨೧೯. ಅಂತಹ, ಋಷಭನಿಗೆ ಪರಮಧಾರ್ಮಿಕನೂ ದಯಾಳುವೂ ಆದ ಪುಷ್ಪದಂಶನೆಂಬ ಕುಮಾರನೂ, ಅವನಿಗೆ ಪ್ರಜಾರಂಜಕನೂ, ಸತ್ಯವಂತನೂ ಆದ ವಿಕ್ರಾಂತನೆಂಬ ಮಹಾರಾಜನು ಜನಿಸಿ ಸುಪ್ರಸಿದ್ಧರಾಗಿದ್ದರು.

೨೨೦. ಆ ವಿಕ್ರಾಂತನಿಗೆ ಸುಧನ್ವಾನನೆಂಬ ಕುಮಾರನೂ, ಅವನಿಗೆ ಪ್ರತಾಪ ಶಾಲಿಯಾದ ವಾರ್ಜನೆಂಬ ಪುತ್ರನೂ, ಅವನಿಗೆ ಸಭಸನೆಂಬ ಸುತನೂ, ಅವನಿಗೆ ವೀರ್ಯವಂತನೆಂಬ ನಂದನನೂ ಜನಿಸಿದರು.

ಶಕಲೇ ದ್ವೇ ಸ ವೈ ಜಾತೋ ಜರಯಾ ಸಂಧಿತಸ್ತು ಸಃ ।
ಜರಾಸಂಧೋ ಮಹಾಬಾಹುರ್ಜರಯಾ ಸಂಧಿತಸ್ತು ಸಃ ॥ ೨೨೧ ॥

ಸರ್ವಕ್ಷತ್ರಸ್ಯ ಜೇತಾಽಸೌ ಜರಾಸಂಧೋ ಮಹಾಬಲಃ ।
ಜರಾಸಂಧಸ್ಯ ಪುತ್ರಸ್ತು ಸಹದೇವಃ ಪ್ರತಾಪವಾನ್ ॥ ೨೨೨ ॥

ಸಹದೇವಾತ್ಮಜಃ ಶ್ರೀಮಾನ್ ಸೋಮಾಧಿಃ ಸುಮಹಾತಪಾಃ ।
ಶ್ರುತಶ್ರವಸ್ತು ಸೋಮಾಧೇರ್ಮಾಗಧಃ ಪರಿಕೀರ್ತಿತಃ ॥ ೨೨೩ ॥

॥ ಸೂತ ಉವಾಚ ॥

ಪರಿಕ್ಷಿತ ದಾಯಾದೋ ಬಭೂವ ಜನಮೇಜಯಃ ।
ಶ್ರುತಸೇನಸ್ಯ ದಾಯಾದೋ ಭೀಮಸೇನೋಽಪಿ ನಾಮತಃ ॥ ೨೨೪ ॥

---

೨೨೧. ಆ ಮಹಾರಾಜನು ಜನಿಸುವಾಗ ಎರಡು ಹೋಳಾಗಿ ಇದ್ದು (ಜರೆಯಿಂದ) ಜರಾ ಎಂಬ ನಾರಿಯಿಂದ ಸೇರಿಸಲ್ಪಟ್ಟು ರಕ್ಷಿತನಾದುದರಿಂದ ಜರಾಸಂಧನೆಂದು ಪ್ರಖ್ಯಾತನಾದನು. ಅವನು ಮಹಾಭುಜಪರಾಕ್ರಮಿಯೂ, ಜರಾಸಂಧನಾಮಕನೂ ಆಗಿದ್ದನು.

೨೨೨. ಈ ಜರಾಸಂಧನು ಮಹಾಬಲಶಾಲಿಯೂ, ಸಕಲಕ್ಷತ್ರಿಯರನ್ನು ಜಯಿಸಿದವನೂ, ಆಗಿದ್ದನು. ಅಂತಹ ಜರಾಸಂಧನಿಗೆ ಪ್ರತಾಪಶಾಲಿಯಾದ ಸಹದೇವನೆಂಬ ಕುಮಾರನು ಜನಿಸಿದನು.

೨೨೩. ಅಂತಹ ಸಹದೇವನಿಗೆ ಶ್ರೀಮಂತನೂ, ಮಹಾತಪಸ್ವಿಯೂ ಆದ ಸೋಮಾಧಿಯೆಂಬ ಕುಮಾರನು ಹುಟ್ಟಿದನು. ಅಂತಹ ಸೋಮಾಧಿಗೆ ಮಗಧದೇಶಾಧಿಪತಿಯೂ, ಶ್ರುತಶ್ರವನೆಂದು ಪ್ರಖ್ಯಾತನೂ ಆದ ಕುಮಾರನು ಜನಿಸಿದನು.

೨೨೪. ಸೂತಮುನಿಯು ಹೇಳಿದನು :—ಎಲೈ ಮುನಿವರ್ಯರೇ ಪರೀಕ್ಷಿತನಿಗೆ ಜನಮೇಜಯನೆಂದು ಪ್ರಖ್ಯಾತನಾದ ರಾಜಕುಮಾರನು ಜನಿಸಿದನು. ಶ್ರುತಶ್ರವನಿಗೆ ಭೀಮಸೇನನೆಂದು ಪ್ರಸಿದ್ಧನಾದ ಪುತ್ರನು ಹುಟ್ಟಿದನು.

ಜಹ್ನುಸ್ತ್ವಜನಯತ್ಪುತ್ರಂ ಸುರಥಂ ನಾಮ ಭೂಮಿಪಂ ।
ಸುರಥಸ್ಯ ತು ದಾಯಾದೋ ವೀರೋ ರಾಜಾ ವಿದೂರಥಃ ॥ ೨೨೫ ॥

ವಿದೂರಥಸುತಶ್ಚಾಪಿ ಸಾರ್ವಭೌಮ ಇತಿ ಶ್ರುತಿಃ ।
ಸಾರ್ವಭೌಮಾಜ್ಜಯತ್ಸೇನ ಆರಾಧಿಸ್ತಸ್ಯ ಚಾತ್ಮಜಃ ॥ ೨೨೬ ॥

ಆರಾಧಿತೋ ಮಹಾಸತ್ವ ಅಯುತಾಯುಸ್ತತಃ ಸ್ಮೃತಃ ।
ಅಕ್ರೋಧನೋಽಯುತಾಯೋಸ್ತು ತಸ್ಮಾದ್ದೇವಾತಿಥಿಃ ಸ್ಮೃತಃ ॥ ೨೨೭ ॥

ದೇವಾತಿಥೇಸ್ತು ದಾಯಾದ ಋಕ್ಷ ಏವ ಬಭೂವ ಹ ।
ಭೀಮಸೇನಸ್ತಥಾ ಋಕ್ಷಾದ್ದಿಲೀಪಸ್ತಸ್ಯ ಚಾತ್ಮಜಃ ॥ ೨೨೮ ॥

ದಿಲೀಪಸೂನುಃ ಪ್ರತಿಪಸ್ತಸ್ಯ ಪುತ್ರಾಸ್ತ್ರಯಃ ಸ್ಮೃತಾಃ ।
ದೇವಾಪಿ ಶಂತನುಶ್ಚೈವ ಬಾಹ್ಲೀಕಶ್ಚೈವ ತೇ ತ್ರಯಃ ॥ ೨೨೯ ॥

---

೨೨೫. ಜಹ್ನು ಮಹಾರಾಯನಿಗೆ ಸುರಥನೆಂಬ ರಾಜಕುಮಾರನೂ, ಅವನಿಗೆ ವೀರನೂ, ರಾಜನೂ ಆದ ವಿದೂರಥನೆಂಬ ಕುಮಾರನೂ ಜನಿಸಿದರು.

೨೨೬. ಅಂತಹ ವಿದೂರಥನಿಗೆ ಸಾರ್ವಭೌಮನೆಂಬ ಮಗನೂ, ಆ ಸಾರ್ವಭೌಮನಿಗೆ ಜಯಸೇನನೆಂಬ ಪುತ್ರನೂ, ಅವನಿಗೆ ಆರಾಧಿಯೆಂಬ ಕುಮಾರನೂ ಜನಿಸಿದರು.

೨೨೭. ಆರಾಧಿತನಿಗೆ ಮಹಾಬಲಿಷ್ಠನಾದ ಆಯುತಾಯುವೆಂಬ ಕುಮಾರನೂ, ಅವನಿಗೆ ಅಕ್ರೋಧನೆಂಬ ಸುತನೂ, ಅವನಿಗೆ ದೇವಾತಿಥಿ ಎಂಬ ಪುತ್ರನೂ ಜನಿಸಿದರು.

೨೨೮. ಆ ದೇವಾತಿಥಿಗೆ ಋಕ್ಷನೆಂಬ ಮಗನೂ, ಅವನಿಗೆ ಭೀಮಸೇನನೆಂಬ ಕುಮಾರನೂ, ಅವನಿಗೆ ದಿಲೀಪನೆಂಬ ಮಹಾರಾಜನೂ ಹುಟ್ಟಿದರು.

೨೨೯. ಆ ದಿಲೀಪನಿಗೆ ಪ್ರತಿಪನೆಂಬ ಕುಮಾರನೂ, ಅವನಿಗೆ ದೇವಾಪಿ, ಶಂತನು, ಬಾಹ್ಲೀಕರೆಂಬ ಲೋಕಪ್ರಸಿದ್ಧರಾದ ಮೂವರು ಕುಮಾರರು ಜನಿಸಿದರು.

**ಬಾಹ್ಲೀಕಸ್ಯ ತು ವಿಜ್ಞೇಯಃ ಸಪ್ತಬಾಹ್ಲೀಶ್ವರೋನೃಪಃ |**
**ಬಾಹ್ಲೀಕಸ್ಯ ಸುತಶ್ಚೈವ ಸೋಮದತ್ತೋ ಮಹಾಯಶಾಃ || ೨೩೦ ||**

**ಜಜ್ಞಿರೇ ಸೋಮದತ್ತಾತ್ತು ಭೂರಿಭೂರಿಶ್ರವಾಃ ಶಲಃ |**
**ದೇವಾಪಿಸ್ತು ಪ್ರವವ್ರಾಜ ವನಂ ಧರ್ಮಪರೀಪ್ಸಯಾ || ೨೩೧ ||**

**ಉಪಾಧ್ಯಾಯಸ್ತು ದೇವಾನಾಂ ದೇವಾಪಿರಭವನ್ಮುನಿಃ |**
**ಚ್ಯವನೋಽಸ್ಯ ಹಿ ಪುತ್ರಸ್ತು ಇಷ್ಟಕಶ್ಚ ಮಹಾತ್ಮನಃ || ೨೩೨ ||**

**ಶಂತನುಸ್ತ್ವಭವದ್ರಾಜಾ ವಿದ್ವಾನ್ವೈ ಸ ಮಹಾಭಿಷಃ |**
**ಇದಂ ಚೋದಾಹರಂತ್ಯತ್ರ ಶ್ಲೋಕಂ ಪ್ರತಿ ಮಹಾಭಿಷಂ || ೨೩೩ ||**

**ಯಂ ಯಂ ರಾಜಾ ಸ್ಪೃಶತಿ ವೈ ಜೀರ್ಣಂ ಸಮಯತೋ ನರಂ |**
**ಪುನರ್ಯುವಾ ಸ ಭವತಿ ತಸ್ಮಾತ್ತಂ ಶಂತನುಂ ವಿದುಃ || ೨೩೪ ||**

---

೨೩೦. ಆ ಬಾಹ್ಲೀಕನಿಗೆ ಸಪ್ತಬಾಹ್ಲೀಶ್ವರನೆಂಬ ಮಾನ್ಯನಾದ ನೃಪ ಕುಮಾರನೂ ಆ ಕುಮಾರನಿಗೆ ಮಹಾಕೀರ್ತಿವಂತನೂ ಧರ್ಮಾತ್ಮನೂ ಆದ ಸೋಮದತ್ತನೆಂಬ ಪುತ್ರನೂ ಜನಿಸಿದರು.

೨೩೧ ಆ ಸೋಮದತ್ತನಿಗೆ ಭೂರಿ, ಭೂರಿಶ್ರವಸು, ಶಲ, ದೇವಾಪಿ ಎಂಬ ನಾಲ್ವರು ಕುಮಾರರು ಜನಿಸಿದರು. ಇವರಲ್ಲಿ ದೇವಾಪಿಯು ಸನ್ಯಾಸಿಯಾಗಿ ಧರ್ಮ ಪರಿಪಾಲನೆಗಾಗಿ ವನಕ್ಕೆ ಹೋದನು.

೨೩೨. ದೇವತೆಗಳಿಗೆ ಗುರುವಾದ ದೇವಾಪಿ ಎಂಬುವನು ಮಹಾಮುನಿಯಾದನು. ಆ ಮಹಾತ್ಮನಿಗೆ ಚ್ಯವನ, ಇಷ್ಟಕರೆಂಬ ಇಬ್ಬರು ಕುಮಾರರಿದ್ದರು.

೨೩೩. ಶಂತನು ಚಕ್ರವರ್ತಿಯು ಮಹಾಪಂಡಿತನೂ, ಮಹಾವೈದ್ಯನೂ ಆಗಿದ್ದನು. ಮಹಾತ್ಮನಾದ ಇವನ ವಿಚಾರವಾಗಿ ಜ್ಞಾನಿಗಳು ಈ ಶ್ಲೋಕವನ್ನು ಉದಾಹರಿಸುವರು.

೨೩೪. ಈ ಶಂತನು ಮಹಾರಾಯನು ಯಾವ ಯಾವ ವೃದ್ಧರನ್ನು ಸ್ಪರ್ಶಮಾಡುತ್ತಾನೆಯೋ ಅವರೆಲ್ಲರೂ ನೂತನ ಯುವಕರಾಗುವರು. ಆದುದರಿಂದ ಅವನಿಗೆ ಶಂತನು ಮಹಾರಾಜನೆಂಬ ನಾಮವು ಪ್ರಖ್ಯಾತವಾಗಿತ್ತು.

ತತೋಽಸ್ಯ ಶಂತನುತ್ವಂ ವೈ ಪ್ರಜಾಸ್ವಿಹ ಪರಿಶ್ರುತಂ ।
ಸ ಉಪಯೇಮೇ ಧರ್ಮಾತ್ಮಾ ಶಂತನುರ್ಜಾಹ್ನವೀಂ ನೃಪಃ ॥ ೨೩೫ ॥

ತಸ್ಯಾಂ ದೇವವ್ರತಂ ಭೀಷ್ಮಂ ಪುತ್ರಂ ಸೋಽಜನಯತ್ಪ್ರಭುಃ ।
ಸ ಚ ಭೀಷ್ಮ ಇತಿ ಖ್ಯಾತಃ ಪಾಂಡವಾನಾಂ ಪಿತಾಮಹಃ ॥ ೨೩೬ ॥

ಕಾಲೇ ವಿಚಿತ್ರವೀರ್ಯಂ ತು ಶಂತನುರ್ಜನಯತ್ಸುತಂ ।
ಶಂತನೋರ್ದಯಿತಂ ಪುತ್ರಂ ಪ್ರಜಾಹಿತಕರಂ ಪ್ರಭುಂ ॥
ಕೃಷ್ಣದ್ವೈಪಾಯನಶ್ಚೈವ ಕ್ಷೇತ್ರೇ ವೈಚಿತ್ರವೀರ್ಯಕೇ ॥ ೨೩೭ ॥

ಧೃತರಾಷ್ಟ್ರಂ ಚ ಪಾಂಡುಂ ಚ ವಿದುರಂಚಾಪ್ಯಜೀಜನತ್ ।
ಧೃತರಾಷ್ಟ್ರಾತ್ತು ಗಾಂಧಾರೀ ಪುತ್ರಾಣಾಂ ಸುಷುವೇ ಶತಂ ॥ ೨೩೮ ॥

---

೨೩೫. ಆದುದರಿಂದ (ಶಂತನು) ಸುಖಕರವಾದ ಶರೀರವನ್ನು ಕೊಡತಕ್ಕವನೆಂದು ಪ್ರಖ್ಯಾತನಾದನು. ಧರ್ಮಾತ್ಮನಾದ ಶಂತಮಹಾರಾಜನು ಗಂಗಾದೇವಿಯನ್ನು ಮದುವೆಯಾದನು.

೨೩೬. ಶಂತನುರಾಯನು ಗಂಗಾದೇವಿಯಲ್ಲಿ ಭೀಷ್ಮನೆಂದು ಪ್ರಖ್ಯಾತಿಗೊಂಡ ದೇವವ್ರತನೆಂಬ ಪುತ್ರನನ್ನು ಪಡೆದನು. ಆ ದೇವವ್ರತನು ಭೀಷ್ಮನೆಂದು ಹೆಸರನ್ನು ಪಡೆದು ಪ್ರಸಿದ್ಧನಾಗಿ ಪಾಂಡವರಿಗೆ ಪಿತಾಮಹನಾಗಿದ್ದನು.

೨೩೭. ಕೆಲವು ಕಾಲದ ಮೇಲೆ ಶಂತನುಮಹಾರಾಜನಿಗೆ ವಿಚಿತ್ರವೀರ್ಯನೆಂಬ ಕುಮಾರನು ಜನಿಸಿದನು. ಅವನು ಶಂತನುವಿಗೆ ಅತ್ಯಂತ ಪ್ರಿಯಕುಮಾರನಾಗಿಯೂ, ಪ್ರಜಾಹಿತಕರನಾಗಿಯೂ, ಪ್ರಭುವಾಗಿಯೂ ಇದ್ದನು. ಅವನಿಗೆ ಪ್ರಿಯಪತ್ನಿಯಾದ ಸತ್ಯವತೀದೇವಿಯಲ್ಲಿ ಕೃಷ್ಣದ್ವೈಪಾಯನನಾಮಕರಾದ ವೇದವ್ಯಾಸರು ಅವತರಿಸಿದರು.

೨೩೮. ಆ ವಿಚಿತ್ರವೀರ್ಯನಿಗೆ ಧೃತರಾಷ್ಟ್ರ, ಪಾಂಡು ಮತ್ತು ವಿದುರನೆಂಬ ಮೂವರು ಕುಮಾರರು ಜನಿಸಿದರು. ಅವರಲ್ಲಿ ಧೃತರಾಷ್ಟ್ರಮಹಾರಾಜನಿಗೆ ಗಾಂಧಾರೀದೇವಿಯಲ್ಲಿ ನೂರುಜನ ಕುಮಾರರು ಉದ್ಭವಿಸಿದರು.

ತೇಷಾಂ ದುರ್ಯೋಧನೋ ಜ್ಯೇಷ್ಠಃ ಸರ್ವಕ್ಷತ್ರಸ್ಯ ಸ ಪ್ರಭುಃ ।
ಮಾದ್ರೀ ರಾಜ್ಞೀ ಪೃಥಾ ಚೈವ ಪಾಂಡೋರ್ಭಾರ್ಯೇ ಬಭೂವತುಃ ॥

ದೇವದತ್ತಾಃ ಸುತಾಸ್ತಾಭ್ಯಾಂ ಪಾಂಡೋರರ್ಥೇ ವಿಜಜ್ಞಿರೇ ।
ಧರ್ಮಾದ್ಯುಧಿಷ್ಠಿರೋ ಜಜ್ಞೇ ವಾಯೋರ್ಜಜ್ಞೇ ವೃಕೋದರಃ ॥ ೨೪೦ ॥

ಇಂದ್ರಾದ್ಧನಂಜಯೋ ಜಜ್ಞೇ ಶಕ್ರತುಲ್ಯಪರಾಕ್ರಮಃ ।
ಅಶ್ವಿಭ್ಯಾಂ ಸಹ ದೇವಶ್ಚ ನಕುಲಶ್ಚಾಪಿ ಮಾದ್ರಿಜೌ ॥ ೨೪೧ ॥

ಪಂಚೈವ ಪಾಂಡವೇಭ್ಯಶ್ಚ ದ್ರೌಪದ್ಯಾಂ ಜಜ್ಞಿರೇ ಸುತಾಃ ।
ದ್ರೌಪದ್ಯಜನಯಜ್ಜ್ಯೇಷ್ಠಂ ಶ್ರುತಿವಿದ್ಧಂ ಯುಧಿಷ್ಠಿರಾತ್ ॥ ೨೪೨ ॥

ಹಿಡಂಬಾ ಭೀಮಸೇನಾತ್ತು ಜಜ್ಞೇ ಪುತ್ರಂ ಘಟೋತ್ಕಚಂ ।
ಕಾಶ್ಯಾಃ ಪುನರ್ಭೀಮಸೇನಾಜ್ಜಜ್ಞೇ ಸರ್ವವೃಕಂ ಸುತಂ ॥ ೨೪೩ ॥

---

೨೩೯. ಆ ಕುಮಾರರಲ್ಲಿ ಧುರ್ಯೋಧನನು ಹಿರಿಯ ಕುಮಾರನಾಗಿಯೂ ಸರ್ವ ಕ್ಷತ್ರಿಯರಿಗೆ ಪ್ರಭುವಾಗಿಯೂ ಇದ್ದನು. ಪಾಂಡುಮಹಾರಾಜನಿಗೆ ಕುಂತೀ, ಮಾದ್ರೀ ಎಂಬ ಇಬ್ಬರು ಹೆಂಡತಿಯರಿದ್ದರು.

೨೪೦-೨೪೧. ಪಾಂಡುಮಹಾರಾಜನಿಗೆ ದೇವತೆಗಳ ಅನುಗ್ರಹದಿಂದ ಲಬ್ಧರಾದ ಕುಮಾರರಿದ್ದರು. ಯಮಧರ್ಮನಿಂದ ಯುಧಿಷ್ಠಿರ ಮಹಾರಾಜನೂ, ವಾಯುದೇವನಿಂದ ಭೀಮಸೇನನೆಂಬ ಕುಮಾರನೂ ಜನಿಸಿದರು. ಇಂದ್ರನಿಂದ ಅರ್ಜುನನು ಉತ್ಪನ್ನನಾದನು. ಅವನು ಇಂದ್ರನಿಗೆ ಸಮಾನವಾದ ಶೂರನೂ ಆಗಿದ್ದನು. ಅಶ್ವಿನೀದೇವತೆಗಳಿಂದ ಮಾದ್ರೀದೇವಿಯಲ್ಲಿ ನಕುಲ, ಸಹದೇವರೆಂಬ ಇಬ್ಬರು ಪುತ್ರರು ಜನಿಸಿದರು.

೨೪೨-೨೪೩. ಪಂಚಪಾಂಡವರಿಗೆ ದ್ರೌಪದಿಯಲ್ಲಿ ಐದುಜನ ಮಕ್ಕಳು ಜನಿಸಿದರು. ದ್ರೌಪದೀದೇವಿಯು ಯುಧಿಷ್ಠಿರನಿಂದ ಶ್ರುತಿವಿದ್ಧನೆಂಬ ಜ್ಯೇಷ್ಠಕುಮಾರನನ್ನು ಪಡೆದಳು. ಹಿಡಿಂಬಿಯು ಭೀಮಸೇನನಿಂದ ಘಟೋತ್ಕಚನೆಂಬ ಪುತ್ರನನ್ನು ಪಡೆದಳು ಮತ್ತು ಭೀಮಸೇನನಿಗೆ ಕಾಶೀನಾಮಕಳಾದ ಭಾರ್ಯೆಯಲ್ಲಿ ಸರ್ವವೃಕನೆಂಬ ಸುಪ್ರಸಿದ್ಧನಾದ ಕುಮಾರನನ್ನು ಉದ್ಭವಿಸಿದನು.

**ಸುಹೋತ್ರಂ ವಿಜಯಾ ಮಾದ್ರೀ ಸಹದೇವಾದಜಾಯತ ।**
**ಕರೇಮತ್ಯಾಂತು ವೈದ್ಯಾಯಾಂ ನಿರಮಿತ್ರಸ್ತು ಲಾಂಗಲಿಃ ॥ ೨೪೪ ॥**

**ಸುಭದ್ರಾಯಾಂ ರಥೀ ಪಾರ್ಥಾದಭಿಮನ್ಯುರಜಾಯತ ।**
**ಉತ್ತರಾಯಾಂತು ವೈರಾಟ್ಯಾಂ ಪರಿಕ್ಷಿದಭಿಮನ್ಯುಜಃ ॥ ೨೪೫ ॥**

**ಪರಿಕ್ಷಿತಸ್ತು ದಾಯಾದೋ ರಾಜಾಸೀಜ್ಜನಮೇಜಯಃ ।**
**ಬ್ರಾಹ್ಮಣಾನ್ ಸ್ಥಾಪಯಾಮಾಸ ಸ ವೈ ವಾಜಸನೇಯಿಕಾನ್ ॥ ೨೪೬ ॥**

**ಅಸಪತ್ನಂ ತದಾಮರ್ಷಾದ್ವೈಶಂಪಾಯನ ಏವ ತು ।**
**ನಸ್ಥಾಸ್ಯತೀಹ ದುರ್ಬುದ್ಧೇ ತವೈತದ್ವಚನಂ ಭುವಿ ॥ ೨೪೭ ॥**

---

೨೪೪. ವಿಜಯಳೆಂದು ಪ್ರಖ್ಯಾತಳಾದ ಮಾದ್ರೀದೇವಿಯಲ್ಲಿ ಸುಹೋತ್ರನೆಂಬ ಕುಮಾರನನ್ನು ಸಹದೇವನು ಪಡೆದನು. ನಕುಲನು ಕರೇಮತಿನಾಮಕಳಾದ ವೈದ್ಯಾದೇವಿಯಲ್ಲಿ ನಿರಮಿತ್ರನಾಮಕಲಾಂಗಲಿಯನ್ನು ಹೊಂದಿದನು.

೨೪೫. ಅರ್ಜುನನಿಗೆ ಸುಭದ್ರೆಯಲ್ಲಿ ಮಹಾರಥಿಕನಾದ ಅಭಿಮನ್ಯುವೆಂಬ ಕುಮಾರನು ಉದ್ಭವಿಸಿದನು. ಆ ಅಭಿಮನ್ಯುವಿಗೆ ವಿರಾಟ್ರಾಜನ ಕುಮಾರಿಯಾದ ಉತ್ತರೆಯಲ್ಲಿ ಪರಿಕ್ಷಿದ್ರಾಜನೆಂಬ ಸುತನು ಉದ್ಭವಿಸಿದನು.

೨೪೬. ಪರಿಕ್ಷಿನ್ಮಹಾರಾಜನಿಗೆ ಜನಮೇಜಯನೆಂಬ ರಾಜಕುಮಾರನು ಜನಿಸಿದನು. ಆ ಜನಮೇಜಯಮಹಾರಾಜನು ವಾಜಸನೇಯಿಕರೆಂಬ ಬ್ರಾಹ್ಮಣರನ್ನು ಸ್ಥಾಪಿಸಿದನು.

೨೪೭. ಅವನು ಶತ್ರುಗಳಿಲ್ಲದೇ ನಿಷ್ಕಂಟಕವಾಗಿ ಪಾಲಿಸುತ್ತಿರಲಾಗಿ ಅವನ ಮೇಲಿನ ದ್ವೇಷದಿಂದ ವೈಶಂಪಾಯನನು ವಿರೋಧಿಯಾದನು. ಆಗ ಅವನು ಎಲೈ ದುರ್ಬುದ್ಧಿಯೇ ನಾನು ಇರುವವರೆಗೂ ಈ ಭೂಮಿಯಲ್ಲಿ ನಿನ್ನ ಮಾತು ನಿಲ್ಲುವದಿಲ್ಲವೆಂದು ಹೇಳಿದನು.

**ಯಾವತ್ ಸ್ಥಾಸ್ಯಾಮ್ಯಹಂ ಲೋಕೇ ತಾವನ್ನೈತತ್ಪ್ರಶಸ್ಯತೇ |**
**ಅಭಿತಃ ಸಂಸ್ಥಿತಶ್ಚಾಪಿ ತತಃ ಸ ಜನಮೇಜಯಃ || ೨೪೮ ||**

**ಪೌರ್ಣಮಾಸ್ಯೇನ ಹವಿಷಾ ದೇವಮಿಷ್ಟ್ವಾ ಪ್ರಜಾಪತಿಂ |**
**ವಿಜ್ಞಾಯ ಸಂಸ್ಥಿತೋಽಪಶ್ಯತ್ತದ್ವಧೀಷ್ಟಾಂ ವಿಭೋರ್ಮುಖೇ || ೨೪೯ ||**

**ಪರಿಕ್ಷಿತ್ತನಯಶ್ಚಾಪಿ ಪೌರವೋ ಜನಮೇಜಯಃ |**
**ದ್ವಿರಶ್ವಮೇಧಮಾಹೃತ್ಯ ತತೋ ವಾಜಸನೇಯಕಂ ||**
**ಪ್ರವರ್ತಯಿತ್ವಾ ತದ್ಬ್ರಹ್ಮ ತ್ರಿಖರ್ವೀ ಜನಮೇಜಯಃ || ೨೫೦ ||**

**ಸರ್ವಮಶ್ವಕಮುಖ್ಯಾನಾಂ ಸರ್ವಮಂಗನಿವಾಸಿನಾಂ |**
**ಸರ್ವಂಚ ಮಧ್ಯದೇಶಾನಾಂ ತ್ರಿಖರ್ವೀ ಜನಮೇಜಯಃ ||**
**ವಿಷಾದಾಬ್ಬ್ರಾಹ್ಮಣೈಃ ಸ್ಪಾರ್ಧಮಭಿಶಸ್ತಃ ಕ್ಷಯಂ ಯಯೌ || ೨೫೧ ||**

---

೨೪೮. ನಾನು ಈ ಲೋಕದಲ್ಲಿರುವ ವರೆಗೂ ಈ ಸಿನ್ನ ವೀರವಾಣಿಯು ಯೋಗ್ಯವಾಗುವದಿಲ್ಲ ಎಲ್ಲೆಲ್ಲಿಯೂ ನಾನು ಜಾಗರೂಕನಾಗಿರುವಲ್ಲಿ ಈ ವಾಕ್ಯವು ಸರಿಯಾಗುವುದಿಲ್ಲ.

೨೪೯. ಆಗ ಜನಮೇಜಯನು ಹುಣ್ಣಿಮೆಯಲ್ಲಿ ಬ್ರಹ್ಮನ ಉದ್ದೇಶ್ಯಕವಾಗಿ ಹವಿಸ್ಸುಗಳನ್ನು ಕೊಟ್ಟು ಅಭೀಷ್ಟಗಳನ್ನು ಪಡೆದು ಪ್ರಕಾಶಿಸಿದನು. ಆ ಯಾಗದಿಂದ ಅವನು ಇಷ್ಟಾರ್ಥಗಳನ್ನು ಪಡೆದನು.

೨೫೦. ಪುರುವಂಶೋತ್ಪನ್ನನೂ, ಪರೀಕ್ಷಿದ್ರಾಜಕುಮಾರನೂ ಆದ ಜನಮೇಜಯ ಮಹಾರಾಜನು ಎರಡುಸಲ ಅಶ್ವಮೇಧಯಾಗವನ್ನು ಮಾಡಿ ವಾಜಸನೇಯಕವೆಂಬ ಯಾಗವನ್ನು ಪ್ರಾರಂಭಿಸಿ ಬ್ರಹ್ಮನನ್ನು ಧ್ಯಾನಮಾಡುತ್ತಾ ತ್ರಿಖರ್ವನೆಂದು ಪ್ರಖ್ಯಾತನಾದನು.

೨೫೧. ಜನಮೇಜಯನು ಅಶ್ವಕಮುಖ್ಯರು, ಅಂಗದೇಶನಿವಾಸಿಗಳು ಮತ್ತು ಮಧ್ಯದೇಶದವರು ಇವರ ಅಹಂಕಾರಗಳನ್ನು ಭಂಜನಮಾಡಿದ್ದರಿಂದ ಅವನಿಗೆ ತ್ರಿಖರ್ವನೆಂಬ ನಾಮವು ಪ್ರಖ್ಯಾತವಾಗಿತ್ತು. ತರುವಾಯ ಖಿನ್ನರಾದ ಬ್ರಾಹ್ಮಣರ ಶಾಪಕ್ಕೆ ಒಳಗಾಗಿ ಕ್ಷಯವನ್ನು ಹೊಂದಿದನು.

ತಸ್ಯ ಪುತ್ರಃ ಶತಾನೀಕೋ ಬಲವಾನ್ ಸತ್ಯವಿಕ್ರಮಃ ।
ತತಃ ಸುತಂ ಶತಾನೀಕಂ ವಿಪ್ರಾಸ್ತಮಭ್ಯಷೇಚಯತ್ ॥ ೨೫೨ ॥

ಪುತ್ರೋಽಶ್ವಮೇಧದತ್ತೋಽಭೂಚ್ಛತಾನೀಕಸ್ಯ ವೀರ್ಯವಾನ್ ।
ಪುತ್ರೋಽಶ್ವಮೇಧದತ್ತಾದ್ವೈ ಜಾತಃ ಪರಪುರಂಜಯಃ ॥ ೨೫೩ ॥

ಅಧಿಸಾಮಕೃಷ್ಣೋ ಧರ್ಮಾತ್ಮಾ ಸಾಂಪ್ರತೋಽಯಂ ಮಹಾಯಶಾಃ ।
ಯಸ್ಮಿನ್ ಪ್ರಶಾಸತಿ ಮಹೀಂ ಯುಷ್ಮಾಭಿರಿದಮಾಹೃತಂ ॥ ೨೫೪ ॥

ದುರಾಪಂ ದೀರ್ಘಸತ್ರಂ ವೈ ತ್ರೀಣಿ ವರ್ಷಾಣಿ ದುಶ್ಚರಂ ।
ವರ್ಷದ್ವಯಂ ಕುರುಕ್ಷೇತ್ರೇ ದೃಷದ್ವತ್ಯಾಂ ದ್ವಿಜೋತ್ತಮಾಃ ॥ ೨೫೫ ॥

---

೨೫೨. ಆ ಜನಮೇಜಯ ಮಹಾರಾಜನಿಗೆ ಬಲವಂತನೂ, ಸತ್ಯವಿಕ್ರಮನೂ ಆದ ಶತಾನೀಕನೆಂಬ ಕುಮಾರನು ಹುಟ್ಟಿದನು. ಆಗ ಬ್ರಾಹ್ಮಣರೆಲ್ಲರೂ ಸೇರಿ ಶತಾನೀಕನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು.

೨೫೩–೨೫೪. ಅಂತಹ ಶತಾನೀಕನಿಗೆ ಶೂರನಾದ ಅಶ್ವಮೇಧದತ್ತನೆಂಬ ಕುಮಾರನೂ ಅವನಿಗೆ ಶತ್ರುಸಂಹಾರಕನೂ, ಅರಿಪುರಭಂಜಕನೂ, ಧರ್ಮಾತ್ಮನೂ, ಮಹಾಕೀರ್ತಿವಂತನೂ ಈಗ ರಾಜ್ಯಪಾಲಕನೂ ಆದ ಅಧಿಸಾಮಕೃಷ್ಣನೆಂಬ ಮಹಾರಾಜನು ಉದ್ಭವಿಸಿದನು. ಆ ಮಹಾರಾಜನು ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿರುವುದರಿಂದ ನೀವು ಈ ಮಹಾಯಾಗವನ್ನು ನಿಷ್ಕಂಟಕವಾಗಿ ಮಾಡುತ್ತಿರುವಿರೆಂದು ಸೂತನು ಮುನಿಗಳಿಗೆ ಹೇಳಿದನು.

೨೫೫. ಎಲೈ ವಿಪ್ರೋತ್ತಮರೇ, ಮಹರ್ಷಿಗಳು ದೃಷದ್ವತೀತೀರದಲ್ಲಿರುವ ಕುರುಕ್ಷೇತ್ರದಲ್ಲಿ ಮೂರು ವರ್ಷಗಳವರೆಗೂ ಇತರರಿಂದ ಮಾಡಲಶಕ್ಯವೂ, ಅಮೂಲ್ಯವೂ, ಅಸದೃಶವೂ ಆದ ದೀರ್ಘಕಾಲಿಕಯಾಗವನ್ನು ಮಾಡುತ್ತಿರುವಿರೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

॥ ಋಷಯ ಊಚುಃ ॥

ಶ್ರೋತುಂ ಭವಿಷ್ಯಮಿಚ್ಛಾಮಃ ಪ್ರಜಾನಾಂ ವೈ ಮಹಾಮತೇ ।
ಸೂತ ಸಾರ್ಧಂ ನೃಪೈರ್ಭಾವ್ಯಂ ವ್ಯತೀತಂ ಕೀರ್ತಿತಂ ತ್ವಯಾ ॥ ೨೫೬ ॥

ಯತ್ತು ಸಂಸ್ಥಾಸ್ಯತೇ ಕೃತ್ಯಮುತ್ಪತ್ಸ್ಯಂತಿ ಚ ಯೇ ನೃಪಾಃ ।
ವರ್ಷಾಗ್ರತೋಽಪಿ ಪ್ರಬ್ರೂಹಿ ನಾಮತಶ್ಚೈವ ತಾನ್ನೃಪಾನ್ ॥ ೨೫೭ ॥

ಕಾಲಂ ಯುಗಪ್ರಮಾಣಂಚ ಗುಣದೋಷಾ ಭವಿಷ್ಯತಃ ।
ಸುಖದುಃಖೇ ಪ್ರಜಾನಾಂಚ ಧರ್ಮತಃ ಕಾಮತೋಽರ್ಥತಃ ॥ ೨೫೮ ॥

ಏತತ್ಸರ್ವಂ ಪ್ರಸಂಖ್ಯಾಯ ಪೃಚ್ಛತಾಂ ಬ್ರೂಹಿತತ್ತ್ವತಃ ।
ಸ ಏವಮುಕ್ತೋ ಮುನಿಭಿಃ ಸೂತೋ ಬುದ್ಧಿಮತಾಂವರಃ ॥
ಆಚಚಕ್ಷೇ ಯಥಾವೃತ್ತಂ ಯಥಾದೃಷ್ಟಂ ಯಥಾಶ್ರುತಂ ॥ ೨೫೯ ॥

---

೨೫೬. ಋಷಿಗಳು ಕೇಳಿದರು:— ಎಲೈ ಮಹಾಜ್ಞಾನಿಯಾದ ಸೂತ ಮುನಿಯೇ, ಮಹಾನುಭಾವರಾದ ಪ್ರಜೆಗಳ ಭೂತಕಾಲದ ವರ್ತಮಾನಗಳನ್ನು ಕೇಳಿ ಬಹಳ ಆನಂದವಾಗಿದೆ. ಅದರಂತೆಯೇ ಮುಂದೆ ನಡೆಯುವ ರಾಜರು, ಮಹರ್ಷಿಗಳು, ಪ್ರಜೆಗಳು ಇವರ ವಿಷಯಗಳನ್ನೂ ಚರಿತ್ರೆಗಳನ್ನೂ ಕೇಳಿ ಆನಂದವನ್ನು ಪಡೆಯಬೇಕೆಂಬ ಕುತೂಹಲವು ನಮಗೆ ವಿಶೇಷವಾಗಿರುವುದು. ಆದುದರಿಂದ ಅವುಗಳನ್ನು ತಿಳಿಸಬೇಕೆಂದು ಕೇಳಿದರು

೨೫೭. ಎಲೈ ಮುನಿಯೇ, ಯುಗಗಳ ಆದಿಯಲ್ಲಿ ಯಾವ ಯಾವ ರಾಜರು ಉತ್ಪನ್ನರಾಗುವರು. ಅವರ ಕಾರ್ಯಗಳು ಯಾವುವು ? ಅವರ ನಾಮಗಳನ್ನೂ ನಡೆನುಡಿಗಳನ್ನೂ ಕ್ರಮವಾಗಿ ತಿಳಿಸಬೇಕೆಂದು ಕೇಳಿದರು.

೨೫೮. ಮುಂದೆ ಬರುವ ಯುಗಗಳ ಪ್ರಮಾಣ, ಕಾಲಸ್ವರೂಪ, ಗುಣದೋಷಗಳು, ಪ್ರಜೆಗಳ ಸುಖದುಃಖಗಳು ಮತ್ತು ಧರ್ಮಾರ್ಥಕಾಮಗಳು ಇವುಗಳನ್ನು ಕ್ರಮವಾಗಿ ನಿರೂಪಿಸಬೇಕೆಂದು ಬೇಡಿದರು.

೨೫೯. ಎಲೈ ಜ್ಞಾನಿಯೂ, ತತ್ತ್ವವೇತ್ತನೂ ಆದ ನೀನು ಇವೆಲ್ಲವನ್ನೂ ಸಂಗ್ರಹಿಸಿ ನಮಗಾಗಿ ತಿಳಿಸಬೇಕೆಂದು ಮುನಿಗಳು ಸೂತನನ್ನು ಕೇಳಿದರು. ಇವನ್ನು ಕೇಳಿದ ವಕ್ತೃಗಳಲ್ಲಿ ಉತ್ತಮನೂ, ಜ್ಞಾನಿಯೂ ಆದ ಸೂತಮುನಿಯು ಕ್ರಮವಾಗಿಯೂ, ಯಥಾಶ್ರುತವಾಗಿಯೂ, ನೋಡಿದ ರೀತಿಯಾಗಿಯೂ ಇರುವ ವಿಷಯಗಳನ್ನು ಹೇಳಲುಪಕ್ರಮಿಸಿದನು.

|| ಸೂತ ಉವಾಚ ||

ಯಥಾ ಮೇ ಕೀರ್ತಿತಂ ಸರ್ವಂ ವ್ಯಾಸೇನಾದ್ಭುತಕರ್ಮಣಾ |
ಭಾವ್ಯಂ ಕಲಿಯುಗಂಚೈವ ತಥಾ ಮನ್ವಂತರಾಣಿ ತು || ೨೬೦ ||

ಅನಾಗತಾನಿ ಸರ್ವಾಣಿ ಬ್ರುವತೋ ಮೇ ನಿಬೋಧತ |
ಅತ ಊರ್ಧ್ವಂ ಪ್ರವಿಕ್ಷ್ಯಾಮಿ ಭವಿಷ್ಯಂತಿ ನೃಪಾಸ್ತು ಯೇ || ೨೬೧ ||

ಐಲಾಂಶ್ಚೈವ ತಥೇಕ್ಷ್ವಾಕೂನ್ ಸೌದ್ಯುಮ್ನಾಂಶ್ಚೈವ ಪಾರ್ಥಿವಾನ್ |
ಯೇಷು ಸಂಸ್ಥಾಪ್ಯತೇ ಕ್ಷೇತ್ರಮೈಕ್ಷ್ವಾಕವಮಿದಂ ಶುಭಂ || ೨೬೨ ||

ತಾನ್ ಸರ್ವಾನ್ ಕೀರ್ತಯಿಷ್ಯಾಮಿ ಭವಿಷ್ಯೇ ಪಠಿತಾನ್ನೃಪಾನ್ |
ತೇಭ್ಯಃ ಪರೇ ಚ ಯೇ ಚಾನ್ಯೇ ಉತ್ಪತ್ಸ್ಯಂತೇ ಮಹೀಕ್ಷಿತಃ || ೨೬೩ ||

---

೨೬೦. ಸೂತಮುನಿಯು ಹೇಳಿದನು :—ಎಲೈ ಮುನಿವರ್ಯರೇ, ಮಹಾನುಭಾವರೂ, ಅದ್ಭುತವಾದ ಕರ್ಮಗಳೂ ಆದ ವ್ಯಾಸಮಹಾಮುನಿಗಳು ನನಗೆ ಯಾವ ಯಾವ ಸಂಗತಿಗಳನ್ನು ತಿಳಿಸಿರುವರೋ ಅಂತಹ ಕಲಿಯುಗದ ಮುಂದೆ ನಡೆಯಬೇಕಾಗುವ ವಿಷಯಗಳನ್ನೂ, ಮನ್ವಂತರಗಳನ್ನೂ ತಿಳಿಸುವೆನು ಕೇಳಿರೆಂದನು.

೨೬೧. ಎಲೈ ಮುನಿಗಳೇ, ಮುಂದೆ ನಡೆಯಬಹುದಾದ ವಿಷಯಗಳನ್ನು ಹೇಳುವೆನು ಕೇಳಿರಿ. ಈಗ ಮುಂದೆ ಬರುವ ರಾಜರ ವಿಷಯಗಳನ್ನು ತಿಳಿಸುವೆನೆಂದನು.

೨೬೨. ಐಲರಾಜರೂ, ಇಕ್ಷ್ವಾಕುಮಹಾರಾಜರೂ, ಸುದ್ಯುಮ್ನವಂಶದವರೂ ಆದ ನೃಪರನ್ನು ತಿಳಿಸುವೆನು. ಯಾವ ದೇಶದಲ್ಲಿ ಯಾವ ರಾಜರಿಂದ ಈ ಮಂಗಳಕರವಾದ ಇಕ್ಷ್ವಾಕುವಂಶವು ಸ್ಥಾಪಿತವಾಗುವುದೋ ಅದನ್ನು ತಿಳಿಸುವೆನು.

೨೬೩. ಮುಂದೆ ಯಾವ ಯಾವ ರಾಜರು ಯಾವ ಯಾವ ದೇಶದಲ್ಲಿ ಜನಿಸಿ ಕಾರ್ಯಗಳನ್ನು ಮಾಡುವರೋ, ಅವರ ತರುವಾಯ ಯಾವ ರಾಜರು ಉದ್ಭವಿಸುವರೋ ಅವರನ್ನು ಕ್ರಮಕ್ರಮವಾಗಿ ತಿಳಿಸುವೆನೆಂದನು.

ಕ್ಷತ್ರಾಃ ಪಾರಶವಾಃ ಶೂದ್ರಾಸ್ತಥಾ ಯೇ ಚ ದ್ವಿಜಾಯತಃ ।
ಅಂಧಾಃ ಶಕಾಃ ಪುಲಿಂದಾಶ್ಚ ತೂಲಿಕಾ ಯವನೈಃ ಸಹ ॥ ೨೬೪ ॥

ಕೈವರ್ತಾಭೀರಶಬರಾ ಯೇ ಚಾನ್ಯೇ ಮ್ಲೇಚ್ಛಜಾಯಃ ।
ವರ್ಷಾಗ್ರತಃ ಪ್ರವಕ್ಷ್ಯಾಮಿ ನಾಮತಶ್ಚೈವ ತಾನ್ನೃಪಾನ್ ॥ ೨೬೫ ॥

ಅಧಿಸಾಮಕೃಷ್ಣಃ ಸೋಽಯಂ ಸಾಂಪ್ರತಂ ಪೌರವಾನ್ನೃಪಃ ।
ತಸ್ಯಾನ್ವವಾಯೇ ವಕ್ಷ್ಯಾಮಿ ಭವಿಷ್ಯೇ ತಾವತೋ ನೃಪಾನ್ ॥ ೨೬೬ ॥

ಅಧಿಸಾಮಕೃಷ್ಣಪುತ್ರೋ ನಿರ್ವಕ್ರೋ ಭವಿತಾ ಕಿಲ ।
ಗಂಗಯಾ ಪಹೃತೇ ತಸ್ಮಿನ್ನಗರೇ ನಾಗಸಾಹ್ವಯೇ ॥
ತಕ್ತ್ವಾ ಚ ತಂ ಸುವಾಸಂಚ ಕೌಶಾಂಬ್ಯಾಂ ಸ ನಿವತ್ಸ್ಯತಿ ॥ ೨೬೭ ॥

---

೨೬೪-೨೬೫. ಯುಗಗಳ ಆದಿಭಾಗಗಳಲ್ಲಿ ಯಾವ ಯಾವ ಕ್ಷತ್ರಿಯರು, ಪಾರಶವರು, ಶೂದ್ರರು. ಬ್ರಾಹ್ಮಣರು, ಅಂಧರು, ಶಕರು, ಪುಲಿಂದರು, ತೂಲಿಕರು, ಯವನರು, ಕೈವರ್ತರು, ಅಭೀರರು, ಶವರರು ಮತ್ತು ಮ್ಲೇಚ್ಛರು ಇವರು ಉದ್ಭವಿಸುವರೋ, ಅವರವರ ನಾಮಗೋತ್ರಾದಿಗಳನ್ನು ಕ್ರಮವಾಗಿ ತಿಳಿಸುವೆನೆಂದನು.

೨೬೬. ಈಗ ಪುರುಮಹಾರಾಜನ ವಂಶದಲ್ಲಿ ಅಧಿನಾಮ ಕೃಷ್ಣನೆಂಬ ಮಹಾರಾಜನು ಉದ್ಭವಿಸಿ ಆಳುತ್ತಿರುವನೆಂದು ತಿಳಿಸಿರುತ್ತೇನೆಯಲ್ಲವೆ. ಆ ಮಹಾರಾಜನ ವಂಶದಲ್ಲಿ ಯಾವ ಯಾವ ರಾಜರು ಉದ್ಭವಿಸುವರೋ ಅವರನ್ನು ತಿಳಿಸುವೆನು ಕೇಳಿರೆಂದನು.

೨೬೭. ಹಸ್ತಿನಾನಗರಿಯಲ್ಲಿ ಅಧಿನಾಮಕೃಷ್ಣನ ಮಗನಾದ ನಿರ್ವಿಕ್ರನೆಂಬುವನು ರಾಜ್ಯವನ್ನಾಳುವನಷ್ಟೆ, ಆ ಹಸ್ತಿನಾಪಟ್ಟಣವು ಗಂಗಾನದಿಯಲ್ಲಿ ಮುಳುಗಿ ಹೋಗುವುದು. ಆಗ ಆ ರಾಜನು ಆ ನಗರಿಯನ್ನು ಬಿಟ್ಟು ಕೌಶಾಂಬಿಯಲ್ಲಿ ರಾಜ್ಯವನ್ನು ಪಾಲಿಸುವನು.

**ಭವಿಷ್ಯದುಷ್ಣಸ್ತತ್ಪುತ್ರ ಉಷ್ಣಾಚ್ಚಿತ್ರರಥಃ ಸ್ಮೃತಃ ।**
**ಶುಚಿದ್ರಥಶ್ಚಿತ್ರರಥಾದ್ವೃತಿಮಾಂಶ್ಚ ಶುಚೆದ್ರಥಾತ್ ॥ ೨೬೮ ॥**

**ಸುಷೇಣೋ ವೈ ಮಹಾವೀರ್ಯೋ ಭವಿಷ್ಯತಿ ಮಹಾಯಶಾಃ ।**
**ತಸ್ಮಾತ್ಸುಷೇಣಾದ್ಭವಿತಾ ಸುತೀರ್ಥೋ ನಾಮ ಪಾರ್ಥಿವಃ ॥ ೨೬೯ ॥**

**ರುಚಃ ಸುತೀರ್ಥಾದ್ಭವಿತಾ ತ್ರಿಚಕ್ಷೋ ಭವಿತಾ ತತಃ ।**
**ತ್ರಿಚಕ್ಷಸ್ಯ ತು ದಾಯಾದೋ ಭವಿತಾ ವೈ ಸುಖೀಬಲಃ ॥ ೨೭೦ ॥**

**ಸುಖೀಬಲಸುತಶ್ಚಾಪಿ ಭಾವ್ಯೋ ರಾಜಾ ಪರಿಪ್ಲುತಃ ।**
**ಪರಿಪ್ಲುತಸುತಶ್ಚಾಪಿ ಭವಿತಾ ಸುನಯೋ ನೃಪಃ ॥ ೨೭೧ ॥**

---

೨೬೮. ಆ ರಾಯನಿಗೆ ಭವಿಷ್ಯದುಷ್ಣನೆಂಬ ಕುಮಾರನೂ ಅವನಿಗೆ ಚಿತ್ರರಥನೆಂಬ ಪುತ್ರನೂ ಅವನಿಗೆ ಶುಚಿದ್ರಥನೆಂಬ ಸುತನೂ ಅವನಿಗೆ ಸುಷೇಣನೆಂಬ ನಂದನನೂ ಜನಿಸುವರು.

೨೬೯. ಆ ಸುಷೇಣಮಹಾರಾಜನು ಮಹಾವೀರ್ಯವಂತನೂ, ಅತ್ಯಂತ ಕೀರ್ತಿವಂತನೂ ಆಗುವನು. ಅವನಿಗೆ ಸುತೀರ್ಥನೆಂಬ ಪ್ರಖ್ಯಾತಿಯಾಗುವ ರಾಜಕುಮಾರನು ಜನಿಸುವನು.

೨೭೦. ಅಂತಹ ಸುತೀರ್ಥ ಮಹಾರಾಯನಿಗೆ ರುಚನೆಂಬ ತನಯನೂ, ಅವನಿಗೆ ತ್ರಿಚಕ್ಷನೆಂಬ ನಂದನನೂ, ಆ ರಾಯನಿಗೆ ಸುಖೀಬಲನೆಂಬ ಮಗನೂ ಹುಟ್ಟುವರು.

೨೭೧. ಅಂತಹ ಸುಖೀಬಲ ಮಹಾರಾಜನಿಗೆ ಪರಿಪ್ಲುತನೆಂಬ ರಾಜಕುಮಾರನೂ, ಆ ಪರಿಪ್ಲುತನಿಗೆ ಮಹಾಶೂರನಾದ ಸುನಯನೆಂಬ ನಂದನನೂ ಜನಿಸಿ ಪ್ರಖ್ಯಾತರಾಗುವರು.

**ಮೇಧಾವೀ ಸುನಯಸ್ಯಾಥ ಭವಿಷ್ಯತಿ ನರಾಧಿಪಃ ।**
**ಮೇಧಾವಿನಃ ಸುತಶ್ಚಾಪಿ ದಂತಪಾಣಿರ್ಭವಿಷ್ಯತಿ ॥ ೨೭೨ ॥**

**ದಂತಪಾಣೇರ್ನಿರಾಮಿತ್ರೋ ನಿರಾಮಿತ್ರಾಚ್ಚ ಕ್ಷೇಮಕಃ ।**
**ಪಂಚವಿಂಶನ್ನೃಪಾ ಹ್ಯೇತೇ ಭವಿಷ್ಯಾಃ ಪೂರ್ವವಂಶಜಾಃ ॥ ೨೭೩ ॥**

**ಅತ್ರಾನುವಂಶಶ್ಲೋಕೋಽಯಂ ಗೀತೋ ವಿಪ್ರೈಃ ಪುರಾವಿದೈಃ ।**
**ಬ್ರಹ್ಮಕ್ಷತ್ರಸ್ಯ ಯೋ ಯೋನಿರ್ವಂಶೋ ದೇವರ್ಷಿಸತ್ಕೃತಃ ॥ ೨೭೪ ॥**

**ಕ್ಷೇಮಕಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ।**
**ಇತ್ಯೇಷ ಪೌರವೋ ವಂಶೋ ಯಥಾವದನುಕೀರ್ತಿತಃ ॥ ೨೭೫ ॥**

**ಧೀಮತಃ ಪಾಂಡುಪುತ್ರಸ್ಯ ಹ್ಯರ್ಜುನಸ್ಯ ಮಹಾತ್ಮನಃ ।**
**ಅತ ಊರ್ಧ್ವಂ ಪ್ರವಕ್ಷ್ಯಾಮಿ ಇಕ್ಷ್ವಾಕೂಣಾಂ ಮಹಾತ್ಮನಾಂ ॥೨೭೬॥**

---

೨೭೨–೨೭೩. ಆ ಸುನಯನಿಗೆ ಮೇಧಾವಿಯೆಂಬ ರಾಜಕುಮಾರನೂ, ಆ ಮೇಧಾವಿಗೆ ದಂಡಪಾಣಿಯೆಂಬ ತನಯನೂ ಜನಿಸುವರು. ಆ ದಂಡಪಾಣಿಗೆ ನಿರಾಮಿತ್ರನೆಂಬ ಪುತ್ರರೂ, ಅವನಿಗೆ ಕ್ಷೇಮಕನೆಂಬ ಮಹಾರಾಜನೂ ಜನಿಸುವರು. ಈ ಮೇಲೆ ಹೇಳಿರುವ ಇಪ್ಪತ್ತೈದುಜನ ರಾಜಕುಮಾರರು ಪೂರ್ವಿಕರ ವಂಶದಲ್ಲಿ ಉದ್ಭವಿಸುವರು

೨೭೪–೨೭೫. ಈ ವಿಷಯದಲ್ಲಿ ಜ್ಞಾನಿಗಳಾದ ಪೂರ್ವಿಕರು ರಾಜವಂಶ ವರ್ಣನೆಯೆಂಬ ಈ ಪದ್ಯವನ್ನು ಹೇಳಿರುವರು ಬ್ರಾಹ್ಮಣ ಕ್ಷತ್ರಿಯರ ವಂಶವು ದೇವರ್ಷಿಗಳಿಂದ ಮಾನ್ಯವಾಗಿದೆ. ಹೀಗೆ ಪುರುಮಹಾರಾಜನ ವಂಶವು ಕಲಿಯುಗದಲ್ಲಿ ಕ್ಷೇಮಕ ಮಹಾರಾಜನವರೆಗೂ ಸ್ಥಿರವಾಗಿಯೂ, ಸುಪ್ರಸಿದ್ಧವಾಗಿಯೂ ಇರುವುದು. ಈ ರೀತಿಯಾಗಿ ಪೌರವವಂಶವು ಪ್ರಖ್ಯಾತಿಯಾಗುವುದೆಂಬ ಅಂಶವನ್ನು ಕ್ರಮವಾಗಿ ನಿಮಗೆ ತಿಳಿಸಿರುವೆನೆಂದನು.

೨೭೬. ಎಲೈ ಮುನಿವರ್ಯರೇ, ಈಗ ಜ್ಞಾನಿಯೂ, ಮಹಾತ್ಮನೂ, ಪಾಂಡುರಾಜನ ಕುಮಾರನೂ ಆದ ಅರ್ಜುನನ ವಂಶವನ್ನೂ ಮತ್ತು ಮಹಾತ್ಮರಾದ ಇಕ್ಷ್ವಾಕು ಮಹಾರಾಜರ ವಂಶವನ್ನೂ ತಿಳಿಸುವೆನು ಕೇಳಿರೆಂದನು.

ಬೃಹದ್ರಥಸ್ಯ ದಾಯಾದೋ ವೀರೋ ರಾಜಾ ಬೃಹತ್ ಕ್ಷಯಃ ।
ತತಃ ಕ್ಷಯಃ ಸುತಸ್ತಸ್ಯ ವತ್ಸವ್ಯೂಹಸ್ತತಃ ಕ್ಷಯಾತ್ ॥ ೨೭೭ ॥

ವತ್ಸವ್ಯೂಹಾತ್ಪ್ರತಿವ್ಯೂಹಸ್ತಸ್ಯ ಪುತ್ರೋ ದಿವಾಕರಃ ।
ಯಶ್ಚ ಸಾಂಪ್ರತಮಧ್ಯಾಸ್ತ ಅಯೋಧ್ಯಾಂ ನಗರೀಂ ನೃಪಃ ॥ ೨೭೮ ॥

ದಿವಾಕರಸ್ಯ ಭವಿತಾ ಸಹದೇವೋ ಮಹಾಯಶಾಃ ।
ಸಹದೇವಸ್ಯ ದಾಯಾದೋ ಬೃಹದಶ್ವೋ ಭವಿಷ್ಯತಿ ॥ ೨೭೯ ॥

ತಸ್ಯ ಭಾನುರಥೋ ಭಾವ್ಯಾ ಪ್ರತೀತಾಶ್ವಸ್ಯ ತತ್ಸುತಃ ।
ಪ್ರತೀತಾಶ್ವಸುತಶ್ಚಾಪಿ ಸುಪ್ರತೀತೋ ಭವಿಷ್ಯತಿ ॥ ೨೮೦ ॥

ಸಹದೇವಃ ಸುತಸ್ತಸ್ಯ ಸುನಕ್ಷತ್ರಶ್ಚ ತತ್ಸುತಃ ॥ ೨೮೧ ॥

---

೨೭೭. ಪ್ರಖ್ಯಾತನಾದ ಬೃಹದ್ರಥನಿಗೆ ವೀರನೂ, ದಯಾಪರನೂ ಆದ ಬೃಹತ್ಕ್ಷಯನೆಂಬ ರಾಜಕುಮಾರನೂ, ಅವನಿಗೆ ಕ್ಷಯನೆಂಬ ಪುತ್ರನೂ, ಅವನಿಗೆ ವತ್ಸವ್ಯೂಹನೆಂಬ ಸುತನೂ ಉತ್ಪನ್ನರಾಗುವರು.

೨೭೮. ಆ ವತ್ಸವ್ಯೂಹನಿಗೆ ಪ್ರತಿವ್ಯೂಹನೆಂಬ ತನಯನೂ, ಅವನಿಗೆ ದಿವಾಕರನೆಂಬ ಪುತ್ರನೂ ಉತ್ಪನ್ನರಾಗುವರು. ಆ ದಿವಾಕರ ಮಹಾಪ್ರಭುವೇ, ಈಗ ಅಯೋಧ್ಯಾನಗರಿಯಲ್ಲಿ ರಾಜನಾಗಿ ಧರ್ಮದಿಂದ ಪ್ರಜೆಗಳನ್ನು ಆಳುವನು.

೨೭೯. ಅಂತಹ ದಿವಾಕರ ಮಹಾರಾಜನಿಗೆ ಸಹದೇವನೆಂಬ ಕೀರ್ತಿಯುತನೂ, ಧರ್ಮಾತ್ಮನೂ ಆದ ಕುಮಾರನೂ, ಆ ಸಹದೇವನಿಗೆ ಬೃಹದಶ್ವನೆಂಬ ರಾಜಪುತ್ರನೂ ಉದ್ಭವಿಸುವರು.

೨೮೦. ಆ ಬೃಹದಶ್ವನಿಗೆ ಭಾನುರಥನೆಂಬ ಮಗನೂ, ಅವನಿಗೆ ಪ್ರತೀತಾಶ್ವನೆಂಬ ಪುತ್ರನೂ, ಆ ಪ್ರತೀತಾಶ್ವನಿಗೆ ಸುಪ್ರತೀತನೆಂಬ ಕುಮಾರನೂ ಜನಿಸುವರು.

೨೮೧. ಆ ಸುಪ್ರತೀತನೆಂಬ ಮಹಾರಾಯನಿಗೆ ಸಹದೇವನೆಂಬ ಕುಮಾರನೂ, ಆ ಸಹದೇವ ಮಹಾರಾಯನಿಗೆ ಸುನಕ್ಷತ್ರನೆಂಬ ಪುತ್ರರೂ ಉದ್ಭವಿಸುವರು.

ಕಿನ್ನರಸ್ತು ಸುನಕ್ಷತ್ರಾದ್ಭವಿಷ್ಯತಿ ಪರಂತಪಃ ।
ಭವಿತಾ ಚಾಂತರಿಕ್ಷಸ್ತು ಕಿನ್ನರಸ್ಯ ಸುತೋ ಭವಾ಼ || ೨೮೨ ||

ಅಂತರಿಕ್ಷಾತ್ಸುಪರ್ಣಸ್ತು ಸುಪರ್ಣಾಚ್ಚಾಪ್ಯಮಿತ್ರಜಿತ್ ।
ಪುತ್ರಸ್ತಸ್ಯ ಭರದ್ವಾಜೋ ಧರ್ಮಿ಼ ತಸ್ಯ ಸುತಃ ಸ್ಮೃತಃ ||
ಪುತ್ರಃ ಕೃತಂಜಯೋ ನಾಮ ಧರ್ಮಿಣಃ ಸ ಭವಿಷ್ಯತಿ ।
ಕೃತಂಜಯಸುತೋ ವ್ರಾತೋ ತಸ್ಯ ಪುತ್ರೋ ರಣಂಜಯಃ || ೨೮೩ ||

ಭವಿತಾ ಸಂಜಯಶ್ಚಾಪಿ ವೀರೋ ರಾಜಾ ರಣಂಜಯಾತ್ ।
ಸಂಜಯಸ್ಯ ಸುತಃ ಶಾಕ್ಯಃ ಶಾಕ್ಯಾಚ್ಛುದ್ಧೋದನೋಽಭವತ್ || ೨೮೪ ||

ಶುದ್ಧೋದನಸ್ಯ ಭವಿತಾ ಶಾಕ್ಯಾರ್ಥೇ ರಾಹುಲಃ ಸ್ಮೃತಃ ।
ಪ್ರಸೇನಜಿತ್ತತೋ ಭಾವ್ಯಃ ಕ್ಷುದ್ರಕೋ ಭವಿತಾ ತತಃ || ೨೮೫ ||

---

೨೮೨. ಆ ಸುನಕ್ಷತ್ರನಿಗೆ ಶತ್ರುಸಂತಾಪಕರನಾದ ಕಿನ್ನರನೆಂಬ ಪುತ್ರನೂ, ಅವನಿಗೆ ಅಂತರಿಕ್ಷನೆಂಬ ಸುತನೂ ಉದ್ಭವಿಸುವರು. ಆ ಅಂತರಿಕ್ಷನು ಮಹಾತ್ಮನೂ, ಧರ್ಮಾತ್ಮನೂ ಆಗುವನು.

೨೮೩. ಆ ಅಂತರಿಕ್ಷನಿಗೆ ಸುಪರ್ಣನೆಂಬ ಸುತನೂ, ಅವನಿಗೆ ಅಮಿತ್ರಜಿತನೆಂಬ ಕುಮಾರನೂ, ಅವನಿಗೆ ಭರದ್ವಾಜನೆಂಬ ಪುತ್ರನೂ, ಅವನಿಗೆ ಧರ್ಮಿಣನೆಂಬ ತನಯನೂ, ಅವನಿಗೆ ಕೃತಂಜಯನೆಂಬ ಸುತನೂ, ಅವನಿಗೆ ವ್ರಾತನೆಂಬ ನಂದನನೂ, ಅವನಿಗೆ ರಣಂಜಯನೆಂಬ ಮಗನೂ ಉದ್ಭವಿಸುವರು.

೭೮೪. ಆ ರಣಂಜಯನಿಗೆ ವೀರನೂ, ಖ್ಯಾತನೂ ಆದ ಸಂಜಯನೆಂಬ ಮಗನೂ, ಅವನಿಗೆ ಶಾಕ್ಯನೆಂಬ ಸುತನೂ, ಅವನಿಗೆ ಶುದ್ಧೋದನನೆಂಬ ನಂದನನೂ ಉದ್ಭವಿಸುವರು.

೨೮೫. ಅಂತಹ ಶುದ್ಧೋದನನಿಗೆ ಶಾಕ್ಯದೇಶಾಧಿಪತಿಯಾದ ರಾಹುಲನೆಂಬ ಪ್ರಖ್ಯಾತನಾಗುವ ಕುಮಾರನೂ, ಅವನಿಗೆ ಪ್ರಸೇನಜಿತನೆಂಬ ಮಗನೂ, ಅವನಿಗೆ ಕ್ಷುದ್ರಕನೆಂಬ ಸುತರೂ ಹುಟ್ಟುವರು.

ಕ್ಷುದ್ರಕಾತ್ ಕ್ಷುಲಿಕೋ ಭಾವ್ಯಃ ಕ್ಷುಲಿಕಾತ್ಸುರಥಃ ಸ್ಮೃತಃ ।
ಸುಮಿತ್ರಃ ಸುರಥಸ್ಯಾಪಿ ಅಂತ್ಯಶ್ಚ ಭವಿತಾ ನೃಪಃ ॥ ೨೬೬ ॥

ಏತೇ ಐಕ್ಷ್ವಾಕವಾಃ ಪ್ರೋಕ್ತಾ ಭವಿತಾರಃ ಕಲೌ ಯುಗೇ ।
ಬೃಹದ್ಬಲಾನ್ವಯೇ ಜಾತಾ ಭವಿತಾರಃ ಕಲೌ ಯುಗೇ ॥
ಶೂರಾಶ್ಚ ಕೃತವಿದ್ಯಾಶ್ಚ ಸತ್ಯಸಂಧಾಜಿತೇಂದ್ರಿಯಾಃ ॥ ೨೬೭ ॥

ಅತ್ರಾನುವಂಶಶ್ಲೋಕೋಽಯಂ ಭವಿಷ್ಯಜ್ಞೈರುದಾಹೃತಃ ।
ಇಕ್ಷ್ವಾಕೂಣಾಮಯಂ ವಂಶಃ ಸುಮಿತ್ರಾಂತೋ ಭವಿಷ್ಯತಿ ॥
ಸುಮಿತ್ರಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ।
ಇತ್ಯೇತನ್ಮಾನವಂ ಕ್ಷೇತ್ರಮೈಲಂ ಚ ಸಮುದಾಹೃತಂ ॥ ೨೬೮ ॥

---

೨೬೬. ಆ ಕ್ಷುದ್ರಕನಿಗೆ ಕ್ಷುಲಿಕನೆಂಬ ರಾಜಕುಮಾರನೂ, ಅವನಿಗೆ ಸುರಥನೆಂಬ ತನಯನೂ, ಆ ಸುರಥನಿಗೆ ಸುಮಿತ್ರನೆಂಬ ಪುತ್ರನೂ ಜನಿಸುವರು. ಆ ಸುಮಿತ್ರಮಹಾರಾಜನೇ ಇಕ್ಷ್ವಾಕುವಂಶದ ಕಡೆಯ ರಾಜನಾಗುವನು.

೨೬೭. ಈ ಮೇಲೆ ಹೇಳಿದ ರಾಜರೆಲ್ಲರೂ ಇಕ್ಷ್ವಾಕುವಂಶದಲ್ಲಿ ಕಲಿಯುಗದಲ್ಲಿ ಹುಟ್ಟುವ ರಾಜರಾಗಿರುವರು. ಬೃಹದ್ಬಲಾನ್ವಯದಲ್ಲಿ ಹುಟ್ಟುವ ರಾಜರೇ ಈ ಕಲಿಯುಗದಲ್ಲಿ ರಾಜರಾಗಿ ಉದ್ಭವಿಸುವರು.

೨೬೮. ಭೂತಭವಿಷ್ಯದ್ವರ್ತಮಾನರೂಪವಾದ ತ್ರಿಕಾಲಗಳ ಜ್ಞಾನಿಗಳಾದ ಮಹರ್ಷಿಗಳು ಈ ರಾಜರ ವಂಶಗಳನ್ನು ಹೇಳುವ ಸಂದರ್ಭದಲ್ಲಿ ಈ ಶ್ಲೋಕವನ್ನು ಉದಾಹರಿಸುವರು. ಈ ಇಕ್ಷ್ವಾಕು ಮಹಾರಾಜನ ವಂಶವು ಸುಮಿತ್ರನೆಂಬ ರಾಜನ ವರೆಗೂ ಅನುಸ್ಯೂತವಾಗಿರುವುದು. ಆ ಸುಮಿತ್ರರಾಜನವರೆಗೂ ಸುಪ್ರಸಿದ್ಧವಾಗಿದ್ದು ತರುವಾಯ ಈ ವಂಶವು ಕಲಿಯುಗದಲ್ಲಿ ಕ್ಷಯವಾಗುವುದು. ಈ ರೀತಿಯಾಗಿ ಮನುವಂಶವನ್ನೂ, ಐಲಮಹಾರಾಜನ ವಂಶವನ್ನೂ ನಿಮಗಾಗಿ ನಿರೂಪಿಸಿರುವೆನೆಂದನು.

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಮಾಗಧೇಯಾನ್ ಬೃಹದ್ರಥಾನ್ ।**
**ಜರಾಸಂಧಸ್ಯ ಯೇ ವಂಶೇ ಸಹದೇವಾನ್ವಯೇ ನೃಪಾಃ ॥ ೨೮೯ ॥**

**ಅತೀತಾ ವರ್ತಮಾನಾಶ್ಚ ಭವಿಷ್ಯಾಶ್ಚ ತಥಾಪುನಃ ।**
**ಪ್ರಾಧಾನ್ಯತಃ ಪ್ರವಕ್ಷ್ಯಾಮಿ ಗದತೋ ಮೇ ನಿಬೋಧತ ॥ ೨೯೦ ॥**

**ಸಂಗ್ರಾಮೇ ಭಾರತೇ ತಸ್ಮಿನ್ ಸಹದೇವೋ ನಿಪಾತಿತಃ ।**
**ಸೋಮಾಧಿಸ್ತಸ್ಯ ತನಯೋ ರಾಜರ್ಷಿಃ ಸ ಗಿರಿವ್ರಜೇ ॥ ೨೯೧ ॥**

**ಪಂಚಾಶತಂ ತಥಾಷ್ಟೌ ಚ ಸಮಾ ರಾಜ್ಯಮಕಾರಯತ್ ।**
**ಶ್ರುತಶ್ರವಾಃ ಚತುಃ ಷಷ್ಟಿ ಸಮಾಸ್ತಸ್ಯ ಸುತೋಽಭವತ್ ॥**
**ಅಯುತಾಯುಸ್ತು ಷಡ್ವಿಂಶಂ ರಾಜ್ಯಂ ವರ್ಷಾಣ್ಯಕಾರಯತ್ ।**
**ಸಮಾಃ ಶತಂ ನಿರಾಮಿತ್ರೋ ಮಹೀಂ ಭುಕ್ತ್ವಾ ದಿವಂಗತಃ ॥ ೨೯೨ ॥**

---

೨೮೯. ಎಲೈ ಮುನಿವರ್ಯರೇ, ಇನ್ನು ಮುಂದೆ ಮಗಧದೇಶದ, ರಾಜರಾದ ಬೃಹದ್ರಥರು, ಜರಾಸಂಧ ಮತ್ತು ಸಹದೇವ ಇವರ ವಂಶಗಳಲ್ಲಿ ಯಾವ ಯಾವ ರಾಜರು ಉತ್ಪನ್ನರಾಗುವರೋ ಆ ರಾಜರ ವಿಷಯಗಳನ್ನು ವರ್ಣಿಸುವೆನು ಕೇಳಿರೆಂದನು.

೨೯೦. ಆಗ ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿರುವ ರಾಜರುಗಳಲ್ಲಿ ಮುಖ್ಯರಾದ ರಾಜರ ವಿಚಾರಗಳನ್ನು ಕ್ರಮವಾಗಿ ನಿರೂಪಿಸುವೆನು, ಸಾವಧಾನದಿಂದ ಕೇಳಿರೆಂದು ಸೂತಮುನಿಯು, ಮಹರ್ಷಿಗಳಿಗೆ ಹೇಳಿದನು.

೨೯೧. ಆಗ ಭಾರತದಲ್ಲಿ ಮಹಾಯುದ್ಧವು ಪ್ರಾರಂಭವಾಗುವದು. ಅಂತಹ ಸಂಗ್ರಾಮದಲ್ಲಿ ಸಹದೇವರಾಜನು ಮಡಿಯುವನು. ಅವನಿಗೆ ರಾಜರ್ಷಿಯಾದ ಸೋಮಾಧಿಯೆಂಬ ಮಹಾರಾಜನು ಜನಿಸುವನು. ಅವನು ಗಿರಿವ್ರಜವೆಂಬ ನಗರಿಯಲ್ಲಿ ಐವತ್ತೆಂಟು ವರ್ಷಗಳು ಸುಖವಾಗಿ ರಾಜ್ಯವನ್ನಾಳುವನು.

೨೯೨. ಆ ಸಹದೇವನಿಗೆ ಶ್ರುತಶ್ರವಸನೆಂಬ ಕುಮಾರನು ಜನಿಸಿ, ಅರವತ್ತು ನಾಲ್ಕು ವರ್ಷಗಳು ಸುಖವಾಗಿ ರಾಜ್ಯವನ್ನು ಪಾಲಿಸುವನು. ಅವನ ಮಗನಾದ ಅಯುತಾಯುವು ಇಪ್ಪತ್ತಾರು ವರ್ಷಗಳು ರಾಜ್ಯವಾಳುವನು. ಅವನ ಕುಮಾರನಾದ ನಿರಾಮಿತ್ರನು ನೂರು ವರ್ಷಗಳು ರಾಜ್ಯವನ್ನು ಪಾಲಿಸಿ, ತರುವಾಯ ಸ್ವರ್ಗಕ್ಕೆ ಹೋಗುವನು.

**ಪಂಚಾಶತಂ ಸಮಾಃ ಷಟ್‌ಚ ಸುಕೃತ್ತಃ ಪ್ರಾಪ್ತವಾನ್ ಮಹೀಂ |**
**ತ್ರಯೋವಿಂಶಂ ಬೃಹತ್ಕರ್ಮಾ ರಾಜ್ಯಂ ವರ್ಷಾಣ್ಯಕಾರಯತ್ ॥ ೨೯೩ ॥**

**ಸೇನಾಜಿತ್ಸಾಂಪ್ರತಂ ಚಾಪಿ ಏತಾಂ ವೈ ಭುಜ್ಯತೇ ಸಮಾಃ |**
**ಶ್ರುತಂಜಯಸ್ತು ವರ್ಷಾಣಿ ಚತ್ವಾರಿಂಶದ್ಭವಿಷ್ಯತಿ ॥ ೨೯೪ ॥**

**ಮಹಾಬಾಹುರ್ಮಹಾಬುದ್ಧಿರ್ಮಹಾಭೀಮಪರಾಕ್ರಮಃ |**
**ಪಂಚತ್ರಿಂಶತ್ತು ವರ್ಷಾಣಿ ಮಹೀಂ ಪಾಲಯಿತಾನೃಪಃ ॥ ೨೯೫ ॥**

**ಅಷ್ಟಪಂಚಾಶತಂ ಚಾಬ್ದಾನ್ ರಾಜ್ಯೇ ಸ್ಥಾಸ್ಯತಿ ವೈ ಶುಚಿಃ |**
**ಅಷ್ಟಾವಿಂಶತ್ಸಮಾಃ ಪೂರ್ಣಾಃ ಕ್ಷೇಮೋ ರಾಜಾ ಭವಿಷ್ಯತಿ ॥ ೨೯೬ ॥**

---

೨೯೩. ಅವನ ಪುತ್ರನಾದ ಸುಕೃತ್ತನು ಭೂಸಾಮ್ರಾಜ್ಯವನ್ನು ಪಡೆದು ಐವತ್ತಾರು ವರ್ಷಗಳು ಸುಖವಾಗಿ ಪಾಲಿಸುವನು. ಅವನ ಕುಮಾರನಾದ ಬೃಹತ್ಕರ್ಮನು ಇಪ್ಪತ್ತಮೂರು ವರ್ಷಗಳವರೆಗೂ ಸುಖವಾಗಿ ರಾಜ್ಯವನ್ನು ಪಾಲಿಸುವನು.

೨೯೪. ಬೃಹತ್ಕರ್ಮನ ಸುತನಾದ ಸೇನಜಿದ್ರಾಜನು ಈ ಭೂಮಂಡಲವನ್ನು ಅನೇಕ ವರ್ಷಗಳು ರಾಜ್ಯವನ್ನು ಆಳುವನು. ಅವನ ತನಯನಾದ ಶ್ರುತಂಜಯನು ನಲವತ್ತು ವರ್ಷಗಳು ಸುಖವಾಗಿ ರಾಜ್ಯವನ್ನು ಪಾಲಿಸುವನು.

೨೯೫. ಮಹಾಭುಜಪರಾಕ್ರಮಿಯೂ, ಮಹಾಭಯಂಕರ ಪರಾಕ್ರಮವುಳ್ಳವನೂ ಆದ ಮಹಾಬುದ್ಧಿಯೆಂಬ ಮಹಾರಾಜನು ಮೂವತ್ತೈದು ವರ್ಷಗಳು ಸುಖವಾಗಿ ರಾಜ್ಯವನ್ನು ಪಾಲಿಸುವನು.

೨೯೬. ಮಹಾಬುದ್ಧಿಯ ಸುತನಾದ ಶುಚಿಯೆಂಬ ಮಹಾರಾಜನು ಐವತ್ತಾರು ವರ್ಷಗಳವರೆಗೂ ಸುಖವಾಗಿ ರಾಜ್ಯದಲ್ಲಿ ಸ್ಥಾಪಿತನಾಗುವನು. ಅವನ ಕುಮಾರನಾದ ಕ್ಷೇಮಮಹಾರಾಜನು ಇಪ್ಪತ್ತೆಂಟು ವರ್ಷಗಳು ಪೂರ್ಣವಾಗಿ ರಾಜ್ಯವನ್ನು ಆಳುವನು.

ಭುವತಸ್ತು ಚತುಃಷಷ್ಟಿೀರಾಜ್ಯಂ ಪ್ರಾಪ್ಸ್ಯತಿ ವೀರ್ಯವಾನ್ ।
ಪಂಚವರ್ಷಾಣಿ ಪೂರ್ಣಾನಿ ಧರ್ಮನೇತ್ರೋ ಭವಿಷ್ಯತಿ ॥ ೨೯೭ ॥

ಭೋಕ್ಷ್ಯತೇ ನೃಪತಿಶ್ಚೈವ ಹ್ಯಷ್ಟಪಂಚಾಶತಂ ಸಮಾಃ ।
ಅಷ್ಟಾತ್ರಿಂಶತ್ಸಮಾ ರಾಜ್ಯಂ ಸುವ್ರತಸ್ಯ ಭವಿಷ್ಯತಿ ॥ ೨೯೮ ॥

ಚತ್ವಾರಿಂಶದ್ದಶಾಷ್ಟೌ ಚ ದೃಢಸೇನೋ ಭವಿಷ್ಯತಿ ।
ತ್ರಯಸ್ತ್ರಿಂಶತ್ತು ವರ್ಷಾಣಿ ಸುಮತಿಃ ಪ್ರಾಪ್ಸ್ಯತೇ ತತಃ ॥ ೨೯೯ ॥

ದ್ವಾವಿಂಶತಿಸಮಾ ರಾಜ್ಯಂ ಸುಚಲೋ ಭೋಕ್ಷ್ಯತೇ ತತಃ ।
ಚತ್ವಾರಿಂಶತ್ಸಮಾ ರಾಜಾ ಸುನೇತ್ರೋ ಭೋಕ್ಷ್ಯತೇ ತತಃ ॥ ೩೦೦ ॥

---

೨೭೭. ತರುವಾಯ ವೀರ್ಯವಂತ ಮಹಾರಾಜನು ನಲವತ್ತಾರು ವರ್ಷಗಳು ರಾಜ್ಯಪಾಲನೆ ಮಾಡುವನು. ಅನಂತರ ಧರ್ಮನೇತ್ರನು ಐದು ವರ್ಷಗಳು ಮಾತ್ರ ರಾಜ್ಯಪಾಲನೆ ಮಾಡುವನು

೨೯೮. ತರುವಾಯ ಸುಪ್ರಸಿದ್ಧನಾದ ರಾಯನು ಐವತ್ತಾರು ವರ್ಷಗಳು ರಾಜ್ಯಪಾಲನೆ ಮಾಡಿದನು ಆಮೇಲೆ ಸುವ್ರತನ ರಾಜ್ಯಭಾರಕ್ರಮವು ಮೂವತ್ತೆಂಟು ವರ್ಷಗಳು ಮಾತ್ರವಿರುವುದು.

೨೯೯. ತರುವಾಯ ದೃಢಸೇನ ಮಹಾರಾಜನು ನಲವತ್ತೆಂಟು ವರ್ಷಗಳ ವರೆಗೂ ರಾಜ್ಯವಾಳುವನು ಆ ಮೇಲೆ ಸುಮತಿಯೆಂಬ ಮಹಾರಾಜನು ಮೂವತ್ತು ಮೂರು ವರ್ಷಗಳು ಸುಖವಾಗಿ ರಾಜ್ಯವನ್ನು ಕಾಪಾಡುವನು.

೩೦೦. ಅವನ ತರುವಾಯ ಸುಚೇಲನೆಂಬ ರಾಜನು ರಾಜ್ಯವನ್ನು ಆಳುತ್ತಾ ಇಪ್ಪತ್ತೆರಡು ವರ್ಷಗಳು ಭೂಪಾಲನೆಮಾಡುವನು. ಅವನನಂತರ ಸುನೇತ್ರನೆಂಬ ರಾಯನು ನಲವತ್ತು ವರ್ಷಗಳು ರಾಜ್ಯಭಾರವನ್ನು ಹೊರುವನು.

**ಸತ್ಯಜಿತ್ ಪೃಥಿವೀರಾಜ್ಯಂ ತ್ರ್ಯಶೀತಿಂ ಭೋಕ್ಷ್ಯತೇ ಸಮಾಃ |**
**ಪ್ರಾಪ್ಯೇಮಾಂ ವೀರಜಿಚ್ಚಾಪಿ ಪಂಚತ್ರಿಂಶದ್ಭವಿಷ್ಯತಿ || ೩೦೧ ||**

**ಅರಿಂಜಯಸ್ತು ವರ್ಷಾಣಿ ಪಂಚಾಶತ್ಪ್ರಾಪ್ಸ್ಯತೇ ಮಹೀಂ |**
**ದ್ವಾತ್ರಿಂಶಚ್ಚ ನೃಪಾ ಹ್ಯೇತೇ ಭವಿತಾರೋ ಬೃಹದ್ರಥಾಃ || ೩೦೨ ||**

**ಪೂರ್ಣಂ ವರ್ಷಸಹಸ್ರಂ ವೈ ತೇಷಾಂ ರಾಜ್ಯಂ ಭವಿಷ್ಯತಿ |**
**ಬೃಹದ್ರಥೇಷ್ವತೀತೇಷು ವೀತಹೋತ್ರೇಷು ವರ್ತಿಷು || ೩೦೩ ||**

**ಮುನಿಕಃ ಸ್ವಾಮಿನಂ ಹತ್ವಾ ಪುತ್ರಂ ಸಮಭಿಷೇಕ್ಷ್ಯತಿ |**
**ಮಿಷತಾಂ ಕ್ಷತ್ರಿಯಾಣಾಂ ಹಿ ಪ್ರದ್ಯೋತೋ ಮುನಿಕೋ ಬಲಾತ್ || ೩೦೪ ||**

---

೩೦೧. ಆಮೇಲೆ ಸತ್ಯಜಿದ್ರಾಜನು ಭೂಮಿಯನ್ನು ಆಳುತ್ತಾ ಎಂಬತ್ತುಮೂರು ವರ್ಷಗಳು ಭೂಭಾರವನ್ನು ಧರಿಸುವನು. ಅವನ ತರುವಾಯ ವೀರಜಿತನೆಂಬ ರಾಜನು ಈ ಭೂಮಿಯನ್ನು ಪಡೆದು ಮೂವತ್ತೈದು ವರ್ಷಗಳು ಪಾಲಿಸುವನು.

೩೦೨. ಅವನನಂತರ ಅರಿಂಜಯಮಹಾರಾಯನು. ಐವತ್ತು ವರ್ಷಗಳು ಸುಖವಾಗಿ ರಾಜನಾಗಿರುವನು. ಆಮೇಲೆ ಬೃಹದ್ರಥರಾಜರು ಮೂವತ್ತೆರಡು ವರ್ಷಗಳವರೆಗೂ, ಈ ಭೂಮಿಗೆ ರಾಜರಾಗಿರುವರು.

೩೦೩. ಬೃಹದ್ರಥಮಹಾರಾಜರು ಮೂವತ್ತೆರಡುಜನರೂ ಒಂದು ಸಹಸ್ರ ವರ್ಷಗಳು ಸಂಪೂರ್ಣವಾಗಿ ರಾಜ್ಯವನ್ನು ಪಾಲಿಸುವರು. ಅವರು ಕಳೆದು ಹೋಗಲಾಗಿ ವೀತಿಹೋತ್ರರು. ರಾಜ್ಯವನ್ನು ರಕ್ಷಿಸುವರು.

೩೦೪. ಅನಂತರ ಮುನಿಕನೆಂಬವನು ರಾಜನನ್ನು ಸಂಹರಿಸಿ ಅವನ ಮಗನಿಗೆ ರಾಜ್ಯವನ್ನು ಕೊಡುವನು. ಸಮಸ್ತ ರಾಜರೂ, ನೋಡುತ್ತಿರುವಾಗಲೇ ಮುನಿಕನು ಪ್ರದ್ಯೋತನಿಗೆ ರಾಜ್ಯವನ್ನು ಕೊಡುವನು.

ಸ ವೈ ಪ್ರಣತಸಾಮಂತೋ ಭವಿಷ್ಯೇ ನಯವರ್ಜಿತಃ ।
ತ್ರಯೋವಿಂಶತ್ಸಮಾ ರಾಜಾ ಭವಿತಾ ಸ ನರೋತ್ತಮಃ ॥ ೩೦೫ ॥

ಚತುರ್ವಿಂಶತ್ಸಮಾ ರಾಜಾ ಪಾಲಕೋ ಭವಿತಾ ತತಃ ।
ವಿಶಾಖಯೂಪೋ ಭವಿತಾ ನೃಪಃ ಪಂಚಾಶತೀಂ ಸಮಾಃ ॥ ೩೦೬ ॥

ಏಕತ್ರಿಂಶತ್ಸಮಾ ರಾಜ್ಯಮಜಕಸ್ಯ ಭವಿಷ್ಯತಿ ।
ಭವಿಷ್ಯತಿ ಸಮಾ ವಿಂಶತ್ತತ್ಸುತೋ ವರ್ತಿವರ್ಧನಃ ॥ ೩೦೭ ॥

ಅಷ್ಟಾತ್ರಿಂಶಚ್ಛತಂ ಭಾವ್ಯಾಃ ಪ್ರಾದ್ಯೋತಾಃ ಪಂಚ ತೇ ಸುತಾಃ ।
ಹತ್ವಾ ತೇಷಾಂ ಯಶಃ ಕೃತ್ಸ್ನಂ ಶಿಶುನಾಕೋ ಭವಿಷ್ಯತಿ ॥ ೩೦೮ ॥

---

೩೦೫. ಆ ಪ್ರದ್ಯೋತರಾಜನು ನೀತಿರಹಿತನೂ, ಚಕ್ರವರ್ತಿಯೂ ಆಗಿ ಸಮಸ್ತ ಸಾಮಂತರಾಜರಿಂದಲೂ ವಂದಿತನಾಗಿ ಇಪ್ಪತ್ತುಮೂರು ವರ್ಷಗಳವರೆಗೂ ಶ್ರೇಷ್ಠನೆನಿಸಿಕೊಂಡು ರಾಜ್ಯವನ್ನು ಆಳುವನು.

೩೦೬. ಅನಂತರ ಪಾಲಕನೆಂಬ ರಾಜನು ಇಪ್ಪತ್ತುನಾಲ್ಕು ವರ್ಷಗಳು ರಾಜ್ಯವನ್ನಾಳುವನು. ಅವನನಂತರ ವಿಶಾಖಯೂಪನು ಐವತ್ತು ವರ್ಷಗಳವರೆಗೂ ರಾಜನಾಗಿರುವನು.

೩೦೭. ಅನಂತರ ಅಜಕರಾಜನು ಮೂವತ್ತೊಂದು ವರ್ಷಗಳು ದೊರೆಯಾಗಿರುವನು. ಅವನ ಮಗನಾದ ವರ್ತಿವರ್ಧನನು ಇಪ್ಪತ್ತು ವರ್ಷಗಳು ರಾಜನಾಗುವನು.

೩೦೮. ಪ್ರದ್ಯೋತರಾಜನು ತನ್ನ ಐವರು ಮಕ್ಕಳ ಸಂಗಡ ನೂರಮೂವತ್ತೆಂಟು ವರ್ಷಗಳು ರಾಜನಾಗಿರುವನು. ಅವನ ತರುವಾಯ ಶಿಶುನಾಕನು ಅವರ ಕೀರ್ತಿಯನ್ನು ಅಪಹರಿಸಿ ಬಹುಕಾಲ ರಾಜ್ಯವಾಳುವನು.

ವಾರಾಣಸ್ಯಾಂ ಸುತಸ್ತಸ್ಯ ಸಂಪ್ರಾಪ್ಸ್ಯತಿ ಗಿರಿವ್ರಜಂ ।
ಶಿಶುನಾಕಸ್ಯ ವರ್ಷಾಣಿ ಚತ್ವಾರಿಂಶದ್ಭವಿಷ್ಯತಿ ॥ ೩೦೯ ॥

ಶಕವರ್ಣಃ ಸುತಸ್ತಸ್ಯ ಷಟ್‌ತ್ರಿಂಶಚ್ಚ ಭವಿಷ್ಯತಿ ।
ತತಸ್ತು ವಿಂಶತಿಂ ರಾಜಾ ಕ್ಷೇಮವರ್ಮಾ ಭವಿಷ್ಯತಿ ॥ ೩೧೦ ॥

ಅಜಾತಶತ್ರುರ್ಭವಿತಾ ಪಂಚವಿಂಶತ್ಸಮಾ ನೃಪಃ ।
ಚತ್ವಾರಿಂಶತ್ಸಮಾ ರಾಜ್ಯಂ ಕ್ಷತ್ರೌಜಾಃ ಪ್ರಾಪ್ಸ್ಯತೇ ತತಃ ॥ ೩೧೧ ॥

ಅಷ್ಟಾವಿಂಶತ್ಸಮಾ ರಾಜಾ ವಿವಿಸಾರೋ ಭವಿಷ್ಯತಿ ।
ಪಂಚವಿಂಶತ್ಸಮಾ ರಾಜಾ ದರ್ಶಕಸ್ತು ಭವಿಷ್ಯತಿ ॥ ೩೧೨ ॥

---

೩೦೯. ಆ ಶಿಶುನಾಕನ ಕುಮಾರನು ಕಾಶೀನಗರಿಯಲ್ಲಿ ಗಿರಿವ್ರಜವೆಂಬ ಸ್ಥಳದಲ್ಲಿ ವಾಸಿಸುವನು. ಶಿಶುನಾಕನು ನಲವತ್ತು ವರ್ಷಗಳು ಸುಖವಾಗಿ ರಾಜ್ಯವಾಳುವನು.

೩೧೦. ಅವನ ಕುಮಾರನಾದ ಶಕವರ್ಣನು ಮೂವತ್ತಾರು ವರ್ಷಗಳು ರಾಜ್ಯವಾಳುವನು. ಅವನನಂತರ ಕ್ಷೇಮವರ್ಮನೆಂಬ ಮಹಾರಾಜನು ಇಪ್ಪತ್ತು ವರ್ಷಗಳವರೆಗೂ ಸುಖವಾಗಿ ರಾಜ್ಯವನ್ನು ಪಾಲಿಸುವನು.

೩೧೧. ಅವನ ನಂತರ ಅಜಾತಶತ್ರುವು ಇಪ್ಪತ್ತೈದು ವರ್ಷಗಳವರೆಗೆ ರಾಜ್ಯವನ್ನು ಸುಖವಾಗಿ ಆಳುವನು. ಅವನ ತರುವಾಯ ಕ್ಷತ್ರಾಜಸನು ನಲವತ್ತು ವರ್ಷಗಳು ರಾಜ್ಯವಾಳುವನು.

೩೧೨. ತರುವಾಯ ವಿವಿಸಾರನು ಇಪ್ಪತ್ತೆಂಟು ವರ್ಷಗಳು ರಾಜ್ಯವಾಳುವನು. ಅವನ ನಂತರ ದರ್ಶಕನು ಇಪ್ಪತ್ತೈದು ವರ್ಷಗಳಕಾಲ ರಾಜ್ಯವಾಳುವನು.

ಉದಾಯಿಾ ಭವಿತಾತಸ್ಮಾತ್ ತ್ರಯಸ್ತ್ರಿಂಶತ್ಸಮಾ ನೃಪಃ ।
ಸ ವೈ ಪುರವರಂ ರಾಜಾ ಪೃಥಿವ್ಯಾಂ ಕುಸಮಾಹ್ವಯಂ ॥
ಗಂಗಾಯಾ ದಕ್ಷಿಣೇ ಕೂಲೇ ಚತುರ್ಥೇಽಬ್ದೇ ಕರಿಷ್ಯತಿ ॥ ೩೧೩ ॥

ದ್ವಾಚತ್ವಾರಿಂಶತ್ಸಮಾ ಭಾವ್ಯೋ ರಾಜಾ ವೈ ನಂದಿವರ್ಧನಃ ।
ಚತ್ವಾರಿಂಶಂತ್ರಯಂಚೈವ ಮಹಾನಂದೀ ಭವಿಷ್ಯತಿ ॥ ೩೧೪ ॥

ಇತ್ಯೇತೇ ಭವಿತಾರೋ ವೈ ಶೈಶುನಾಕಾ ನೃಪಾ ದಶ ।
ಶತಾನಿ ತ್ರೀಣಿ ವರ್ಷಾಣಿ ದ್ವಿಷಷ್ಟ್ಯ ಭ್ಯಧಿಕಾನಿ ತು ॥ ೩೧೫ ॥

ಶೈಶುನಾಕಾ ಭವಿಷ್ಯಂತಿ ತಾವತ್ಕಾಲಂ ನೃಪಾಃ ಪರೇ ।
ಏತೈಃ ಸಾರ್ಧಂ ಭವಿಷ್ಯಂತಿ ರಾಜನಃ ಕ್ಷತ್ರಬಾಂಧವಾಃ ॥ ೩೧೬ ॥

---

೩೧೩. ಅವನಾದ ಮೇಲೆ ಉದಾಯಿಾ ಎಂಬ ರಾಜನು ಮೂವತ್ತುಮೂರು ವರ್ಷಗಳು ರಾಜನಾಗುವನು. ಆ ಮಹಾರಾಜನು ಈ ಭೂಮಂಡಲದಲ್ಲಿ ಗಂಗಾ ನದಿಯ ದಕ್ಷಿಣತೀರದಲ್ಲಿರುವ ಕುಸುಮಪುರವೆಂಬ ನಗರದಲ್ಲಿ ನಾಲ್ಕನೆಯ ವರ್ಷದಲ್ಲಿ ರಾಜ್ಯವಾಳುವನು.

೩೧೪. ಅವನ ನಂತರ ನಂದಿವರ್ಧನನೆಂಬ ರಾಜನು ನಲವತ್ತೆರಡುವರ್ಷ ರಾಜ್ಯವಾಳುವನು. ಅವನ ತರುವಾಯ ಮಹಾನಂದಿಯು ನಲವತ್ತಮೂರು ವರ್ಷಗಳಕಾಲ ರಾಜ್ಯವನ್ನು ಸುಖವಾಗಿ ಆಳುವನು.

೩೧೫. ಈ ರೀತಿಯಾಗಿ ಶಿಶುನಾಕನ ಸಂಬಂಧಿಯಾದ ಹತ್ತುಜನ ರಾಜರುಗಳು ರಾಜ್ಯವಾಳುವರು. ಈ ರಾಜರು ಮುನ್ನೂರರವತ್ತೆರಡು ವರ್ಷಗಳವರೆಗೂ ರಾಜ್ಯವಾಳುವರು.

೩೧೬. ಅಲ್ಲಿಯವರೆಗೂ ಶೈಶನಾಕರಾಜರುಗಳು ರಾಜ್ಯವಾಳುವ ಕಾಲವೆಂದು ಪ್ರಖ್ಯಾತವಾಗುವುದು. ಅವರುಗಳ ಸಂಗಡ ಇತರ, ರಾಜರೂ ಸಹ ಸಮಪರಾಕ್ರಮಿಗಳಾಗಿ ಕೆಲವು ರಾಜ್ಯಗಳನ್ನಾಳುವರು.

ಐಕ್ಷ್ವಾಕವಾಶ್ಚತುರ್ವಿಂಶತ್ಪಾಂಚಾಲಾಃ ಪಂಚವಿಂಶತಿಃ ।
ಕಾಲಕಾಸ್ತು ಚತುರ್ವಿಂಶಚ್ಚತುರ್ವಿಂಶತ್ತು ಹೈಹಯಾಃ ॥ ೩೧೭ ॥

ದ್ವಾತ್ರಿಂಶದ್ವೈ ಕಲಿಂಗಾಸ್ತು ಪಂಚವಿಂಶತ್ತಥಾ ಶಕಾಃ ।
ಕುರವಶ್ಚಾಪಿ ಷಡ್ವಿಂಶದಷ್ಟಾವಿಂಶತಿ ನ್ಮೈಥಿಲಾಃ ॥ ೩೧೮ ॥

ಶೂರಸೇನಾಸ್ತ್ರಯೋವಿಂಶದ್ವೀತಿಹೋತ್ರಾಶ್ಚವಿಂಶತಿಃ ।
ತುಲ್ಯಕಾಲಂ ಭವಿಷ್ಯಂತಿ ಸರ್ವ ಏವ ಮಹೀಕ್ಷಿತಃ ॥ ೩೧೯ ॥

ಮಹಾನಂದಿಸುತಶ್ಚಾಪಿ ಶೂದ್ರಾಯಾಂ ಕಾಲಸಂವೃತಃ ।
ಉತ್ಪತ್ಸ್ಯತೇ ಮಹಾಪದ್ಮಃ ಸರ್ವಕ್ಷತ್ರಾಂತರೇ ನೃಪಃ ॥ ೩೨೦ ॥

ತತಃ ಪ್ರಭೃತಿ ರಾಜಾನೋ ಭವಿಷ್ಯಾಃ ಶೂದ್ರಯೋನಯಃ ।
ಏಕರಾಟ್ ಸ ಮಹಾಪದ್ಮ ಏಕಚ್ಛತ್ರೋ ಭವಿಷ್ಯತಿ ॥ ೩೨೧ ॥

---

೩೧೭. ಐಕ್ಷ್ವಾಕುರಾಜರು ಇಪ್ಪತ್ತುನಾಲ್ಕು ವರ್ಷಗಳೂ, ಪಾಂಚಾಲರು ಇಪ್ಪತ್ತೈದು ವರ್ಷಗಳೂ, ಕಾಲಕರಾಜರು ಮತ್ತು ಹೈಹಯರು ಇಪ್ಪತ್ತುನಾಲ್ಕು ವರ್ಷಗಳೂ ರಾಜ್ಯವನ್ನಾಳುವರು.

೩೧೮–೩೧೯. ಕಲಿಂಗರು ಮೂವತ್ತೆರಡು ವರ್ಷಗಳೂ, ಶಕರು ಇಪ್ಪತ್ತೈದು ವರ್ಷಗಳೊ, ಕುರುವರು ಇಪ್ಪತ್ತಾರು ವರ್ಷಗಳೂ, ಮೈಥಲರು ಇಪ್ಪತ್ತೆಂಟು ವರ್ಷಗಳೊ, ಶೂರಸೇನರು ಇಪ್ಪತ್ತಮೂರು ವರ್ಷಗಳೂ, ವೀತಿಹೋತ್ರರು ಇಪ್ಪತ್ತು ವರ್ಷಗಳೂ ರಾಜ್ಯವಾಳುವರು. ಇವರೆಲ್ಲರೂ ಸಮಾನಕಾಲದಲ್ಲಿ ರಾಜ್ಯವನ್ನಾಳುವ ರಾಜರಾಗಿರುವರು.

೩೨೦. ಈ ಸಮಸ್ತರಾಜರುಗಳ ತರುವಾಯ ಮಹಾನಂದಿಯ ಕುಮಾರನೂ, ಶೂದ್ರಯೋನಿಯಲ್ಲಿ (ಶೂದ್ರಸ್ತ್ರೀಯಲ್ಲಿ) ಉತ್ಪನ್ನನೂ ಆದ ಮಹಾಪದ್ಮನು ರಾಜನಾಗಿ ಈ ಭೂಮಂಡಲವನ್ನು ಪಾಲಿಸುವನು.

೩೨೧. ಅವನ ನಂತರ ಶೂದ್ರವಂಶೀಕರೇ ರಾಜರಾಗುವರು. ಆ ಮಹಾನಂದನ ಸುತನಾದ ಮಹಾಪದ್ಮನು ಏಕಚ್ಛತ್ರಾಧಿಪತಿಯೂ, ಚಕ್ರವರ್ತಿಯೂ ಆಗುವನು.

ಅಷ್ಟಾವಿಂಶತಿ ವರ್ಷಾಣಿ ಪೃಥಿವೀಂ ಪಾಲಯಿಷ್ಯತಿ ।
ಸರ್ವಕ್ಷತ್ರಹೃತೋದ್ಧೃತ್ಯ ಭಾವಿನೋಽರ್ಥಸ್ಯ ವೈ ಬಲಾತ್ ॥ ೩೨೨ ॥

ಸಹಸ್ರಾಸ್ತತ್ಸುತಾ ಹ್ಯಷ್ಟೌ ಸಮಾ ದ್ವಾದಶ ತೇ ನೃಪಾಃ ।
ಮಹಾಪದ್ಮಸ್ಯ ಪರ್ಯಾಯೇ ಭವಿಷ್ಯಂತಿ ನೃಪಾಃ ಕ್ರಮಾತ್ ॥ ೩೨೩ ॥

ಉದ್ಧರಿಷ್ಯತಿ ತಾನ್ ಸರ್ವಾನ್ ಕೌಟಿಲ್ಯೋ ವೈದ್ವಿರಷ್ಟಭಿಃ ।
ಭುಕ್ತ್ವಾ ಮಹೀಂ ವರ್ಷಶತಂ ನಂದೇಂದುಃ ಸ ಭವಿಷ್ಯತಿ ॥ ೩೨೪ ॥

ಚಂದ್ರಗುಪ್ತಂ ನೃಪಂ ರಾಜ್ಯೇ ಕೌಟಿಲ್ಯಃ ಸ್ಥಾಪಯಿಷ್ಯತಿ ।
ಚತುರ್ವಿಂಶತ್ಸಮಾ ರಾಜಾ ಚಂದ್ರಗುಪ್ತೋ ಭವಿಷ್ಯತಿ ॥ ೩೨೫ ॥

---

೩೨೨. ಈ ಮಹಾಪದ್ಮನು ಇಪ್ಪತ್ತೆಂಟು ವರ್ಷಗಳು ಈ ಭೂಮಿಯನ್ನು ಪಾಲಿಸುವನು. ಇವನು ಮುಂದೆ ನಡೆಯಬೇಕಾದ ಅರ್ಥಾನುಗುಣವಾಗಿ ಸಕಲ ರಾಜರನ್ನೂ ಜಯಿಸಿ ರಾಜ್ಯವನ್ನು ನಿಷ್ಕಂಟಕವನ್ನಾಗಿ ಮಾಡಿ ಆಳುವನು.

೩೨೩. ಆ ಮಹಾಪದ್ಮನ ಮಕ್ಕಳಾದ ಹನ್ನೆರಡುಜನ ರಾಜರುಗಳು (೧೦೦೮) ಸಾವಿರದೆಂಟು ವರ್ಷಗಳು ಕ್ರಮವಾಗಿ ರಾಜ್ಯವಾಳುವರು. ಈ ಮಹಾಪದ್ಮನ ಪರ್ಯಾಯಕಾಲವು ಈ ರೀತಿಯಾಗುವುದು.

೩೨೪-೩೨೫. ಕೌಟಿಲ್ಯನಾಮಕನಾದ ಚಾಣಿಕ್ಯನು ಈ ಸಮಸ್ತ ರಾಜರುಗಳನ್ನು ಮೂಲೋತ್ಪಾಟನಮಾಡಿ ನಂದರಿಗೆ ಶತ್ರುವಾದ ಚಂದ್ರಗುಪ್ತನಿಗೆ ಆ ರಾಜ್ಯವನ್ನು ಕೊಡುವನು. ನಂದಕುಲಮಣಿಯಾದ ಚಂದ್ರಗುಪ್ತನು ಚಾಣಿಕ್ಯನಿಂದ ರಾಜ್ಯವನ್ನು ಹೊಂದಿ, ಇಪ್ಪತ್ತನಾಲ್ಕು ವರ್ಷಗಳು ರಾಜ್ಯವನ್ನಾಳುವನು. ಆ ಚಂದ್ರಗುಪ್ತನು ನೂರಾರು ವರ್ಷಗಳಕಾಲ ರಾಜ್ಯವನ್ನಾಳಿ ನಂದಕುಲಮಣಿಯೆಂದು ಪ್ರಸಿದ್ಧನಾದನು.

ಭವಿತಾ ಭದ್ರಸಾರಸ್ತು ಪಂಚವಿಂಶತ್ಸಮಾ ನೃಪಃ ।
ಷಡ್ವಿಂಶತ್ತು ಸಮಾ ರಾಜಾ ಹ್ಯಶೋಕೋ ಭವಿತಾ ನೃಷು ॥ ೩೨೬ ॥

ತಸ್ಯ ಪುತ್ರಃ ಕುನಾಲಸ್ತು ವರ್ಷಾಣ್ಯಷ್ಟೌ ಭವಿಷ್ಯತಿ ।
ಕುನಾಲಸೂನುರಷ್ಟೌ ಚ ಭೋಕ್ತಾ ವೈ ಬಂಧುಪಾಲಿತಃ ॥ ೩೨೭ ॥

ಬಂಧುಪಾಲಿತದಾಯಾದೋ ದಶಮಾನೀಂದ್ರಪಾಲಿತಃ ।
ಭವಿತಾ ಸಪ್ತವರ್ಷಾಣಿ ದೇವವರ್ಮಾ ನರಾಧಿಪಃ ॥ ೩೨೮ ॥

ರಾಜಾ ಶತಧರಶ್ಚಾಷ್ಟೌ ತಸ್ಯ ಪುತ್ರೋ ಭವಿಷ್ಯತಿ ।
ಬೃಹದಶ್ವಶ್ಚ ವರ್ಷಾಣಿ ಸಪ್ತ ವೈ ಭವಿತಾ ನೃಪಃ ॥ ೩೨೯ ॥

---

೩೨೬. ಚಂದ್ರಗುಪ್ತನ ತರುವಾಯ ಭದ್ರಸಾರನು ಇಪ್ಪತ್ತೈದು ವರ್ಷಗಳ ಕಾಲ ರಾಜ್ಯವನ್ನು ಪಾಲಿಸುವನು. ಅವನ ನಂತರ ಅಶೋಕ ಚಕ್ರವರ್ತಿಯು ಇಪ್ಪತ್ತಾರು ವರ್ಷಗಳು ರಾಜ್ಯವನ್ನು ರಕ್ಷಿಸುವನು.

೩೨೭. ಆ ಅಶೋಕಮಹಾರಾಜನಿಗೆ ಕುನಾಲನೆಂಬ ಕುಮಾರನು ಜನಿಸಿ, ಎಂಟು ವರ್ಷಗಳು ಮಾತ್ರ ರಾಜ್ಯಪಾಲನೆ ಮಾಡುವನು. ಅವನ ನಂತರ ಅವನ ಪುತ್ರನಾದ ಬಂಧುಪಾಲಿತನೂ ಕೂಡ ಎಂಟೇ ವರ್ಷಗಳು ರಾಜನಾಗಿರುವನು.

೩೨೮. ಆ ಬಂಧುಪಾಲಿತನ ಸುತನಾದ ಇಂದ್ರಪಾಲಿತನು ಹತ್ತು ವರ್ಷಗಳೂ, ಅವನ ಮಗನಾದ ದೇವವರ್ಮನು ಏಳು ವರ್ಷಗಳೂ ರಾಜ್ಯವಾಳುವರು.

೩೨೯. ಅನಂತರ ದೇವವರ್ಮನ ತನಯನಾದ ಶತಧರನೆಂಬ ರಾಜನು ಎಂಟು ವರ್ಷಗಳೂ, ಅವನು ಆದಮೇಲೆ ಅವನ ಕುಮಾರನಾದ ಬೃಹದಶ್ವರಾಯನು ಏಳು ವರ್ಷಗಳೂ ಪ್ರಜೆಗಳಿಗೆ ಒಡೆಯರಾಗುವರು.

ಇತ್ಯೇತೇ ನವ ಭೂಪಾ ಯೇ ಭೋಕ್ಷ್ಯಂತಿ ಚ ವಸುಂಧರಾಂ ।
ಸಪ್ತತ್ರಿಂಶಚ್ಛತಂ ಪೂರ್ಣಂ ತೇಭ್ಯಸ್ತು ಗೌರ್ಭವಿಷ್ಯತಿ ॥ ೩೩೦ ॥

ಪುಷ್ಯಮಿತ್ರಸ್ತು ಸೇನಾನೀರುದ್ಧೃತ್ಯ ವೈ ಬೃಹದ್ರಥಂ ।
ಕಾರಯಿಷ್ಯತಿ ವೈ ರಾಜ್ಯಂ ಸಮಾಃ ಷಷ್ಟಿಂ ಸದೈವ ತು ॥ ೩೩೧ ॥

ಪುಷ್ಯಮಿತ್ರಸುತಾಶ್ಚಾಷ್ಟೌ ಭವಿಷ್ಯಂತಿ ಸಮಾನೃಪಾಃ ।
ಭವಿತಾ ಚಾಪಿ ತಜ್ಜ್ಯೇಷ್ಠಃ ಸಪ್ತವರ್ಷಾಣಿ ವೈ ತತಃ ॥ ೩೩೨ ॥

ವಸುಮಿತ್ರಃ ಸುತೋ ಭಾವ್ಯೋ ದಶವರ್ಷಾಣಿ ಪಾರ್ಥಿವಃ ।
ತತೋ ಧ್ರುಕಃ ಸಮಾ ದ್ವೇ ತು ಭವಿಷ್ಯತಿ ಸುತಶ್ಚ ವೈ ॥ ೩೩೩ ॥

---

೩೩೦. ಈ ರೀತಿಯಾಗಿ ಮೇಲೆ ಹೇಳಿರುವ ಒಂಭತ್ತು ಮಹಾರಾಜರು ಈ ಭೂಮಿಯನ್ನು ನೂರಮೂವತ್ತೇಳು ವರ್ಷಗಳ ವರೆಗೂ ಅವಿಚ್ಛಿನ್ನವಾಗಿ (ಪಾಲಿಸುವರು) ರಾಜ್ಯಭಾರ ಮಾಡುವರು.

೩೩೧. ಆ ಬಳಿಕ ಪುಷ್ಯಮಿತ್ರ ಸೇನಾಪತಿಯು ಬೃಹದ್ರಥನೆಂಬ ರಾಜನನ್ನು ಕಿತ್ತುಹಾಕಿ ತಾನೇ ಸ್ವಂತವಾಗಿ ರಾಜನಾಗಿ ಅರವತ್ತು ವರ್ಷಗಳಕಾಲ ಅವಿಚ್ಛಿನ್ನವಾಗಿ ರಾಜ್ಯಭಾರವನ್ನು ವಹಿಸುವನು.

೩೩೨. ಆಮೇಲೆ ಪುಷ್ಯಮಿತ್ರನ ಎಂಟುಜನ ಕುಮಾರರೂ ರಾಜರಾಗಿ ಅನೇಕ ವರ್ಷಗಳು ರಾಜ್ಯವಾಳುವರು. ಅವರಲ್ಲಿ ಹಿರಿಯ ಕುಮಾರನು ಏಳುವರ್ಷಗಳು ಅಧಿಕವಾಗಿ ರಾಜ್ಯವನ್ನು ಪಾಲಿಸುವನು.

೩೩೩. ಅನಂತರ ಅವನ ಕುಮಾರನಾದ ವಸುಮಿತ್ರನು ಹತ್ತು ವರ್ಷಗಳು ರಾಜ್ಯಭಾರವನ್ನು ಧರಿಸುವನು. ಅವನ ತರುವಾಯ ಅವನ ಮಗನಾದ ಧ್ರುಕನೆಂಬುವನು ಎರಡು ವರ್ಷಗಳು ಮಾತ್ರ ರಾಜನಾಗುವನು.

**ಭವಿಷ್ಯಂತಿ ಸಮಾಸ್ತಸ್ಮಾತ್ ತ್ರಿಸ್ರ ಏವ ಪುಲಿಂದಕಾಃ ।**
**ರಾಜಾ ಘೋಷಸುತಶ್ಚಾಪಿ ವರ್ಷಾಣಿ ಭವಿತಾ ತ್ರಯಃ ॥ ೩೩೪ ॥**

**ತತೋ ವೈ ವಿಕ್ರಮಿತ್ರಸ್ತು ಸಮಾ ರಾಜಾ ತತಃ ಪುನಃ ।**
**ದ್ವಾತ್ರಿಂಶದ್ಭವಿತಾ ಚಾಪಿ ಸಮಾ ಭಾಗವತೋ ನೃಪಃ ॥ ೩೩೫ ॥**

**ಭವಿಷ್ಯತಿ ಸುತಸ್ತಸ್ಯ ಕ್ಷೇಮಭೂಮಿಃ ಸಮಾದಶ ।**
**ದಶೈತೇ ಶುಂಗರಾಜಾನೋ ಭೋಕ್ಷ್ಯಂತೀಮಾಂ ವಸುಂಧರಾಂ ॥ ೩೩೬ ॥**

**ಶತಂ ಪೂರ್ಣಂ ದಶ ದ್ವೇ ಚ ತೇಭ್ಯಃ ಕಿಂ ವಾ ಗಮಿಷ್ಯತಿ ।**
**ಅಪಾರ್ಥಿವಸುದೇವಂ ತು ಬಾಲ್ಯಾದ್ವ್ಯಸನಿನಂ ನೃಪಂ ॥ ೩೩೭ ॥**

---

೩೩೪. ಅವನ ನಂತರ ಪುಲಿಂದಕರು, ಮೂರು ಮೂರು ವರ್ಷಕಾಲವೂ, ತರುವಾಯ ಘೋಷಸುತನೂ ಸಹ ಮೂರು ವರ್ಷಗಳ ಕಾಲವೇ ರಾಜ್ಯವನ್ನು ಪಾಲಿಸುವರು.

೩೩೫. ಆ ಬಳಿಕ ವಿಕ್ರಮಿತ್ರನೆಂಬ ಮಹಾರಾಜನು ಕೆಲವು ಕಾಲ ರಾಜನಾಗುವನು. ಅವನ ನಂತರ ಭಗವದ್ಭಕ್ತನಾದ ಒಬ್ಬನೊಬ್ಬ ರಾಜನು ಮೂವತ್ತೆರಡು ವರ್ಷಗಳವರೆಗೂ ನಿರಾತಂಕವಾಗಿ ರಾಜ್ಯಪಾಲನೆಮಾಡುವನು.

೩೩೬. ಅವನ ಕುಮಾರನಾದ ಕ್ಷೇಮಭೂಮಿಯು ಹತ್ತು ವರ್ಷಗಳು ರಾಜನಾಗಿರುವನು. ಈ ಹತ್ತು ಜನ ಶುಂಗರಾಜರು ಈ ಭೂಮಂಡಲವನ್ನು ಸುಖವಾಗಿ ಕಾಪಾಡುವರು.

೩೩೭. ಮೇಲೆ ಹೇಳಿದ ಹತ್ತು ಜನ ರಾಜರು ನೂರಹನ್ನೆರಡು ವರ್ಷಗಳ ವರೆಗೂ ನಿರಾತಂಕವಾಗಿ ರಾಜ್ಯವನ್ನು ಪರಿಪಾಲಿಸುವರು. ಅನಂತರ ಅಪಾರ್ಥಿವಸು ದೇವನೆಂಬ ರಾಜನು ಬಾಲ್ಯದಿಂದಲೂ ಖಿನ್ನನಾಗಿ ಕೆಲವು ವರ್ಷಗಳು ರಾಜ್ಯ ವಾಳುವನು.

ದೇವಭೂಮಿಸ್ತತೋ ನ್ಯಕ್ಷ್ಯ ಶೃಂಗೇಷು ಭವಿತಾ ನೃಪಃ ।
ಭವಿಷ್ಯತಿ ಸಮಾ ರಾಜಾ ನವ ಕಂಠಾಯನಸ್ತು ಸಃ ॥ ೩೩೮ ॥

ಭೂತಿಮಿತ್ರಃ ಸುತಸ್ತಸ್ಯ ಚತುರ್ವಿಂಶದ್ಭವಿಷ್ಯತಿ ।
ಭವಿತಾ ದ್ವಾದಶ ಸಮಾಸ್ತಸ್ಯ ನಾರಾಯಣೋ ನೃಪಃ ॥ ೩೩೯ ॥

ಸುಶರ್ಮಾ ತತ್ಸುತಶ್ಚಾಪಿ ಭವಿಷ್ಯತಿಸಮಾ ದಶ ।
ಚತುರಸ್ತುಂಗಕೃತ್ಯಾಸ್ತೇ ನೃಪಾಃ ಕಂಠಾಯನಾ ದ್ವಿಜಾಃ ॥ ೩೪೦ ॥

ಭಾವ್ಯಾಃ ಪ್ರಣತಸಾಮಂತಾಶ್ಚತ್ವಾರಿಂಶಚ್ಚ ಪಂಚ ಚ ।
ತೇಷಾಂ ಪರ್ಯಾಯಕಾಲೇ ತ್ರ ತರಂಧಾ ತು ಭವಿಷ್ಯತಿ ॥ ೩೪೧ ॥

---

೩೩೮. ಅನಂತರ ದೇವಭೂಮಿಯೆಂಬ ರಾಜನು ಶೃಂಗದೇಶಕ್ಕೆ ರಾಜನಾಗುವನು. ಅವನ ತರುವಾಯ ಕಾಂಠಾಯನ ಮಹಾರಾಜನು ಒಂಬತ್ತು ವರ್ಷಕಾಲ ಭೂಪತಿಯಾಗುವನು.

೩೩೯. ಆ ಬಳಿಕ ಅವನ ಮಗನಾದ ಭೂತಿಮಿತ್ರನು ಇಪ್ಪತ್ತುನಾಲ್ಕು ಸಂವತ್ಸರಗಳು ರಾಜ್ಯಭಾರವನ್ನು ಧರಿಸುವನು. ಆಮೇಲೆ ನಾರಾಯಣನೆಂಬ ರಾಜಕುಮಾರನು ಹನ್ನೆರಡು ವರ್ಷಗಳು ರಾಜನಾಗುವನು.

೩೪೦. ಆ ನಾರಾಯಣನ ಸುತನಾದ ಸುಶರ್ಮನೆಂಬ ರಾಯನು ಹತ್ತು ವರ್ಷಗಳು ರಾಜ್ಯವನ್ನಾಳುವನು. ಉನ್ನತಾಧಿಕಾರಿಗಳೂ, ಮಹೋಪಕಾರಿಗಳೂ ಆದ ಈ ಕಾಂಠಾಯನ ಮಹಾರಾಜರು ನಾಲ್ವರು ಸುಪ್ರಸಿದ್ಧರಾಗುವರು.

೩೪೧. ಎಲೈ ವಿಪ್ರೋತ್ತಮರೇ, ಈ ಕಾಂಠಾಯನ ಮಹಾರಾಜರು ಲೋಕಮಾನ್ಯರೂ, ಧರ್ಮಾತ್ಮರೂ, ಸಮಸ್ತ ಸಾಮಂತರಾಜರಿಂದ ವಂದಿತರೂ, ಮಾನ್ಯರೂ ಆಗಿ ನಲವತ್ತೈದು ಸಂವತ್ಸರಗಳವರೆಗೂ ನಿಷ್ಕಂಟಕವಾಗಿ ರಾಜ್ಯವನ್ನು ಪಾಲಿಸುವರು. ಅವರ (ತರುವಾಯ) ಪರ್ಯಾಯಕಾಲವು ಕಳೆದ ತರುವಾಯ ತರಂಧನು ರಾಜನಾಗುವನು.

ಕಂಠಾಯನಮಥೋದ್ಧೃತ್ಯ ಸುಶರ್ಮಾಣಂ ಪ್ರಸಹ್ಯ ತಂ ।
ಶೃಂಗಾಣಾಂ ಚಾಪಿ ಯಚ್ಛಿಷ್ಟಂ ಕ್ಷಯಯಿತ್ವಾ ಬಲಂ ತದಾ ॥
ಸಿಂಧುಕೋ ಹ್ಯಾಂಧ್ರಜಾತೀಯಃ ಪ್ರಾಪ್ಸ್ಯತೀಮಾಂ ವಸುಂಧರಾಂ ॥ ೩೪೨ ॥

ತ್ರಯೋವಿಂಶತ್ಸಮಾ ರಾಜಾ ಸಿಂಧುಕೋ ಭವಿತಾ ತ್ವಥ ।
ಅಷ್ಟೌ ಭ್ರಾತಶ್ಚ ವರ್ಷಾಣಿ ತಸ್ಮಾದ್ದಶ ಭವಿಷ್ಯತಿ ॥ ೩೪೩ ॥

ಶ್ರೀಸಾತಕರ್ಣಿರ್ಭವಿತಾ ತಸ್ಯ ಪುತ್ರಸ್ತು ವೈ ಮಹಾನ್ ।
ಪಂಚಾಶತಂ ಸಮಾಃ ಷಟ್‌ಚ ಸಾತಕರ್ಣೀರ್ಭವಿಷ್ಯತಿ ॥ ೩೪೪ ॥

ಆಪಾದಬದ್ಧೋ ದಶ ವೈ ತಸ್ಯ ಪುತ್ರೋ ಭವಿಷ್ಯತಿ ।
ಚತುರ್ವಿಂಶತ್ತು ವರ್ಷಾಣಿ ಷಟ್ ಸಮಾ ವೈ ಭವಿಷ್ಯತಿ ॥ ೩೪೫ ॥

---

೩೪೨. ಅವರ ಕಾಲವಾದ ಮೇಲೆ ಆಂಧ್ರಜಾತೀಯನಾದ ಸಿಂಧುಕನು ಕಾಂಠಾಯನ ವಂಶೀಕನಾದ ಸುಶರ್ಮನನ್ನು ಬಲಾತ್ಕಾರವಾಗಿ ತೆಗೆದುಹಾಕಿ ಶೃಂಗರಾಜರಲ್ಲಿ ಉಳಿದವರೆಲ್ಲರನ್ನೂ ಮೂಲೋತ್ಪಾಟನವಾಡಿ ಈ ಭೂಮಿಯನ್ನು ಪಡೆದು ರಾಜನಾಗುವನು.

೩೪೩. ಆ ಬಳಿಕ ಸಿಂಧುಕರಾಜನು ಇಪ್ಪತ್ತುಮೂರು ವರ್ಷಗಳು ರಾಜನಾಗುವನು. ಅವನ ನಂತರ ಭ್ರಾತನು ಎಂಟು ವರ್ಷಗಳಕಾಲ ಈ ಪೃಥಿವಿಯನ್ನು ಪಾಲಿಸುವನು. ತರುವಾಯ ಸಾತಕರ್ಣನು ಹತ್ತು ಸಂವತ್ಸರಗಳು ಭೂಪತಿಯಾಗುವನು.

೩೪೪. ಅವನಿಗೆ ಮಹಾತ್ಮನಾದ ಸಾತಕರ್ಣಿಯೆಂಬ ಕುಮಾರನು ಉದ್ಭವಿಸುವನು. ಆ ಸಾತಕರ್ಣಿಯು ಐವತ್ತಾರು ವರ್ಷಗಳವರೆಗೂ ನಿರಾತಂಕವಾಗಿ ಈ ಭೂಮಂಡಲದಲ್ಲಿ ರಾಜನಾಗಿ ಪಾಲಿಸುವನು.

೩೪೫. ಅವನ ಕುಮಾರನಾದ ಆಪಾಬದ್ಧನು ಹತ್ತು, ಇಪ್ಪತ್ತುನಾಲ್ಕು ಮತ್ತು ಆರು ಒಟ್ಟುಕೂಡಿ ನಲವತ್ತು ವರ್ಷಗಳ ಕಾಲ ಈ ಭೂಭಾರವನ್ನು ವಹಿಸುವನು.

ಭವಿತಾ ನೇಮುಕೃಷ್ಣಸ್ತು ವರ್ಷಾಣಾಂ ಪಂಚವಿಂಶತಿಂ ।
ತತಃ ಸಂವತ್ಸರಂ ಪೂರ್ಣಂ ಹಾಲೋ ರಾಜಾ ಭವಿಷ್ಯತಿ ॥ ೩೪೬ ॥

ಪಂಚ ಸಪ್ತಕ ರಾಜಾನೋ ಭವಿಷ್ಯಂತಿ ಮಹಾಬಲಾಃ ।
ಭಾವ್ಯಃ ಪುತ್ರಿಕಷೇಣಸ್ತು ಸಮಾಃ ಸೋಽಪ್ಯೇಕವಿಂಶತಿಂ ॥ ೩೪೭ ॥

ಸಾತಕರ್ಣಿರ್ವರ್ಷಮೇಕಂ ಭವಿಷ್ಯತಿ ನರಾಧಿಪಃ ।
ಅಷ್ಟಾವಿಂಶತ್ತು ವರ್ಷಾಣಿ ಶಿವಸ್ವಾಮೀ ಭವಿಷ್ಯತಿ ॥ ೩೪೮ ॥

ರಾಜಾ ಚ ಗೌತಮೀಪುತ್ರ ಏಕವಿಂಶತ್ಸಮಾ ನೃಷು ।
ಏಕೋನವಿಂಶತಿಂ ರಾಜಾ ಯಜ್ಞಶ್ರೀಃ ಸಾತಕರ್ಣ್ಯಥ ॥ ೩೪೯ ॥

---

೩೪೬. ತರುವಾಯ ನೇಮಿಕೃಷ್ಣನು ಇಪ್ಪತ್ತೈದು ಸಂವತ್ಸರಗಳವರೆಗೂ ರಾಜನಾಗುವನು. ಅವನಂತರ ಹಾಲನೆಂಬ ರಾಜನು ಒಂದು ವರ್ಷಮಾತ್ರ ಭೂಪತಿಯಾಗುವನು.

೩೪೭. ತರುವಾಯ ಮಹಾಬಲಿಷ್ಠರಾದ ಏಳೆಂಟು ಜನ ರಾಜರುಗಳು ಐದೈದು ವರ್ಷಗಳು ರಾಜ್ಯಪರಿಪಾಲನೆ ಮಾಡುವರು. ತರುವಾಯ ಪುತ್ರಿಕಷೇಣನೆಂಬ ರಾಜನು ಜನಿಸಿ ಇಪ್ಪತ್ತೊಂದು ವರ್ಷಗಳು ರಾಜ್ಯವನ್ನು ಪಾಲಿಸುವನು.

೩೪೮. ತರುವಾಯ ಸಾತಕರ್ಣಿಯೆಂಬ ನರಾಧಿಪನು ಒಂದುವರ್ಷ ಮಾತ್ರ ರಾಜ್ಯವನ್ನು ಪಾಲಿಸುವನು. ಅನಂತರ ಶಿವಸ್ವಾಮಿಯು ಇಪ್ಪತ್ತೆಂಟು ವರ್ಷಗಳು ಪ್ರಭುವಾಗಿ ಪಾಲಿಸುವನು.

೩೪೯. ಆ ಬಳಿಕ ಗೌತಮೀ ಪುತ್ರನಾದ ಮಹಾರಾಜನು ಇಪ್ಪತ್ತೊಂದು ವರ್ಷಗಳು ಪ್ರಜೆಗಳನ್ನು ಪಾಲಿಸುವನು. ಅನಂತರ ಸಾತಕರ್ಣನ ಪುತ್ರನಾದ ಯಜ್ಞಶ್ರೀ ಎಂಬ ಮಹಾರಾಜನು ಹತ್ತೊಂಭತ್ತು ವರ್ಷಗಳು ಭೂಪತಿಯಾಗಿರುವನು.

ಷಡೇವ ಭವಿತಾ ತಸ್ಮಾತ್ ದ್ವಿಜಯಸ್ತು ಸಮಾ ನೃಪಃ ।
ಚಂಡಶ್ರೀಃ ಸಾತಕರ್ಣೀ ಚ ತಸ್ಯ ಪುತ್ರಃ ಸಮಾಸ್ತ್ರಯಃ ॥ ೩೫೦ ॥

ಪುಲೋಮಾಪಿ ಸಮಾಃ ಸಪ್ತ ಅನ್ಯೇಷಾಂ ಚ ಭವಿಷ್ಯತಿ ।
ಇತ್ಯೇತೇ ವೈ ನೃಪಾಸ್ತ್ರಿಂಶದಾಂಧ್ರಾ ಭೋಕ್ಷ್ಯಂತಿ ಯೇ ಮಹೀಂ ॥ ೩೫೧ ॥

ಸಮಾಃ ಶತಾನಿ ಚತ್ವಾರಿ ಪಂಚ ಷಡ್ವೈ ತಥೈವ ಚ ।
ಆಂಧ್ರಾಣಾಂ ಸಂಸ್ಥಿತಾಃ ಪಂಚ ತೇಷಾಂ ವಂಶಾಃ ಸಮಾಃ ಪುನಃ ॥ ೩೫೨ ॥

ಸಪ್ತೈವ ತು ಭವಿಷ್ಯಂತಿ ದಶಾಭೀರಾಸ್ತತೋ ನೃಪಾಃ ।
ಸಪ್ತ ಗರ್ದಭಿನಶ್ಚಾಪಿ ತತೋಽಥ ದಶ ವೈ ಶಕಾಃ ॥ ೩೫೩ ॥

---

೩೫೦. ಅವನ ನಂತರ ವಿಜಯನೃಪಾಲನು ಆರು ವರ್ಷಗಳು ಮಾತ್ರ ಪ್ರಜೆಗಳನ್ನು ಪಾಲಿಸುವನು. ಆ ಬಳಿಕ ಸಾತಕರ್ಣನ ಕುಮಾರನಾದ ಚಂಡಶ್ರೀ ಎಂಬುವನು ಮೂರು ವರ್ಷಗಳು ಪ್ರಜೆಗಳನ್ನು ಪಾಲಿಸುವನು.

೩೫೧. ಅವರ ತರುವಾಯ ಪುಲೋಮನು ಏಳು ವರ್ಷಗಳು ರಾಜ್ಯವನ್ನು ಪಾಲಿಸುವನು. ಅವನಂತೆ ಅನ್ಯರಾಜರೂ ಸಹ ಕೆಲವು ಕಾಲ ರಾಜ್ಯವನ್ನು ಪಾಲಿಸುವರು. ಅವರ ತರುವಾಯ ಈ ಆಂಧ್ರರು ಮೂವತ್ತು ವರ್ಷಗಳು ದೇಶಗಳನ್ನು ಆಳುವರು.

೩೫೨. ಹೀಗೆ ಆಂಧ್ರರು ಐದು ವಂಶದವರು ಒಂದು ಸಾವಿರದ ಐದುನೂರು ವರ್ಷಗಳವರೆಗೂ ರಾಜ್ಯವನ್ನು ಆಳುವರು. ಆಂಧ್ರರ ಕಾಲವು ಅಲ್ಲಿಯವರೆಗೂ ವ್ಯಾಪ್ತವಾಗಿರುವುದು.

೩೫೩. ಅನಂತರ ಆಭೀರರು ಹದಿನೇಳು ವರ್ಷಗಳು ರಾಜ್ಯವನ್ನಾಳುವರು. ಈ ಆಭೀರ ರಾಜರು ಸುಪ್ರಸಿದ್ಧರಾಗಿಯೂ ಮಹಾಶೂರರಾಗಿಯೂ ಇರುವರು. ಅನಂತರ ಗರ್ದಭಿನರು ಏಳು ವರ್ಷಗಳೂ, ತರುವಾಯ ಶಕರು ಹತ್ತು ಸಂವತ್ಸರಗಳೂ ರಾಜ್ಯವಾಳುವರು.

**ಯವನಾಷ್ಟೌ ಭವಿಷ್ಯಂತಿ ತುಷಾರಾಸ್ತು ಚತುರ್ದಶ ।**
**ತ್ರಯೋದಶ ಮರುಂಡಾಶ್ಚ ಮೌನಾ ಹ್ಯಷ್ಟಾದಶೈವ ತು ॥ ೩೫೪ ॥**

**ಅಂಧ್ರಾ ಭೋಕ್ಷ್ಯಂತಿ ವಸುಧಾಂ ಶತೇ ದ್ವೇ ಚ ಶತಂ ಚ ವೈ ।**
**ಶತಾನಿ ತ್ರೀಣ್ಯಶೀತಿಂ ಚ ಭೋಕ್ಷ್ಯಂತಿ ವಸುಧಾಂ ಶಕಾಃ ॥ ೩೫೫ ॥**

**ಅಶೀತಿಂ ಚೈವ ವರ್ಷಾಣಿ ಭೋಕ್ತಾರೋ ಯವನಾ ಮಹೀಂ ।**
**ಪಂಚವರ್ಷಶತಾನೀಹ ತುಷಾರಾಣಾಂ ಮಹೀ ಸ್ಮೃತಾಃ ॥ ೩೫೬ ॥**

**ಶತಾನ್ಯರ್ಧ್ವ ಚತುರ್ಥಾನಿ ಭವಿತಾರಸ್ತ್ರಯೋದಶ ।**
**ಮರುಂಡಾ ವೃಷಲೈಃ ಸಾರ್ಧಂ ಭಾವ್ಯಾನ್ಯಾಮ್ಲೇಚ್ಛಜಾತಯಃ ॥ ೩೫೭ ॥**

---

೩೫೪. ಆ ಬಳಿಕ ಯವನರು ಏಳು ವರ್ಷಗಳೂ, ತರುವಾಯ ತುಷಾರರು ಹದಿನಾಲ್ಕು ವರ್ಷಗಳೂ, ಮರುಂಡರು ಹದಿಮೂರು ವರ್ಷಗಳೂ, ಮೌನರು ಹದಿನೆಂಟು ವರ್ಷಗಳೂ ರಾಜ್ಯಭಾರ ಮಾಡುವರು.

೩೫೫. ಹೀಗೆ ಆಂಧ್ರರು ಮುನ್ನೂರು ವರ್ಷಗಳೂ, ಶಕರು ಮುನ್ನೂರು ಎಂಭತ್ತು ಸಂವತ್ಸರಗಳೂ ಈ ಭೂಮಿಯನ್ನು ಚಕ್ರವರ್ತಿಗಳಾಗಿ ಸುಖದಿಂದ ಪರಿಪಾಲಿಸುವರು.

೩೫೬. ಅನಂತರ ಯವನರು ಈ ಭೂಮಿಯನ್ನು ಎಂಭತ್ತು ವರ್ಷಗಳವರೆಗೂ ಸುಖವಾಗಿ ಆಳುವರು. ಅವರ ತರುವಾಯ ತುಷಾರರು ಐದುನೂರು ವರ್ಷಗಳು ಭೂಮಂಡಲವನ್ನು ಪಾಲಿಸುವರು.

೩೫೭. ಆ ಬಳಿಕ ಮರುಂಡರೂ, ಶೂದ್ರರೂ ಇವರು ಇನ್ನೂರು ಹದಿಮೂರು ವರ್ಷಗಳು ಈ ಭೂಭಾರವನ್ನು ವಹಿಸುವರು. ಈ ಮರುಂಡಾದಿಗಳು ಮ್ಲೇಚ್ಛ ಜಾತಿಗೆ ಸೇರಿರುವರು. ಇವರು ರಾಜ್ಯವನ್ನಾಳುವರು.

ಶತಾನಿ ತ್ರೀಣಿ ಭೋಕ್ಷ್ಯಂತಿ ಮ್ಲೇಚ್ಛಾ ಏಕಾದಶೈವ ತು ।
ತಚ್ಛನ್ನೇನ ಚ ಕಾಲೇನ ತತಃ ಕೋಲಿಕಿಲಾ ವೃಷಾಃ ॥ ೩೫೮ ॥

ತತಃ ಕೋಲಿಕಿಲೇಭ್ಯಶ್ಚ ವಿಂಧ್ಯಶಕ್ತಿರ್ಭವಿಷ್ಯತಿ ।
ಸಮಾಃ ಷಣ್ಣವತಿಂ ಜ್ಞಾತ್ವಾ ಪೃಥಿವೀಂ ಚ ಸಮೇಷ್ಯತಿ ॥ ೩೫೯ ॥

ವೃಷಾನ್ ವೈ ದಿಶಕಾಂಶ್ಚಾಪಿ ಭವಿಷ್ಯಾಂಶ್ಚ ನಿಬೋಧತ ।
ಶೇಷಸ್ಯ ನಾಗರಾಜಸ್ಯ ಪುತ್ರಃ ಸ್ವರಪುರಂಜಯಃ ॥ ೩೬೦ ॥

ಭೋಗೀ ಭವಿಷ್ಯತೇ ರಾಜಾ ನೃಪೋ ನಾಗಕುಲೋದ್ವಹಃ ।
ಸದಾಚಂದ್ರಸ್ತು ಚಂದ್ರಾಂಶೋ ದ್ವಿತೀಯೋ ನಖವಾಂಸ್ತಥಾ ॥ ೩೬೧ ॥

---

೩೫೮. ಅವರನಂತರ ಮ್ಲೇಚ್ಛರು ಮುನ್ನೂರಹನ್ನೊಂದು ಸಂವತ್ಸರಗಳು ಈ ಭೂಸಾಮ್ರಾಜ್ಯವನ್ನನುಭವಿಸುವರು. ತದನಂತರ ಕೋಲಿಕಿಲನಾಮಕರಾದ ಶೂದ್ರರು ಪ್ರಚ್ಛನ್ನವಾಗಿ ಕೆಲವುಕಾಲ ಸಾಮ್ರಾಜ್ಯಪದವಿಯನ್ನು ಅನುಭವಿಸುವರು.

೩೫೯. ಈ ಮಧ್ಯದಲ್ಲಿ ಕೋಲಿಕಿಲರೆಂಬ ಶೂದ್ರರಿಗೆ ವಿಂಧ್ಯಗಿರಿಯಲ್ಲಿ ವಾಸಿಸುವ ಜನರ ಸಹಾಯವುಂಟಾಗಿ, ಮತ್ತು ತೊಂಭತ್ತಾರು ವರ್ಷಗಳು ಈ ಭೂಮಂಡಲವನ್ನಾಳುವರು.

೩೬೦. ಈಗ ವೃಷರನ್ನೂ ಪರದೇಶದವರಾಗಿ ಬರುವ ಇತರ ಜಾತೀಯರನ್ನೂ ನಿರೂಪಿಸುವೆನು ಕೇಳಿರೆಂದನು.

೩೬೧. ಸರ್ಪಗಳಿಗೆ ರಾಜನಾದ ಆದಿಶೇಷನ ಕುಮಾರನೂ, ನಾಗಕುಲ ಸಂಭೂತನೂ ಆದ ಸ್ವರಪುರಂಜಯನೆಂಬುವನು ಮನುಷ್ಯರೂಪದಿಂದ ಅವತರಿಸಿ ಈ ಭೂಮಿಗೆ ಪತಿಯಾಗುವನು. ಅವನ ನಂತರ ಚಂದ್ರಾಂಶನೂ ನಖವಂತನೂ ಆದ ಸದಾ ಚಂದ್ರನಾಮಕನಾದ ರಾಜನು ಈ ಭೂಮಿಯನ್ನು ಪಾಲಿಸುವನು.

ಧನಧರ್ಮಾ ತತಶ್ಚಾಪಿ ಚತುರ್ಥೋ ವಿಂಶಜಃ ಸ್ಮೃತಃ ।
ಭೂತಿನಂದಸ್ತತಶ್ಚಾಪಿ ವೈದೇಶೇ ತು ಭವಿಷ್ಯತಿ ॥ ೩೬೨ ॥

ಅಂಗಾನಾಂ ನಂದನಸ್ಯಾಂತೇ ಮಧುನಂದಿರ್ಭವಿಷ್ಯತಿ ।
ತಸ್ಯ ಭ್ರಾತಾ ಯವೀಯಾಂಸ್ತು ನಾಮ್ನಾ ನಂದಿಯಶಾಃ ಕಿಲ ॥ ೩೬೩ ॥

ತಸ್ಯಾನ್ವಯೇ ಭವಿಷ್ಯಂತಿ ರಾಜಾನಸ್ತೇ ತ್ರಯಸ್ತು ವೈ ।
ದೌಹಿತ್ರಃ ಶಿಶುಕೋ ನಾಮ ಪುರಿಕಾಯಾಂ ನೃಪೋಽಭವತ್ ॥ ೩೬೪ ॥

ವಿಂಧ್ಯಶಕ್ತಿಸುತಶ್ಚಾಪಿ ಪ್ರವೀರೋ ನಾಮ ವೀರ್ಯವಾನ್ ।
ಭೋಕ್ಷ್ಯಂತಿ ಚ ಸಮಾ ಷಷ್ಟಿಂ ಪುರೀಂ ಕಾಂಚನಕಾಂ ಚ ವೈ ॥ ೩೬೫ ॥

ಯಕ್ಷ್ಯಂತಿ ವಾಜಪೇಯೈಶ್ಚ ಸಮಾಪ್ತವರದಕ್ಷಿಣೈಃ ।
ತಸ್ಯ ಪುತ್ರಾಸ್ತು ಚತ್ವಾರೋ ಭವಿಷ್ಯಂತಿ ನರಾಧಿಪಾಃ ॥ ೩೬೬ ॥

---

೩೬೨. ತರುವಾಯ ನಾಲ್ಕನೆಯ ಧನಧರ್ಮನು ಇಪ್ಪತ್ತನೆಯ ದೊರೆಯಾಗಿ ಭೂಮಿಯನ್ನು ರಕ್ಷಿಸುವನು. ಅನಂತರ ಭೂತಿನಂದನು ವಿದೇಶದಲ್ಲಿ ರಾಜನಾಗಿ ಆಳುವನು.

೩೬೩. ಅಂಗದೇಶದ ರಾಜನಾದ ನಂದನನ ತರುವಾಯ ಮಧುನಂದಿಯು ದೊರೆಯಾಗುವನು. ಅವನಾದ ಬಳಿಕ ಅವನ ಕಿರಿಯ ತಮ್ಮನಾದ ನಂದಿಯಶಸನು ಬಹುಕಾಲ ರಾಜ್ಯಭಾರವನ್ನು ವಹಿಸುವನು.

೩೬೪. ಆ ನಂದಿಯಶಸಿನ ವಂಶದಲ್ಲಿ ಮೂವರು ರಾಜರು ಉದ್ಭವಿಸುವರು. ಅವನ ಮೊಮ್ಮಗನಾದ ಶಿಶುಕನೆಂಬುವನು ಪುರಿಕಾನಗರಿಗೆ ರಾಜನಾಗುವನು.

೩೬೫. ವಿಂಧ್ಯಶಕ್ತಿಯ ಕುಮಾರನೂ, ಶಕ್ತಿವಂತನೂ ಆದ ಪ್ರವೀರನೆಂಬ ಮಹಾರಾಜನು ಅರವತ್ತು ವರ್ಷಗಳಕಾಲ ಕಾಂಚನಕ ನಗರಿಯಲ್ಲಿ ಪ್ರಜಾಪಾಲಕನಾಗುವನು.

೩೬೬. ಆ ಪ್ರವೀರಮಹಾರಾಜನು ಸಂಪೂರ್ಣವಾದ ದಕ್ಷಿಣೆಯಿಂದ ಸಹಿತವಾದ ವಾಜಪೇಯ ಯಾಗಗಳನ್ನು ಮಾಡುವನು. ಅವನಿಗೆ ನಾಲ್ವರು ಕುಮಾರರು ಜನಿಸಿ ರಾಜರಾಗುವರು.

ವಿಂಧ್ಯಕಾನಾಂ ಕುಲೇಽತೀತೇ ನೃಪಾ ವೈ ಬಾಹ್ಲಿಕಾಸ್ತ್ರಯಃ ।
ಸುಪ್ರತೀಕೋ ನಭೀರಸ್ತು ಸಮಾ ಭೋಕ್ಷ್ಯತಿ ತ್ರಿಂಶತಿಂ ॥ ೩೬೭ ॥

ಶಕ್ಯಮಾ ನಾಮ ವೈ ರಾಜಾ ಮಾಹಿಷೀನಾಂ ಮಹೀಪತಿಃ ।
ಪುಷ್ಪಮಿತ್ರಾ ಭವಿಷ್ಯಂತಿ ಪಟ್ಟಮಿತ್ರಾಸ್ತ್ರಯೋದಶ ॥ ೩೬೮ ॥

ಮೇಕಲಾಯಾಂ ನೃಪಾಃ ಸಪ್ತ ಭವಿಷ್ಯಂತಿ ಚ ಸತ್ತಮಾಃ ।
ಕೋಮಲಾಯಾಂ ತು ರಾಜಾನೋ ಭವಿಷ್ಯಂತಿ ಮಹಾಬಲಾಃ ॥ ೩೬೯ ॥

ಮೇಘಾ ಇತಿ ಸಮಾಖ್ಯಾತಾ ಬುದ್ಧಿಮಂತೋ ನವೈವ ತು ।
ನೈಷಧಾಃ ಪಾರ್ಥಿವಾಃ ಸರ್ವೇ ಭವಿಷ್ಯಂತ್ಯಾಮನುಕ್ಷಯಾತ್ ॥ ೩೭೦ ॥

ನಲವಂಶಪ್ರಸೂತಾಸ್ತೇ ವೀರ್ಯವಂತೋ ಮಹಾಬಲಾಃ ।
ಮಾಗಧಾನಾಂ ಮಹಾವೀರ್ಯೋ ವಿಶ್ವಸ್ಫಾನಿರ್ಭವಿಷ್ಯತಿ ॥ ೩೭೧ ॥

---

೩೬೭. ವಿಂಧ್ಯಕರ ವಂಶವು ಕಳೆದುಹೋಗಲು ಬಾಹ್ಲಿಕರು ರಾಜರಾಗುವರು. ಅವರು ಮೂವರಿರುವರು. ಅವರು ಸುಪ್ರತೀಕ ನಭೀಕರಿಂದ ಕೂಡಿ ಸಮವಾಗಿ ಮೂವತ್ತು ವರ್ಷಗಳು ಪ್ರಜೆಗಳನ್ನು ಪಾಲಿಸುವರು.

೩೬೮. ತರುವಾಯ ಶಕ್ಯಮನೆಂಬ ಮಹೀಪತಿಯು ಮಹಿಷೀನಾಮಕ ದೇಶಕ್ಕೆ ರಾಜನಾಗಿ ಪ್ರಜಾರಕ್ಷಕನಾಗುವನು. ಆವನನಂತರ ಪುಷ್ಪಮಿತ್ರ ಪಟ್ಟಮಿತ್ರಾದಿ ಹದಿಮೂರುಜನ ರಾಜರು ಪ್ರಜೆಗಳನ್ನು ರಕ್ಷಿಸುವರು.

೩೬೯. ಮೇಕಲದೇಶದಲ್ಲಿ ಮಹಾನುಭಾವರೂ, ಉತ್ತಮರೂ ಆದ ಏಳು ಜನ ಮಹಾರಾಜರು ಪ್ರಜಾಪಾಲಕರಾಗುವರು. ಆಗ ಕೋಮಲದೇಶದಲ್ಲಿ ಮಹಾಬಲ ಶಾಲಿಗಳಾದ ಅನೇಕ ರಾಜರು ಪ್ರಜಾರಂಜಕರಾಗುವರು.

೩೭೦. ಮೇಘನಾಮಕರೂ, ಮಹಾಬುದ್ಧಿಶಾಲಿಗಳೂ ನವಸಂಖ್ಯಾಕರೂ ಆದ ಮಹಾರಾಜರು ನಿಷಧದೇಶಾಧಿಪತಿಗಳಾಗಿ ಬಹುಕಾಲ ಸುಖವಾಗಿ ಪ್ರಜೆಗಳನ್ನು ಪಾಲಿಸುವರು.

೩೭೧. ನಲವಂಶದಲ್ಲಿ ಸಂಭೂತರೂ, ಮಹಾಬಲಶಾಲಿಗಳೂ, ಮಹಾಶಕ್ತರೂ ಆದ ಅನೇಕ ಮಹಾರಾಜರು ಭೂಮಿಯನ್ನು ರಕ್ಷಿಸುವರು. ಆಗ ಮಹಾವೀರ್ಯ ವಂತನಾದ ವಿಶ್ವಸ್ಫಾನಿಯು ಮಗಧದೇಶದ ರಾಜನಾಗಿ ಪ್ರಜೆಗಳನ್ನು ಪಾಲಿಸುವನು.

ಉತ್ಸಾದ್ಯ ಪಾರ್ಥಿವಾನ್ ಸರ್ವಾನ್ಸೋಽನ್ಯಾನ್ ವರ್ಣಾನ್ ಕರಿಷ್ಯತಿ ।
ಕೈವರ್ತಾನ್ ಪಂಚಕಾಂ ಶ್ಚೈವ ಪುಲಿಂದಾನ್ ಬ್ರಾಹ್ಮಣಾಂಸ್ತಥಾ ॥ ೩೭೨ ॥

ಸ್ಥಾಪಯಿಷ್ಯಂತಿ ರಾಜಾನೋ ನಾನಾದೇಶೇಷು ತೇಜಸಾ ।
ವಿಶ್ವಸ್ಫಾನಿರ್ಮಹಾಸತ್ವೋ ಯುದ್ಧೇ ವಿಷ್ಣುಸಮೋ ಬಲೀ ॥ ೩೭೩ ॥

ವಿಶ್ವಸ್ಫಾನಿರ್ನರಪತಿಃ ಕ್ಲೀಬಾಕೃತಿರಿವೋಚ್ಯತೇ ।
ಉತ್ಪಾದಯಿತ್ವಾ ಕ್ಷತ್ರಂ ತು ಕ್ಷತ್ರಮನ್ಯತ್ ಕರಿಷ್ಯತಿ ॥ ೩೭೪ ॥

ದೇವಾನ್ ಪಿತೄಂಶ್ಚ ವಿಪ್ರಾಂಶ್ಚ ತರ್ಪಯಿತ್ವಾ ಸಕೃತ್ಪುನಃ ।
ಜಾಹ್ನವೀತೀರಮಾಸಾದ್ಯ ಶರೀರಂ ಯಸ್ಯತೇ ಬಲೀ ॥ ೩೭೫ ॥

ಸನ್ಯಸ್ಯ ಸ್ವಶರೀರಂ ತು ಶಕ್ರಲೋಕಂ ಗಮಿಷ್ಯತಿ ।
ನವನಾಕಾಸ್ತು ಭೋಕ್ಷ್ಯಂತಿ ಪುರೀಂ ಚಂಪಾವತೀಂ ನೃಪಾಃ ॥ ೩೭೬ ॥

---

೩೭೨–೩೭೩. ಆ ವಿಶ್ವಸ್ಫಾನಿಯು ಮಹಾಬಲಶಾಲಿಯೂ, ಅತ್ಯಂತ ಸಮರ್ಥನೂ, ಸಮರದಲ್ಲಿ ವಿಷ್ಣುವಿಗೆ ಸಮಾನವಾದ ಶಕ್ತಿವಂತನೂ ಆಗಿರುವನು. ಆದುದರಿಂದ ಅವನು ಸಮಸ್ತರಾದ ದುಷ್ಟರಾಜರನ್ನು ಮೂಲೋತ್ಪಾಟನಮಾಡಿ ಅನ್ಯವರ್ಣದವರನ್ನು ರಾಜನನ್ನಾಗಿ ಮಾಡುವನು. ಮತ್ತು ಕೈವರ್ತಕರು, ಪಂಚಕರು, ಪುಲಿಂದರು, ಬ್ರಾಹ್ಮಣರು ಇವರೇ ಮೊದಲಾದವರನ್ನು ನಾನಾ ದೇಶಗಳಲ್ಲಿ ಸ್ವಶಕ್ತಿಯಿಂದ ಸ್ಥಾಪಿಸುವನು.

೩೭೪–೩೭೬. ಆ ವಿಶ್ವಸ್ಫಾನಿಯಾದ ಮಹಾರಾಜನು ನೋಡಲು ನಪುಂಸಕನಂತೆ ಇದ್ದರೂ ದುಷ್ಟರಾದ ಕ್ಷತ್ರಿಯರನ್ನು ತೆಗೆದುಹಾಕಿ ಇತರರನ್ನು ಅವನು ಸ್ಥಾಪಿಸುವನು. ಶೂರನಾದ ಆ ಮಹಾರಾಜನು ದೇವತೆಗಳು, ಪಿತೃಗಳು ಮತ್ತು ಬ್ರಾಹ್ಮಣರು ಇವರೇ ಮೊದಲಾದವರನ್ನು ತೃಪ್ತಿಗೊಳಿಸಿ, ಗಂಗಾತೀರವನ್ನು ಹೊಂದಿ ಸರ್ವಸ್ವವನ್ನೂ ತ್ಯಾಗಮಾಡಿ ನಿಯಮದಿಂದ ಧ್ಯಾನಿಸಿ, ತರುವಾಯ ಸ್ವರ್ಗಲೋಕವನ್ನು ಹೊಂದುವನು. ಅವನನಂತರ ನವನಾಕರೆಂಬ ಮಹಾರಾಜರು ಚಂಪಾವತೀ ನಗರಿಯಲ್ಲಿ ಪ್ರಜಾಪಾಲಕರಾಗಿರುವರು.

ಮಥುರಾಂ ಚ ಪುರೀಂ ರಮ್ಯಾಂ ನಾಗಾ ಭೋಕ್ಷ್ಯಂತಿ ಸಪ್ತ ವೈ ।
ಅನುಗಂಗಂ ಪ್ರಯಾಗಂ ಚ ಸಾಕೇತಂ ಮಗಧಾಂಸ್ತಥಾ ॥
ಏತಾಂಜನಪದಾನ್ ಸರ್ವಾನ್ ಭೋಕ್ಷ್ಯಂತೇ ಗುಪ್ತವಂಶಜಾಃ ॥ ೩೭೭ ॥

ನಿಷಧಾನ್ ಯದುಕಾಂ ಶ್ಚೈವ ಶೈಶೀತಾನ್ ಕಾಲತೋಪಕಾನ್ ।
ಏತಾಂಜನಪದಾನ್ ಸರ್ವಾನ್ ಭೋಕ್ಷ್ಯಂತಿ ಮಣಿಧಾನ್ಯಜಾಃ ॥ ೩೭೮ ॥

ಕೋಶಲಾಂ ಶ್ಚಾಂಧ್ರಪೌಂಢ್ರಾಶ್ಚ ತಾಮ್ರಲಿಪ್ತಾನ್ ಸಸಾಗರಾನ್ ।
ಚಂಪಾಂ ಚೈವ ಪುರೀಂ ರಮ್ಯಾಂ ಭೋಕ್ಷ್ಯಂತಿ ದೇವರಕ್ಷಿತಾಂ ॥ ೩೭೯ ॥

ಏತಾಂಜನಪದಾನ್ ಸರ್ವಾನ್ ಪಾಲಯಿಷ್ಯತಿ ವೈ ಗುಹಃ ॥ ೩೮೦ ॥

ಸ್ತ್ರೀರಾಷ್ಟ್ರಂ ಭಕ್ಷ್ಯಕಾಂಶ್ಚೈವ ಭೋಕ್ಷ್ಯತೇ ಕನಕಾಹ್ವಯಃ ।
ತುಲ್ಯಕಾಲಂ ಭವಿಷ್ಯಂತಿ ಸರ್ವೇ ಹ್ಯೇತೇ ಮಹೀಕ್ಷಿತಃ ॥ ೩೮೧ ॥

---

೩೭೭. ಆ ಸಮಯದಲ್ಲಿ ನಾಗನಾಮಕರಾದ ರಾಜರು ಏಳು ವರ್ಷಗಳು ಸುಂದರವೂ, ಸರ್ವಸಂಪತ್ಸಮನ್ವಿತವೂ ಆದ ಮಧುರಾಪುರಿಯನ್ನಾಳುವರು. ತರುವಾಯ ಗುಪ್ತವಂಶಜ ರಾಜರು ಗಂಗಾತೀರಗತವಾದ ಪ್ರಯಾಗಕ್ಷೇತ್ರವನ್ನೂ, ಸಾಕೇತನಗರಿಯನ್ನೂ. ಮಗಧದೇಶವನ್ನೂ, ಇವೇ ಮೊದಲಾದ ದೇಶಗಳನ್ನೂ ಆಳುವರು.

೩೭೮. ಅದೇ ಕಾಲದಲ್ಲಿಯೇ ಮಣಿಧಾನ್ಯವಂಶದವರು ನಿಷಧ, ಯದುಕ, ಶೈಶೀತ, ಕಾಲತೋಪಕ ಇವೇ ಮೊದಲಾದ ದೇಶಗಳನ್ನು ಬಹುಕಾಲ ಆಳುವರು.

೩೭೯–೩೮೦. ಅವರ ತರುವಾಯ ಗುಹನೆಂಬ ಮಹಾರಾಯನು ಕೋಶಲ, ಆಂಧ್ರ, ಪೌಂಢ್ರ, ತಾಮ್ರಲಿಪ್ತ, ಅತಿಮನೋಹರವೂ ದೇವರಕ್ಷಿತವೂ ಆದ ಚಂಪಾಪುರೀ, ಕಲಿಂಗ, ಮಹಿಷ, ಮಹೇಂದ್ರನಿಲಯ ಇವೇ ಮೊದಲಾದ ಅನೇಕ ದೇಶಗಳನ್ನು ಧರ್ಮದಿಂದಲೂ ಸುಖದಿಂದಲೂ ಪ್ರಜೆಗಳನ್ನು ರಕ್ಷಿಸುತ್ತಾ ರಾಜ್ಯ ಭಾರವನ್ನು ಧರಿಸುವನು.

೩೮೧. ಕನಕನೆಂಬ ಮಹಾರಾಜನು ಸ್ತ್ರೀರಾಷ್ಟ್ರ ಮತ್ತು ಭಕ್ಷ್ಯಕವೆಂಬ ದೇಶವನ್ನು ಸುಖವಾಗಿ ಪರಿಪಾಲನೆ ಮಾಡುವನು. ಈ ಮೇಲೆ ನಿರೂಪಿಸಿದ ರಾಜರೆಲ್ಲರೂ ಸಮಕಾಲದಲ್ಲಿಯೇ ರಾಜ್ಯಪಾಲನೆ ಮಾಡುವರು.

ಅಲ್ಪಪ್ರಸಾದಾ ಹ್ಯನೃತಾ ಮಹಾಕ್ರೋಧಾಃ ಹ್ಯಧಾರ್ಮಿಕಾಃ ।
ಭವಿಷ್ಯಂತೀಹ ಯವನಾ ಧರ್ಮತಃ ಕಾಮತೋರ್ಥತಃ || ೩೮೨ ||

ನೈವ ಮೂರ್ಧಾಭಿಷಿಕ್ತಾಸ್ತೇ ಭವಿಷ್ಯಂತಿ ನರಾಧಿಪಾಃ ।
ಯುಗದೋಷದುರಾಚಾರಾ ಭವಿಷ್ಯಂತಿ ನೃಪಾಸ್ತು ತೇ || ೩೮೩ ||

ಸ್ತ್ರೀಣಾಂ ಬಲವಧೇನೈವ ಹತ್ವಾ ಚೈವ ಪರಸ್ಪರಂ ।
ಭೋಕ್ಷ್ಯಂತಿ ಕಲಿಶೇಷೇ ತು ವಸುಧಾಂ ಪಾರ್ಥಿವಾಸ್ತಥಾ || ೩೮೪ ||

ಉದಿತೋದಿತವಂಶಾಸ್ತೇ ಉದಿತಾಸ್ತಮಿತಾಸ್ತಥಾ ।
ಭವಿಷ್ಯಂತೀಹ ಪರ್ಯಾಯೇ ಕಾಲೇನ ಪೃಥಿವೀಕ್ಷಿತಃ || ೩೮೫ ||

---

೩೮೨. ಅವರ ತರುವಾಯ ಧರ್ಮಾರ್ಥಕಾಮಗಳಿಗೆ ವಶರಾದ ಯವನ ರಾಜರು ಅಲ್ಪಪ್ರಸಾದವಂತರೂ, ಅನೃತವಾದಿಗಳೂ, ಮಹಾಕೋಪಿಷ್ಠರೂ, ಅಧಾರ್ಮಿಕರೂ ಆಗಿ ರಾಜ್ಯವನ್ನಾಳುವರು.

೩೮೩. ಈ ಯವನಾದಿರಾಜರು ಕ್ರಮವಾಗಿಯೂ, ಶಾಸ್ತ್ರೋಕ್ತರೀತಿಯಿಂದ ಪಟ್ಟಾಭಿಷಕ್ತರಾಗದೇ ಬಲಾತ್ಕಾರದಿಂದ ಪರರ ರಾಜ್ಯವನ್ನು ಆಕ್ರಮಿಸಿದವರೂ, ಯುಗದೋಷದಿಂದ ದುರಾಚಾರಿಗಳೂ, ಕ್ರೂರಕರ್ಮಿಗಳೂ ಆಗಿರುವರು.

೩೮೪. ಮತ್ತು ಕಲಿಕಾಲದ ಕೊನೆಯ ಭಾಗದಲ್ಲಿ ಕೆಲವು ರಾಜರು ಸ್ತ್ರೀಹತ್ಯ, ಬಾಲಹತ್ಯಾದಿಗಳನ್ನು ಮಾಡಲು ಸ್ವಲ್ಪವೂ ಹಿಂಜರಿಯದೇ ಪರಸ್ಪರ ದ್ವೇಷಾಸೂಯೆ ಗಳಿಂದ ಕಲಹವನ್ನು ಮಾಡಿ ಇತರರ ರಾಜ್ಯವನ್ನು ಆಕ್ರಮಿಸುವರು.

೩೮೫. ತರುವಾಯ ಕಾಲಾನುಸಾರವಾಗಿ ಉದಿತೋದಿವಂಶದವರೂ, ಉದಿತಾಸ್ತಮಿತ ವಂಶದವರೂ ಆದ ಮಹಾರಾಜರುಗಳು ಪರ್ಯಾಯಕ್ರಮದಿಂದ ಈ ಭೂಮಿಯನ್ನು ಆಳುವರು.

ವಿಹೀನಾಸ್ತು ಭವಿಷ್ಯಂತಿ ಧರ್ಮತಃ ಕಾಮತೋಽರ್ಥತಃ ।
ತೈರ್ವಿಮಿಶ್ರಾ ಜನಪದಾ ಮ್ಲೇಚ್ಛಾಚಾರಾಶ್ಚ ಸರ್ವಶಃ ॥ ೩೮೬ ॥

ವಿಪರ್ಯಯೇನ ವರ್ತಂತೇ ನಾಶಯಿಷ್ಯಂತಿ ವೈ ಪ್ರಜಾಃ ।
ಲುಬ್ಧಾನೃತರತಾಶ್ಚೈವ ಭವಿತಾರಸ್ತದಾ ನೃಪಾಃ ॥ ೩೮೭ ॥

ತೇಷಾಂ ವ್ಯತೀತೇ ಪರ್ಯಾಯೇ ಬಹುಸ್ತ್ರೀಕೇ ಯುಗೇ ತದಾ ।
ಲವಾಲ್ಲವಂ ಭ್ರಶ್ಯಮಾನಾ ಆಯೂರೂಪಬಲಶ್ರುತೈಃ ॥ ೩೮೮ ॥

ತಥಾ ಗತಾಸ್ತು ವೈ ಕಾಷ್ಠಾಂ ಪ್ರಜಾಸು ಜಗತೀಶ್ವರಾಃ ।
ರಾಜಾನಃ ಸಂಪ್ರಣಶ್ಯಂತಿ ಕಾಲೇನೋಪಹತಾಸ್ತದಾ ॥ ೩೮೯ ॥

ಕಲ್ಕಿನೋಪಹತಾಃ ಸರ್ವೇ ಮ್ಲೇಚ್ಛಾ ಯಾಸ್ಯಂತಿ ಸರ್ವಶಃ ।
ಅಧಾರ್ಮಿಕಾಶ್ಚ ತೇಽತ್ಯರ್ಥಂ ಪಾಷಂಡಾಶ್ಚೈವ ಸರ್ವಶಃ ॥ ೩೯೦ ॥

---

೩೮೬. ಹೀಗೆ ಕಲಿಯ ಕೊನೆಯಭಾಗದಲ್ಲಿ ರಾಜಮನೆತನದವರು ಧರ್ಮಾರ್ಥ ಕಾಮಗಳಿಂದ ರಹಿತರಾಗಿ, ಕೆಲವುವೇಳೆ ಅವುಗಳಿಂದ ಸಹಿತರಾಗಿಯೂ ಇದ್ದು, ಒಟ್ಟಿನಲ್ಲಿ ಮ್ಲೇಚ್ಛಾಚಾರಿಗಳೂ ಧರ್ಮವಿರೋಧಿಗಳೂ ಆಗುವರು.

೩೮೭. ಆ ಕಲಿಕಾಲದ ರಾಜರು ಪರ್ಯಾಯಕ್ರಮದಿಂದ ರಾಜ್ಯವನ್ನು ಪಡೆದು, ಕಾಮಕ್ರೋಧಾದಿಗಳಿಗೆ ವಶರೂ, ಧರ್ಮವಿರೋಧಿಗಳೂ, ಪ್ರಜಾನಾಶಕರೂ ಆಗಿ ರಾಜ್ಯವಾಳುವರು.

೩೮೮. ಇಂತಹ ರಾಜರು ಯಾದವೀಕಲಹದಿಂದ ಪುರುಷರೆಲ್ಲರೂ ಮೃತರಾಗಲು, ಸ್ತ್ರೀಯರಿಗೆ ಪ್ರಾಬಲ್ಯವು ಉಂಟಾಗಿ, ಕ್ರಮವಾಗಿ ಆಯುಷ್ಯ, ರೂಪ, ಬಲ ಇವುಗಳಿಂದ ಶೂನ್ಯರಾದ ರಾಜರು ಕಾಲಧರ್ಮವನ್ನೂ ಹೊಂದುವರು.

೩೮೯-೩೯೦. ಹೀಗೆ ರಾಜರು ಕಾಲವಶದಿಂದ ರಾಜ್ಯಭಾರ ಮಾಡಿ ಗತಿಸಿ ಹೋಗಲು ಕ್ರಮವಾಗಿ ಕಲಿಯುಗಾಂತ್ಯವು ಪ್ರಾರಂಭವಾಗುವುದು. ಆಗ ಸ್ವಾಮಿಯಾದ ಭಗವಂತನು ಕಲ್ಕಿಯ ಅವತಾರವನ್ನು ಮಾಡಿ, ಮ್ಲೇಚ್ಛರೂ, ಅಧಾರ್ಮಿಕರೂ, ಪಾಷಂಡಿಗಳೂ ದುಷ್ಟರೂ ಆದ ರಾಜರುಗಳನ್ನು ಸಂಪೂರ್ಣವಾಗಿ ಮೂಲೋತ್ಪಾಟನ ಮಾಡಿ ಧರ್ಮವನ್ನು ಸ್ಥಾಪಿಸುವನು.

ಪ್ರನಷ್ಟೇ ನೃಪಶಬ್ದೇ ಚ ಸಂಧ್ಯಾಶ್ಲಿಷ್ಟೇ ಕಲೌ ಯುಗೇ ।
ಕಿಂಚಿಚ್ಛಿಷ್ಟಾಃ ಪ್ರಜಾಸ್ತಾ ವೈ ಧರ್ಮೇ ನಷ್ಟೇಽಪರಿಗ್ರಹಃ ॥ ೩೯೧ ॥

ಅಸಾಧನಾ ಹತಾಶ್ವಾಸಾ ವ್ಯಾಧಿಶೋಕೇನ ಪೀಡಿತಾಃ ।
ಅನಾವೃಷ್ಟಿ ಹತಾಶ್ಚೈವ ಪರಸ್ಪರವಧೇನ ಚ ॥ ೩೯೨ ॥

ಅನಾಥಾ ಹಿ ಪರಿತ್ರಸ್ತಾ ವಾರ್ತಾಮುತ್ಸೃಜ್ಯ ದುಃಖಿತಾಃ ।
ತ್ಯಕ್ತ್ವಾ ಪುರಾಣಿ ಗ್ರಾಮಾಂಶ್ಚ ಭವಿಷ್ಯಂತಿ ವನೌಕಸಃ ॥ ೩೯೩ ॥

ಏವಂ ನೃಪೇಷು ನಷ್ಟೇಷು ಪ್ರಜಾಸ್ತ್ಯಕ್ತ್ವಾ ಗೃಹಾಣಿ ತು ।
ನಷ್ಟೇ ಸ್ನೇಹೇ ದುರಾಪನ್ನಾ ಭ್ರಷ್ಟಸ್ನೇಹಾಃ ಸುಹೃಜ್ಜನಾಃ ॥ ೩೯೪ ॥

ವರ್ಣಾಶ್ರಮಪರಿಭ್ರಷ್ಟಾಃ ಸಂಕರಂ ಘೋರಮಾಸ್ಥಿತಾಃ ।
ಸರಿತ್ಪರ್ವತಸೇವಿನ್ಯೋ ಭವಿಷ್ಯಂತಿ ಪ್ರಜಾಸ್ತದಾ ॥ ೩೯೫ ॥

೩೯೧. ಹೀಗೆ ಕಲಿಕಾಲ ಮುಗಿದು ಸಂಧಿಕಾಲವು ಪ್ರಾಪ್ತವಾಗಿ, ರಾಜರೆಂಬ ಶಬ್ದವೇ ನಿರ್ನಾಮವಾಗುವುದು, ಅವಶಿಷ್ಟರಾದ ಜನರು ಆಶ್ರಯಶೂನ್ಯರಾಗುವರು. ಧರ್ಮಗಳೆಲ್ಲವೂ ಸಂಪೂರ್ಣವಾಗಿ ನಾಶವಾಗುವುವು.

೩೯೨–೩೯೩. ಹೀಗೆ ದೇಶವು ರಾಜರಿಲ್ಲದೆ ಅರಾಜಕವಾಗಲು ಪ್ರಜೆಗಳು ಸಾಧನರಹಿತರೂ, ಶಾಂತಿಶೂನ್ಯರೂ. ರೋಗೋಪದ್ರವಾದಿಗಳಿಂದ ಪೀಡಿತರೂ, ಅನಾವೃಷ್ಟಿಯಿಂದಲೂ, ಅನ್ಯೋನ್ಯಕಲಹದಿಂದಲೂ, ಪರಸ್ಪರ ವಧೆಯಿಂದಲೂ ಅನಾಥರೂ ಆಗುವರು. ಮತ್ತು ಹೆದರಿ ತಮ್ಮ ಜೀವನವನ್ನು ಬಿಟ್ಟು ಗ್ರಾಮನಗರಾದಿ ಗಳನ್ನು ತ್ಯಜಿಸಿ ಬೆಟ್ಟಗುಡ್ಡಗಳನ್ನು ಆಶ್ರಯಿಸುವರು.

೩೯೪–೩೯೫. ಹೀಗೆ ರಾಜರೆಲ್ಲರೂ ನಷ್ಟರಾಗಿ ಅರಾಜಕವಾಗಲು ಪ್ರಜೆಗಳು ದಿಕ್ಕಿಲ್ಲದೆ ಮನೆಮಠಗಳನ್ನು ತ್ಯಜಿಸಿ ಸ್ನೇಹಪ್ರೀತಿಗಳನ್ನು ತೊಲಗಿಸಿ, ವರ್ಣಾಶ್ರಮ ಧರ್ಮಗಳನ್ನೂ ಬಿಟ್ಟು ಭಯಂಕರಸಾಂಕರ್ಯವನ್ನು ಹೊಂದಿ ನದಿ ಮತ್ತು ಪರ್ವತ ಗಳನ್ನು ಆಶ್ರಯಿಸುವರು.

ಸರಿತಃ ಸಾಗರಾನೂಪಾನ್ ಸೇವಂತೇ ಪರ್ವತಾನಿ ಚ ।
ಅಂಗಾನ್ ಕಲಿಂಗಾನ್ ವಂಗಾಂಶ್ಚ ಕಾಶ್ಮೀರಾನ್ ಕಾಶಿಕೋಶಲಾನ್ ॥

ಋಷಿಕಾಂತಗಿರಿದ್ರೋಣೀಃ ಸಂಶ್ರಯಿಷ್ಯಂತಿ ಮಾನವಾಃ ।
ಕೃತ್ಸ್ನಂ ಹಿಮವತಃ ಪೃಷ್ಠಂ ಕೂಲಂ ಚ ಲವಣಾಂಭಸಃ ॥ ೩೯೭ ॥

ಅರಣ್ಯಾನ್ಯಭಿಪತ್ಸ್ಯಂತಿ ಹ್ಯಾರ್ಯಾ ಮ್ಲೇಚ್ಛಜನೈಃ ಸಹ ।
ಮೃಗೈರ್ಮೀನೈರ್ವಿಹಂಗೈಶ್ಚ ಶ್ವಾಪದೈ ಸ್ತ್ರಕ್ಷುಭಿಸ್ತಥಾ ॥
ಮಧುಶಾಕಫಲೈರ್ಮೂಲೈರ್ವರ್ತಯಿಷ್ಯಂತಿ ಮಾನವಾಃ ॥ ೩೯೮ ॥

ಚೀರಂ ಪರ್ಣಂ ಚ ವಿವಿಧಂ ವಲ್ಕಲಾನ್ಯಜಿನಾನಿ ಚ ।
ಸ್ವಯಂ ಕೃತ್ವಾ ನಿವತ್ಸ್ಯಂತಿ ಯಥಾ ಮುನಿಜನಸ್ತಥಾ ॥ ೩೯೯ ॥

ಬೀಜಾನ್ನಾನಿ ತಥಾ ನಿಮ್ನೇಸ್ವೀಹಂತಃ ಕಾಷ್ಠಶಂಕುಭಿಃ ।
ಅಜೈಡಕಂ ಖರೋಷ್ಟ್ರಂ ಚ ಪಾಲಯಿಷ್ಯಂತಿ ಯತ್ನತಃ ॥ ೪೦೦ ॥

---

೩೯೬–೩೯೮. ತರುವಾಯ ಪ್ರಜೆಗಳು ನದಿ, ಪರ್ವತ, ಸಮುದ್ರ, ಕೂಪ, ಅಂಗ, ವಂಗ, ಕಳಿಂಗ, ಕಾಶ್ಮೀರ, ಕಾಶಿ. ಕೋಶಲ, ಋಷ್ಯಾಶ್ರಮ, ಪರ್ವತದ ಗವಿ, ಹಿಮವತ್ಪರ್ವತದ ಹಿಂಭಾಗ, ಲವಣಸಮುದ್ರದ ತೀರಭಾಗ ಮತ್ತು ಅರಣ್ಯ ಇವುಗಳನ್ನು ಆಶ್ರಯಿಸಿ ಮ್ಲೇಚ್ಛರೊಡನೆ ವಾಸಮಾಡುವರು. ಮತ್ತು ದುಷ್ಟಮೃಗ ವ್ಯಾಘ್ರಗಳಂತೆ ಮೃಗ, ಪಕ್ಷಿ, ಮೀನು ಇವುಗಳ ಮಾಂಸದಿಂದಲೂ, ಜೇನು, ಕಂದ ಮೂಲ, ಫಲವರ್ಣ ಇವುಗಳಿಂದಲೂ ಜೀವನವನ್ನು ಮಾಡುವರು.

೩೯೯. ಮತ್ತು ಆ ಅರಾಜಕಪ್ರಜೆಗಳು ಆಶ್ರಯವಿಲ್ಲದೆ ಋಷಿಗಳಂತೆ ಛಿಂದಿ, ಪರ್ಣ, ನಾರುಮಡಿ, ಕೃಷ್ಣಾಜಿನ ಇವೇ ಮೊದಲಾದ ವಿವಿಧ ವಸ್ತುಗಳನ್ನು ಧರಿಸಿ ವಾಸಿಸುವರು.

೪೦೦. ಅಂತಹ ಕಷ್ಟಕಾಲದಲ್ಲಿ ಪ್ರಜೆಗಳು ಗವಿಗುಹೆ, ಹಳ್ಳದಿಣ್ಣೆಗಳು ಇವುಗಳಲ್ಲಿ ಮುಳ್ಳು, ಬೇಲಿ, ರಂಬೆಗಳು ಇವುಗಳಿಂದ ಗೋಪ್ಯವಾಗಿದ್ದುಕೊಂಡು ದವಸಧಾನ್ಯಗಳನ್ನೂ, ಆಡು, ಕುರಿ, ಕತ್ತೆ, ಒಂಟೆ, ಗೋವು ಇವೇ ಮೊದಲಾದುವು ಗಳನ್ನು ಬಹಳಾಯಾದಿಂದ ರಕ್ಷಿಸುವರು.

**ನದೀರ್ವತ್ಸ್ಯಂತಿ ತೋಯಾರ್ಥೇ ಕೂಲಮಾಶ್ರಿತ್ಯಮಾನವಾಃ ।**
**ಪಾರ್ಥಿವಾನ್ ವ್ಯವಹಾರೇಣ ವಿಬಾಧಂತಃ ಪರಸ್ಪರಂ ॥ ೪೦೧ ॥**

**ಬಹುಮಾನ್ಯಾಃ ಪ್ರಜಾಹೀನಾಃ ಶೌಚಾಚಾರ ವಿವರ್ಜಿತಾಃ ।**
**ಏವಂ ಭವಿಷ್ಯಂತಿ ನರಾಸ್ತದಾಧರ್ಮೇ ವ್ಯವಸ್ಥಿತಾಃ ॥ ೪೦೨ ॥**

**ಹೀನಾದ್ಧೀನಾಂಸ್ತಥಾ ಧರ್ಮಾನ್ ಪ್ರಜಾಃ ಸಮನುವರ್ತತೇ ।**
**ಆಯುಸ್ತದಾ ತ್ರಯೋವಿಂಶಂ ನ ಕಶ್ಚಿದತಿವರ್ತತೇ ॥ ೪೦೩ ॥**

**ದುರ್ಬಲಾ ವಿಷಯಗ್ಲಾನಾ ಜರಯಾ ಸಂಪರಿಪ್ಲುತಾಃ ।**
**ಪತ್ರಮೂಲಫಲಾಹಾರಾಶ್ಚೀರಕೃಷ್ಣಾಜಿನಾಂಬರಾಃ ॥ ೪೦೪ ॥**

---

೪೦೧. ಮಾನವರು ಸ್ನಾನಪಾನಾದಿಗಳಿಗೆ ಅನುಕೂಲವಾದ ನದಿಗಳ ತೀರಗಳಲ್ಲಿ ವಾಸಮಾಡುವರು. ರಾಜರಾದರೋ ಪರಸ್ಪರ ಹಿಂಸೆಗಳನ್ನು ಕೊಡುತ್ತಾ ಪೀಡಿಸುತ್ತಿರುವರು

೪೦೨. ಕಲಿಯುಗದ ಸಂಧಿಕಾಲದ ಪ್ರಜೆಗಳು ಪಂಡಿತಂಮನ್ಯರಾಗಿಯೂ ಸಂತಾನವಿಲ್ಲದವರಾಗಿಯೂ, ಶೌಚಾಚಾರಶೂನ್ಯರಾಗಿಯೂ, ಅಧರ್ಮನಿರತ ರಾಗಿಯೂ, ಪರಸ್ಪರಹಿಂಸಕರಾಗಿಯೂ ಇರುವರು.

೪೦೩. ಆ ಸಂಧಿಕಾಲದ ಪ್ರಜೆಗಳು ಹೀನಧರ್ಮಗಳನ್ನು ಅನುಸರಿಸುವ ರಾಗಿಯೂ, ಹೀನವೃತ್ತಿಯನ್ನಾಶ್ರಯಿಸುವರಾಗಿಯೂ, ದೀನರನ್ನು ಹಿಂಸೆಮಾಡುವ ರಾಗಿಯೂ ಇರುವರು. ಆಗಿನ ಪ್ರಜೆಗಳ ಆಯುಷ್ಯವು ಇಪ್ಪತ್ತಮೂರಕ್ಕೆ ಅಧಿಕ ವಾಗಿರುವುದಿಲ್ಲ. ಅಂದರೆ ಅಲ್ಪಾಯುಷ್ಯರಾಗಿರುವರು.

೪೦೪. ಆಗಿನ ಪ್ರಜೆಗಳು ದುರ್ಬಲರೂ, ವಿಷಯಾಸಕ್ತರೂ, ಮುಪ್ಪಿನಿಂದ ಪೀಡಿತರೂ, ಕಂದಮೂಲಫಲಾದಿ ಆಹಾರಗಳಿಂದ ಜೀವಿಸುವವರೂ. ಚಿಂದಿ, ಹರಕು ವಸ್ತ್ರ, ನಾರುಮಡಿ, ಕೃಷ್ಣಾಜಿನ ಇವುಗಳನ್ನು ಧರಿಸುವವರೂ ಆಗಿರುವರು.

ವೃತ್ತ್ಯರ್ಥಮಭಿಲಿಪ್ಸಂತಶ್ಚರಿಷ್ಯಂತಿ ವಸುಂಧರಾಂ ।
ಏತತ್ಕಾಲಮನುಪ್ರಾಪ್ತಾಃ ಪ್ರಜಾಃ ಕಲಿಯುಗಾಂತಕೇ ॥ ೪೦೫ ॥

ಕ್ಷೀಣೇ ಕಲಿಯುಗೇ ತಸ್ಮಿನ್ ದಿವ್ಯೇ ವರ್ಷಸಹಸ್ರಕೇ ।
ನಿಃಶೇಷಾಸ್ತು ಭವಿಷ್ಯಂತಿ ಸಾರ್ಧಂ ಕಲಿಯುಗೇನೇ ತು ॥
ಸಸಂಧ್ಯಾಂಶೇ ತು ನಿಃಶೇಷೇ ಕೃತಂ ವೈ ಪ್ರತಿಪತ್ಸ್ಯತೇ ॥ ೪೦೬ ॥

ಯದಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯಬೃಹಸ್ಪತೀ ।
ಏಕರಾತ್ರೇ ಭವಿಷ್ಯಂತಿ ತದಾ ಕೃತಯುಗಂ ಭವೇತ್ ॥ ೪೦೭ ॥

ಏಷ ವಂಶಕ್ರಮಃ ಕೃತ್ಸ್ನಂ ಕೀರ್ತಿತೋ ವೋ ಯಥಾಕ್ರಮಂ ।
ಅತೀತಾ ವರ್ತಮಾನಾಶ್ಚ ತಥೈವಾನಾಗತಾಶ್ಚ ಯೇ ॥ ೪೦೮ ॥

---

೪೦೫. ಕಲಿಯುಗದ ಅಂತ್ಯಭಾಗದಲ್ಲಿ ಪ್ರಜೆಗಳು ಕಾಲಾನುಗುಣವಾದ ಸುಖ ದುಃಖಗಳಿಗೆ ಭಾಗಿಗಳಾಗಿ ಜೀವನಕ್ಕಾಗಿ ಭೂಮಂಡಲದಲ್ಲಿ ಅಲೆದಾಡುವರು.

೪೦೬. ಹೀಗೆ ದೇವಮಾನದಲ್ಲಿ ಒಂದು ಸಹಸ್ರ ವರ್ಷಗಳು ಕಳೆಯಲು ಕಲಿಯುಗವು ಮುಗಿಯುವುದು. ಆಗ ಪ್ರಜೆಗಳು ಸಂಪೂರ್ಣವಾಗಿ ನಾಶಹೊಂದುವರು. ಹೀಗೆಯೇ ಸಂಧಿಕಾಲವು ನಿಃಶೇಷವಾಗಿ ಮುಗಿಯಲಾಗಿ ಕೃತಯುಗವು ಪುನಃ ಪ್ರಾರಂಭವಾಗುವುದು.

೪೦೭. ಯಾವ ದಿವಸದ ರಾತ್ರಿಯಲ್ಲಿ ಸೂರ್ಯ ಚಂದ್ರರೂ, ಬುಧ, ಬೃಹಸ್ಪತಿಗಳೂ ಒಂದೇ ಜಾಗದಲ್ಲಿ ಸೇರುವರೋ ಅಂದಿನಿಂದಲೇ ಕೃತಯುಗವು ಪ್ರಾರಂಭವಾಗುವುದೆಂದು ತಿಳಿಯಬೇಕು.

೪೦೮. ಎಲೈ ವಿಪ್ರೋತ್ತಮರೇ, ನಾನು ನಿಮಗಾಗಿ ರಾಜರೇ ಮೊದಲಾದವರ ವಂಶಕ್ರಮವನ್ನು ಸಂಪೂರ್ಣವಾಗಿ, ಭೂತಭವಿಷ್ಯದ್ವರ್ತಮಾನಕಾಲಾನುಗುಣವಾಗಿ ತಿಳಿಸಿರುವೆನು. ನೀವು ಅದನ್ನು ಕೇಳಿರುತ್ತೀರೆಂದನು.

ಮಹಾದೇವಾಭಿಷೇಕಾತ್ತು ಜನ್ಮ ಯಾವತ್ಪರಿಕ್ಷಿತಃ ।
ಏತದ್ವರ್ಷಸಹಸ್ರಂ ತು ಜ್ಞೇಯಂ ಪಂಚಾಶದುತ್ತರಂ ॥ ೪೦೯ ॥

ಪ್ರಮಾಣಂ ವೈ ತಥಾ ಚೋಕ್ತಂ ಮಹಾಪದ್ಮಾಂತರಂ ಚ ಯತ್ ।
ಅಂತರಂ ತಚ್ಛತಾನ್ಯಷ್ಟೌ ಷಟ್‌ತ್ರಿಂಶಚ್ಚ ಸಮಾಃ ಸ್ಮೃತಾಃ ॥ ೪೧೦ ॥

ಏತತ್ಕಾಲಾಂತರಂ ಭಾವ್ಯಾ ಆಂಧ್ರಾಂತಾ ಯೇ ಪ್ರಕೀರ್ತಿತಾಃ ।
ಭವಿಷ್ಯೈಸ್ತತ್ರ ಸಂಖ್ಯಾತಾಃ ಪುರಾಣಜ್ಞೈಃ ಶ್ರುತರ್ಷಿಭಿಃ ॥ ೪೧೧ ॥

ಸಪ್ತರ್ಷಯಸ್ತದಾ ಪ್ರಾಹುಃ ಪ್ರತೀಪೇ ರಾಜ್ಞಿ ವೈ ಶತಂ ।
ಸಪ್ತವಿಂಶೈಃ ಶತೈರ್ಭಾವ್ಯಾ ಅಂಧ್ರಾಣಾಂ ತೇ ತ್ವಯಾ ಪುನಃ ॥ ೪೧೨ ॥

ಸಪ್ತವಿಂಶತಿಪರ್ಯಂತೇ ಕೃತ್ಸ್ನೇ ನಕ್ಷತ್ರಮಂಡಲೇ ।
ಸಪ್ತರ್ಷಯಸ್ತು ತಿಷ್ಠಂತಿ ಪರ್ಯಾಯೇಣ ಶತಂ ಶತಂ ॥
ಸಪ್ತರ್ಷೀಣಾಂ ಯುಗಂ ಹ್ಯೇತದ್ದಿವ್ಯಯಾ ಸಂಖ್ಯಯಾ ಸ್ಮೃತಂ ॥ ೪೧೩ ॥

---

೪೦೯. ಮಹಾದೇವನ ಅಭಿಷೇಕ ಕಾಲದಿಂದ ಪರೀಕ್ಷಿನ್ಮಹಾರಾಜನ ಜನ್ಮದ ವರೆಗೂ ಒಂದುಸಾವಿರದ ಐವತ್ತು (೧೦೫೦) ವರ್ಷಗಳೆಂದು ತಿಳಿಯಬೇಕು.

೪೧೦. ಅದರ ಪ್ರಮಾಣವಾದರೋ ಮಹಾಪದ್ಮಾಂತರವೆಂದು ತಿಳಿಯಬೇಕು. ಅದರ ಅನಂತರ ಪ್ರಮಾಣವಾದರೋ ಎಂಟುನೂರ ಮೂವತ್ತಾರು ವರ್ಷಗಳಾಗಿರುವುದು.

೪೧೧. ಪರೀಕ್ಷಿನ್ಮಹಾರಾಜನು ಮೊದಲುಗೊಂಡು ಆಂಧ್ರಾಂತವಾದ ಯಾವ ಸೃಷ್ಟಿಪ್ರಮಾಣವನ್ನು ತಿಳಿಸಿರುವನೋ ಅದು ಭವಿಷ್ಯವಾಗಿದೆ. ಮುಂದೆ ನಡೆಯಬೇಕಾಗಿದೆಯೆಂದು ಪುರಾಣವೇತ್ತೃಗಳಾದ ಮಹರ್ಷಿಗಳು ತಿಳಿಸಿರುವರೆಂದನು.

೪೧೨. ಆಂಧ್ರರು ಸುಮಾರು ಎರಡುಸಾವಿರದ ಏಳುನೂರು ಜನಗಳಿರುವರು. ಅವರಲ್ಲಿ ಪ್ರಖ್ಯಾತರೂ, ಧಾರ್ಮಿಕರೂ ಆದ ಪ್ರಭುಗಳು ನೂರು ಜನಗಳು ಮಾತ್ರ ಇರುವರೆಂದು ಮಹರ್ಷಿಗಳು ಹೇಳುವರು.

೪೧೩. ಸಂಪೂರ್ಣವೂ, ಇಪ್ಪತ್ತೇಳು ಸಂಖ್ಯಾಕವೂ ಆದ ನಕ್ಷತ್ರಗಳ ಮಂಡಲದಲ್ಲಿ ಸಪ್ತರ್ಷಿಗಳು ಮಾತ್ರ ನೂರುನೂರು ವರ್ಷಗಳು ಪರ್ಯಾಯದಿಂದ ಇರುವರು. ಇದು ಸಪ್ತರ್ಷಿಗಳ ಯುಗವಾಗಿದೆ. ಇದನ್ನು ದೇವಮಾನರೀತ್ಯಾ ಪರಿಗಣಿಸಬೇಕು.

ಸಾ ಸಾ ದಿವ್ಯಾ ಸ್ಮೃತಾ ಷಷ್ಟಿರ್ದಿವ್ಯಾಹ್ನಾಶ್ಚೈವ ಸಪ್ತಭಿಃ ।
ತೇಭ್ಯಃ ಪ್ರವರ್ತತೇ ಕಾಲೋ ದಿವ್ಯಃ ಸಪ್ತರ್ಷಿಭಿಸ್ತು ತೈಃ ॥ ೪೧೪ ॥

ಸಪ್ತರ್ಷೀಣಾಂ ತು ಯೋ ಪೂರ್ವಾ ದೃಶ್ಯತೇ ಉತ್ತರಾದಿಶಿ ।
ತತೋ ಮಧ್ಯೇನ ಚ ಕ್ಷೇತ್ರಂ ದೃಶ್ಯತೇ ಯತ್ಸಮಂ ದಿವಿ ॥ ೪೧೫ ॥

ತೇನ ಸಪ್ತರ್ಷಯೋ ಯುಕ್ತಾ ಜ್ಞೇಯಾ ವ್ಯೋಮ್ನಿ ಶತಂ ಸಮಾಃ ।
ನಕ್ಷತ್ರಾಣಾಮೃಷೀಣಾಂ ಚ ಯೋಗಸ್ಯೈತನ್ನಿದರ್ಶನಂ ॥ ೪೧೬ ॥

ಸಪ್ತರ್ಷಯೋ ಮಘಾಯುಕ್ತಾಃ ಕಾಲೇ ಪಾರಿಕ್ಷಿತೇ ಶತಂ ।
ಆಂಧ್ರಾಂಶೇ ಸ ಚತುರ್ವಿಂಶೇ ಭವಿಷ್ಯಂತಿ ಮತೇ ಮಮ ॥ ೪೧೭ ॥

ಇಮಾಸ್ತದಾ ತು ಪ್ರಕೃತಿರ್ವ್ಯಾಪತ್ಸ್ಯಂತಿ ಪ್ರಜಾ ಭೃಶಂ ।
ಅನ್ಯತೋಪಹತಾಃ ಸರ್ವಾ ಧರ್ಮತಃ ಕಾಮತೋಽರ್ಥತಃ ॥ ೪೧೮ ॥

---

೪೧೪. ಅರವತ್ತೇಳು ದಿವ್ಯಾಹಸ್ಸುಗಳಿಂದಯುಕ್ತವಾದ ಯಾವಕಾಲವಿದೆಯೋ ಅದಕ್ಕೆ ದಿವ್ಯವೆಂದು ಸಂಜ್ಞೆಯುಂಟಾಗಿರುವುದು. ಅವುಗಳಿಂದಲೇ ಸಪ್ತರ್ಷಿಗಳೆ ದಿವ್ಯಕಾಲವು ಉಂಟಾಗಿದೆಯೆಂದು ತಿಳಿಯಬೇಕು.

೪೧೫. ಸಪ್ತರ್ಷಿಮಂಡಲಕ್ಕಿಂತಲೂ ಮೊದಲು ಉತ್ತರದಿಕ್ಕಿನಲ್ಲಿ ಯಾವ ಗ್ರಹಾದಿಗಳು ಕಾಣುತ್ತವೆಯೋ. ಅವುಗಳ ಮಧ್ಯಭಾಗದಲ್ಲಿ ಮಂಡಲವು ಅದಕ್ಕೆ ಸಮನಾಗಿ ಅದರಂತೆಯೇ ಆಕಾಶದಲ್ಲಿ ಪ್ರಕಾಶಿಸುತ್ತದೆ.

೪೧೬. ಅಂತಹ ಮಂಡಲದೊಡನೇ ಯುಕ್ತರಾದ ಸಪ್ತರ್ಷಿಗಳು ಆಕಾಶದಲ್ಲಿ ನೂರಾರು ವರ್ಷಗಳಿಂದಲೂ ಪ್ರಕಾಶಿಸುವರು. ಇದೇ ನಕ್ಷತ್ರಗಳಿಗೂ ಸಪ್ತರ್ಷಿಗಳಿಗೂ ಸಂಬಂಧವಿದೆಯೆಂಬುದಕ್ಕೆ ನಿದರ್ಶನವಾಗಿದೆ.

೪೧೭. ಆದುದರಿಂದ ಮಘಾನಕ್ಷತ್ರದಿಂದ ಯುಕ್ತರಾದ ಸಪ್ತರ್ಷಿಗಳು ಪರೀಕ್ಷಿನ್ಮಹಾರಾಜನಕಾಲದಲ್ಲಿ ನೂರುವರ್ಷಗಳು ಇಪ್ಪತ್ತನಾಲ್ಕನೆಯ ಆಂಧ್ರಾಂಶದಲ್ಲಿ (ಆಂಧ್ರರ ಕಾಲದಲ್ಲಿ) ಇರುವರೆಂಬು ನನ್ನ ಭಾವವು ಎಂದನು.

೪೧೮. ಆಗ ಈ ಪ್ರಜೆಗಳು ಬಹಳವಾಗಿ ಪ್ರಕೃತ್ಯಧೀನರಾಗಿ ವಿಧಿವಿಲಾಸಾನುಗುಣವಾಗಿ ಅನೃತವಾದಿಗಳೂ ಧರ್ಮಾರ್ಥಕಾಮಗಳಿಂದ ಶೂನ್ಯರೂ ಆಗುವರು.

ಶ್ರೌತಸ್ಮಾರ್ತೇ ಪ್ರಶಿಥಿಲೇ ಧರ್ಮೇ ವರ್ಣಾಶ್ರಮೇ ತದಾ ।
ಶಂಕರಂ ದುರ್ಬಲಾತ್ಮಾನಃ ಪ್ರತಿಪತ್ಸ್ಯಂತಿ ಮೋಹಿತಾಃ ॥ ೪೧೯ ॥

ಸಂಸಕ್ತಾಶ್ಚ ಭವಿಷ್ಯಂತಿ ಶೂದ್ರಾಃ ಸಾರ್ಧಂ ದ್ವಿಜಾತಿಭಿಃ ।
ಬ್ರಾಹ್ಮಣಾಃ ಶೂದ್ರಯಷ್ಟಾರಃ ಶೂದ್ರಾ ವೈ ಮಂತ್ರಯೋನಯಃ ॥ ೪೨೦ ॥

ಉಪಸ್ಥಾಸ್ಯಂತಿ ತಾನ್ ವಿಪ್ರಾಸ್ತದಾ ವೈ ವೃತ್ತಿಲಿಪ್ಸವಃ ।
ಲವಂ ಲವಂ ಭ್ರಶ್ಯಮಾನಾಃ ಪ್ರಜಾಃ ಸರ್ವಾಃ ಕ್ರಮೇಣ ತು ॥ ೪೨೧ ॥

ಕ್ಷಯಮೇವ ಗಮಿಷ್ಯಂತಿ ಕ್ಷೀಣಶೇಷಾ ಯುಗಕ್ಷಯೇ ।
ಯಸ್ಮಿನ್ ಕೃಷ್ಣೋ ದಿವಂ ಯಾತಸ್ತಸ್ಮಿನ್ನೇವ ತದಾ ದಿನೇ ॥ ೪೨೨ ॥

---

೪೧೯. ಆ ಸಮಯದಲ್ಲಿ ಶ್ರೌತಸ್ಮಾರ್ತಧರ್ಮಗಳೂ, ವರ್ಣಾಶ್ರಮಧರ್ಮಗಳೂ ಕ್ಷೀಣವಾಗುವುವು. ಆಗ ಪ್ರಜೆಗಳು ಸಾಂಕರ್ಯವನ್ನು ಹೊಂದಿ ದುರ್ಬಲರೂ, ಮೋಹಿತರೂ ಆಗುವರು.

೪೨೦. ಆಗ ಶೂದ್ರರು ಬ್ರಾಹ್ಮಣರ ಜೊತೆಯಲ್ಲಿ ಕೂಡಿಹೋಗುವರು. ಮತ್ತು ಬ್ರಾಹ್ಮಣರು ಶೂದ್ರರಮೂಲಕ ಯಾಗವನ್ನು ಮಾಡುವರು. ಶೂದ್ರರೇ ವೇದಾಧ್ಯಯನವನ್ನುಮಾಡಿ ಮಂತ್ರವೇತ್ತೃಗಳಾಗುವರು.

೪೨೧. ಆ ಕಾಲದಲ್ಲಿ ಬ್ರಾಹ್ಮಣರು ಜೀವನಕ್ಕಾಗಿ ದ್ರವ್ಯಾಭಿಲಾಷೆಯಿಂದ ಶೂದ್ರಾದಿಗಳನ್ನೇ ಆಶ್ರಯಿಸುವರು. ಹೀಗೆ ಪ್ರಜೆಗಳು ಕರ್ಮಭ್ರಷ್ಟರಾಗಿಯೂ, ಕ್ರಮವಾಗಿಯೂ ಸ್ವಲ್ಪಸ್ವಲ್ಪವಾಗಿಯೂ ನಾಶವಾಗುವರು.

೪೨೨. ಹೀಗೆ ಒಂದು ಯುಗವು ಕಳೆಯಲಾಗಿ ಪ್ರಜೆಗಳೂ ಕ್ರಮವಾಗಿ ಉಳಿದ ರಾಜರೂ ಕ್ಷೀಣರಾಗುವರು. ಯಾವ ದಿವಸದಲ್ಲಿ ಭಗವಂತನಾದ ಶ್ರೀಕೃಷ್ಣನು ಸ್ವರ್ಗಲೋಕಕ್ಕೆ ಹೋಗುವನೋ ಆ ದಿವಸದಲ್ಲಿಯೇ ಕಲಿಯುಗವು ಪ್ರಾರಂಭವಾಗುವುದು.

**ಪ್ರತಿಪನ್ನಃ ಕಲಿಯುಗಸ್ತಸ್ಯ ಸಂಖ್ಯಾಂ ನಿಬೋಧತ ।**
**ಸಹಸ್ರಾಣಾಂ ಶತಾನೀಹ ತ್ರೀಣಿ ಮಾನುಷಸಂಖ್ಯಯಾ ॥**
**ಷಷ್ಠಿಂ ಚೈವ ಸಹಸ್ರಾಣಿ ವರ್ಷಾಣಾಮುಚ್ಯತೇ ಕಲಿಃ ॥ ೪೨೩ ॥**

**ದಿವ್ಯೇ ವರ್ಷಸಹಸ್ರಂ ತು ತತ್ಸಂಧ್ಯಾಂಶಂ ಪ್ರಕೀರ್ತಿತಂ ।**
**ನಿಃಶೇಷೇ ಚ ತದಾ ತಸ್ಮಿನ್ ಕೃತಂ ವೈ ಪ್ರತಿಪತ್ಸ್ಯತೇ ॥ ೪೨೪ ॥**

**ಐಲೇ ಇಕ್ಷ್ವಾಕುವಂಶಶ್ಚ ಸಹ ಭೇದೈಃ ಪ್ರಕೀರ್ತಿತೌ ।**
**ಇಕ್ಷ್ವಾಕೋಸ್ತು ಸ್ಮೃತಃ ಕ್ಷತ್ರಃ ಸುಮಿತ್ರಾಂತಂ ವಿವಸ್ವತಃ ॥ ೪೨೫ ॥**

**ಐಲಂ ಕ್ಷತ್ರಂ ಕ್ಷೇಮಕಾಂತಂ ಸೋಮವಂಶವಿದೋ ವಿದುಃ ।**
**ಏತೇ ವಿವಸ್ವತಃ ಪುತ್ರಾಃ ಕೀರ್ತಿತಾಃ ಕೀರ್ತಿವರ್ಧನಾಃ ॥ ೪೨೬ ॥**

---

೪೨೩. ಶ್ರೀಭಗವಂತನ ಸ್ವರ್ಗಾರೋಹಣದಿವಸವೇ ಕಲಿಯುಗ ಪ್ರಾರಂಭವಾಗುವುದೆಂದು ತಿಳಿಯಬೇಕು. ಅದರ ಕಾಲಪ್ರಮಾಣವನ್ನು ಈಗ ಹೇಳುವೆನು ಕೇಳಿರಿ. ಮೂರುಲಕ್ಷದ ಅರವತ್ತುಸಾವಿರವರ್ಷಗಳು ಮನುಷ್ಯಮಾನರೀತಿಯಲ್ಲಿ ಆಗುವುದು.

೪೨೪. ದೇವಮಾನದಲ್ಲಿ ಒಂದುಸಹಸ್ರವರ್ಷಗಳೂ, ಸಂಧಿಕಾಲದ ಇನ್ನೂರು ವರ್ಷಗಳೂ ಕಳೆದರೆ ಕಲಿಯುಗವು ಸಂಪೂರ್ಣವಾಗಿ ಕಳೆದುಹೋಗುವುದು. ಆಗ ತತ್‌ಕ್ಷಣವೇ ಕೃತಯುಗವು ಪ್ರಾರಂಭವಾಗುವುದು.

೪೨೫. ಎಲೈ ವಿಪ್ರರೇ, ನಿಮಗೆ ಐಲರಾಜ ಮತ್ತು ಇಕ್ಷ್ವಾಕುಮಹಾರಾಜ ಇವರ ವಂಶಗಳನ್ನು ಸಾಂಗವಾಗಿ ನಿರೂಪಿಸಿರುವೆನು. ಸೂರ್ಯವಂಶವು ಇಕ್ಷ್ವಾಕು ಮಹಾರಾಜನಿಂದ ಪ್ರಖ್ಯಾತವಾಗಿ ಸುಮಿತ್ರರಾಜನವರೆಗೂ ಪ್ರಸಿದ್ಧವಾಗಿರುವುದೆಂದು ಜ್ಞಾನಿಗಳು ಹೇಳುವರು.

೪೨೬. ಚಂದ್ರವಂಶವು ಐಲಮಹಾರಾಜನಿಂದ ಕ್ಷೇಮಕಾಂತನವರೆಗೂ ಪ್ರಖ್ಯಾತವಾಗಿರುವುದೆಂದು ಜ್ಞಾನಿಗಳು ತಿಳಿಯುವರು. ಹೀಗೆ ಸೂರ್ಯಚಂದ್ರ ವಂಶೋತ್ಪನ್ನರಾದ ರಾಜರೆಲ್ಲರೂ ಕೀರ್ತಿವರ್ಧಕರೂ, ಪ್ರಖ್ಯಾತರೂ ಆಗಿರುವರು.

**ಅತೀತಾ ವರ್ತಮಾನಾಶ್ಚ ತಥೈವಾನಾಗತಾಶ್ಚ ಯೇ |**
**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವಾನ್ವಯೇ ಸ್ಮೃತಾಃ || ೪೨೭ ||**

**ಯುಗೇ ಯುಗೇ ಮಹಾತ್ಮಾನಃ ಸಮತೀತಾಃ ಸಹಸ್ರಶಃ |**
**ಬಹುತ್ವಾನ್ನಾಮಧೇಯಾನಾಂ ಪರಿಸಂಖ್ಯಾ ಕುಲೇ ಕುಲೇ || ೪೨೮ ||**

**ಪುನರುಕ್ತಾ ಬಹುತ್ವಾಚ್ಚ ನ ಮಯಾ ಪರಿಕೀರ್ತಿತಾ |**
**ವೈವಸ್ವತೇಂತರೇ ಹ್ಯಸ್ಮಿನ್ ನಿಮಿವಂಶಃ ಸಮಾಪ್ಯತೇ || ೪೨೯ ||**

**ಏವಾಯಾಂ ತು ಯುಗಾಖ್ಯಾಯಾಂ ಯಯುಃ ಕ್ಷತ್ರಂ ಪ್ರಪತ್ಸ್ಯತೇ |**
**ತಥಾ ಹಿ ಕಥಯಿಷ್ಯಾಮಿ ಗದತೋ ಮೇ ನಿಬೋಧತ || ೪೩೦ ||**

---

೪೨೭. ಎಲೈ ಮುನಿವರ್ಯರೇ, ಹೀಗೆ ಭೂತಭವಿಷ್ಯದ್ವರ್ತಮಾನಕಾಲದಲ್ಲಿರುವ ಬ್ರಾಹ್ಮಣ, ಕ್ಷತ್ರಿಯ, ಶೂದ್ರರು, ಅವರ ವಂಶಗಳಲ್ಲಿ ಜನಿಸಿದವರೂ ಇವರೇ ಮೊದಲಾದವರ ವಿಷಯಗಳನ್ನು ನಿಮಗಾಗಿ ನಿರೂಪಿಸಿರುವೆನು. ನೀವು ಎಲ್ಲವನ್ನೂ ಕೇಳಿರುತ್ತೀರೆಂದನು.

೪೨೮. ಪ್ರತಿಯೊಂದು ಯುಗದಲ್ಲಿಯೂ ಮಹಾತ್ಮರನೇಕರು ಉದ್ಭವಿಸಿ ಅತೀತರಾಗಿರುವರು. ಆ ಮಹಾತ್ಮರು ಅಸಂಖ್ಯಾತರಾಗಿರುವುದರಿಂದ ಅವರ ನಾಮಗಳನ್ನು ಹೇಳುವುದು ಅಸಾಧ್ಯವಾಗಿದೆ. ಕಲಿಯುಗದಲ್ಲಿಯೂ ಅನೇಕ ಮಹಾತ್ಮರು ಅವತರಿಸಿರುವರು.

೪೨೯. ಈ ಕಲಿಯುಗದಲ್ಲಿಯೂ ಮಹಾತ್ಮರನೇಕರಿರುವರು. ಆದುದರಿಂದ ಅವರನ್ನು ವಿಶಿಷ್ಯವಾಗಿ ಹೇಳಿರುವುದಿಲ್ಲ. ಅದನ್ನು ಹೇಳಿದರೆ ಪುನರುಕ್ತವಾಗುವುದು. ಈ ವೈವಸ್ವತಮನ್ವಂತರದಲ್ಲಿ ನಿಮಿವಂಶವು ಕೊನೆಯಾಗಿದೆ.

೪೩೦. ತರುವಾಯ ಏವಾಯೆಂಬ ಯುಗದಲ್ಲಿ ಕ್ಷತ್ರಿಯವಂಶವು ಪುನಃ ಉತ್ಪನ್ನವಾಗುವುದು. ಈ ವಿಷಯವನ್ನು ಈಗ ವರ್ಣಿಸುವೆನು ಕೇಳಿರೆಂದನು.

ದೇವಾಪಿಃ ಪೌರವೋ ರಾಜಾ ಇಕ್ಷ್ವಾಕೋಶ್ಚೈವ ಯೋ ಮತಃ ।
ಮಹಾಯೋಗಬಲೋಪೇತಃ ಕಲಾಪಗ್ರಾಮಮಾಪಿ ತಃ ॥ ೪೩೧ ॥

ಸುವರ್ಚಾಃ ಸೋಮಪುತ್ರಸ್ತು ಇಕ್ಷ್ವಾಕೋಸ್ತು ಭವಿಷ್ಯತಿ ।
ಏತೌ ಕ್ಷತ್ರಪ್ರಣೇತಾರೌ ಚತುರ್ವಿಂಶೇ ಚತುರ್ಯುಗೇ ॥ ೪೩೨ ॥

ನ ಚ ವಿಂಶೇ ಯುಗೇ ಸೋಮವಂಶಸ್ಯಾದಿರ್ಭವಿಷ್ಯತಿ ।
ದೇವಾಪಿರಸಪತ್ನಸ್ತು ಐಲಾದಿರ್ಭವಿತಾ ನೃಪಃ ॥ ೪೩೩ ॥

ಕ್ಷತ್ರಪ್ರಾವರ್ತಕೌ ಹ್ಯೇತೌ ಭವಿಷ್ಯೇತೇ ಚತುರ್ಯುಗೇ ।
ಏವಂ ಸರ್ವತ್ರ ವಿಜ್ಞೇಯಂ ಸಂತಾನಾರ್ಥೇ ತು ಲಕ್ಷಣಂ ॥ ೪೩೪ ॥

---

೪೩೧. ಇಕ್ಷ್ವಾಕುಮಹಾರಾಜನಿಗೆ ಸಮ್ಮತನೂ, ಪುರುವಂಶೋತ್ಪನ್ನನೂ ಆದ ದೇವಾಪಿಯೆಂಬ ಮಹಾರಾಜನು ಮಹಾಯೋಗಮಹಿಮೆಯಿಂದ ಸಹಿತನಾಗಿ ಕಲಾಪವೆಂಬಗ್ರಾಮದಲ್ಲಿ ವಾಸವಾಗಿದ್ದನು.

೪೩೨. ಅತ್ಯಂತಕಾಂತಿಯುಕ್ತನಾದ ಸೋಮನಾಮಕಕುಮಾರನು ಇಕ್ಷ್ವಾಕು ಮಹಾರಾಯನ ವಂಶದಲ್ಲಿ ಉದ್ಭವಿಸುವನು. ಇವರಿಬ್ಬರೂ ಇಪ್ಪತ್ತನಾಲ್ಕನೆಯ ಚತುರ್ಯುಗದಲ್ಲಿ ಕ್ಷತ್ರಿಯವಂಶಪ್ರವರ್ತಕರಾಗುವರು.

೪೩೩. ಇಪ್ಪತ್ತನೆಯ ಯುಗದಲ್ಲಿ ಚಂದ್ರವಂಶವು ಮೊದಲನೆಯದಾಗುವುದಿಲ್ಲ. ದೇವಾಪಿಮಹಾರಾಜನೂ, ಐಲಾದಿಮಹಾರಾಜರೂ ಅಜಾತಶತ್ರುವಾಗಿಯೂ, ಸುಪ್ರಸಿದ್ಧರಾಗಿಯೂ ಇರುವರು.

೪೩೪. ಇವರಿಬ್ಬರೂ ಮುಂದೆ ಬರುವ ನಾಲ್ಕು ಯುಗಗಳಲ್ಲಿಯೂ ಕ್ಷತ್ರಿಯ ವಂಶ ಪ್ರವರ್ತಕರಾಗುವರು. ಹೀಗೆ ಇವರು ಸಂತಾನಾಕಾಂಕ್ಷಿಗಳಾಗಿ ಸರ್ವಯುಗ ಗಳಲ್ಲಿಯೂ ಪ್ರವರ್ತಕರಾಗುವರೆಂದು ಸಾಮಾನ್ಯಲಕ್ಷಣವಾಗಿದೆ.

**ಕ್ಷೀಣೇ ಕಲಿಯುಗೇ ತಸ್ಮಿನ್ ಭವಿಷ್ಯೇ ತು ಕೃತೇಯುಗೇ ।**
**ಸಪ್ತರ್ಷಿಭಿಸ್ತು ತೈಸ್ಸಾರ್ಧವಮಾದ್ಯೇ ತ್ರೇತಾಯುಗೇ ಪುನಃ ॥ ೪೩೫ ॥**

**ಗೋತ್ರಾಣಾಂ ಕ್ಷತ್ರಿಯಾಣಾಂ ಚ ಭವಿಷ್ಯೇತೇ ಪ್ರವರ್ತಕೌ ।**
**ದ್ವಾಪರಾಂಶೇ ನ ತಿಷ್ಠಂತಿ ಕ್ಷತ್ರಿಯಾ ಋಷಿಭಿಃ ಸಹ ॥ ೪೩೬ ॥**

**ಕಾಲೇ ಕೃತಯುಗೇ ಚೈವ ಕ್ಷೀಣೇ ತ್ರೇತಾಯುಗೇ ಪುನಃ ।**
**ಬೀಜಾರ್ಥಂತೇ ಭವಿಷ್ಯಂತಿ ಬ್ರಹ್ಮಕ್ಷತ್ರಸ್ಯ ವೈ ಪುನಃ ॥ ೪೩೭ ॥**

**ಏವಮೇವ ತು ಸರ್ವೇಷು ತಿಷ್ಠಂತೀಹಾಂತರೇಷು ವೈ ।**
**ಸಪ್ತರ್ಷಯೋ ನೃಪೈಃ ಸಾರ್ಧಂ ಸಂತಾನಾರ್ಥಂ ಯುಗೇ ಯುಗೇ ॥ ೪೩೮ ॥**

---

೪೩೫. ಹೀಗೆ ಕಲಿಯುಗವು ಕ್ಷಯಿಸಲು ಕೃತಯುಗವು ಪ್ರಾರಂಭವಾಗುವುದು. ಮತ್ತು ತ್ರೇತಾಯುಗವು ಪ್ರಾರಂಭವಾಗಲು ಸಪ್ತರ್ಷಿಗಳು ಈ ರಾಜರೊಡನೆ ಅವತರಿಸುವರು.

೪೩೬. ಆಗ ಮಹರ್ಷಿಗಳು ಗೋತ್ರಪ್ರವರ್ತಕರಾಗಿಯೂ, ಮೇಲೆ ಹೇಳಿದ ರಾಜರು ಕ್ಷತ್ರಿಯವಂಶಪ್ರವರ್ತಕರಾಗಿಯೂ ಆಗುವರು. ತ್ರೇತಾಯುಗವು ಕಳೆದು ದ್ವಾಪರಯುಗವು ಪ್ರಾರಂಭವಾದರೆ ಈ ಮಹರ್ಷಿಗಳೂ, ಈ ರಾಜರೂ ಇರುವುದಿಲ್ಲ.

೪೩೭. ಹೀಗೆ ಕೃತತ್ರೇತಾಯುಗಗಳು ಕ್ಷೀಣವಾಗಲಾಗಿ ಈ ಸಪ್ತರ್ಷಿಗಳೂ, ರಾಜರೂ ಮುಂದೆ ಜನಿಸುವ ಬ್ರಾಹ್ಮಣಕ್ಷತ್ರಿಯರಿಗೆ ಬೀಜರೂಪರಾಗಿ ನಿಂತಿರುವರೆಂದು ತಿಳಿಯಬೇಕು.

೪೩೮. ಹೀಗೆಯೇ ಸಪ್ತರ್ಷಿಗಳು ರಾಜರೊಡನೆ ಸಮಸ್ತವಾದ ಯುಗಗಳಲ್ಲಿಯೂ ಸಂತಾನಕ್ಕಾಗಿ ಎರಡು ಯುಗಗಳ ಮಧ್ಯಕಾಲದಲ್ಲಿ ಬೀಜರೂಪರಾಗಿರುವರು.

ಕ್ಷತ್ರಸ್ಯೈವ ಸಮುಚ್ಛೇದಃ ಸಂಬಂಧೋ ವೈ ದ್ವಿಜೈಃ ಸ್ಮೃತಃ ।
ಮನ್ವಂತರಾಣಾಂ ಸಪ್ತಾನಾಂ ಸಂತಾನಾಶ್ಚ ಶ್ರುತಾಶ್ಚ ತೇ ॥ ೪೩೯ ॥

ಪರಂಪರಾ ಯುಗಾನಾಂ ಚ ಬ್ರಹ್ಮಕ್ಷತ್ರಸ್ಯ ಚೋದ್ಭವಃ ।
ಯಥಾ ಪ್ರವೃತ್ತಿಸ್ತೇಷಾಂ ವೈ ಪ್ರವೃತ್ತಾನಾಂ ತಥಾ ಕ್ಷಯಃ ॥ ೪೪೦ ॥

ಸಪ್ತರ್ಷಯೋ ವಿದುಸ್ತೇಷಾಂ ದೀರ್ಘಾಯುಷ್ಯಾಕ್ಷಯಂ ತು ತೇ ।
ಏತೇನ ಕ್ರಮಯೋಗೇನ ಐಲೇಕ್ಷ್ವಾಕ್ವನ್ವಯಾ ದ್ವಿಜಾಃ ॥ ೪೪೧ ॥

ಉದ್ಪದ್ಯಮಾನಾಸ್ತ್ರೇತಾಯಾಂ ಕ್ಷೀಯಮಾಣೇ ಕಲೌ ಪುನಃ ।
ಅನುಯಾಂತಿ ಯುಗಾಖ್ಯಾಂತು ಯಾವನ್ಮನ್ವಂತರಕ್ಷಯಃ ॥ ೪೪೨ ॥

---

೪೩೯. ಕ್ಷತ್ರಿಯರು ಅಧಿಕಾರಮದದಿಂದ ಉನ್ಮತ್ತರಾಗಿ ಧರ್ಮವನ್ನು ತ್ಯಜಿಸುವಾಗ ಬ್ರಾಹ್ಮಣರು ಅವರನ್ನು ನಿರ್ಮೂಲವಮಾಡಿ ಉತ್ತಮರಾದ ರಾಜರನ್ನು ಸ್ಥಾಪಿಸುವರು. ಈ ಕ್ರಮವು ಸಪ್ತಮನ್ವಂತರಗಳಲ್ಲಿಯೂ ಪ್ರಖ್ಯಾತವಾಗಿದೆ.

೪೪೦. ಚತುರ್ಯುಗಗಳ ಪರಂಪರಗಳೂ, ಬ್ರಾಹ್ಮಣಕ್ಷತ್ರಿಯಾದಿವರ್ಣಗಳ ಉತ್ಪತ್ತಿಗಳೂ ಅವರ ನಡೆನುಡಿಗಳೂ ಮತ್ತು ಉಬ್ಬರವಿಳತಗಳೂ ಇವುಗಳನ್ನು ನಿಮಗೆ ತಿಳಿಸಿರುವೆನೆಂದನು.

೪೪೧. ಎಲೈ ವಿಪ್ರೋತ್ತಮರೇ, ಸಪ್ತರ್ಷಿಗಳು ಐಲ ಮತ್ತು ಇಕ್ಷ್ವಾಕು ಮಹಾರಾಜರ ದೀರ್ಘಾಯುಷ್ಯ ಮತ್ತು ಕ್ಷಯ ಇವುಗಳನ್ನು ಸಂಪೂರ್ಣವಾಗಿಯೂ ತಿಳಿದಿರುವರು. ಅದರಂತೆಯೇ ಅವರ ಕ್ಷಯವೃದ್ಧಿಗಳುಂಟಾಗುವುವು.

೪೪೨. ಕಲಿಯುಗವು ಕ್ಷಯಿಸಲು ತ್ರೇತಾಯುಗದಲ್ಲಿ ಜನಿಸಲು ಅರ್ಹರಾದ ಪ್ರಜೆಗಳು ಮನ್ವಂತರ ಕ್ಷಯಿಸುವವರೆಗೂ ಯುಗಧರ್ಮವನ್ನು ಅನುಸರಿಸಿ ನಡೆಯುವರು.

**ಜಾಮದಗ್ನ್ಯೇನ ರಾಮೇಣ ಕ್ಷತ್ರೇ ನಿರವಶೇಷಿತೇ |**
**ಕೃತೇ ವಂಶಕುಲಾಃ ಸರ್ವಾಃ ಕ್ಷತ್ರಿಯೈರ್ವಸುಧಾಧಿಪೈಃ ||**
**ದ್ವಿವಂಶಕರಣಾಶ್ಚೈವ ಕೀರ್ತಯಿಷ್ಯೇ ನಿಬೋಧತ || ೪೪೩ ||**

**ಐಲಸ್ಯೇಕ್ಷ್ವಾಕುನಂದಸ್ಯ ಪ್ರಕೃತಿಃ ಪರಿವರ್ತತೇ |**
**ರಾಜಾನಃ ಶ್ರೇಣಿಬದ್ಧಾಸ್ತು ತಥಾನ್ಯೇ ಕ್ಷತ್ರಿಯಾ ನೃಪಾಃ || ೪೪೪ ||**

**ಐಲವಂಶಸ್ಯ ಯೇ ಖ್ಯಾತಾಸ್ತಥೈವೈಕ್ಷ್ವಾಕವಾ ನೃಪಾಃ |**
**ತೇಷಾಮೇಕಶತಂ ಪೂರ್ಣಂ ಕುಲಾನಾಮಭಿಷೇಕಿಣಾಂ || ೪೪೫ ||**

**ತಾವದೇವ ತು ಭೋಜಾನಾಂ ವಿಸ್ತಾರೋ ದ್ವಿಗುಣಃ ಸ್ಮೃತಃ |**
**ಭಜತೇ ತ್ರಿಂಶಕಂ ಕ್ಷತ್ರಂ ಚತುರ್ಥಾ ತದ್ಯಥಾದಿಶಂ || ೪೪೬ ||**

---

೪೪೩. ಜಮದಗ್ನಿಯ ಕುಮಾರನಾದ ಪರಶುರಾಮನು ಕ್ಷತ್ರಿಯವಂಶವನ್ನು ನಿರ್ಮೂಲಮಾಡಲಾಗಿ ಸರ್ವಕ್ಷತ್ರಿಯ ಕುಲವು ನಶಿಸುವುದು. ಆಗ ಎರಡು ವಂಶದ ರಾಜರು ಮಾತ್ರ ಉಳಿಯುವರು. ಈ ವಿಷಯವನ್ನು ಹೇಳುವೆನು ಕೇಳಿರೆಂದನು.

೪೪೪. ಹೀಗೆ ಯುಗವು ಪರಿವರ್ತಿಸಲಾಗಿ ಐಲ, ಇಕ್ಷ್ವಾಕುವಂಶಗಳು ಪರಿವರ್ತಿಸುವುವು. ಅದರಂತೆ ಸಾಮಾನ್ಯ ರಾಜರೇ ಮೊದಲಾದವರೂ ಸಹ ಪರಿವರ್ತ ರಾಗುವರು.

೪೪೫. ಐಲ ಮತ್ತು ಇಕ್ಷ್ವಾಕು ಈ ವಂಶಗಳಲ್ಲಿ ಪ್ರಖ್ಯಾತರಾದ ಯಾವ ರಾಜರಿರುವರೋ ಅಂತಹ ಪ್ರಸಿದ್ಧರಾದ ಅಭಿಷಿಕ್ತರಾಜರ ನೂರೊಂದು ಕುಲಗಳಿಂದ ಈ ಭೂಮಂಡಲವೆಲ್ಲಾ ವ್ಯಾಪ್ತವಾಗಿರುವುದು.

೪೪೬. ಭೋಜರಾಜರ ವಂಶವೂ ಕೂಡ ಅಷ್ಟೇ ವಿಸ್ತಾರವಾಗಿರುತ್ತದೆ. ಆದರೆ ಇನ್ನೂ ಕೆಲವು ಕುಲಗಳು ದ್ವಿಗುಣ, ತ್ರಿಗುಣ, ಚತುರ್ಯುಗಗಳಷ್ಟು ವಿಶಾಲ ವಾಗಿ ದಿಕ್ಕುದಿಕ್ಕುಗಳಲ್ಲಿಯೂ ವ್ಯಾಪ್ತವಾಗಿರುತ್ತವೆ.

ತೇಷ್ವತೀತಾಃ ಸಮಾನಾ ಯೇ ಬ್ರುವತಸ್ತಾನ್ನಿಬೋಧತ ।
ಶತಂ ವೈ ಪ್ರತಿವಿಂಧ್ಯಾನಾಂ ಶತಂ ನಾಗಾಃ ಶತಂ ಹಯಾಃ ॥ ೪೪೭ ॥

ಧೃತರಾಷ್ಟ್ರಾ ್ರಶ್ಚೈಕಶತಮಶೀತಿರ್ಜನಮೇಜಯಾಃ ।
ಶತಂ ಚ ಬ್ರಹ್ಮದತ್ತಾನಾಂ ಶೀರಿಣಾಂ ವೀರಿಣಾಂ ಶತಂ ॥ ೪೪೮ ॥

ತತಃ ಶತಂ ಪುಲೋಮಾನಾಂ ಶ್ವೇತಕಾಶಕುಶಾದಯಃ ।
ತತೋಽಪರೇ ಸಹಸ್ರಂ ವೈ ಯೇಽತೀತಾಃ ಶತಬಿಂದವಃ ॥ ೪೪೯ ॥

ಈಜಿರೇ ಚಾಶ್ವ ಮೇಧೈಸ್ತೇ ಸರ್ವೇ ನಿಯುತದಕ್ಷಿಣೈಃ ।
ಏವಂ ರಾಜರ್ಷಯೋಽತೀತಾಃ ಶತಶೋಽಥ ಸಹಸ್ರಶಃ ॥ ೪೫೦ ॥

---

೪೪೭. ಅವರಲ್ಲಿ ಯಾರು ಅತೀತರಾಗಿಯೂ, ಸಮಾನರಾಗಿಯೂ ಇರುವರೋ ಅವರನ್ನು ತಿಳಿಸುವೆನು ಕೇಳಿರಿ. ವಿಂಧ್ಯದೇಶೀಯರು ನೂರುಜನಗಳಿರುವರು. ಅವರಲ್ಲಿ ನೂರುನೂರು ಆನೆಗಳೂ, ಕುದುರೆಗಳೂ ಇರುವುವು.

೪೪೮. ಧೃತರಾಷ್ಟ್ರನ ಕುಮಾರರು ನೂರೊಂದು ಜನಗಳಿರುವರು. ಜನಮೇಜಯರು ಎಂಬತ್ತು ಜನಗಳಿರುವರು. ಅದರಂತೆ ಬ್ರಹ್ಮದತ್ತರೂ, ಶೀರಿಗಳೂ, ವೀರಿಗಳೂ ಕೂಡ ನೂರುನೂರು ಜನಗಳಿರುವರು.

೪೪೯. ಅವರ ತರುವಾಯ ಪುಲೋಮರು, ಶ್ವೇತರು, ಕಾಶಕುಶರು ಇವರೇ ಮೊದಲಾದವರೂ ಕೂಡ ಶತಸಂಖ್ಯಾತರಾಗಿರುವರು. ಯಾವ ಶತಬಿಂದುಗಳು ಅತೀತರಾಗಿರುವರೋ ಅವರು ಸಹಸ್ರಸಂಖ್ಯಾಕರಾಗಿರುವರು. ಅವರು ಸಾವಿರ ಜನರು ಪ್ರಸಿದ್ಧರಾಗಿರುವರು.

೪೫೦. ಯಾವ ರಾಜರು ಬಹುದಕ್ಷಿಣೆಯಲ್ಲಿ ಅಶ್ವಮೇಧಯಾಗಗಳಿಂದ ದೇವತೆಗಳಿಗೆ ತೃಪ್ತಿಪಡಿಸಿದರೋ ಅಂತಹ ಅನೇಕ ರಾಜರ್ಷಿಗಳು ಅತೀತರಾಗುವರು. ಮತ್ತು ಅವರು ಶತಸಂಖ್ಯಾಕರಾಗಿಯೂ, ಸಹಸ್ರಸಂಖ್ಯಾಕರಾಗಿಯೂ, ಸುಪ್ರಸಿದ್ಧರಾಗಿಯೂ ಇರುವರು.

**ಮನೋರ್ವೈವಸ್ವತಸ್ಯಾಸ್ಮಿನ್ ವರ್ತಮಾನೇಽಂತರೇ ತು ಯೇ |**
**ತೇಷಾಂ ನಿಬೋಧತೋತ್ಪನ್ನಾ ಲೋಕೇ ಸಂತತಯಃ ಸ್ಮೃತಾಃ || ೪೫೧ ||**

**ನ ಶಕ್ಯಂ ವಿಸ್ತರಂ ತೇಷಾಂ ಸಂತಾನಾನಾಂ ಪರಂಪರಾ |**
**ತತ್ಪೂರ್ವಾಪರಯೋಗೇನ ವಕ್ತುಂ ವರ್ಷಶತೈರಪಿ || ೪೫೨ ||**

**ಅಷ್ಟಾವಿಂಶದ್ಯುಗಾಖ್ಯಾಸ್ತು ಗತಾ ವೈವಸ್ವತೇಽಂತರೇ |**
**ಏತಾ ರಾಜರ್ಷಿಭಿಃ ಸಾರ್ಧಂ ಶಿಷ್ಟಾ ಯಾಸ್ತಾ ನಿಬೋಧತ || ೪೫೩ ||**

**ಚತ್ವಾರಿಂಶಚ್ಚ ಯೇ ಚೈವ ಭವಿಷ್ಯಾಃ ಸಹ ರಾಜಭಿಃ |**
**ಯುಗಾಖ್ಯಾನಾಂ ವಿಶಿಷ್ಟಾಸ್ತು ತತೋ ವೈವಸ್ವತಕ್ಷಯೇ || ೪೫೪ ||**

---

**೪೫೧.** ಈಗ ನಡೆಯುವ ಈ ವೈವಸ್ವತಮನ್ವಂತರದಲ್ಲಿ ಯಾವ ಯಾವ ಸುಪ್ರಸಿದ್ಧರಾದ ರಾಜರಿರುವರೋ, ಅವರಿಂದ ಈ ಲೋಕದಲ್ಲಿ ಉಂಟಾಗುವ ಸಂತಾನವನ್ನು ನಿರೂಪಿಸುವೆನು ಕೇಳಿರೆಂದನು.

**೪೫೨.** ಅಂತಹ ಎಲ್ಲಾ ರಾಜರ ಸಂತಾನ ಪರಂಪರೆಗಳನ್ನು ಆನುಪೂರ್ವಿಕವಾಗಿ ಹೇಳುವುದು ಅಸಾಧ್ಯವಾಗಿರುವುದು. ಅವರ ವಂಶವನ್ನು ಪೂರ್ವಾಪರೀಭಾವಗಳ ವ್ಯತ್ಯಾಸವಿಲ್ಲದೇ ಸರಿಯಾಗಿ ಹೇಳುವುದು ನೂರಾರು ವರ್ಷಗಳಿಂದಲೂ ಸಾಧ್ಯವಿಲ್ಲ.

**೪೫೩.** ಈಗ ನಡೆಯುವ ವೈವಸ್ವತಮನ್ವಂತರದಲ್ಲಿ ಇಪ್ಪತ್ತೆಂಟು ಯುಗಗಳು ರಾಜರ್ಷಿಗಳೊಡನೆ ಕಳೆದುಹೋಗಿವೆ. ಹೀಗೆ ಕಳೆದುಳಿದ ರಾಜರ ವಂಶಗಳನ್ನು ನಿರೂಪಿಸುವೆನು ಕೇಳಿರೆಂದನು.

**೪೫೪.** ಈಗ ನಡೆಯುವ ವೈವಸ್ವತಮನ್ವಂತರವು ಕಳೆದುಯೋಗಲು, ರಾಜರಿಂದೊದಗೂಡಿ ಅವಶಿಷ್ಟವಾದ ನಲವತ್ತು ಯುಗಗಳು ಮುಂದೆ ಬರುವುದಾಗಿರುವುವು. ಈ ವೈವಸ್ವಂತಮನ್ವಂತರವು ಕಳೆದಮೇಲೆ ಇಪ್ಪತ್ತೊಂಭತ್ತನೆಯ ಕೃತ ಯುಗವು ಬರುವುದು. ಇದರಂತೆ ಇತರ ಯುಗಗಳೂ ಬರುವುವು.

ಏತದ್ವಃ ಕಥಿತಂ ಸರ್ವಂ ಸಮಾಸವ್ಯಾಸಯೋಗತಃ ।
ಪುನರುಕ್ತಂ ಬಹುತ್ವಾಚ್ಚ ನ ಶಕ್ಯಂ ತು ಯುಗೈಃ ಸಹ ॥ ೪೫೫ ॥

ಏತೇ ಯಯಾತಿಪುತ್ರಾಣಾಂ ಪಂಚವಿಂಶಾ ವಿಶಾಂ ಹಿತಾಃ ।
ಕೀರ್ತಿತಾಶ್ಚಾಮಿತಾ ಯೇ ಯೇ ಲೋಕಾನ್ ವೈ ಧಾರಯಂತ್ಯುತ ॥ ೪೫೬ ॥

ಲಭತೇ ಚ ವರೇಣ್ಯಂ ಚ ದುರ್ಲಭಾನಿಹ ಲೌಕಿಕಾನ್ ।
ಆಯುಃ ಕೀರ್ತಿಂ ಧನಂ ಪುತ್ರಾನ್ ಸ್ವರ್ಗಂ ಚಾನಂತ್ಯಮಶ್ನುತೇ ॥ ೪೫೭ ॥

ಧಾರಣಾಚ್ಛ್ರವಣಾಚ್ಚೈವ ತೇ ಲೋಕಾನ್ ಧಾರಯಂತ್ಯುತ ।
ಇತ್ಯೇಷ ವೋ ಮಯಾ ಪಾದಸ್ತೃತೀಯಃ ಕಥಿತೋ ದ್ವಿಜಾಃ ।
ವಿಸ್ತರೇಣಾನುಪೂರ್ವ್ಯಾ ಚ ಕಿಂ ಭೂಯೋ ವರ್ತಯಾಮ್ಯಹಂ ॥ ೪೫೮ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ “ಅನುಷಂಗಪಾದೋ”
ನಾಮ ಸಪ್ತತ್ರಿಂಶೋಽಧ್ಯಾಯಃ

---

೪೫೫. ಎಲೈ ವಿಪ್ರೋತ್ತಮರೇ, ಇವೆಲ್ಲವನ್ನೂ ನಾನು ನಿಮಗೆ ಸಂಕ್ಷೇಪ ವಿಸ್ತಾರಗಳಿಂದ ನಿರೂಪಿಸಿರುತ್ತೇನೆ. ಅಧಿಕವಾಗಿ ತಿಳಿಸಿದರೆ ಪುನರುಕ್ತವಾಗುವುದು. ಆದುದರಿಂದ ಯುಗಗಳ ಸಂಗಡ ಅವುಗಳನ್ನು ತಿಳಿಸಲು ಸಾಧ್ಯವಿಲ್ಲ.

೪೫೬. ಯಾವ ಯಯಾತಿ ಮಹಾರಾಜನ ಪುತ್ರರು ಲೋಕೋದ್ಧಾರಕರಾಗಿರುವರೋ, ಅಂತಹ ಯಯಾತಿರಾಜನ ವಂಶೀಕರೂ, ಇಪ್ಪತ್ತೈದುಸಂಖ್ಯಾತರೂ, ಲೋಕವಿಖ್ಯಾತರೂ, ಅಮಿತವಿಕ್ರಮಿಗಳೂ ಆದ ರಾಜರುಗಳ ವಿಚಾರಗಳನ್ನು ತಿಳಿಸಿರುವೆನೆಂದನು.

೪೫೭. ಯಾರು ಈ ವಂಶಗಳ ಚರಿತವೇ ಮೊದಲಾದವುಗಳನ್ನು ಶ್ರವಣ ಪಠಣಾದಿಗಳನ್ನು ಮಾಡುವರೋ, ಅವರು ಈ ಲೋಕದಲ್ಲಿ ಉತ್ತಮವೂ, ದುರ್ಲಭವೂ ಆದ ಲೌಕಿಕ ಸಂಪತ್ತನ್ನೂ, ಆಯುಷ್ಯ, ಕೀರ್ತಿ, ಧನ, ಪುತ್ರ, ಸ್ವರ್ಗ ಇವೇ ಮೊದಲಾದ ಅನಂತ ಸುಖಗಳನ್ನೂ ಪಡೆಯುವರು.

೪೫೮. ಎಲೈ ದ್ವಿಜವರ್ಯರೇ, ಈರೀತಿಯಾಗಿ ನಾನು ನಿಮಗೆ ಮೂರನೆಯ ಪಾದದ ಅಭಿಪ್ರಾಯವನ್ನು ಸಂಕೋಚ ವಿಸ್ತಾರವಾಗಿಯೂ, ಕ್ರಮವಾಗಿಯೂ ತಿಳಿಸಿರುತ್ತೇನೆ. ಮತ್ತು ನಿಮಗೆ ತಿಳಿಯಬೇಕಾದ ವಿಷಯವೇನಿದೆ ತಿಳಿಸಿ ಎಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಅನುಷಂಗಪಾದವೆಂಬ
ಮೂವತ್ತೇಳನೆಯ ಅಧ್ಯಾಯವು ಸಮಾಪ್ತವಾದುದು.

## ಮೂವತ್ತೇಳನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ತುರ್ವಸು, ಅನು, ದ್ರುಹ್ಯ ಮತ್ತು ಪೂರು ಇವರ ವಂಶವೂ ಕಲಿಕಾಲದ ಧರ್ಮವೂ ವರ್ಣಿತವಾಗಿರುವುವು. ಈ ವಂಶದಲ್ಲಿ ಜನಿಸಿದ ಅಶಿಜನು ಬೃಹಸ್ಪತಿಗಳ ಶಾಪದಿಂದ ದೀರ್ಘತಮೋನಾಮಕನೂ, ಅಂಧನೂ, ವೃದ್ಧನೂ ಆದ ಸಂಗತಿಯು ಉಕ್ತವಾಗಿದೆ. ಬಲಿಚಕ್ರವರ್ತಿಯು ಇವನನ್ನು ಪೂಜಿಸಿ ಅರಮನೆಯಲ್ಲಿ ಗೋಪ್ಯವಾಗಿಟ್ಟಿದ್ದನು. ಈ ದೀರ್ಘತಮಸ್ಸಿನ ಅನುಗ್ರಹದಿಂದ ಬಲಿಗೆ ಮೊದಲು ಕಕ್ಷೀವ ಚಕ್ಷುಷರೆಂಬ ಇಬ್ಬರು ಕುಮಾರರೂ, ತರುವಾಯ ಅಂಗ, ವಂಗ, ಕಲಿಂಗ, ಪುಂಡ್ರ, ಬ್ರಹ್ಮರೆಂಬ ಐವರು ಕುಮಾರರೂ ಜನಿಸಿದರು. ಆಗ ದೀರ್ಘತಮಸನು ಗೋಧರ್ಮವನ್ನು ಆಚರಿಸಿದ್ದರಿಂದ ಪ್ರೀತವಾದ ಕಾಮಧೇನುವು ಅವನಿಗೆ ವರಗಳನ್ನು ಕೊಟ್ಟಿತು. ಆದರಿಂದ ಅವನು ದಿವ್ಯಚಕ್ಷುಸ್ಸನ್ನೂ ತಾರಣ್ಯವನ್ನೂ ಪಡೆದು ಯುವಕನಾದನು.

ಪೂರುವಂಶದಲ್ಲಿ ದಿವೋದಾಸ, ಪರೀಕ್ಷಿತ, ಜನಮೇಜಯ, ಶಂತನು, ಭೀಷ್ಮ, ಕೌರವ, ಪಾಂಡವರು ಉದ್ಭವಿಸಿದರು. ಮತ್ತು ಅಧಿಸಾಮಕೃಷ್ಣ, ಅಭಿಮನ್ಯು ಮೊದಲಾದ ಶೂರರು ಉದ್ಭವಿಸಿದರು. ಕೆಲವುಕಾಲಾನಂತರ ಮಹಾಪದ್ಮ ಚಂದ್ರಗುಪ್ತ ಮೊದಲಾದ ಶೂದ್ರಜಾತಿಯ ರಾಜರು ಜನಿಸಿ ದೇಶವನ್ನು ಪಾಲಿಸಿದರು. ಹೀಗೆ ಕ್ಷತ್ರಿಯ ವಂಶವು ಮುಗಿದಿರುವುದು.

ಕಲಿಯುಗಾಂತದಲ್ಲಿ ಆ ರಾಜರೂ ಮೃತರಾಗಲು ದೇಶವು ಅರಾಜಕವಾಗುವುದು. ಆಗ ಪ್ರಜೆಗಳು ವರ್ಣಾಶ್ರಮಧರ್ಮಭ್ರಷ್ಟರಾಗಿ ಸಾಂಕರ್ಯವನ್ನು ಹೊಂದಿ, ಬ್ರಾಹ್ಮಣರು ಶಯನಾಸನ ಭೋಜನಾದಿಗಳಲ್ಲಿ ಇತರರ ಸಂಪರ್ಕವನ್ನು ಹೊಂದುವರು. ಇತರರು ಬ್ರಾಹ್ಮಣಧರ್ಮಗಳನ್ನಾಶ್ರಯಿಸಿ ಅಧ್ಯಾಪಕರೂ ಯಾಜಕರೂ ಆಗುವರು. ಕಲಿಯುಗವು ಕಳೆದು ಸಂಧಿಕಾಲವು ಬರಲು ಪ್ರಜೆಗಳು ನಿರಾಶ್ರಯರಾಗಿ ಮನೆಮಠಗಳನ್ನು ತ್ಯಜಿಸಿ ಬೆಟ್ಟಗುಡ್ಡಗಳನ್ನೂ, ಗಿರಿ ನದಿ ಮೊದಲಾದುವುಗಳನ್ನಾಶ್ರಯಿಸಿ ಕಂದ ಮೂಲಾದಿಗಳಿಂದ ಜೀವಿಸುವರು, ಹೀಗೆ ಕಲಿಯುಗವು ಕಳೆಯಲು, ಮಹರ್ಷಿಗಳೂ ರಾಜರ್ಷಿಗಳೂ ಮುಂದಿನ ಕೃತಯುಗಕ್ಕೆ ಬೀಜರೂಪರಾಗಿರುವರು ಎಂಬ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀ ಮ ದ್ವಾ ಯು ಮ ಹಾ ಪು ರಾ ಣ ಂ

## ॥ ಅಷ್ಟತ್ರಿಂಶೋಽಧ್ಯಾಯಃ ॥

**ಶ್ರುತ್ವಾ ಪಾದಂ ತೃತೀಯಂ ತು ಕ್ರಾಂತಸೂಂತೇನ ಧೀಮತಾ ।**
**ತತಶ್ಚತುರ್ಥಂ ಪಪ್ರಚ್ಛುಃ ಪಾದಂ ವೈ ಋಷಿಸತ್ತಮಾಃ ॥ ೧ ॥**

**॥ ಋಷಯ ಊಚುಃ ॥**

**ಪಾದಃ ಕ್ರಾಂತಸ್ತೃತೀಯೋಽಯಮನುಷಂಗೇಣ ಯಸ್ತ್ವಯಾ ।**
**ಚತುರ್ಥಂ ವಿಸ್ತರಾತ್ಪಾದಂ ಸಂಹಾರಂ ಪರಿಕೀರ್ತಯ ॥ ೨ ॥**

---

## ಮೂವತ್ತೆಂಟನೆಯ ಅಧ್ಯಾಯವು

೧. ಸೂತಮಹರ್ಷಿಗಳು ಈರೀತಿಯಲ್ಲಿ ಹೇಳಿದ ಮೂರನೆಯದಾದ ಅನುಷಂಗ ಪಾದದ ವಿಷಯಗಳನ್ನು ಕೇಳಿ ಸಂತುಷ್ಟರಾಗಿ ನಾಲ್ಕನೆಯದಾದ ಉಪಸಂಹಾರ ಪಾದದ ವಿಷಯಗಳನ್ನು ಕೇಳಲಿಚ್ಛಿಸಿ ಸೂತಮುನಿಯನ್ನು ಕೇಳಿದರು.

೨. ಮಹರ್ಷಿಗಳು ಸೂತರನ್ನು ಕೇಳಿದರು:—ಎಲೈ ಜ್ಞಾನಿಯಾದ ಸೂತ ಮುನಿಯೇ, ನೀನು ಹೇಳಿದ ಅನುಷಂಗಪಾದದ ವಿಷಯಗಳನ್ನು ಕೇಳಿ ಬಹಳಾನಂದವು ಉಂಟಾಗಿದೆ. ಈಗ ನಾಲ್ಕನೆಯದಾದ ಉಪಸಂಹಾರಪಾದದ ಸಂಗತಿಗಳನ್ನು ಕೇಳಬೇಕೆಂದು ಇಚ್ಛಿಸುತ್ತೇವೆ. ಅದನ್ನು ವಿಸ್ತಾರವಾಗಿಯೂ, ಕ್ರಮವಾಗಿಯೂ ನಿರೂಪಿಸಬೇಕೆಂದು ಬೇಡಿದರು.

ಮನ್ವಂತರಾಣಿ ಸರ್ವಾಣಿ ಪೂರ್ವಾಣ್ಯೇವಾಪರೈಃ ಸಹ ।
ಸಪ್ತರ್ಷೀಣಾಮಥೈತೇಷಾಂ ಸಾಪ್ರತಸ್ಯಾಂತರೇ ಮನೋಃ ॥ ೩ ॥

ವಿಸ್ತರಾವಯವಂ ಚೈವ ನಿಸರ್ಗಸ್ಯ ಮಹಾತ್ಮನಃ ।
ವಿಸ್ತರೇಣಾನುಪೂರ್ವ್ಯಾ ಚ ಸರ್ವಮೇವ ಬ್ರವೀಹಿ ಮೇ ॥ ೪ ॥

॥ ಸೂತ ಉವಾಚ ॥

ಭವತಾಂ ಕಥಯಿಷ್ಯಾಮಿ ಸರ್ವಮೇತದ್ಯಥಾತಥಂ ।
ಪಾದಂ ತ್ವಿಮಂ ಸಸಂಹಾರಂ ಚತುರ್ಥಂ ಮುನಿಸತ್ತಮಾಃ ॥ ೫ ॥

ಮನೋರ್ವೈವಸ್ವತಸ್ಯೇಮಂ ಸಾಂಪ್ರತಸ್ಯ ಮಹಾತ್ಮನಃ ।
ವಿಸ್ತರೇಣಾನುಪೂರ್ವ್ಯಾ ಚ ನಿಸರ್ಗಂ ಶೃಣುತ ದ್ವಿಜಾಃ ॥ ೬ ॥

ಮನ್ವಂತರಾಣಾಂ ಸಂಕ್ಷೇಪಂ ಭವಿಷ್ಯೈಃ ಸಹ ಸಪ್ತಭಿಃ ।
ಪ್ರಲಯಂ ಚೈವ ಲೋಕಾನಾಂ ಬ್ರುವತೋ ಮೇ ನಿಬೋಧತ ॥ ೭ ॥

---

೩–೪. ಎಲೈ ಮುನಿಯೇ, ಪೂರ್ವಾಪರಗಳಾದ ಸಮಸ್ತ ಮನ್ವಂತರಗಳೂ, ಸಪ್ತರ್ಷಿಗಳೂ, ಇತರ ಮುನಿಗಳೂ, ಮಹಾತ್ಮರೂ ಈಗಿನ ಮನ್ವಂತರದ ಸೃಷ್ಟಿಕ್ರಮ ಇವುಗಳ ಅವಾಂತವಿಷಯಗಳು ಇವನ್ನು ಕ್ರಮವಾಗಿಯೂ, ವಿಸ್ತಾರವಾಗಿಯೂ ನಿರೂಪಿಸಬೇಕೆಂದು ಸೂತಪುರಾಣಿಕನನ್ನು ಕೇಳಿದರು.

೫. ಸೂತಮುನಿಯು ಹೇಳಿದನು :—ಎಲೈ ಮುನಿವರ್ಯರೇ, ನಾಲ್ಕನೆಯದಾದ ಉಪಸಂಹಾರಪಾದದ ಸಂಗತಿಗಳನ್ನು ಕ್ರಮವಾಗಿಯೂ, ವಿಸ್ತಾರವಾಗಿಯೂ ನಿರೂಪಿಸುವೆನು ಸಾವಧಾನವಾಗಿ ಕೇಳಿರೆಂದು ಹೇಳಿದನು.

೬. ಎಲೈ ವಿಪ್ರೋತ್ತಮರೇ, ಮಹಾತ್ಮನಾದ ಈಗಿನ ವೈವಸ್ವತಮನುವಿನ ಸೃಷ್ಟಿಕ್ರಮವನ್ನು ವಿಸ್ತಾರವಾಗಿಯೂ, ಕ್ರಮವಾಗಿಯೂ ಯಾವ ವಿಷಯಗಳನ್ನೂ ಬಿಡದೆಯೂ ಹೇಳುವೆನು ಕೇಳಿರೆಂದನು.

೭. ಎಲೈ ಮುನಿವರ್ಯರೇ, ಮುಂದೆ ಬರುವ ಸಪ್ತಮನ್ವಂತರಗಳೊಡನೆ ಸಮಸ್ತಮನ್ವಂತರಗಳ ಸಂಗತಿಗಳನ್ನೂ, ಲೋಕಗಳ ಪ್ರಲಯವನ್ನೂ ಸಂಕ್ಷೇಪವಾಗಿ ನಿರೂಪಿಸುವೆನು ಕೇಳಿರೆಂದನು.

ಏತಾನ್ಯುಕ್ತಾನಿ ವೈ ಸಂಮ್ಯಕ್ ಸಪ್ತಸಪ್ತಸು ವೈ ಮಯಾ ।
ಮನ್ವಂತರಾಣಿ ಸಂಕ್ಷೇಪಾಚ್ಛೃಣು ತಾನ್ಯಾಗತಾನಿ ಮೇ ॥ ೮ ॥

ಸಾವರ್ಣಸ್ಯ ಪ್ರವಕ್ಷ್ಯಾಮಿ ಮನೋರ್ವೈವಸ್ವತಸ್ಯ ಹ ।
ಭವಿಷ್ಯಸ್ಯ ಭವಿಷ್ಯಂತಿ ಸಮಾಸಾತ್ತು ನಿಬೋಧತ ॥ ೯ ॥

ಅನಾಗತಾಶ್ಚ ಸಪ್ತೈವ ಸ್ಮೃತಾಸ್ತ್ವಿಹ ಮಹರ್ಷಯಃ ।
ಕೌಶಿಕೋ ಗಾಲವಶ್ಚೈವ ಜಾಮದಗ್ನ್ಯಶ್ಚ ಭಾರ್ಗವಃ ॥ ೧೦ ॥

ದ್ವೈಪಾಯನೋ ವಸಿಷ್ಠಶ್ಚ ಕೃಪಃ ಶಾರದ್ವತಸ್ತಥಾ ।
ಆತ್ರೇಯೋ ದೀಪ್ತಮಾಂಶ್ಚೈವ ಋಷ್ಯಶೃಂಗಸ್ತು ಕಾಶ್ಯಪಃ ॥ ೧೧ ॥

ಭಾರದ್ವಾಜಸ್ತಥಾ ದ್ರೌಣಿರಶ್ವತ್ಥಾಮಾ ಮಹಾಯಶಾಃ ।
ಏತೇ ಸಪ್ತ ಮಹಾತ್ಮಾನೋ ಭವಿಷ್ಯಾಃ ಪರಮರ್ಷಯಃ ॥ ೧೨ ॥

ಸುತಪಾಶ್ಚಾಮಿತಾಭಾಶ್ಚ ಸುಖಾಶ್ಚೈವ ಗಣಾಸ್ತ್ರಯಃ ।
ತೇಷಾಂ ಗಣಾಸ್ತು ದೇವಾನಾಂ ಏಕೈಕೋ ವಿಂಶಕಃ ಸ್ಮೃತಃ ॥ ೧೩ ॥

---

೮. ಎಲೈ ಬ್ರಾಹ್ಮಣೋತ್ತಮರೇ, ನಾನು ನಿಮಗೆ ಅತೀತವಾದ ಸಪ್ತ ಮನ್ವಂತರಗಳ ವಿಷಯಗಳನ್ನೂ ವಿಶದವಾಗಿ ನಿರೂಪಿಸಿರುತ್ತೇನೆ. ಈಗ ಮುಂದೆ ಬರುವ ಮನ್ವಂತರಗಳ ಸಂಗತಿಗಳನ್ನೂ ಸಂಕ್ಷೇಪವಾಗಿ ಹೇಳುವೆನು ಕೇಳಿರೆಂದನು.

೯. ಭವಿಷ್ಯವಾದ ಸಾವರ್ಣ್ಯಮನ್ವಂತರ ಮತ್ತು ವೈವಸ್ವತಮನ್ವಂತರ ಇವುಗಳಲ್ಲಿ ನಡೆಯುವ ಸಂಗತಿಗಳನ್ನು ಸಂಕ್ಷೇಪವಾಗಿ ತಿಳಿಸುವೆನು ಕೇಳಿರೆಂದನು.

೧೦–೧೨. ಭವಿಷ್ಯರಾದ ಮಹರ್ಷಿಗಳು ಏಳುಜನರಿರುವರೆಂದು ಜ್ಞಾನಿಗಳು ಹೇಳುವರು. ಅವರು ಕುಶಿಕವಂಶಕರಾದ ಗಾಲವರು, ಭೃಗುಪುತ್ರರಾದ ಪರಶುರಾಮ, ವೇದವ್ಯಾಸರು, ವಸಿಷ್ಠರು, ಶಾರದ್ವತರಾದ ಕೃಪರು, ಅತ್ರಿಗೊತ್ರೋತ್ಪನ್ನರೂ ಕಾಂತಿಯುತರೂ ಆದ ಋಷ್ಯಶೃಂಗರು ಭಾರದ್ವಾಜಗೋತ್ರಜನೂ, ಕೀರ್ತಿವಂತನೂ, ದ್ರೋಣಪುತ್ರನೂ ಆದ ಅಶ್ವತ್ಥಾಮ ಈಏಳು ಜನರು ಋಷಿಗಳಾಗಿರುವರು. ಇವರೆ ಮುಂದೇ ಬರತಕ್ಕ ಭಾವಿ ಸಪ್ತರ್ಷಿಗಳಾಗುವರು.

೧೩. ಸುತಪಸರು, ಅಮಿತಾಭಾಸರು, ಸುಖರು ಎಂಬುದಾಗಿ ದೇವಗಣಗಳು ಮೂರು ಇರುವುದು. ದೇವತೆಗಳ ಆ ಪ್ರತಿಯೊಂದು ಗಣದಲ್ಲಿಯೂ ಇಪ್ಪತ್ತಿಪ್ಪತ್ತು ಜನಗಳಿರುವರು.

ನಾಮತಸ್ತು ಪ್ರವಕ್ಷ್ಯಾಮಿ ನಿಬೋಧಧ್ವಂ ಸಮಾಹಿತಾಃ ।
ರಿತಸ್ತಪಶ್ಚ ಶುಕ್ರಶ್ಚ ದ್ಯುತಿರ್ಜ್ಯೋತಿಃ ಪ್ರಭಾಕರಾ || ೧೪ ||

ಪ್ರಭಾಸೋ ಭಾಸಕೃದ್ಧರ್ಮಸ್ತೇಜೋರಶ್ಮಿರ್ಋತುರ್ವಿರಾಟ್ ।
ಅರ್ಚಿಷ್ಮಾನ್ ದ್ಯೋತನೋ ಭಾನುರ್ಯಶಃ ಕೀರ್ತಿರ್ಬುಧೋಧೃತಿಃ ||
ವಿಂಶತಿಃ ಸುತಪಾ ಹ್ಯೇತೇ ನಾಮಭಿಃ ಪರಿಕೀರ್ತಿತಾಃ || ೧೫ ||

ಪ್ರಭುರ್ವಿಭುರ್ವಿಭಾಸಶ್ಚ ಜೇತಾ ಹಂತಾರಿಹಾ ರಿತುಃ ।
ಸುಮತಿಃ ಪ್ರಮತಿರ್ದೀಪ್ತಿಃ ಸಮಾಖ್ಯಾತೋ ಮಹೋಮಹಾನ್ || ೧೬ ||

ದೇಹೋ ಮುನಿರ್ನಯೋ ಜ್ಯೇಷ್ಠಃ ಸಮಃ ಸತ್ಯಶ್ಚ ವಿಶ್ರುತಃ ।
ಇತ್ಯೇತೇ ಹ್ಯಮಿತಾಭಾಸ್ತು ವಿಂಶತಿಃ ಪರಿಕೀರ್ತಿತಾಃ || ೧೭ ||

ದಮೋ ದಾತಾ ವಿದಃ ಸೋಮೋ ವಿತ್ತವೈದ್ಯೌ ಯಮೋ ನಿಧಿಃ ।
ಹೋಮಂ ಹವ್ಯಂ ಹುತಂ ದಾನಂ ದೇಯಂ ದಾತಾ ತಪಃ ಶಮಃ || ೧೮ ||

ಧ್ರುವಂ ಸ್ಥಾನಂ ವಿಧಾನಂ ಚ ನಿಯಮಶ್ಚೇತಿ ವಿಂಶತಿಃ ।
ಮುಖ್ಯಾ ಹ್ಯೇತೇ ಸಮಾಖ್ಯಾತಾಃ ಸಾವರ್ಣೇ ಪ್ರಥಮೇಂತರೇ || ೧೯ ||

---

೧೪–೧೫. ಅವರ ನಾಮಗಳನ್ನು ಹೇಳುವೆನು ಸಾವಧಾನವಾಗಿ ಕೇಳಿರಿ. ಅವರು ರಿತ, ತಪಶ್ರುತ, ದ್ಯುತಿ, ಜ್ಯೋತಿ, ಪ್ರಭಾಕರ, ಪ್ರಭಾಸ, ಭಾಸಕೃತಿ, ಧರ್ಮ, ತೇಜಸ್ಸು, ರಶ್ಮಿಋತು, ವಿರಾಟ್, ಅರ್ಚಿಷ್ಮಂತ, ದ್ಯೋತನ, ಭಾನು, ಯಶಸ್ಸು, ಕೀರ್ತಿ, ಬುಧ, ಧೃತಿ ಎಂಬ ಇಪ್ಪತ್ತು ಜನರಾಗಿರುವರು. ಈ ಇಪ್ಪತ್ತು ಜನ ಸುತರನ್ನು ನಾಮನಿರ್ದೇಶಪೂರ್ವಕವಾಗಿ ವರ್ಣಿಸಿರುತ್ತೇನೆ.

೧೬–೧೭. ಪ್ರಭು, ವಿಭು, ವಿಭಾಸ, ಜ್ಯೇತಾರ, ಹಂಕಾರ, ಅರಿಹ, ರಿತು, ಸುಮತಿ, ಪ್ರಮತಿ, ದೀಪ್ತಿ, ಸಮಾಖ್ಯಾತ, ಮಹೋಮಂತ, ದೇಹ, ಮುನಿ, ನಯ, ಜ್ಯೇಷ್ಠ, ಸಮ, ಸತ್ಯ ಮತ್ತು ವಿಶ್ರುತ ಎಂಬ ಇಪ್ಪತ್ತು ಜನಗಳು ಅಮಿತಾಭರೆಂದು ಪ್ರಖ್ಯಾತರಾಗಿರುವರು.

೧೮–೧೯. ದವ, ದಾತ, ವಿದ, ಸೋಮ, ವಿತ್ತ, ವೈದ್ಯ, ಯಮ, ನಿಧಿ, ಹೋಮ, ಹವ್ಯ, ಹುತ, ದಾನ, ದೇಯ, ವಾತಾ, ತಪ, ಶಮ, ಧ್ರುವ, ಸ್ಥಾನ, ವಿಧಾನ, ನಿಯಮ ಎಂಬ ಈ ಇಪ್ಪತ್ತು ಜನರು ಸುಖ್ಯರೆಂದು ಸಾವರ್ಣಿಮನ್ವಂತರ ದಲ್ಲಿ ಪ್ರಖ್ಯಾತರಾಗಿರುವರು.

ಮಾರೀಚಸ್ಯೈವ ತೇ ಪುತ್ರಾಃ ಕಶ್ಯಪಸ್ಯ ಮಹಾತ್ಮನಃ ।
ಸಾಂಪ್ರತಸ್ಯ ಭವಿಷ್ಯಂತಿ ಸಾವರ್ಣಸ್ಯಾಂತರೇ ಮನೋಃ ॥ ೨೦ ॥

ತೇಷಾಮಿಂದ್ರೋ ಭವಿಷ್ಯಸ್ತು ಬಲಿರ್ವೈರೋಚನಃ ಪುರಾ ।
ವೀರವಾಂಶ್ಚಾವರೀಯಾಂಶ್ಚ ನಿರ್ಮೋಹಃ ಸತ್ಯವಾಕ್ ಕೃತೀ ॥ ೨೧ ॥

ಚರಿಷ್ಣುರಾಜ್ಯೋ ವಿಷ್ಣುಶ್ಚ ವಾಚಃ ಸುಮತಿರೇವ ಚ ।
ಸಾವರ್ಣಸ್ಯ ಮನೋಃ ಪುತ್ರಾ ಭವಿಷ್ಯಂತಿ ನವೈವ ತು ॥ ೨೨ ॥

ನವ ಚಾನ್ಯೇಷು ವಕ್ಷ್ಯಾಮಿ ಸಾವರ್ಣೇಶ್ಚಾಂತರೇಷು ವೈ ।
ಸಾವರ್ಣಮನವಶ್ಚಾನ್ಯೇ ಭವಿಷ್ಯಾ ಬ್ರಹ್ಮಣಃ ಸುತಾಃ ॥ ೨೩ ॥

ಮೇರುಸಾವರ್ಣಿನಸ್ತೇ ವೈ ದೃಷ್ಟಾ ಯೋ ದಿವ್ಯದೃಷ್ಟಿಭಿಃ ।
ದಕ್ಷಸ್ಯ ತೇ ಹಿ ದೌಹಿತ್ರಾಃ ಪ್ರಿಯಾಯಾ ದುಹಿತುಃ ಸುತಾಃ ॥ ೨೪ ॥

---

೨೦. ಅವರು ಸಾವರ್ಣಿಮನ್ವಂತರದಲ್ಲಿ ಮರೀಚಿಪುತ್ರರೂ, ಮಹಾತ್ಮರೂ ಆದ ಕಶ್ಯಪರಿಗೆ ಪುತ್ರರಾಗಿ ಜನಿಸುವರು. ಮತ್ತು ಸಾವರ್ಣಮನ್ವಂತರದಲ್ಲಿದ್ದ ಇವರು ಈಗಿನ ಮನ್ವಂತರದಲ್ಲಿ ಕಶ್ಯಪರ ಪುತ್ರರಾಗುವರು.

೨೧–೨೨. ಪೂರ್ವದಲ್ಲಿ ವಿರೋಚನನ ಪುತ್ರನಾಗಿದ್ದ ಬಲಿಮಹಾರಾಜನೇ ಮುಂದೆಯೂ ಇವರಿಗೆ ರಾಜನಾಗಿ ಜನಿಸಿ ಧರ್ಮದಿಂದ ರಾಜ್ಯಪಾಲನೆಮಾಡುವನು. ಸಾವರ್ಣಮನುವಿಗೆ ವೀರವಂತ, ಅವರೀವಂತ, ನಿರ್ಮೋಹ, ಸತ್ಯವಾಕ್ಕು, ಕೃತಿ, ಚರಿಷ್ಣು, ರಾಜ್ಯ, ವಿಷ್ಣು, ವಾಚಸ್ಸು, ಸುಮತಿ ಎಂಬ ಒಂಬತ್ತುಜನ ಮಕ್ಕಳಾಗುವರು.

೨೩. ಸಾವರ್ಣಿಮನ್ವಂತರದಲ್ಲಿ ಒಂಬತ್ತುಜನ ಬೇರೆಯಾದ ಕುಮಾರರು ಜನಿಸುವರು. ಅವರನ್ನು ಈಗ ನಿರೂಪಿಸುವೆನು ಕೇಳಿರಿ. ಆ ಸಾವರ್ಣಿಮನುಗಳು ಇವರಿಗಿಂತಲೂ ಬೇರೆಯಾಗಿ ಬ್ರಹ್ಮದೇವನ ಮಾನಸಪುತ್ರರಾಗಿ ಉದ್ಭವಿಸುವರು.

•೨೪. ಮಹಾತ್ಮರಾದ ಜ್ಞಾನಿಗಳು ದಿವ್ಯದೃಷ್ಟಿಯಿಂದ ಅವರಿಗೆ ಮೇರುಸಾವರ್ಣಿಗಳೆಂದು ನಾಮಕರಣವನ್ನು ಮಾಡಿರುವರು. ಅವರೆಲ್ಲರೂ ದಕ್ಷಪ್ರಜಾಪತಿಯ ಪ್ರಿಯಪುತ್ರಿಯ ಕುಮಾರರಾಗಿಯೂ ದಕ್ಷೇಶ್ವರನಿಗೆ ದೌಹಿತ್ರರಾಗಿಯೂ ಜನಿಸುವರು.

ಮಹತಾ ತಪಸಾ ಯುಕ್ತಾ ಮೇರುಪೃಷ್ಠೇ ಮಹೌಜಸಃ ।
ಬ್ರಹ್ಮಾದಿಭಿಸ್ತೇ ಜನಿತಾ ದಕ್ಷೇಣೈವ ಚ ಧೀಮತಾ ॥ ೨೫ ॥

ಮಹರ್ಲೋಕಗತಾವೃತ್ಯ ಭವಿಷ್ಯಾ ಮೇರುಮಾಶ್ರಿತಾಃ ।
ಮಹಾಭಾವಾತ್ತು ತೇ ಪೂರ್ವಂ ಜಜ್ಞಿರೇ ಚಾಕ್ಷುಷೇಂತರೇ ॥ ೨೬ ॥

॥ ಋಷಯ ಊಚುಃ ॥

ದಕ್ಷೇಣ ಜನಿತಾಃ ಪುತ್ರಾಃ ಕನ್ಯಾಯಾಮಾತ್ಮನಃ ಕಥಂ ।
ಭವೇತ್ತು ಬ್ರಹ್ಮಣಶ್ಚೈವ ಧರ್ಮೇಣ ಚ ಮಹಾತ್ಮನಃ ॥ ೨೭ ॥

॥ ಸೂತ ಉವಾಚ ॥

ಅತೋ ಭವಿಷ್ಯಾನ್ ವಕ್ಷ್ಯಾಮಿ ಸಾವರ್ಣಮನವಸ್ತು ಯೇ ।
ತೇಷಾಂ ಜನ್ಮ ಪ್ರಭಾವಂಚ ನಮಸ್ಕೃತ್ಯ ಪ್ರಚೇತಸೇ ॥ ೨೮ ॥

---

೨೫. ಮಹಾತೇಜಸ್ವಿಗಳಾದ ಆ ಮಹಾತ್ಮರು, ಜ್ಞಾನಿಯೂ, ಬ್ರಹ್ಮಾದಿಗಳು ಮತ್ತು ದಕ್ಷಪ್ರಜಾಪ್ರತಿ ಇವರಿಂದ ಸೃಷ್ಟಿತರೂ ಆಗಿ ಮೇರುಗಿರಿಯ ಮಧ್ಯಭಾಗದಲ್ಲಿ ಮಹಾತಪಸ್ಸನ್ನು ಮಾಡುತ್ತಾ ಪ್ರಕಾಶಿಸುವರು.

೨೬. ಮಹಾನುಭಾವರಾದ ಅವರು ಮೊದಲು ಮಹರ್ಲೋಕದಲ್ಲಿದ್ದು ಅಲ್ಲಿಂದ ಪುನಃ ಹಿಂತಿರುಗಿ ಮೇರುಗಿರಿಯನ್ನಾಶ್ರಯಿಸುವರು. ಅವರು ಮಹಾತ್ಮರಾದ ಕಾರಣ ಲೋಕಕಲ್ಯಾಣಕ್ಕಾಗಿ ಪೂರ್ವದ ಚಾಕ್ಷುಷಮನ್ವಂತರದಲ್ಲಿ ಜನಿಸಿದ್ದರು.

೨೭. ಋಷಿಗಳು ಪುನಃ ಕೇಳಿದರು :—ಪೂರ್ವದಲ್ಲಿ ದಕ್ಷಕುಮಾರರಾಗಿ ಜನಿಸಿದ್ದ ಆ ಮಹಾತ್ಮರು ದಕ್ಷಕುಮಾರಿಯಲ್ಲಿ ಹೇಗೆ ಅವತರಿಸಿದರು? ಒಬ್ಬರೇ ದಕ್ಷ ಕುಮಾರರೂ ದೌಹಿತ್ರರೂ ಹೇಗೆ ಆದರು ? ಮತ್ತು ಮಹಾತ್ಮನಾದ ಬ್ರಹ್ಮದೇವನ ಪುತ್ರರಾದ ಅವರು ಧರ್ಮಸುತರಾಗಿ ಹೇಗೆ ಅವತರಿಸಿದರು ?

೨೮. ಸೂತಮುನಿಯು ಹೇಳಿದನು :—ಆದುದರಿಂದಲೇ ಭವಿಷ್ಯರಾದ ಸಾವರ್ಣಮನುಗಳನ್ನು ತಿಳಿಸುವೆನು ಕೇಳಿರಿ. ಮೊದಲು ಮಹಾತ್ಮನಾದ ಬ್ರಹ್ಮದೇವನಿಗೆ ನಮಸ್ಕರಿಸಿ ಅವರ ಜನ್ಮಪ್ರಭಾವಗಳನ್ನು ಹೇಳುವೆನು ಕೇಳಿರೆಂದನು.

ವೈವಸ್ವತೇ ಹ್ಯುಪಸ್ಪೃಷ್ಟೇ ಕಿಂಚಿಚ್ಛಿಷ್ಟೇ ಚ ಚಾಕ್ಷುಷೇ ।
ಜಜ್ಞಿರೇ ಮನವಸ್ತೇ ಹಿ ಭವಿಷ್ಯಾನಾಗತಾಂತರೇ ॥ ೨೯ ॥

ಪ್ರಾಚೇತಸಸ್ಯ ದಕ್ಷಸ್ಯ ದೌಹಿತ್ರಾ ಮನವಸ್ತು ಯೇ ।
ಸಾವರ್ಣಾ ನಾಮತಃ ಪಂಚ ಚತ್ವಾರಃ ಪರಮರ್ಷಿಜಾಃ ॥ ೩೦ ॥

ಸಂಜ್ಞಾಪುತ್ರಸ್ತು ಸಾವರ್ಣ ಏಕೋ ವೈವಸ್ವತಸ್ತಥಾ ।
ಜ್ಯೇಷ್ಠಃ ಸಂಜ್ಞಾಸುತೋ ನಾಮ ಮನುರ್ವೈವಸ್ವತಃ ಪ್ರಭುಃ ॥ ೩೧ ॥

ವೈವಸ್ವತೇಂತರೇ ಪ್ರಾಪ್ತೇ ಸಮುತ್ಪತ್ತಿಸ್ತಯೋಃ ಶುಭಾ ।
ಚತುರ್ದಶೈತೇ ಮನವಃ ಕೀರ್ತಿತಾಃ ಕೀರ್ತಿವರ್ಧನಾಃ ॥ ೩೨ ॥

ವೇದೇ ಶ್ರುತೌ ಪುರಾಣೇ ಚ ಸರ್ವೇ ತೇ ಪ್ರಭವಿಷ್ಣವಃ ।
ಪ್ರಜಾನಾಂ ಪತಯಃ ಸರ್ವೇ ಭೂತಾನಾಂ ಪತಯಃ ಸ್ಥಿತಾಃ ॥ ೩೩ ॥

---

೨೯. ವೈವಸ್ವತಮನ್ವಂತರವು ಪ್ರಾರಂಭವಾಗಲು ಚಾಕ್ಷುಷಮನ್ವಂತರವು ಅಲ್ಪಾವಶಿಷ್ಟವಾಗುವುದು. ಮಹಾನುಭಾವರಾದ ಆ ಕುಮಾರರೇ ಮುಂದಿನ ಯುಗದಲ್ಲಿಯೂ ಮನುಗಳಾಗಿ ಅವತರಿಸುವರು.

೩೦. ಪ್ರಚೇತಸನ ಕುಮಾರನಾದ ದಕ್ಷಪ್ರಜಾಪತಿಯ ದೌಹಿತ್ರರಾಗಿ ಯಾವ ಮನುಗಳು ಅವತರಿಸಿದ್ದರೋ ಆ ಒಂಬತ್ತು ಜನರು ಮಹರ್ಷಿಗಳ ಪುತ್ರರಾಗಿ ಸಾವರ್ಣನಾಮದಿಂದ ಖ್ಯಾತರಾಗುವರು.

೩೧. ವೈವಸ್ವತಮನ್ವಂತರದಲ್ಲಿ ವೈವಸ್ವತಮನುವಿಗೆ ಸಾವರ್ಣನೆಂಬ ಸಂಜ್ಞಾಪುತ್ರನೊಬ್ಬನು ಉತ್ಪನ್ನನಾದನು. ಆ ವೈವಸ್ವತಮನುವಿಗೆ ಪ್ರಭುವೂ, ಹಿರಿಯುವನೂ ಸಂಜ್ಞಾಸುತನಾಮಕನೂ ಆದ ಕುಮಾರನು ಜನಿಸಿದನು.

೩೨. ವೈವಸ್ವತಮನ್ವಂತರವು ಪ್ರಾಪ್ತವಾಗಲು ಅವರಿಬ್ಬರ ಜನನವೂ ಮಂಗಳಕರವಾಗಿರುವುದು. ಕೀರ್ತಿವರ್ಧಕರಾದ ಈ ಹದಿನಾಲ್ಕುಜನ ಮನುಗಳನ್ನೂ ವರ್ಣಿಸಿರುತ್ತೇನೆಂದು ಸೂತರು ಹೇಳಿದರು.

೩೩. ಸಮಸ್ತಭೂತಪತಿಗಳೂ, ಪ್ರಜೋತ್ಪಾದಕರೂ, ಸಮರ್ಥರೂ ಆದ ಈ ಹದಿನಾಲ್ಕುಜನ ಮನುಗಳೂ ವೇದಗಳು, ಶ್ರುತಿಸ್ಮೃತಿಗಳು, ಪುರಾಣೇತಿಹಾಸಗಳು ಇವುಗಳಲ್ಲಿ ಅತ್ಯಂತ ನಿಪುಣರಾಗಿರುವರು.

**ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪರ್ವತಾ ।**
**ಪೂರ್ಣಂ ಯುಗಸಹಸ್ರಂ ವೈ ಪರಿಪಾಲ್ಯಾ ನರೇಶ್ವರೈಃ ॥ ೩೪ ॥**

**ಪ್ರಜಾಭಿಸ್ತಪಸಾ ಚೈವ ವಿಸ್ತರಂ ತೇಷು ವಕ್ಷ್ಯತೇ ।**
**ಚತುರ್ದಶೈವ ತೇ ಜ್ಞೇಯಾಃ ಸರ್ಗಾಃ ಸ್ವಾಯಂಭುವಾದಯಃ ॥ ೩೫ ॥**

**ಮನ್ವಂತರಾಧಿಕಾರೇಷು ವರ್ತಂತೇ ಚ ಸಕೃತ್ ಸಕೃತ್ ।**
**ವಿನಿವೃತ್ತಾಧಿಕಾರಾಸ್ತೇ ಮಹರ್ಲೋಕಂ ಸಮಾಶ್ರಿತಾಃ ॥ ೩೬ ॥**

**ಸಮತೀತಾಸ್ತು ಯೇ ತೇಷಾಮಷ್ಟೌ ಷಷ್ಟಾಸ್ತಥಾಪರೇ ।**
**ಪೂರ್ವೇಷು ಸಾಂಪ್ರತಶ್ಚಾಯಂ ಶಾಂತಿರ್ವೈವಸ್ವತಃ ಪ್ರಭುಃ ॥ ೩೭ ॥**

**ಯೇ ಶಿಷ್ಟಾಸ್ತಾನ್ ಪ್ರವಕ್ಷ್ಯಾಮಿ ಸಹ ದೇವರ್ಷಿದಾನವೈಃ ।**
**ಸಹ ಪ್ರಜಾನಿಸರ್ಗೇಣ ಸರ್ವಾಂಸ್ತ್ವನಾಗತಾನ್ ದ್ವಿಜಾನ್ ॥ ೩೮ ॥**

---

೩೪. ಸಪ್ತದ್ವೀಪಗಳು, ಸಮುದ್ರಗಳು, ಪರ್ವತಗಳು ಇವುಗಳಿಂದ ಯುಕ್ತವಾದ ಈ ಸಮಸ್ತಭೂಮಂಡಲವೂ ಆ ಮಹಾತ್ಮರಿಂದ ವ್ಯಾಪ್ತವಾಗಿದೆ. ಆ ನರೇಶ್ವರರು ಒಂದು ಸಹಸ್ರವರ್ಷಗಳವರೆಗೂ ಸಂಪೂರ್ಣವಾಗಿ ಈ ಭೂಮಂಡಲವನ್ನು ಆಳುವರು.

೩೫. ಸ್ವಾಯಂಭುವಾದಿಮನುಗಳು ಹದಿನಾಲ್ಕು ಜನರಿರುವರು. ಅವರ ಸೃಷ್ಟಿಕ್ರಮ, ಸಂತಾನ, ತಪಸ್ಸು, ಮಹಿಮೆ ಇವುಗಳನ್ನು ಕ್ರಮವಾಗಿಯೂ, ವಿಶೇಷವಾಗಿಯೂ ವರ್ಣಿಸುವೆನು ಕೇಳಿರೆಂದನು.

೩೬. ಆ ಹದಿನಾಲ್ಕುಜನ ಮನುಗಳೂ ಬೇರೆ ಬೇರೆ ಮನ್ವಂತರಗಳಲ್ಲಿ ಒಂದೊಂದುಸಲ ಅಧಿಕಾರಿಗಳಾಗುವರು. ಅವರು ತಮ್ಮ ಅಧಿಕಾರವು ಮುಗಿದಮೇಲೆ ಮಹರ್ಲೋಕಕ್ಕೆ ಹೋಗುವರು.

೩೭. ಅವರಲ್ಲಿ ಅತೀತರಾದ ಯಾವ ಹದಿನಾಲ್ಕುಜನ ಮನುಗಳಿರುವರೋ ಪೂರ್ವಿಕರಾದ ಅವರಲ್ಲಿ ಈಗಿರುವನು ಶಾಂತಿನಾಮಕವೈವಸ್ವತಮನುವಾಗಿರುವನು.

೩೮. ಉಳಿದಿರುವ ಮನುಗಳು, ದೇವತೆಗಳು, ಮಹರ್ಷಿಗಳು, ದಾನವರು, ವಿಪ್ರರು ಇವರನ್ನೂ ಮತ್ತು ಪ್ರಜೆಗಳ ಸೃಷ್ಟಿಕ್ರಮವನ್ನೂ ಕ್ರಮವಾಗಿ ನಿರೂಪಿಸುವೆನು ಕೇಳಿರೆಂದನು.

ವೈವಸ್ವತನಿಸರ್ಗೇಣ ತೇಷಾಂ ಜ್ಞೇಯಸ್ತು ವಿಸ್ತರಃ ।
ಅನ್ಯೂನಾ ನಾತಿರಿಕ್ತಾಸ್ತೇ ಯಸ್ಮಾತ್ ಸರ್ವೇ ವಿವಸ್ವತಃ ॥ ೩೯ ॥

ಪುನರುಕ್ತಾ ಬಹುತ್ವಾತ್ತು ವಕ್ಷ್ಯೇ ನ ತೇಷು ವಿಸ್ತರಂ ।
ಮನ್ವಂತರೇಷು ಭಾವೇಷು ಭೂತಷ್ವೇಪಿ ತಥೈವ ಚ ॥ ೪೦ ॥

ಕುಲೇ ಕುಲೇ ನಿಸರ್ಗಾಂಸ್ತು ತಸ್ಮಾದ್ವಕ್ಷ್ಯೇ ವಿಭಾಗಶಃ ।
ತೇಷಾಮೇವ ಹಿ ಶಿಷ್ಟಾರ್ಥಂ ವಿಸ್ತರೇಣ ಕ್ರಮೇಣ ಚ ॥ ೪೧ ॥

ದಕ್ಷಸ್ಯ ಕನ್ಯಾ ಧರ್ಮಿಷ್ಠಾ ಸುವ್ರತಾ ನಾಮ ವಿಶ್ರುತಾ ।
ಸರ್ವಕನ್ಯಾವಶಿಷ್ಟಾ ತು ಶ್ರೇಷ್ಠಾ ಧರ್ಮಪುರಾ ಸುತಾ ।
ಗೃಹೀತ್ವಾ ತ್ವಾಂ ಪಿತಾ ಕನ್ಯಾಂ ಜಗಾಮ ಬ್ರಹ್ಮಣೋಂತಿಕೇ ॥ ೪೨ ॥

---

೩೯. ವೈವಸ್ವತಮನ್ವಂತರದ ಸೃಷ್ಟಿಕ್ರಮದಿಂದ ಇತರ ಮನುಗಳ ಸೃಷ್ಟಿ ಕ್ರಮವನ್ನು ವಿಸ್ತಾರವಾಗಿ ತಿಳಿಯಬಹುದು. ಈ ವೈವಸ್ವತಮನುವಿನ ಸೃಷ್ಟಿಕ್ರಮ ಕ್ಕಿಂತಲೂ ಇತರ ಮನುಗಳ ಸೃಷ್ಟಿವೈಚಿತ್ರ್ಯವು ನ್ಯೂನವಾಗಿಯೂ, ಅಧಿಕವಾಗಿಯೂ ಇರದೇ ಸಮನಾಗಿಯೇ ಇರುವುದು.

೪೦. ಇತರ ಮನುಗಳ ಸೃಷ್ಟಿಕ್ರಮವನ್ನೂ ವಿಸ್ತಾರವಾಗಿ ಹೇಳಿದರೆ ಪುನರುಕ್ತಿಯಾಗುವುದು. ಏಕೆಂದರೆ ಅದು ಬಹು ವಿಸ್ತಾರವಾಗಿರುವುದು. ಆದುದರಿಂದ ಅವನ್ನು ವಿಸ್ತಾರವಾಗಿ ಹೇಳುವುದಿಲ್ಲ. ವರ್ತಮಾನಮನುವಿನ ಸೃಷ್ಟಿಯಂತೆಯೇ ಭೂತಭವಿಷ್ಯಸೃಷ್ಟಿಯೂ ಇರುವುದೆಂದು ಊಹಿಸಬೇಕೆಂದನು.

೪೧. ಎಲೈ ಮುನಿವರ್ಯರೇ, ಆದುದರಿಂದ ವೈವಸ್ವತಮನ್ವಂತರದಲ್ಲಿ ಪ್ರತಿಯೊಬ್ಬ ರಾಜರ ವಂಶಗಳ ಸ್ವಭಾವೋತ್ಪತ್ತಿಗಳನ್ನೂ ವಿಭಾಗ, ವಿಸ್ತಾರಕ್ರಮ ಇವುಗಳನ್ನೂ ವರ್ಣಿಸುವೆನು ಕೇಳಿರೆಂದನು.

೪೨. ದಕ್ಷಪ್ರಜಾಪತಿಯು ಧರ್ಮಿಷ್ಟಳೂ, ಪ್ರಖ್ಯಾತಳೂ, ಸರ್ವಕುಮಾರಿ ಯಲ್ಲಿಯೂ ಪ್ರಮುಖಳೂ, ಶ್ರೇಷ್ಠಳೂ, ಧರ್ಮಪರಾಯಣಳೂ ಆದ ಸುವ್ರತೆಯೆಂಬ ಪುತ್ರಿಯನ್ನು ಕರೆದುಕೊಂಡು ಬ್ರಹ್ಮದೇವನ ಬಳಿಗೆ ಹೋದಳು.

ವೈರಾಜಸ್ತಮುಪಾಸೀನಂ ಧರ್ಮೇಣ ಚ ಭವೇನ ಚ ।
ಭವಧರ್ಮಸವಿಪಸ್ಥಂ ದಕ್ಷಂ ಬ್ರಹ್ಮಾಭ್ಯಭಾಷತ ॥ ೪೩ ॥

ದಕ್ಷ ಕನ್ಯಾ ತವೇಯಂ ವೈ ಜನಯಿಷ್ಯತಿ ಸುವ್ರತಾ ।
ಚತುರೋ ವೈ ಮನೂನ್ ಪುತ್ರಾಂಶ್ಚಾತುರ್ವರ್ಣ್ಯಕರಾಂಚ್ಛುಭಾನ್ ॥ ೪೪ ॥

ಬ್ರಹ್ಮಣೋ ವಚನಂ ಶ್ರುತ್ವಾ ದಕ್ಷೋ ಧರ್ಮೋ ಭವಸ್ತದಾ ।
ತಾಂ ಕನ್ಯಾಂ ಮನಸಾ ಜಗ್ಮುಸ್ತ್ರಯಸ್ತೇ ಬ್ರಹ್ಮಣಾ ಸಹ ॥ ೪೫ ॥

ಸತ್ಯಾಭಿಧ್ಯಾಯಿನಾಂ ತೇಷಾಂ ಸದ್ಯಃ ಕನ್ಯಾ ವ್ಯಜಾಯತ್ ।
ಸದೃಶಾನುರೂಪಾಂಸ್ತೇಷಾಂ ಚತುರೋ ವೈ ಕುಮಾರಕಾನ್ ॥ ೪೬ ॥

ಸಂಸಿದ್ಧಾಃ ಕಾರ್ಯಕರಣೇ ಸಂಭೂತಾಸ್ತೇ ಶ್ರಿಯಾನ್ವಿತಾಃ ।
ಉಪಭೋಗಸಮರ್ಥೈಶ್ಚ ಸದ್ಯೋಜಾತೈಃ ಶರೀರಕೈಃ ॥ ೪೭ ॥

---

೪೩. ಆಗ ವೈರಾಜಿಕಬ್ರಹ್ಮನು ವಿನಯದಿಂದಲೂ, ಧರ್ಮದಿಂದಲೂ ಈಶ್ವರ ಮತ್ತು ಯಮಧರ್ಮ ಇವರ ಸಂಗಡ ತನ್ನನ್ನು ಸೇವಿಸುವ ದಕ್ಷನನ್ನು ಕುರಿತು ಮುಂದೆ ಹೇಳುವಂತೆ ಹೇಳಿದನು.

೪೪. ಎಲೈ ದಕ್ಷೇಶ್ವರನೇ, ನಿನ್ನ ಕುಮಾರಿಯಾದ ಈ ಸುವ್ರತೆಯು ಮಂಗಳಾಂಗರೂ, ಚಾತುರ್ವರ್ಣ್ಯಗಳನ್ನು ಸೃಷ್ಟಿಮಾಡುವರೂ, ಲೋಕವಿಖ್ಯಾತರೂ ಆದ ನಾಲ್ಕುಜನ ಮನುನಾಮಕ ನಂದನರನ್ನು ಪಡೆಯುವಳು ಎಂದುಹೇಳಿದನು.

೪೫. ಬ್ರಹ್ಮದೇವನ ಆ ಮಾತುಗಳನ್ನು ಕೇಳಿದ ದಕ್ಷೇಶ್ವರ ಈಶ್ವರ ಧರ್ಮರಾಯ ಇವರು ಮೂವರೂ ಬ್ರಹ್ಮದೇವನೊಡನೆ ಆ ಕನ್ನಿಕೆಯನ್ನು ಮನಸ್ಸಿನಲ್ಲಿ ಸ್ಮರಣೆಮಾಡಿದರು.

೪೬. ಸತ್ಯವ್ಯವಹಾರಿಗಳೂ ಸತ್ಯಪ್ರತಿಜ್ಞೆಯುಳ್ಳವರೂ ಆದ ದಕ್ಷ, ಈಶ್ವರ, ಧರ್ಮ, ಬ್ರಹ್ಮ ಈ ನಾಲ್ವರ ಅನುಗ್ರಹದಿಂದ ಆ ಕುಮಾರಿಯು ಅವರಿಗೆ ಸಮಾನರೂ ಅನುರೂಪರೂ ಆದ ನಾಲ್ವರು ಕುಮಾರರನ್ನು ಪಡೆದಳು.

೪೭. ಆ ಕುಮಾರರು ಸರ್ವಕಾರ್ಯಧುರಂಧರರೂ ಮಹದೈಶ್ವರ್ಯಯುಕ್ತರೂ, ಉಪಭೋಗಸಮರ್ಥರೂ, ಸದ್ಯೋಜಾತರೂ, ಉತ್ತಮವಾದ ಶರೀರವುಳ್ಳವರೂ, ಕಾಂತಿಯುತರೂ ಆಗಿದ್ದರು.

**ತೇ ದೃಷ್ಟ್ವಾ ತಾನ್ ಸ್ವಯಂಬುದ್ಧ್ವಾ ಬ್ರಹ್ಮಾ ವ್ಯಾಹಾರಿಣಸ್ತದಾ |**
**ಸಂರಬ್ಧಾ ವೈ ವ್ಯಕರ್ಷಂತ ಮಮ ಪುತ್ರೋ ಮಮೇತ್ಯುತ || ೪೮ ||**

**ಅಭಿಧ್ಯಾನಾನ್ಮನೋತ್ಪನ್ನಾನೂಚುರ್ವೈ ತೇ ಪರಸ್ಪರಂ |**
**ಯೋ ಯಸ್ಯ ವಪುಷಾ ತುಲ್ಯೋ ಭಜತಾಂ ಸ ತು ತಂ ಸುತಂ || ೪೯ ||**

**ಯಸ್ಯ ಯಃ ಸದೃಶ್ಚಾಪಿ ರೂಪೇ ವೀರ್ಯೇ ಚ ನಾಮತಃ |**
**ತಂ ಗೃಹ್ಣಾತು ಸುಭದ್ರಂ ವೋ ವರ್ಣತೋ ಯಸ್ಯ ಯಃ ಸಮಃ || ೫೦ ||**

**ಧ್ರುವಂ ರೂಪಂ ಪಿತುಃ ಪಿತ್ರಃ ಸೋಽನುರುಧ್ಯತಿ ಸರ್ವದಾ |**
**ತಸ್ಮಾದಾತ್ಮಸಮಃ ಪುತ್ರಃ ಪಿತುರ್ವಾತುಶ್ಚ ಜಾಯತೇ || ೫೧ ||**

---

೪೮. ತರುವಾಯ ಬ್ರಹ್ಮಾದಿನಾಲ್ವರೂ ಬ್ರಹ್ಮಜ್ಞಾನಿಗಳೂ ಕುಶಲರೂ ಆದ ನಾಲ್ವರುಕುಮಾರರನ್ನು ನೋಡಿ ತಾವೇ ಯೋಚಿಸಿ ತಮ್ಮ ಸುತರೆಂದು ಭಾವಿಸಿ ಆತುರದಿಂದ ಇವನು ನನ್ನಕುಮಾರನು ಇವನು ನನ್ನ ಮಗನೆಂದು ಸ್ವೀಕರಿಸಿದರು.

೪೯. ಅನಂತರ ಬ್ರಹ್ಮಾದಿಯಾದ ನಾಲ್ವರೂ ಯೋಚಿಸಿ ಆ ಮಾನಸಪುತ್ರರಾದ ನಾಲ್ವರು ಕುಮಾರರನ್ನೂ ನೋಡಿ ಪರಸ್ಪರವಾಗಿ ಹೇಳಿದ್ದೇನೆಂದರೆ ಈ ನಾಲ್ವರಲ್ಲಿ ಯಾವ ಕುಮಾರರು ಶರೀರ ಸೌಂದರ್ಯಾದಿಗಳಿಂದ ಯಾರಿಗೆ ಸಮನಾಗಿರುವರೋ ಅವರು ಅನುಗುಣರಾದ ತಮ್ಮಸುತರನ್ನು ಸ್ವೀಕರಿಸಬಹುದೆಂದು ಹೇಳಿದರು.

೫೦. ಆ ಬಳಿಕ ಅವರು ಯಾವ ಕುಮಾರನು ರೂಪ, ಶಕ್ತಿ, ನಾಮ, ವರ್ಣ ಇವುಗಳಿಂದ ತಮಗೆ ಸದೃಶನಾಗಿರುತ್ತಾನೆಯೋ ಅವರು ಅಂತಹ ಕುಮಾರನನ್ನು ಸ್ವೀಕರಿಸಲಿ ಇದರಿಂದ ಸರ್ವರಿಗೂ ಮಂಗಳಾಗುವುದೆಂದು ಹೇಳಿದರು.

೫೧. ಲೋಕದಲ್ಲಿ ಸಾಮಾನ್ಯವಾಗಿ ಮಕ್ಕಳು ಮಾತಾಪಿತೃಗಳ ಆಕಾರ, ಸೌಂದರ್ಯ, ರೂಪ ಮತ್ತು ಗುಣ ಇವುಗಳನ್ನು ಅನುಸರಿಸುತ್ತವೆ. ಆದ್ದರಿಂದ ಪುತ್ರನು ರೂಪಾದಿಗಳಲ್ಲಿ ತನಗೆ ಸಮನೆಂದೇ ತಿಳಿಯಬೇಕು.

ಏವಂ ತೇ ಸಮಯಂ ಕೃತ್ವಾ ಸವರ್ಣಾನ್ ಜಗೃಹುಃ ಸುತಾನ್ ।
ಯಸ್ಮಾತ್ ಸವರ್ಣಾಸ್ತೇಷಾಂ ವೈ ಬ್ರಹ್ಮಾದೀನಾಂ ಕುಮಾರಕಾಃ ॥ ೫೨ ॥

ಸವರ್ಣಾ ಮನವಸ್ತಸ್ಮಾತ್ ಸವರ್ಣತ್ವಂ ಹಿ ತೇ ಯತಃ ।
ಮನನಾನ್ಮಾನನಾಚ್ಚೈವ ತಸ್ಮಾತ್ತೇ ಮನವಃ ಸ್ಮೃತಾಃ ॥ ೫೩ ॥

ಚಾಕ್ಷುಷಸ್ಯಾಂತರೇಽತೀತೇ ಪ್ರಾಪ್ತೇ ವೈವಸ್ವತಸ್ಯ ಹ ।
ರುಚೇಃ ಪ್ರಜಾಪತೇಃ ಪುತ್ರೋ ರೌಚ್ಯೋ ನಾಮಾಭವತ್ಸುತಃ ॥ ೫೪ ॥

ಭೂತ್ಯಾಮುತ್ಪಾದಿತೋಯಸ್ತು ಭೌತ್ಯೋ ನಾಮಾಭವತ್ಸುತಃ ।
ವೈವಸ್ವತೇಂತರೇ ರಾಜಾ ದ್ವೌ ಮನೂ ತು ವಿವಸ್ವತೋಃ ॥ ೫೫ ॥

---

೫೨. ಅನಂತರ ಬ್ರಹ್ಮಾದಿ ನಾಲ್ವರೂ ಈ ರೀತಿಯಾಗಿ ನಿರ್ಣಯವನ್ನು ಮಾಡಿಕೊಂಡು ತಮಗೆ ಸವರ್ಣರಾದ ಪುತ್ರರನ್ನು ಸ್ವೀಕರಿಸಿದರು. ಆದುದರಿಂದ ಬ್ರಹ್ಮಾದಿದೇವತೆಗಳ ಈ ಕುಮಾರರು ಸವರ್ಣನಾಮಕರಾದರು.

೫೩. ಆ ಕುಮಾರರು ತಮ್ಮ ಪಿತೃಗಳಿಗೆ ಸಮಾನವಾದವರ್ಣವುಳ್ಳವರಾದುದರಿಂದ ಸವರ್ಣಮನುಗಳಾದರು. ಆ ಪುತ್ರರು ಪಿತೃಗಳ (ಮನನಕ್ಕೆ) ಧ್ಯಾನಕ್ಕೆ ವಿಷಯರಾದುದರಿಂದಲೂ, ಗೌರವಕ್ಕೆ ಪಾತ್ರರಾಗಿರುವುದರಿಂದಲೂ ಮನುಗಳಾಗಿರುವರು. ಸವರ್ಣಮನುಗಳೆಂದು ನಾಮುಬರಲು ಕಾರಣಗಳನ್ನು ನಿರೂಪಿಸಿರುವೆನೆಂದೂ ಹೇಳಿದನು.

೫೪. ಚಾಕ್ಷುಷಮನ್ವಂತರವು ಕಳೆಯು ವೈವಸ್ವತಮನ್ವಂತರವು ಪ್ರಾಪ್ತವಾಗಲು ರುಚಿಯೆಂಬ ಪ್ರಜಾಪತಿಗೆ ರೌಚ್ಯನೆಂಬ ತನಯನು ಉದ್ಭವಿಸಿದನು.

೫೫. ಅದೇ ವೈವಸ್ವತಮನ್ವಂತರದಲ್ಲಿ ಭೂತಿದೇವಿಯಲ್ಲಿ ಭೌತ್ಯನಾಮಕ ಕುಮಾರನು ಜನಿಸಿದನು. ಹೀಗೆ ಆ ವೈವಸ್ವತಮನುವಿಗೆ ರೌಚ್ಯ, ಭೌತ್ಯರೆಂಬ ಇಬ್ಬರು ಪುತ್ರರು ಜನಿಸಿ ಪ್ರಖ್ಯಾತರಾಗಿದ್ದರು.

ವೈವಸ್ವತೋ ಮನುರ್ಯಶ್ಚ ಸಾವರ್ಣೋ ಯಶ್ಚ ವಿಶ್ರುತಃ ।
ಜ್ಯೇಷ್ಠಃ ಸಂಜ್ಞಾಸುತೋ ವಿದ್ವಾನ್ ಮನುರ್ವೈವಸ್ವತಃ ಪ್ರಭುಃ ॥ ೫೬ ॥

ಸವರ್ಣಾಯಾಃ ಸುತಶ್ಚಾನ್ಯಃ ಸ್ಮೃತೋ ವೈವಸ್ವತೋ ಮನುಃ ।
ಸವರ್ಣಾ ಮನವೋ ಯೇ ಚ ಚತ್ವಾರಸ್ತು ಮಹರ್ಷಿಜಾಃ ॥ ೫೭ ॥

ತಪಸಾ ಸಂಭೃತಾತ್ಮಾನಃ ಸ್ವೇಷು ಮನ್ವಂತರೇಷು ವೈ ।
ಭವಿಷ್ಯೇಷು ಭವಿಷ್ಯಂತಿ ಸರ್ವಕಾರ್ಯಾರ್ಥಸಾಧಕಾಃ ॥ ೫೮ ॥

ಪ್ರಥಮಂ ಮೇರುಸಾವರ್ಣೇರ್ದಕ್ಷಪುತ್ರಸ್ಯ ವೈ ಮನೋಃ ।
ಪುತ್ರಾ ಮರೀಚಿಗರ್ಭಾಶ್ಚ ಸುಶರ್ಮಾಣಶ್ಚ ತೇ ತ್ರಯಃ ।
ಸಂಭೂತಾಶ್ಚ ಮಹಾತ್ಮಾನಃ ಸರ್ವೇ ವೈವಸ್ವತೇಂತರೇ ॥ ೫೯ ॥

ದಕ್ಷಪುತ್ರಸ್ಯ ಪುತ್ರಾಸ್ತೇ ರೋಹಿತಸ್ಯ ಪ್ರಜಾಪತೇಃ ।
ಭವಿಷ್ಯಸ್ಯ ಭವಿಷ್ಯಸ್ತು ಏಕೈಕೋ ದ್ವಾದಶೋ ಗಣಃ ॥ ೬೦ ॥

---

೫೬. ವೈವಸ್ವತಮನುವಿಗೆ ವಿದ್ವಾಂಸರಾದ ಸಾವರ್ಣಮನುವೆಂಬ ಜ್ಯೇಷ್ಠ ಕುಮಾರನೂ, ಸಂಜ್ಞಾಸುತನೆಂಬ ಕಿರಿಯ ಮಗನೂ ಬಹಳ ಪ್ರಖ್ಯಾತರಾಗಿದ್ದರು.

೫೭. ತರುವಾಯ ಸವರ್ಣೆಯಲ್ಲಿ ಬೇರೊಬ್ಬ ವೈವಸ್ವತಮನುವು ಜನಿಸಿದನು. ಮಹರ್ಷಿಗಳಿಂದ ಜನ್ಯರಾದ ಸವರ್ಣಮನುಗಳು ಪ್ರತ್ಯೇಕವಾಗಿ ನಾಲ್ವರು ಪ್ರಸಿದ್ಧರಾಗಿರುವರು.

೫೮. ಅಂತಹ ಮನುಗಳು ತಮ್ಮ ಮನ್ವಂತರಗಳಲ್ಲಿ ತಪಸ್ಸುಗಳಿಂದ ಪೂರ್ಣವಾದ ಶಕ್ತಿಯಿಂದ ಯುತರಾಗಿ ಸ್ವಕಾರ್ಯಸಾಧನೆಗಾಗಿ ಆಯಾ ಮನುಗಳೆಂಬ ನಾಮಗಳಿಂದ ಜನಿಸುವರು.

೫೯. ವೈವಸ್ವತಮನ್ವಂತರದಲ್ಲಿ ದಕ್ಷಕುಮಾರನಾದ ಮೇರುಸಾವರ್ಣಿಯೆಂಬ ಮನುವಿಗೆ ಮೊದಲು ಮರೀಚಿಕುಮಾರರೂ ಪ್ರಖ್ಯಾತನಾಮಧೇಯರೂ ಮಹಾತ್ಮರೂ ಆದ ಮೂವರು ಪುತ್ರರು ಉದ್ಭವಿಸಿದರು.

೬೦. ದಕ್ಷಪ್ರಜಾಪತಿಯ ಕುಮಾರನೂ, ಭವಿಷ್ಯನೂ ಆದ ಲೋಹಿತಪ್ರಜಾಪತಿಗೆ ಅನೇಕ ಪುತ್ರರು ಉದ್ಭವಿಸಿದರು. ಅವರು ಪ್ರತಿಯೊಬ್ಬರೂ ಒಂದೊಂದು ಗುಂಪಾಗಿ ದ್ವಾದಶಗಣರಾಗುವರು.

ಐಶ್ವರ್ಯಸಂಗ್ರಾಹೋ ರಾಹೋ ಬಾಹುವಶಸ್ತಥೈವ ಚ ।
ಪಾರಾ ದ್ವಾದಶ ವಿಜ್ಞೇಯಾ ಉತ್ತರಾಂಸ್ತು ನಿಬೋಧತ ॥ ೬೧ ॥

ವಾಜಿಯೋ ವಾಜಿಜಿಚ್ಚೈವ ಪ್ರಭೃತಿಶ್ಚ ಕಕುದ್ಮಥ ।
ದಧಿಕ್ರಾವಾಯುಪಕ್ವಾಶ್ಚ ಪ್ರಣೀತೋ ವಿಜಯೋ ಮಧುಃ ॥ ೬೨ ॥

ತೇಛಸ್ವಾನ್ನಥವೋ ದ್ವೌ ತು ದ್ವಾದಶೈತೇ ಮರೀಚಯಃ ।
ಸುಶರ್ಮಾಣಸ್ತು ವಕ್ಷ್ಯಾಮಿ ನಾಮತಸ್ತು ನಿಬೋಧತ ॥ ೬೩ ॥

ವರ್ಣಸ್ತಥಾಪ್ಯಂಗವಿಶ್ವೌ ಮುರಣ್ಯೋ ವ್ರಜನೋ ಮತಃ ।
ಅಮಿತೋ ದ್ರುವಕೇತುಶ್ಚ ಜಂಭೋಸ್ಥಾಜಸ್ರಶಕ್ರಕಾಃ ॥ ೬೪ ॥

ಸುನೇಮಿರ್ದ್ಯುತಪಾಶ್ಚೈವ ಸುಶರ್ಮಾಣಃ ಪ್ರಕೀರ್ತಿತಾಃ ।
ತೇಷಾಮಿಂದ್ರಸ್ತದಾ ಭಾವ್ಯೋ ಹ್ಯದ್ಭುತೋ ನಾಮ ನಾಮತಃ ॥ ೬೫ ॥

---

೬೧–೬೨. ಐಶ್ವರ್ಯಸಂಗ್ರಾಹ, ರಾಹು, ಬಾಹುವಶ, ವಾಜಿಯು, ವಾಜಿಜಿತು, ಪ್ರಭೃತಿ, ಕಕುತ, ದಧಿಕ್ರಾ, ವಾಯುಪಕ್ವ, ಪ್ರಣೀತ, ವಿಜಯ ಮತ್ತು ಮಧು ಎಂಬ ಹನ್ನೆರಡು ಗಣಗಳು ಉತ್ಪನ್ನವಾಗುವುವು. ಮುಂದಿನ ಗಣಗಳನ್ನು ನಿರೂಪಿಸುವೆನು ಕೇಳಿರೆಂದನು.

೬೩. ತೇಜೋವಂತರಾದ ಈ ಹನ್ನೆರಡು ಜನರೂ ಮರೀಚಿ ಕುಮಾರರಾಗಿಯೂ, ಪ್ರಸಿದ್ಧರಾಗಿಯೂ ಇರುವರು. ಸುಶರ್ಮಣರನ್ನು ಈಗ ನಾಮನಿರ್ದೇಶಪೂರ್ವಕವಾಗಿ ನಿರೂಪಿಸುವೆನು ಕೇಳಿರೆಂದನು.

೬೪–೬೫. ವರ್ಣ, ಅಂಗವಿಶ್ವ, ಮುರಣ್ಯ, ವ್ರಜನ, ಅಮಿತ, ದ್ರುವಕೇತು, ಜಂಭೋಸ್ಥ, ಅಜಸ್ರ, ಶಕ್ರಕ, ಸುನೇಮಿ, ದ್ಯುತಪಸ ಇವರು ಸುಶರ್ಮಾಣರೆಂದು ಪ್ರಸಿದ್ಧರಾಗಿರುವರು. ಅವರಿಗೆ ಅದ್ಭುತನೆಂಬುವನು ಭವಿಷ್ಯದ್ರಾಜನಾಗುವನು.

ಸ್ಕಂಧಃ ಸೋಮಪ್ರತೀಕಾಶಃ ಕಾರ್ತಿಕೇಯಸ್ತು ಪಾವಕಃ ।
ಮಾಘಾತಿಥಿಶ್ಚ ಪೌಲಸ್ತ್ಯೋ ವಸುಃ ಕಾಶ್ಯಪ ಏವ ಚ ॥ ೧೬ ॥

ಜ್ಯೋತಿಷ್ಮಾನ್ ಭಾರ್ಗವಶ್ಚೈವ ದ್ಯುತಿಮಾನಂಗಿರಾಸ್ತಥಾ ।
ವಸಿತಶ್ಚೈವ ವಾಸಿಷ್ಠ ಆತ್ರೇಯೋ ಹವ್ಯವಾಹನಃ ॥ ೧೭ ॥

ಸುತಪಾಃ ಪೌಲವಶ್ಚೈವ ಸಪ್ತೈತೇ ರೋಹಿತಾಂತರೇ ।
ಧೃತಿಕೇತುದೀಪ್ತಿಕೇತುಶಾಪಹಸ್ತಾ ನಿರಾಮಯಃ ॥ ೧೮ ॥

ಪೃಥುಶ್ರವಾಸ್ತಥಾ ನಾಕೋ ಭೂರಿದ್ಯುಮ್ನೋ ಬೃಹದ್ರಥಃ ।
ಪ್ರಥಮಸ್ಯ ತು ಸಾವರ್ಣೇರ್ನವ ಪುತ್ರಾಃ ಪ್ರಕೀರ್ತಿತಾಃ ॥ ೧೯ ॥

ದಶಮೇ ತ್ವಥ ಪರ್ಯಾಯೇ ಧರ್ಮಪುತ್ರಸ್ಯ ವೈ ಮನೋಃ ।
ದ್ವಿತೀಯಸ್ಯ ತು ಸಾವರ್ಣೇರ್ಭಾವ್ಯಸ್ಯೈವಾಂತರೇ ಮನೋಃ ॥ ೨೦ ॥

---

೧೬-೧೯. ಚಂದ್ರನಂತೆ ಕಾಂತಿಯುತನೂ, ಕೃತ್ತಿಕಾಕುಮಾರರೂ, ಅಗ್ನಿಸಮನೂ ಆದ ಸ್ಕಂದನು, ಪುಲಸ್ತ್ಯಕುಲೋತ್ಪನ್ನನಾದ ಮಾಘಾತಿಥಿಯು, ಕಾಶ್ಯಪ ವಂಶಜನಾದ ವಸುವು, ಕಾಂತಿಯುತನೂ, ಭೃಗುಕುಲೋತ್ಪನ್ನನೂ, ಅಂಗಿರಸ ಕುಮಾರನೂ ಆದ ದ್ಯುತಿಮಂತನು, ವಸಿಷ್ಠವಂಶಜನಾದ ವಸತಿಯು ಅತ್ರಿಕುಲೋತ್ಪನ್ನನಾದ ಹವ್ಯವಾಹನನು, ಪುಲವವಂಶದ ಸುತಪಸನು ಎಂಬ ಏಳು ಜನರು ಲೋಹಿತಮನ್ವಂತರದಲ್ಲಿ ಮನುಪುತ್ರರಾಗಿ ಜನಿಸುವರು. ಧೃತಿಕೇತು, ದೀಪ್ತಕೇತು, ಶಾಪಹಸ್ತ, ನಿರಾಮಯ, ಪೃಥುಶ್ರವಸ, ನಾಕ, ಭೂರಿದ್ಯುಮ್ನ, ಬೃಹದ್ರಥ ಈ ಒಂಬತ್ತು ಜನರೂ ಪ್ರಥಮ ಸಾವರ್ಣಿಗೆ ಪುತ್ರರಾಗಿರುವರು.

೨೦. ಹತ್ತನೆಯ ಪರ್ಯಾಯದಲ್ಲಿ ಧರ್ಮಪುತ್ರ ಮನುನಾಮಕನೂ ಎರಡನೆಯವನೂ ಆದ ಸಾವರ್ಣಿಮನುವಿಗೆ ಭಾವಿಯಾದ ಮನ್ವಂತರದಲ್ಲಿ ಪ್ರಖ್ಯಾತರಾದ ಕುಮಾರರಾಗಿ ಜನಿಸುವರು.

ಸುಖಾಮುನಾ ವಿರುದ್ಧಾಶ್ಚ ದ್ವಾವೇವ ತು ಗಣೌ ಸ್ಮೃತೌ ।
ತ್ವಿಷಿವಂತಶ್ಚ ತೇ ಸರ್ವೇ ಶತಸಂಖ್ಯಾಶ್ಚ ತೇ ಸಮಾಃ ॥ ೭೧ ॥

ಪ್ರಾಣಾನಾಯಚ್ಛತಃ ಪ್ರೋಕ್ತಾ ಋಷಿಭಿಃ ಪುರುಷೇಷು ವೈ ।
ದೇವಾಸ್ತೇ ವೈ ಭವಿಷ್ಯಂತಿ ಧರ್ಮಪುತ್ರಸ್ಯ ವೈ ಮನೋಃ ॥ ೭೨ ॥
ತೇಷಾಮಿಂದ್ರಸ್ತಥಾ ವಿದ್ವಾನ್ ಭವಿಷ್ಯಃ ಶಾಂತಿರುಚ್ಯತೇ ।

ಹವಿಷ್ಮಾನ್ ಪೌಲಹಃ ಶ್ರೀಮಾನ್ ಸುಕೀರ್ತಿಶ್ಚಾಪಿ ಭಾರ್ಗವಃ ॥ ೭೩ ॥
ಆಪೋಮೂರ್ತಿಸ್ತಥಾತ್ರೇಯೋ ವಸಿಷ್ಠಶ್ಚಾಪಿ ಯಃ ಸ್ಮೃತಃ ।

ಪೌಲಸ್ತ್ಯಃ ಪ್ರತಿಪಶ್ಚಾಪಿ ನಾಭಾಗಶ್ಚೈವ ಕಾಶ್ಯಪಃ ।
ಅಭಿಮನ್ಯುಶ್ಚಾಂಗಿರಸಃ ಸಪ್ತೈತೇ ಪರಮರ್ಷಯಃ ॥ ೭೪ ॥

---

೭೧. ಅವರು ಸುಖಾಮನಸರೂ, ವಿರುದ್ಧರೂ ಎಂಬುದಾಗಿ ಎರಡುಪಂಗಡಗಳಾಗಿರುವರು. ಅವರೆಲ್ಲರೂ ತ್ವಿಷಿಮಂತರೂ ಶತಸಂಖ್ಯಾತರೂ, · ಸಮರೂ ಎಂದು ಪ್ರಖ್ಯಾತರಾಗಿರುವರು.

೭೨. ಧರ್ಮಪುತ್ರರೂ, ಮನುಗಳೂ ಆದ ಅವರು ಪುರುಷರಿಗೆ ಪ್ರಾಣದಾಯಕರೂ ದೇವತೆಗಳೂ ಲೋಕಕಲ್ಯಾಣಪ್ರದರೂ ಆಗಿರುವರೆಂದು ಮಹರ್ಷಿಗಳು ಹೇಳಿರುವರು.

೭೩–೭೪. ಅವರಿಗೆ ವಿದ್ವಾಂಸನೂ, ಪ್ರಖ್ಯಾತನೂ ಆದ ಶಾಂತಿಯೆಂಬ ಮನುವು ಭಾವಿಯಾದ ಇಂದ್ರನಾಗುವನು. ಪುಲಹವಂಶಜನಾದ ಹವಿಷ್ಮಂತನು ಶ್ರೀಮಂತನೂ, ಕೀರ್ತಿವಂತನೂ ಆದ ಭಾರ್ಗವನು, ಜಲಮೂರ್ತಿಯೂ, ವಸಿಷ್ಠನೆಂದು ಪ್ರಸಿದ್ಧನೂ ಆದ ಆತ್ರೇಯನು, ಪುಲಸ್ತ್ಯವಂಶೀಕನಾದ ಪ್ರತೀಪನು, ಕಶ್ಯಪಗೋತ್ರನಾದ ನಾಭಾಗನು, ಅಭಿಮನ್ಯು, ಅಂಗಿರಸ ಎಂಬ ಇವರು ಪರಮ ಮಹರ್ಷಿಗಳಾಗಿರುವರು.

ಸುಕ್ಷೇತ್ರಶ್ಚೋತ್ತಮೌಜಾಶ್ಚ ಭೂರಿಷೇಣಶ್ಚ ವೀರ್ಯವಾನ್ ।
ಶತಾನೀಕೋ ನಿರಾಮಿತ್ರೋ ವೃಷಸೇನೋ ಜಯದ್ರಥಃ ॥ ೭೫ ॥

ಭೂರಿದ್ಯುಮ್ನಃ ಸುವರ್ಚಾಶ್ಚ ದಶೈತೇ ಮಾನವಾ ಸ್ಮೃತಾಃ ।
ಏಕಾದಶೇ ತು ಪರ್ಯಾಯೇ ಸೌವರ್ಣೇ ವೈ ತೃತೀಯಕೇ ॥ ೭೬ ॥

ನಿರ್ಮಾಣರತಯೋ ದೇವಾಃ ಕಾಮಜಾ ವೈ ಮನೋಜವಾಃ ।
ಗಣಾಸ್ತ್ವೇತೇ ತ್ರಯಃ ಖ್ಯಾತಾ ದೇವತಾನಾಂ ಮಹಾತ್ಮನಾಂ ॥ ೭೭ ॥

ಏಕೈಕಂ ತ್ರಿಂಶತಸ್ತೇಷಾಂ ಗಣಾಸ್ತು ತ್ರಿದಿವೌಕಸಾಂ ।
ಮಾಸಸ್ಯಾಹಾನಿ ತ್ರಿಂಶತ್ತು ಯಾನಿ ವೈ ಕವಯೋ ವಿದುಃ ॥ ೭೮ ॥

ನಿರ್ಮಾಣರತಯೋ ದೇವಾ ರಾತ್ರ್ಯಯಸ್ತು ವಿಹಂಗಮಾಃ ।
ಗಣಾಸ್ತೇ ವೈ ತ್ರಯಃ ಪ್ರೋಕ್ತಾ ದೇವತಾನಾಂ ಭವಿಷ್ಯತಿ ॥ ೭೯ ॥

---

೭೫–೭೬. ಸುಕ್ಷೇತ್ರ, ಉತ್ತಮೌಜಸ, ಭೂರಿಷೇಣ, ವೀರ್ಯವಂತ, ಶತಾನೀಕ, ನಿರಾಮಿತ್ರ, ವೃಷಸೇನ, ಜಯದ್ರಜ, ಭೂರಿದ್ಯುಮ್ನ, ಸುವರ್ಚಸರೆಂಬ ಈ ಹತ್ತು ಜನರು ಮನುಗಳಾಗಿರುವರು. ಇವರು ಹನ್ನೊಂದನೆಯ ಪರ್ಯಾಯದಲ್ಲಿ ಮೂರನೆಯ ಸಾವರ್ಣ್ಯಮನ್ವಂತರದಲ್ಲಿ ಮನುಗಳಾಗುವರು.

೭೭. ಮಹಾತ್ಮರಾದ ಈ ದೇವತೆಗಳಲ್ಲಿ ನಿರ್ಮಾಣರತಿಗಳು, ಕಾಮಜರು, ಮನೂಜವರು ಎಂದು ಪ್ರಖ್ಯಾತವಾದ ಮೂರು ದೇವತೆಗಳ ಪಂಗಡಗಳು ಪ್ರಸಿದ್ಧವಾಗಿರುವುವು.

೭೮. ಆ ದೇವತೆಗಳಲ್ಲಿ ಪ್ರತಿಯೊಂದು ಪಂಗಡದಲ್ಲಿಯೂ ತಿಂಗಳಿಗೆ ಮೂವತ್ತು ದಿವಸಗಳಿರುವಂತೆ ಮೂವತ್ತು ಗಣಗಳಿರುವುವೆಂದು ಜ್ಞಾನಿಗಳು ಹೇಳುವರು.

೭೯. ದೇವತೆಗಳಲ್ಲಿ ನಿರ್ಮಾಣರತಿಗಳು, ರಾತ್ರಿಯರು, ವಿಹಂಗಮರು ಎಂದು ಮೂರು ಗಣಗಳಿವೆ. ಅವರು ದೇವಗಣಕ್ಕೆ ಸೇರಿ ಪ್ರಖ್ಯಾತರಾಗಿರುವರು.

**ಮನೋಜವಾ ಮುಹೂರ್ತಾಸ್ತು ಇತಿ ದೇವಾಃ ಪ್ರಕೀರ್ತಿತಾಃ ।**
**ಏತೇ ಹಿ ಬ್ರಹ್ಮಣಃ ಪುತ್ರಾ ಭವಿಷ್ಯಾ ಮನವಃ ಸ್ಮೃತಾಃ ॥ ೮೦ ॥**

**ತೇಷಾಮಿಂದ್ರೋ ವೃಷೋ ನಾಮ ಭವಿಷ್ಯಃ ಸುರರಾಟ್ ತತಃ ।**
**ತೇಷಾಂ ಸಪ್ತರ್ಷಯಶ್ಚಾಪಿ ಕೀರ್ತ್ಯಮಾನಾನ್ನಿಬೋಧತ ॥ ೮೧ ॥**

**ಹವಿಷ್ಮಾನ್ ಕಾಶ್ಯಪಶ್ಚಾಪಿ ವಪುಷ್ಮಾನ್ ಯಶ್ಚ ಭಾರ್ಗವಃ ।**
**ವಾರುಣಿಶ್ಚೈವ ಚಾತ್ರೇಯೋ ವಸಿಷ್ಠೋ ಭಗ ಏವ ಚ ॥ ೮೨ ॥**

**ಪುಷ್ಟಿಶ್ಚಾಂಗಿರಸೋ ಜ್ಞೇಯಃ ಪೌಲಸ್ತ್ಯೋ ನಿಶ್ಚರಸ್ತಥಾ ।**
**ಪೌಲಹೋ ಹ್ಯಗ್ನಿತೇಜಾಶ್ಚ ದೇವಾ ಹ್ಯೇಕಾದಶೇಂತರೇ ॥ ೮೩ ॥**

**ಸರ್ವವೇಗಃ ಸುಭರ್ಮಾ ಚ ದೇವಾನೀಕಃ ಪುರೋವಹಃ ।**
**ಕ್ಷೇಮಧರ್ಮಾ ಗೃಹೇಷುಶ್ಚ ಹ್ಯಾದರ್ಶಃ ಪೌಂಡ್ರಕೋ ಮತಃ ॥ ೮೪ ॥**

---

೮೦. ದೇವತೆಗಳು ಮನೋಜವರು, ಮುಹೂರ್ತರು ಎಂಬುದಾಗಿ ಪ್ರಖ್ಯಾತರಾಗಿರುವರು. ಅವರು ಬ್ರಹ್ಮದೇವನ ಮಾನಸಕುಮಾರರೂ, ಭವಿಷ್ಯನ್ಮನುಗಳೂ ಆಗಿರುವರು.

೮೧. ಅವರಿಗೆ ವೃಷನಾಮಕದೇವನು ಭಾವಿಯಾದ ಇಂದ್ರನಾಗಿರುವನು. ಅವರ ಕಾಲದಲ್ಲಿರುವ ಸಪ್ತರ್ಷಿಗಳನ್ನು ವರ್ಣಿಸುವೆನು ಕೇಳಿರೆಂದು ಹೇಳಿದನು.

೮೨–೮೩. ಕಶ್ಯಪವಂಶಜನಾದ ಹವಿಷ್ಮಂತ, ಭಾರ್ಗವಕುಲಜನಾದ ವಪುಷ್ಮಂತ, ಅತ್ರಿಗೋತ್ರಜನಾದ ವಾರುಣಿ, ವಸಿಷ್ಠಕುಲೀನನಾದ ಭಗ, ಅಂಗಿರಸನ ವಂಶಜನಾದ ಪುಷ್ಟಿಯು, ಪುಲಸ್ತ್ಯಕುಲಸಂಭೂತನಾದ ನಿಶ್ಚರ, ಅಗ್ನಿತೇಜಸ್ವಿಯಾದ ಪೌಲಹ ಇವರು ಏಕಾದಶದ ಮನ್ವಂತರದಲ್ಲಿ ದೇವತೆಗಳೂ, ಸಪ್ತರ್ಷಿಗಳೂ ಆಗಿರುವರು.

೮೪. ಆ ಹನ್ನೊಂದನೆಯ ಮನ್ವಂತರದಲ್ಲಿ ಸರ್ವವೇಗ, ಸುಧರ್ಮ, ದೇವಾನೀಕ, ಪುರೋವಹ, ಕ್ಷೇಮಧರ್ಮ, ಗೃಹೇಷು, ಆದರ್ಶ, ಪೌಂಡ್ರಕ ಇವರು ದೇವತೆಗಳಾಗಿರುವರೆಂದು ಮಹಾತ್ಮರ ಮತವು.

ಸಾವರ್ಣಸ್ಯ ತು ತೇ ಪುತ್ರಾಃ ಪ್ರಾಜಾಪತ್ಯಸ್ಯ ವೈ ಮನೋಃ ।
ದ್ವಾದಶೇ ತ್ವಥ ಪರ್ಯಾಯೇ ರುದ್ರಪುತ್ರಸ್ಯ ವೈ ಮನೋಃ ॥ ೮೫ ॥

ಚತುರ್ಥೇ ಋತುಸಾವರ್ಣೇ ದೇವಾಸ್ತಸ್ಯಾಂತರೇ ಶೃಣು ।
ಪಂಚೈವ ತು ಗಣಾಃ ಪ್ರೋಕ್ತಾ ದೇವತಾನಾಮನಾಗತಾಃ ॥ ೮೬ ॥

ಹರಿತಾ ರೋಹಿತಾಶ್ಚೈವ ದೇವಾಃ ಸುಮನಸ್ತಥಾ ।
ಸುಕರ್ಮಾಣಃ ಸುಪಾರಾಶ್ಚ ಪಂಚ ದೇವಗಣಾಃ ಸ್ಮೃತಾಃ ॥ ೮೭ ॥

ಬ್ರಹ್ಮಣೋ ಮನಸಾ ಹ್ಯೇತೇ ಏಕೈಕೋ ದಶಕೋ ಗಣಃ ।
ಅರುಂತಿಜೋ ಹರಿಶ್ಚೈವ ವಿದ್ವಾನ್ ಯಶ್ಚ ಸಹಸ್ರಶಃ ॥ ೮೮ ॥

ಪರ್ವತಾನುಚರಶ್ಚೈವ ಹ್ಯಪೋಂಶುಶ್ಚ ಮನೋಜವಃ ।
ಊರ್ಜಾಸ್ವಾಹಾ ಸ್ವಧಾ ತಾರಾ ದಶೈತೇ ಹರಿತಾಃ ಸ್ಮೃತಾಃ ॥ ೮೯ ॥

---

೮೫. ಮೇಲೆ ನಿರೂಪಿಸಿದ ಸಪ್ತರ್ಷಿಗಳೂ ಮತ್ತು ದೇವತೆಗಳೂ ಸಪ್ತಸಾವರ್ಣ್ಯಮನ್ವಂತರದಲ್ಲಿ ಪ್ರಾಜಾಪತ್ಯಮನುವಿನ ಪುತ್ರರಾಗಿರುವರು. ಅವರು ಹನ್ನೆರಡನೆಯ ಪರ್ಯಾಯದಲ್ಲಿ ರುದ್ರಪುತ್ರನಾದ ಮನುಗಳಾಗಿಯೂ ಇದ್ದರು.

೮೬. ನಾಲ್ಕನೆಯ ಋತುಸಾವರ್ಣ್ಯಮನ್ವಂತರದಲ್ಲಿರುವ ದೇವತೆಗಳನ್ನು ಹೇಳುವೆನು ಕೇಳಿರಿ. ಭಾವಿಯಾದ ದೇವತೆಗಳ ಐದು ಗಣಗಳು ಈ ಮನ್ವಂತರದಲ್ಲಿರುವುವು.

೮೭. ಆ ದೇವತೆಗಳ ಗಣಗಳು ಹರಿತರು, ರೋಹಿತರು, ಸುಮನಸರು, ಸುಕರ್ಮಾಣರು, ಸುಪಾರರು ಎಂದು ಐದು ವಿಧವಾಗಿವೆ. ಈ ಐದು ವಿಧಗಳನ್ನು ದೇವಗಣಗಳೆಂದು ತಿಳಿಯಬೇಕು.

೮೮–೮೯. ಇವರೆಲ್ಲರೂ ಬ್ರಹ್ಮದೇವನ ಮಾನಸಪುತ್ರರಾಗಿರುವರು. ಇವರಲ್ಲಿ ಒಬ್ಬೊಬ್ಬರೂ ಒಂದೊಂದು ಗಣವಾಗಿ ಹತ್ತು ಗಣಗಳಾಗಿರುವರು. ಅವರಲ್ಲಿ ಅರುಂತಿಜ, ಹರಿ, ವಿದ್ವಾಂಸ, ಪರ್ವತಾನುಚರ, ಅಪುಂಶು, ಮನೋಜವ, ಊರ್ಜ, ಸ್ವಾಹಾ, ಸ್ವಧಾ, ತಾರಾ ಎಂಬ ಈ ಹತ್ತುಜನರು ಹರಿತರೆಂದು ಪ್ರಸಿದ್ಧರಾಗಿರುವರು.

ತಪೋಜಾನಿರ್ಭೃತಿಶ್ಚೈವ ವಾಚಾ ಬಂಧುಶ್ಚ ಯಃ ಸ್ಮೃತಃ |
ರಜಶ್ಚೈವ ತು ರಾಜಶ್ಚ ಸ್ವರ್ಣಪಾದಸ್ತಥೈವ ಚ || ೯೦ ||

ವೃಷ್ಟಿರ್ವಿಧಿಶ್ಚ ವೈ ದೇವೋ ದಶೈತೇ ರೋಹಿತಾಃ ಸ್ಮೃತಾಃ |
ಉಷಿತಾ ದಾಸ್ತು ಯೇ ದೇವಾ ಸ್ತ್ರಯಸ್ತ್ರಿಂಶತ್ ಪ್ರಕೀರ್ತಿತಾಃ || ೯೧ ||

ದೇವಾನ್ ಸುಮನಸೋ ವಿದ್ಧಿ ಸುಕರ್ಮಾಣೋ ನಿಬೋಧತ |
ಸುಪರ್ವಾ ವೃಷಭಃ ಪೃಷ್ಟಃ ಕೃಪಿರ್ದ್ಯುಮ್ನೋ ವಿಪಶ್ಚಿತಃ || ೯೨ ||

ವಿಕ್ರಮಶ್ಚ ಕ್ರಮಶ್ಚೈವ ನಿಭೃತಃ ಕ್ರಾಂತ ಏವ ಚ |
ಏತೇ ಸುಕರ್ಮಣೋ ದೇವಾಃ ಸುತಾಂಶ್ಚೈಷಾಂ ನಿಬೋಧತ || ೯೩ ||

ವರ್ಯೋದಿತಸ್ತಥಾ ಜಿಷ್ಣೋ ವರ್ಚಸ್ವೀ ದ್ಯುತಿಮಾನ್ ಹವಿಃ |
ಶುಭೋ ಹವಿಕೃತಾತ್ಪ್ರಾಪ್ತಿರ್ವ್ಯಾಪೃಥೋ ದಶಮಸ್ತಥಾ || ೯೪ ||

ಸುಪಾರಾ ನಾಮಸಾತ್ವೇತೇ ದೇವಾ ವೈ ಸಂಪ್ರಕೀರ್ತಿತಾಃ |
ತೇಷಾಮಿಂದ್ರಸ್ತು ವಿಜ್ಞೇಯು ಋತಧಾಮಾ ಮಹಾಯಶಾಃ || ೯೫ ||

---

೯೦. ತಪೋಜಾನಿ, ಭೃತಿ, ವಾಚ, ಬಂಧು, ರಜ, ರಾಜ, ಸ್ವರ್ಣಪಾದ, ವೃಷ್ಟಿ, ವಿಧಿ, ದೇವ ಎಂಬ ಈ ಹತ್ತು ಜನರು ಹರಿತರೆಂದು ಪ್ರಖ್ಯಾತರಾಗಿರುವರು.

೯೧-೯೩. ಉಷಿತಾದಿಯಾದ ಯಾವ ಮೂವತ್ತಮೂರುದೇವತೆಗಳನ್ನು ಹೇಳಿರುವೆನೋ ಅವರೇ ಸುಮನಸರಾಗಿರುವರೆಂದು ತಿಳಿಯಬೇಕು. ಈಗ ಸುಕರ್ಮಣರನ್ನು ಹೇಳುವೆನು ಕೇಳಿರಿ ಸುಪರ್ವಾಣ, ವೃಷಭ, ಪೃಷ್ಟ, ಕೃಪಿ, ದ್ಯುಮ್ನ ವಿಪಶ್ಚಿತ, ವಿಕ್ರಮ, ಕ್ರಮ, ನಿಭೃತ, ಕಾಂತ ಇವರು ಸುಕರ್ಮಣ ದೇವತೆಗಳಾಗಿರುವರು. ಈಗ ಅವರ ಕುಮಾರರನ್ನು ನಿರೂಪಿಸುವೆನು ಕೇಳಿರಿ, ಎಂದು ಸೂತ ಮುನಿಯು ಹೇಳಿದನು.

೯೪-೯೫. ವರ್ಯೋದಿತ, ಜಿಷ್ಣು, ವರ್ಚಸ್ವಿ, ದ್ಯುದಿಮಂತ, ಹವಿ, ಶುಭ, ಹವಿಕೃತ, ಪ್ರಾಪ್ತಿ, ವ್ಯಾಪೃಥ ಇವರು ಸುಪಾರಾನಾಮಕ ದೇವತೆಗಳೆಂದು ಪ್ರಸಿದ್ಧರಾಗಿರುವರು. ಇವರಿಗೆ ಕೀರ್ತಿವಂತನಾದ ಋತುಧಾಮನು ಇಂದ್ರನಾಗಿರುವನೆಂದು ತಿಳಿಯಬೇಕು.

ಕೃತಿರ್ವಸಿಷ್ಠಪುತ್ರಸ್ತು ಹ್ಯಾತ್ರೇಯಃ ಸುತಪಾಸ್ತಥಾ ।
ತಪೋಮೂರ್ತಿಶ್ಚಾಂಗಿರಸಸ್ತಪಸ್ವೀಕಾಶ್ಯಪಸ್ತಥಾ ॥ ೯೭ ॥

ತಪೋಽಶಯಾನಃ ಪೌಲಸ್ತ್ಯಃ ಪುಲಹಶ್ಚ ತಪೋಧೃತಿಃ ।
ಭಾರ್ಗವಃ ಸಪ್ತಮಸ್ತ್ವೇಷಾಂ ವಿಜ್ಞೇಯಸ್ತು ತಪೋಮತಿಃ ॥ ೯೭ ॥

ಏತೇ ಸಪ್ತರ್ಷಯಃ ಸಿದ್ಧಾ ಅನ್ಯೇ ಸಾವರ್ಣಿಕೇಽಂತರೇ ।
ದೇವವಾನುಪದೇವಶ್ಚ ದೇವಶ್ರೇಷ್ಠೋ ವಿದೂರಥಃ ॥ ೯೮ ॥

ಮಿತ್ರವಾನ್ ಮಿತ್ರಬಿಂದುಶ್ಚ ಮಿತ್ರಸೇನೋ ಹ್ಯಮಿತ್ರಹಾ ।
ಮಿತ್ರಬಾಹುಃ ಸುವರ್ಚಾಶ್ಚ ದ್ವಾದಶೈತೇ ಮನೋಃ ಸುತಾಃ ॥ ೯೯ ॥

ತ್ರಯೋದಶೇ ತು ಪರ್ಯಾಯೇ ಭಾವ್ಯಾ ರೌಚ್ಯಾಂತರೇ ಪುನಃ ।
ತ್ರಯ ಏವ ಗಣಾಃ ಪ್ರೋಕ್ತಾ ದೇವಾನಾಂ ತು ಸ್ವಯಂಭುವಾ ॥ ೧೦೦ ॥

---

೯೬–೯೭. ಬೇರೊಂದು ಸಾವರ್ಣಿಮನ್ವಂತರದಲ್ಲಿ ವಸಿಷ್ಠಪುತ್ರನಾದ ಕೃತಿಯು, ಅತ್ರಿಪುತ್ರನಾದ ಸುತಪನನು, ಅಂಗಿರಸ ಕುಮಾರನಾದ ತಪೋಮೂರ್ತಿಯು, ಕಶ್ಯಪನ ಸುತನಾದ ತಪಸ್ವಿಯು, ಪುಲಸ್ತ್ಯತನಯನೂ ತಪೋನಿರತನೂ ತಪೋಮಹಿಮೆಯುಳ್ಳವನೂ ಆದ ಪುಲಹನು, ಮತ್ತು ಭಾರ್ಗವನ ಮಗನಾದ ತಪೋಮತಿಯು ಎಂಬ ಏಳು ಜನಗಳು ಸಪ್ತರ್ಷಿಗಳೆಂದು ಪ್ರಸಿದ್ಧರಾಗಿರುವರು.

೯೮–೯೯. ಇತರ ಸಾವರ್ಣಿಕಮನ್ವಂತರದಲ್ಲಿ ದೇವವಂತ, ಅನುಪದೇವ, ದೇವಶ್ರೇಷ್ಠ, ವಿದೂರಥ, ಮಿತ್ರವಂತ, ಮಿತ್ರಬಿಂದು, ಮಿತ್ರಸೇನ, ಅಮಿತ್ರಹ, ಮಿತ್ರಬಾಹು, ಸುವರ್ಚಸರೆಂಬ ಹನ್ನೆರಡು ಜನರೂ ಮನು ಸುತರಾಗಿರುವರು.

೧೦೦. ಹದಿಮೂರನೆಯ ಮನ್ವಂತರವಾದ ರೌಚ್ಯಮನ್ವಂತರದಲ್ಲಿ ಪರ್ಯಾಯ ರೀತಿಯಾಗಿ ಭಾವಿಯಾದ ದೇವತೆಗಳ ಮೂರುಗಣಗಳು ಬ್ರಹ್ಮದೇವನಿಂದ ಸೃಷ್ಟಿಸಲ್ಪಡುವರೆಂದು ಜ್ಞಾನಿಗಳು ಹೇಳುವರು.

ಬ್ರಹ್ಮಣೋ ಮಾನಸಾಃ ಪುತ್ರಾಸ್ತೇ ಹಿ ಸರ್ವೇ ಮಹಾತ್ಮನಃ ।
ಸುತ್ರಾಮಾಣಃ ಸುಧರ್ಮಾಣಃ ಸುಕರ್ಮಾಣಶ್ಚ ತೇ ತ್ರಯಃ ॥ ೧೦೧ ॥

ತ್ರಿದಶಾನಾಂ ಗಣಾಃ ಪ್ರೋಕ್ತಾ ಭವಿಷ್ಯಾಃ ಸೋಮಪಾಯಿನಃ ।
ತ್ರಯಸ್ತ್ರಿಂಶದ್ದೇವತಾ ಯಾಃ ಪ್ರಾಭವಿಷ್ಯಂತ ಯಾಜ್ಞಿಕೈಃ ॥ ೧೦೨ ॥

ಆಜ್ಯೇನ ಪೃಷದಾಜ್ಯೇನ ಗ್ರಹಶ್ರೇಷ್ಠೇನ ಚೈವ ಹಿ ।
ದೇವೈರ್ದೇವಾಸ್ತ್ರಯಸ್ತ್ರಿಂಶತ್ಪೃಥಕ್ತ್ವೇನ ನಿಬೋಧತ ॥ ೧೦೩ ॥

ಸುತ್ರಾಮಾಣಃ ಪ್ರಯಾಜ್ಯಾಸ್ತು ಹ್ಯಾದ್ಯಾಜ್ಯಾಸ್ತು ಸಾಂಪ್ರತಂ ।
ಸುಕರ್ಮಣೋಽನುಯಾಜ್ಯಾಸ್ತು ಪೃಷದಾಜ್ಯಾಶಿನಸ್ತು ಯೇ ॥ ೧೦೪ ॥

ಉಪಯಾಜ್ಯಾಃ ಸುಧರ್ಮಾಣ ಇತಿ ದೇವಾಃ ಪ್ರಕೀರ್ತಿತಾಃ ।
ದಿವಸ್ಪತಿರ್ಮಹಾಸತ್ವಸ್ತೇಷಾಮಿಂದ್ರೋ ಭವಿಷ್ಯತಿ ॥ ೧೦೫ ॥

---

೧೦೧. ಅವರೆಲ್ಲರೂ ಬ್ರಹ್ಮದೇವನ ಮಾನಸಪುತ್ರರಾಗಿರುವರು. ಅವರಲ್ಲಿ ಸುತ್ರಾಮಣರು, ಸುಧರ್ಮಾಣರು, ಸುಕರ್ಮಣರು ಎಂದು ಮಹಾತ್ಮರಾದ ದೇವತೆಗಳ ಮೂರು ಗಣಗಳು ಸುಪ್ರಸಿದ್ಧವಾಗಿವೆ.

೧೦೨. ಭಾವಿಯಾದ ದೇವತೆಗಳು ಮೂರು ಗಣಗಳಾಗಿರುವರು ಸೋಮಪಾನ ಮಾಡುವವರೂ ಮೂವತ್ತು ಮೂರು ದೇವತೆಗಳೂ ಯಾಜಕರಾಗಿರುವರು. ಎಂದು ಮಹಾತ್ಮರು ಹೇಳಿದರು.

೧೦೩. ಈ ಮೂವತ್ತುಮೂರು ದೇವತೆಗಳು ಆಜ್ಯರೂ, ಪೃಷದಾಜ್ಯರೂ, ಗ್ರಹಶ್ರೇಷ್ಠರೂ ಆದ ದೇವತೆಗಳಿಂದ ಪ್ರತ್ಯೇಕರಾಗಿರುವರು ಎಂದು ತಿಳಿಯಿರಿ.

೧೦೪. ಸುತ್ರಾಮಣರು ಪ್ರಯಾಜ್ಯರಾಗಿರುವರು, ಆದ್ಯಾಜ್ಯರೂ ಆಗಿರುವರು. ಯಾರು ಪೃಷದಾಜ್ಯಾಶನರಾಗಿರುವರೋ ಅಂತಹ ಸುಕರ್ಮಣರು ಅನುಯಾಜ್ಯರಾಗಿರುವರು.

೧೦೫. ಸುಧರ್ಮಾಣರು ಉಪಯಾಜ್ಯರಾಗಿರುವರು. ಹೀಗೆ ದೇವತೆಗಳು ಪ್ರಖ್ಯಾತರಾಗಿರುವರು. ಮಹಾಬಲಶಾಲಿಯಾದ ದಿವಸ್ಪತಿಯು ಆ ದೇವತೆಗಳಿಗೆ ಇಂದ್ರನಾಗಿರುವನು.

ಪುಲಾಹಾತ್ಮಜಪುತ್ರಾಸ್ತೇ ವಿಜ್ಞೇಯಾಸ್ತು ರುಚೇಃ ಸುತಾಃ ।
ಅಂಗಿರಾಶ್ಚೈವ ಧೃತಿಮಾನ್ ಪೌಲಸ್ತ್ಯಃ ಪಥ್ಯವಾಂಸ್ತು ಸಃ ॥ ೧೦೬ ॥

ಪೌಲಹಸ್ತತ್ತ್ವದರ್ಶೀ ಚ ಭಾರ್ಗವಶ್ಚ ನಿರುತ್ಸುಕಃ ।
ನಿಷ್ಪ್ರಕಂಪಸ್ತಥಾತ್ರೇಯೋ ನಿರ್ಮೋಹಃ ಕಶ್ಯಪಸ್ತಥಾ ॥ ೧೦೭ ॥

ಸ್ವರೂಪಶ್ಚೈವ ವಾಸಿಷ್ಠಃ ಸಪ್ತೈತೇ ತು ತ್ರಯೋದಶೇ ।
ಚಿತ್ರಸೇನೋ ವಿಚಿತ್ರಶ್ಚ ತಪೋಧರ್ಮರ್ಧೃತೋ ಭವಃ ॥ ೧೦೮ ॥

ಅನೇಕಕ್ಷತ್ರಬದ್ಧಶ್ಚ ಸುರಸೋ ನಿರ್ಭಯಃ ಪೃಥುಃ ।
ರೌಚ್ಯಸ್ಯೈತೇ ಮನೋಃ ಪುತ್ರಾ ಹ್ಯಂತರೇ ತು ತ್ರಯೋದಶೇ ॥ ೧೦೯ ॥

ಚತುರ್ದಶೇ ತು ಪರ್ಯಾಯೇ ಭೌತಸ್ಯಾಪ್ಯಂತರೇ ಮನೋಃ ।
ದೇವತಾನಾಂ ಗಣಾಃ ಪಂಚ ಪ್ರೋಕ್ತಾ ಯೇ ತು ಭವಿಷ್ಯತಿ ॥ ೧೧೦ ॥

---

೧೦೬. ಪುಲಹಾತ್ಮಜಪುತ್ರರೆಲ್ಲರೂ ರುಚೀದೇವಿಯ ಕುಮಾರರೆಂದು ತಿಳಿಯ ಬೇಕು. ಅಂಗಿರಸನೂ, ಧೃತಿಮಂತನೂ, ಪುಲಸ್ಯಕುಮಾರನಾದ ಪಥ್ಯವಂತನೂ ಇವರೂ ಸಹ ರುಚಿಯ ಕುಮಾರರಾಗಿರುವರು.

೧೦೭. ತತ್ವಜ್ಞಾನಿಯೂ, ಭೃಗುವಂಶಜನೂ ಆದ ಪೌಲಹನೂ, ಉತ್ಸಾಹ ರಹಿತನೂ, ನಿಷ್ಕಂಪಕನೂ ಆದ ಆತ್ರೇಯನೂ, ಮೋಹಶೂನ್ಯನೂ, ಸುಪ್ರಸಿದ್ಧನೂ ಆದ ಕಶ್ಯಪನೂ, ಆತ್ಮಜ್ಞಾನಿಯಾದ ವಸಿಷ್ಠನೂ ಎಂಬ ಈ ಏಳು ಜನರೂ ಸಪ್ತರ್ಷಿ ಗಳಾಗಿರುವರು. ಇವರು ಹದಿಮೂರನೆಯ ಮನ್ವಂತರದಲ್ಲಿ ಮಹರ್ಷಿಗಳಾಗಿರುವ ರೆಂದು ತಿಳಿಯಬೇಕು.

೧೦೮-೧೦೯. ಹದಿಮೂರನೆಯ ಮನ್ವಂತರದಲ್ಲಿ ರೌಚ್ಯನಾಮಕಮನುವಿಗೆ ಚಿತ್ರಸೇನ, ವಿಚಿತ್ರ, ತಪೋಧರ್ಮದಲ್ಲಿ ಆಸಕ್ತನಾದ ಭವನು ಅನೇಕ ಕ್ಷತ್ರಬದ್ಧನು, ಸುರಸನು, ನಿರ್ಭಯನು ಮತ್ತು ಪೃಥು ಇವರು ಏಳು ಜನರೂ ಪುತ್ರರಾಗುವರು.

೧೧೦. ಹದಿನಾಲ್ಕನೆಯ ಪರ್ಯಾಯದ ಭೌತನಮನ್ವಂತರದಲ್ಲಿ ಭೌತ ಮನುವಿಗೆ ಮುಂದೆ ನಿರೂಪಿಸುವ ದೇವತೆಗಳ ಐದು ಗಣಗಳು ಕುಮಾರರಾಗಿ ಜನಿಸುವುವು.

ಚಾಕ್ಷುಷಾಶ್ಚ ಕನಿಷ್ಠಾಶ್ಚ ಪವಿತ್ರಾ ಭಾಜರಾಸ್ತಥಾ ।
ವಾಚಾವೃದ್ಧಾಶ್ಚ ಇತ್ಯೇತೇ ಪಂಚ ದೇವಗಣಾಃ ಸ್ಮೃತಾಃ ॥ ೧೧೧ ॥

ಸಪ್ತೈವ ತಾಂಸ್ತಾನ್ ಭಾಗಾಂಶ್ಚ ವಿದ್ಧಿ ಚಾಕ್ಷುಷಸಂಜ್ಞಕಾನ್ ।
ಬೃಹದಾದ್ಯಾನಿ ಸಾಮಾನಿ ಕನಿಷ್ಠಾಃ ಸಪ್ತ ತಾನ್ ವಿದುಃ ।
ಸಪ್ತಲೋಕಾಃ ಪರಿತ್ರಾಸ್ತೇ ಭಾಜಿರಾಃ ಸಪ್ತಸಿಂಧವಃ ॥ ೧೧೨ ॥

ವಾಚಾವೃದ್ಧಾನೃಷೀನ್ ವಿದ್ಧಿ ಮನೋಃ ಸ್ವಾಯಂಭುವಸ್ಯ ವೈ ।
ಸರ್ವೇ ಮನ್ವಂತರೇಂದ್ರಾಶ್ಚ ವಿಜ್ಞೇಯಾಸ್ತುಲ್ಯಲಕ್ಷಣಾಃ ॥ ೧೧೩ ॥

ತೇಜಸಾ ತಪಸಾ ಬುದ್ಧ್ಯಾ ಬಲಶ್ರುತಪರಾಕ್ರಮೈಃ ।
ತ್ರೈಲೋಕ್ಯೇ ಯಾನಿ ಸತ್ವಾನಿ ಗತಿಮಂತಿ ಧ್ರುವಾಣಿ ಚ ।
ಸರ್ವಶಃ ಸ್ವೈರ್ಗುಣೈಸ್ತಾನಿ ಇಂದ್ರಾಸ್ತೇಽಭಿಭವಂತಿ ವೈ ॥ ೧೧೪ ॥

---

೧೧೧. ಆ ಹದಿನಾಲ್ಕನೆಯ ಮನ್ವಂತರದಲ್ಲಿ ಚಾಕ್ಷುಷರು, ಕನಿಷ್ಠರು, ಪವಿತ್ರರು, ಭಾಜರರು ಮತ್ತು ವಾಚಾವೃದ್ಧರು ಈ ಐದು ದೇವಗಣದವರೂ ಮನುಪುತ್ರರೆಂದು ಪ್ರಸಿದ್ಧರಾಗಿರುವರು.

೧೧೨. ಆ ಪ್ರತಿಯೊಂದು ಗಣಗಳಲ್ಲಿಯೂ ಏಳೇಳು ಜನ ದೇವತೆಗಳಿರುವರು. ಆ ಚಾಕ್ಷುಷಜ್ಞರು ಬೃಹದಾದಿಯಾದ ಸಾಮವನ್ನರಿತ ಸಪ್ತಸಂಖ್ಯಾಕರಾಗಿರುವರು. ಇವರಂತೆ ಕನಿಷ್ಠರೂ ಸಪ್ತಸಂಖ್ಯಾಕರಾಗಿರುವರು. ಈ ಮಹಾತ್ಮರು ಸಪ್ತಲೋಕಗಳನ್ನೂ ಸಪ್ತಸಮುದ್ರಗಳನ್ನೂ ಪರಿರಕ್ಷಕರಾಗಿರುವರು

೧೧೩. ಸ್ವಾಯಂಭುವ ಮನ್ವಂತರದಲ್ಲಿ ವಾಚಾವೃದ್ಧರು ಮನುಕುಮಾರರಾದ ಸಪ್ತರ್ಷಿಗಳಾಗಿ ಜನಿಸುವರು. ಈ ಸಮಸ್ತರಾದ ಮನ್ವಂತರದ ಇಂದ್ರರು ಸಮಾನ ಲಕ್ಷಣವಂತರೂ ಸಮಾನ ವಿಕ್ರಮಿಗಳೂ ಆಗಿರುವರು.

೧೧೪. ಈ ಐದುದೇವಗಣದವರೂ ಕೂಡ ತೇಜಸ್ಸು, ತಪಸ್ಸು, ಬುದ್ಧಿ, ಶಕ್ತಿ, ಜ್ಞಾನ ಮತ್ತು ಶೌರ್ಯ ಇವುಗಳಿಂದ ಮೂರು ಲೋಕಗಳಲ್ಲಿರುವ ಚರಾಚರಾತ್ಮಕವಾದ ಸಮಸ್ತಪ್ರಾಣಿಗಳನ್ನೂ ಸಂಪೂರ್ಣವಾಗಿ ಮೀರಿರುವರು. ತಿರಸ್ಕರಿಸುವರು.

ಭೂತಾಪವಾದಿನೋ ಹ್ಯಷ್ಟಾ ಮಧ್ಯಸ್ಥಾ ಭೂತವಾದಿನಃ ।
ಭೂತಾನುವಾದಿನಃ ಸಪ್ತಾಸ್ತ್ರಯೋವೇದಾಃ ಪ್ರವಾದಿನಾಂ ॥ ೧೧೫ ॥

ಅಗ್ನೀಧ್ರಃ ಕಾಶ್ಯಪಶ್ಚೈವ ಪೌಲಸ್ತ್ಯೋ ಮಾಗಧಶ್ಚ ಯಃ ।
ಭಾರ್ಗವೋ ಹ್ಯಗ್ನಿಬಾಹುಶ್ಚ ಶುಚಿರಾಂಗಿರಸಸ್ತಥಾ ।
ಓಜಸ್ವೀ ಸುಬಲಶ್ಚೈವ ಭೌತ್ಯಸ್ಯೈತೇ ಮನೋಃ ಸುತಾಃ ॥ ೧೧೬ ॥

ಸವರ್ಣಾ ಮನವೋ ಹ್ಯೇತೇ ಚತ್ವಾರೋ ಬ್ರಹ್ಮಣಃ ಸುತಾಃ ।
ಏಕೋ ವೈವಸ್ವತಶ್ಚೈವ ಸಾವರ್ಣೋ ಮನುರುಚ್ಯತೇ ॥ ೧೧೭ ॥

ರೌಚ್ಯೋ ಭೌತ್ಯಶ್ಚ ಯೌ ತೌ ತು ಮನೋಃ ಪೌಲಹಭಾರ್ಗವೌ ।
ಭೌತ್ಯಸ್ಯೈವಾಧಿಪತ್ಯೇ ತು ಪೂರ್ಣಃ ಕಲ್ಪಸ್ತು ಪೂರ್ಯತೇ ॥ ೧೧೮ ॥

---

೧೧೫. ಭೂತಾಪವಾದಿಗಳಾದ ಹೃಷ್ಟರೂ, ಭೂತವಾದಿಗಳಾದ ಮಧ್ಯಸ್ಥರೂ, ಭೂತಾನುವಾದಿಗಳಾದ ಸಪ್ತರೂ ಎಂಬ ಈ ಮೂರು ಪಂಗಡದವರೂ ವೇದಾಭಿಮಾನಿಗಳಾಗಿರುವರೆಂದು ಮಹಾತ್ಮರು ಹೇಳುವರು.

೧೧೬. ಯಾವನು ಪುಲಸ್ತ್ಯಕುಮಾರನಾದ ಮಾಗಧನಾಗಿದ್ದನೋ ಅವನೇ ಕಶ್ಯಪವಂಶದ ಅಗ್ನೀಧ್ರನಾದನು. ಅವನೂ ಭೃಗು ಕುಲೋತ್ಪನ್ನನಾದ ಅಗ್ನಿಬಾಹುವೂ ಅಂಗಿರಸನ ವಂಶಜನಾದ ಶುಚಿಯು ಮಹಾತೇಜಸ್ವಿಯಾದ ಈ ನಾಲ್ವರೂ ಭೌತ್ಯ ಮನುವಿನ ಕುಮಾರರಾಗುವರು.

೧೧೭. ಮೇಲೆ ಹೇಳಿದ ನಾಲ್ವರೂ ಸಾವರ್ಣ್ಯಮನ್ವಂತರದಲ್ಲಿ ಬ್ರಹ್ಮದೇವನ ಮಾನಸಕುಮಾರಾಗುವರು. ಅವರಲ್ಲೊಬ್ಬ ಸಾವರ್ಣಮನುವೇ ವೈವಸ್ವತಮನುವಾಗಿ ಉದ್ಭವಿಸುವನು.

೧೧೮. ರೌಚ್ಯ, ಭೌತ್ಯರೆಂಬ ಇವರಿಬ್ಬರೂ ಪೌಲಹ, ಭಾರ್ಗವನಾಮಕರಾದ ಮನುಕುಮಾರರಾಗಿರುವರು. ಭೌತ್ಯನಾಮಕಮನುವಿನ ಅಧಿಕಾರದಲ್ಲಿಯೇ ಅವರ ಕಲ್ಪವು ಪೂರ್ಣವಾಗುವುದು.

॥ ಸೂತ ಉವಾಚ ॥

ನಿಶ್ಶೇಷೇಷು ಚ ಸರ್ವೇಷು ತದಾ ಮನ್ವಂತರೇಷ್ವಿಹ ।
ಅಂತೇಽನೇಕಯುಗೇ ತಸ್ಮಿನ್ ಕ್ಷೀಣೇ ಸಂಹಾರ ಉಚ್ಯತೇ ॥ ೧೧೯ ॥

ಸಪ್ತೈತೇ ಭಾರ್ಗವಾ ದೇವಾ ಅಂತೇ ಮನ್ವಂತರೇ ತದಾ ।
ಭುಕ್ತ್ವಾ ತ್ರೈಲೋಕ್ಯಮಧ್ಯಸ್ಥಾ ಯುಗಾಖ್ಯಾಂ ಹ್ಯೇಕಸಪ್ತತಿಂ ॥ ೧೨೦ ॥

ಪಿತೃಭಿರ್ಮನುಭಿಶ್ಚೈವ ಸಾರ್ಧಂ ಸಪ್ತರ್ಷಿಭಿಸ್ತು ಯೇ ।
ಯಜ್ವಾನಶ್ಚೈವ ತೇಽಪ್ಯನ್ಯೇ ತದ್ಭಕ್ತಾಶ್ಚೈವ ತೈಃ ಸಹ ॥ ೧೨೧ ॥

ಮಹರ್ಲೋಕಂ ಗಮಿಷ್ಯಂತಿ ತ್ಯಕ್ತ್ವಾ ತ್ರೈಲೋಕ್ಯಮೀಶ್ವರಾಃ ।
ತತಸ್ತೇಷು ಗತೇಷೂರ್ಧ್ವಂ ಕ್ಷೀಣೇ ಮನ್ವಂತರೇ ತದಾ ।
ಅನಾಧಾರಮಿದಂ ಸರ್ವಂ ತ್ರೈಲೋಕ್ಯಂ ವೈ ಭವಿಷ್ಯತಿ ॥ ೧೨೨ ॥

---

೧೧೯. ಸೂತಮುನಿಯು ಹೇಳಿದನು:—ಈ ನಕಲವಾದ ಮನ್ವಂತರವು ಕಳೆದು ನಿಶ್ಶೇಷವಾಗುವುವು. ಹೀಗೆ ಅನೇಕ ಯುಗಗಳು ಕಳೆದುಹೋಗಲು ಅಂತ್ಯದಲ್ಲಿ ಸಂಹಾರವು ಅಂದರೆ ಪ್ರಲಯವು ಸಂಭವಿಸುವುದೆಂದು ತಿಳಿಯಬೇಕು.

೧೨೦. ಭಾರ್ಗವನಾಮಕರಾದ ಈ ಏಳು ಜನ ದೇವತೆಗಳೂ ಆ ಮನ್ವಂತರದಲ್ಲಿ ತ್ರೈಲೋಕ್ಯಾಧಿಪತ್ಯವನ್ನು ಹೊಂದಿ ಎಪ್ಪತ್ತೊಂದು ಚತುರ್ಯುಗಗಳಲ್ಲಿಯೂ ತ್ರೈಲೋಕ್ಯವನ್ನು ಅನುಭವಿಸುವರು.

೧೨೧. ಈ ದೇವತೆಗಳು, ಪಿತೃಗಳು, ಮನುಗಳು, ಸಪ್ತರ್ಷಿಗಳು, ಯಾಗಶೀಲರೂ, ಅವರ ಭಕ್ತರೂ ಇವರೆಲ್ಲರೊಡನೇ ಪ್ರಲಯಕಾಲದಲ್ಲಿ ಈ ಲೋಕಾಧಿಪತ್ಯವನ್ನು ಬಿಟ್ಟು ಮಹರ್ಲೋಕವನ್ನು ಹೊಂದುವರು.

೧೨೨. ಪ್ರಲಯಕಾಲವು ಪ್ರಾಪ್ತವಾಗಲು ಈ ಸಮಸ್ತ ದೇವತೆಗಳು ಈ ಲೋಕವನ್ನು ಬಿಟ್ಟು ಮಹರ್ಲೋಕಕ್ಕೆ ಹೋಗುವರು. ಅವರೂ ಊರ್ಧ್ವಗತವಾದ ಮಹರ್ಲೋಕಕ್ಕೆ ಹೋಗಲು ಮನ್ವಂತರವು ಕ್ಷಯಿಸುವುದು. (ಕಳೆದುಹೋಗುವುದು) ಆಗ ಈ ಮೂರು ಲೋಕಗಳೂ ಆಶ್ರಯವಿಲ್ಲದೇ ಅಂದರೆ ಪಾಲಕರಿಲ್ಲದೇ ಅನಾಯಕವಾಗುವುವು.

ತತಃ ಸ್ಥಾನಾನಿ ಶೂನ್ಯಾನಿ ಸ್ಥಾನಿನಾಂ ತಾನಿ ವೈ ದ್ವಿಜಾಃ |
ಪ್ರಭ್ರಶ್ಯಂತಿ ವಿಮುಕ್ತಾನಿ ತಾರಾಋಕ್ಷ ಗ್ರಹೈಸ್ತಥಾ || ೧೨೩ ||

ತತಸ್ತೇಷು ವ್ಯತೀತೇಷು ತ್ರೈಲೋಕ್ಯಸ್ಯೇಶ್ವರೇಷ್ವಿಹ |
ಸೇಂದ್ರಾಷ್ಟೇಷು ಮಹರ್ಲೋಕಂ ಯಸ್ಮಿಂಸ್ತೇ ಕಲ್ಪವಾಸಿನಃ || ೧೨೪ ||

ಜಿತಾದ್ಯಾಶ್ಚ ಗಣಾ ಹ್ಯತ್ರ ಚಾಕ್ಷುಷಾಂತಾಶ್ಚತುರ್ದಶ |
ಮನ್ವಂತರೇಷು ಸರ್ವೇಷು ದೇವಾಸ್ತೇ ವೈ ಮಹೌಜಸಃ || ೧೨೫ ||

ತತಸ್ತೇಷು ಗತೇಷೂರ್ಧ್ವಂ ಸಾಯುಜ್ಯಂ ಕಲ್ಪವಾಸಿನಾಂ |
ಸಮೇತ್ಯ ದೇವಾಸ್ತೇ ಸರ್ವೇ ಪ್ರಾಪ್ತೇ ಸಂಕಲನೇ ತದಾ || ೧೨೬ ||

ಮಹರ್ಲೋಕಂ ಪರಿತ್ಯಜ್ಯ ಗಣಾಸ್ತೇ ವೈ ಚತುರ್ದಶ |
ಸಶರೀರಾಶ್ಚ ಶ್ರೂಯಂತೇ ಜನಲೋಕಂ ಸಹಾನುಗಾಃ || ೧೨೭ ||

---

೧೨೩. ಎಲೈ ಮುನಿವರ್ಯರೇ, ದೇವತೆಗಳು ಲೋಕಾಂತರಕ್ಕೆ ಹೋಗಲಾಗಿ ಆ ದೇವತೆಗಳಿಗೆ ಆಶ್ರಯವಾದ ಸ್ಥಾನಗಳೆಲ್ಲವೂ, ನಷ್ಟವಾಗಲು ಅಲ್ಲಿರುವ ತಾರೆಗಳು, ನಕ್ಷತ್ರಗಳು, ಗ್ರಹಗಳು, ಇವೇ ಮೊದಲಾದವು ನಾಶವಾಗುವುವು.

೧೨೪. ಅನಂತರ ಮೂರುಲೋಕಾಧಿಪತಿಗಳ ಸ್ಥಾನಗಳೆಲ್ಲವೂ ನಾಶವಾಗಲು ಇಂದ್ರಾದಿಗಳಿಂದೊಡಗೂಡಿದ ಆ ಎಂಟು ಜನಗಳೂ ಕಲ್ಪವಾಸಿಗಳಿರುವ ಮಹರ್ಲೋಕವನ್ನು ಹೊಂದುವರು. ಎಲ್ಲರು ಮಹರ್ಲೋಕಕ್ಕೆ ಹೋಗುವರು.

೧೨೫. ಚಾಕ್ಷುಷ ಮನ್ವಂತರವೇ ಕೊನೆಯಾದ ಚತುರ್ದಶ ಮನ್ವಂತರಗಳಲ್ಲಿ ಜಿತಾದಿಯೂ, ಮಹಾತೇಜಸ್ವಿಯೂ ಆದ ದೇವಗಣಗಳು ಕಲ್ಪವಾಸಿಗಳಿರುವ ಉನ್ನತವಾದ ಸಾಯುಜ್ಯಲೋಕವನ್ನು ಹೊಂದುವರು.

೧೨೬. ತರುವಾಯ ಆ ದೇವತೆಗಳು ಊರ್ಧ್ವಲೋಕಕ್ಕೆ ಹೋಗಿ ಕಲ್ಪವಾಸಿಗಳೊಡನೇ ಸಾಯುಜ್ಯವನ್ನು ಹೊಂದುವರು. ಮತ್ತು ಆ ದೇವತೆಗಳ ಸಂಗಡ ಮಿಶ್ರರಾಗುವರು.

೧೨೭. ಹೀಗೆ ಸಂಕಲನವಾದ ಬಳಿಕ ಆ ಚತುರ್ದಶ ದೇವಗಣಗಳೂ ಸಶರೀರರಾಗಿ ಮಹರ್ಲೋಕವನ್ನು ಬಿಟ್ಟು ಜನಲೋಕವನ್ನು ಅನುಚರೊಡನೆ ಹೊಂದುವರೆಂದು ಮಹಾತ್ಮರು ಹೇಳಿರುವರು.

ಏವಂ ದೇವೇಷ್ವತೀತೇಷು ಮಹರ್ಲೋಕಾಜ್ಜನಂ ಪ್ರತಿ ।
ಭೂತಾದಿಷ್ವವಶಿಷ್ಟೇಷು ಸ್ಥಾವರಾಂತೇಷು ಚಾಪ್ಯುತ || ೧೨೮ ||

ಶೂನ್ಯೇಷು ಲೋಕಸ್ಥಾನೇಷು ಮಹಾಂತೇಷು ಭೂರಾದಿಷು ।
ದೇವೇಷು ಚ ಗತೇಷೂರ್ಧ್ವಂ ಸಾಯೋಜ್ಯಂ ಕಲ್ಪವಾಸಿನಾಂ || ೧೨೯ ||

ಸಂಹೃತ್ಯ ತಾಂಸ್ತತೋ ಬ್ರಹ್ಮಾ ದೇವರ್ಷಿ ಪಿತೃದಾನವಾನ್ ।
ಸಂಸ್ಥಾಪಯತಿ ವೈ ಸರ್ಗಂ ಮಹದ್ವ್ಯುಷ್ಟ್ಯಾ ಯುಗಕ್ಷಯೇ || ೧೩೦ ||

ತತ್ರ ಯುಗಸಹಸ್ರಾಂತಮಹರ್ಯದ್ಬ್ರಹ್ಮಣೋ ವಿದುಃ ।
ರಾತ್ರಿಂ ಯುಗಸಹಸ್ರಾಂತಾಮಹೋರಾತ್ರವಿದೋಃ ಜನಾಃ || ೧೩೧ ||

---

೧೨೮. ಹೀಗೆ ದೇವಗಣಗಳು ಜನಲೋಕಕ್ಕೆ ಹೋಗಲಾಗಿ ಮಹರ್ಲೋಕವು ಶೂನ್ಯವಾಗಿ ಸ್ಥಾವರಾಂತಗಳಾದ ಭೂತಾದಿಗಳು ಮಾತ್ರ ಉಳಿಯುವುವು. ಅವಶಿಷ್ಟಗಳಾಗುವುವು.

೧೨೯. ತರುವಾಯ ಭೂಲೋಕ ಮೊದಲುಗೊಂಡು ಮಹರ್ಲೋಕದ ವರೆಗೂ ಇರುವ ಲೋಕಗಳೆಲ್ಲವೂ ಶೂನ್ಯವಾಗಲು ದೇವತೆಗಳು ಊರ್ಧ್ವಲೋಕಕ್ಕೆ ಹೋಗಿ ಅಲ್ಲಿರುವ ಕಲ್ಪವಾಸಗಳ ಸಂಗಡ ಸಾಯುಜ್ಯವನ್ನು ಹೊಂದುವರು.

೧೩೦. ಅನಂತರ ಬ್ರಹ್ಮದೇವನು ಯುಗಕ್ಷಯವು ಸಂಭವಿಸಲು ಆ ಪ್ರಳಯ ಕಾಲದಲ್ಲಿ ದೇವತೆಗಳು, ಮಹರ್ಷಿಗಳು, ಪಿತೃಗಳು, ದಾನವರು ಇವರೇ ಮೊದಲಾದವರನ್ನು ಸಂಹರಿಸಿ, ಪುನಃ (ಯುಗವು) ಕಲ್ಪವು, ಪ್ರಾರಂಭವಾಗಲು ಆ ದೇವರ್ಷಿ ಪಿತೃದಾನವರನ್ನು ಪುನಃ ಕೃಪೆಯಿಂದ ಸೃಷ್ಟಿಮಾಡುವನು. ಮತ್ತು ಅವರನ್ನು ಸ್ಥಾಪಿಸುವನು.

೧೩೧. ಆಗ ದೇವಮಾನದಲ್ಲಿ ಒಂದುಸಾವಿರ ವರ್ಷಗಳಾಗುವುವು. ಅದೇ ಬ್ರಹ್ಮದೇವನಿಗೆ ಒಂದು ಹಗಲಾಗಿರುವುದು. ಇದರಂತೆಯೇ ಕಾಲಜ್ಞರಾದ ಮಹಾತ್ಮರು ರಾತ್ರಿಯೂ ಕೂಡ ಒಂದು ಸಹಸ್ರವರ್ಷಗಳೆಂದು ಹೇಳುವರು. ಹೀಗೆ ದೇವಮಾನದಲ್ಲಿ ಎರಡು ಸಹಸ್ರ ವರ್ಷಗಳು ಸೇರಿದರೆ ಬ್ರಹ್ಮದೇವನಿಗೆ ಒಂದು ದಿವಸವಾಗುವುದು.

ನೈಮಿತ್ತಿಕಃ ಪ್ರಾಕೃತಿಕೋ ಯಶ್ಚ್ಯಾತ್ಯಂತಿಕೋರ್ಥತಃ ।
ತ್ರಿವಿಧಃ ಸರ್ವಭೂತಾನಾಮಿತ್ಯೇಷ ಪ್ರತಿಸಂಚರಃ ॥ ೧೩೨ ॥

ಬ್ರಾಹ್ಮೋ ನೈಮಿತ್ತಿಕಸ್ತಸ್ಯ ಕಲ್ಪದಾಹಃ ಪ್ರಸಂಯಮಃ ।
ಪ್ರತಿಸರ್ಗೇ ತು ಭೂತಾನಾಂ ಪ್ರಾಕೃತಃ ಕರಣಕ್ಷಯಃ ॥ ೧೩೩ ॥

ಜ್ಞಾನಾಚ್ಚಾತ್ಯಂತಿಕಃ ಪ್ರೋಕ್ತಃ ಕಾರಣಾನಾಮಸಂಭವಃ ।
ತತಃ ಸಂಹೃತ್ಯ ತಾನ್ ಬ್ರಹ್ಮಾ ದೇವಾಂಸ್ತ್ರೈಲೋಕ್ಯವಾಸಿನಃ ॥ ೧೩೪ ॥

ಅಹರಂತೇ ಪ್ರಕುರತೇ ಸರ್ಗಸ್ಯ ಪ್ರಲಯಂ ಪುನಃ ।
ಸುಷುಪ್ಸುರ್ಭಗವಾನ್ ಬ್ರಹ್ಮಾ ಪ್ರಜಾಃ ಸಂಹರತೇ ತದಾ ॥ ೧೩೫ ॥

ತತೋ ಯುಗಸಹಸ್ರಾಂತೇ ಸಂಪ್ರಾಪ್ತೇ ಚ ಯುಗಕ್ಷಯೇ ।
ತತ್ರಾತ್ಮಸ್ಥಾಃ ಪ್ರಜಾಃ ಕರ್ತುಂ ಪ್ರಪೇದೇ ಸ ಪ್ರಜಾಪತಿಃ ॥ ೧೩೬ ॥

---

೧೩೨. ಸರ್ವಪ್ರಾಣಿಗಳ ಸೃಷ್ಟಿಕ್ರಮವು ನೈಮಿತ್ತಿಕ ಪ್ರಾಕೃತಿಕ ಆತ್ಯಂತಿಕ ವೆಂಬುದಾಗಿ ಮೂರು ವಿಧವಾಗಿದೆ. ಹೀಗೆ ಸರ್ವಭೂತಗಳೂ ಈ ಮೂರು ವಿಧವಾದ ಸೃಷ್ಟಿಯಲ್ಲಿಯೇ ಸೇರಿರುತ್ತವೆಯೆಂದು ಮಹಾತ್ಮರು ಹೇಳುವರು.

೧೩೩-೧೩೪. ಅನಂತರ ಬ್ರಹ್ಮದೇವನು ಕಲ್ಪಾದಿಯಲ್ಲಿ ಮಾಡುವ ಸೃಷ್ಟಿಗೆ ನೈಮಿತ್ತಿಕ ಸೃಷ್ಟಿಯೆಂದೂ, ಪ್ರಕೃತ್ಯಾದಿಗಳಿಂದಾಗುವ ಭೂತಾದಿಸೃಷ್ಟಿಗೆ ಪ್ರಾಕೃತ ಸೃಷ್ಟಿಯೆಂದೂ, ಕಾರಣಗಳಲ್ಲದೇ ಜ್ಞಾನದಿಂದಾಗುವ ಸಂಕಲ್ಪಮಾತ್ರದಿಂದಾಗುವ ಸೃಷ್ಟಿಗೆ ಆತ್ಯಂತಿಕ ಸೃಷ್ಟಿಯೆಂದೂ ನಾಮಗಳು ಸಂಭವಿಸಿರುತ್ತವೆ. ಪುನಃ ಪ್ರಲಯ ಕಾಲದಲ್ಲಿ ಬ್ರಹ್ಮನು ತ್ರೈಲೋಕ್ಯವಾಸಿಗಳಾದ ದೇವಾದಿಗಳನ್ನು ಸಂಹಾರ ಮಾಡುವನು.

೧೩೫. ಹೀಗೆ ಬ್ರಹ್ಮದೇವನು ನಿದ್ರಿಸುವ ರಾತ್ರಿಯಲ್ಲಿ ಪ್ರಳಯವೂ, ಎಚ್ಚರ ವಾಗಿರುವ ಹಗಲಲ್ಲಿ ಸೃಷ್ಟಿಯೂ ಆಗುವವು. ಬ್ರಹ್ಮನು ಹಗಲಲ್ಲಿ ಸೃಷ್ಟಿಯನ್ನೂ ರಾತ್ರಿಯಲ್ಲಿ ಲಯವನ್ನೂ ಮಾಡುವನು.

೧೩೬. ಅನಂತರ ಬ್ರಹ್ಮದೇವನು ತನಗೆ ಒಂದುಸಾವಿರ ವರ್ಷಗಳಾದ ತರು ವಾಯ ಮಹಾಪ್ರಲಯದಲ್ಲಿ, ಪ್ರಜೆಗಳನ್ನು ಸ್ಥಾಪಿಸಲು ಪ್ರಯತ್ನಮಾಡುವನು. ಅದೇ ಮಹಾಪ್ರಲಯವಾಗುವದು.

ತದಾ ಭವತ್ಯನಾವೃಷ್ಟಿಸ್ತದಾ ಸಾ ಶತವಾರ್ಷಿಕೀ ।
ತಥಾ ಯಾನ್ಯಲ್ಪಸಾರಾಣಿ ಸತ್ವಾನಿ ಪೃಥಿವೀತಲೇ ॥ ೧೩೭ ॥

ತಾನ್ಯೇವಾತ್ರ ಪ್ರಲೀಯಂತೇ ಭೂಮಿತ್ವಮುಪಯಾಂತಿ ಚ ।
ಸಪ್ತರಶ್ಮಿರಥೋ ಭೂತ್ವಾ ಹ್ಯುದತಿಷ್ಠದ್ವಿಭಾವಸುಃ ॥ ೧೩೮ ॥

ಅಸಹ್ಯರಶ್ಮಿರ್ಭಗವಾನ್ ಪಿಬನ್ನಂಭೋ ಗಭಸ್ತಿಭಿಃ ।
ಹರಿತಾ ರಶ್ಮಯಸ್ತಸ್ಯ ದೀಪ್ಯಮಾನಾಸ್ತು ಸಪ್ತಭಿಃ ॥ ೧೩೯ ॥

ಭೂಯ ಏವ ವಿವರ್ತಂತೇ ವ್ಯಾಪ್ನುವಂತೋ ವನಂ ಶನೈಃ ।
ಭೌಮಂ ಕಾಷ್ಠಂ ಧನಂ ತೇಜೋ ಭೃಶಮುದ್ಭಿಸ್ತು ದೀಪ್ಯತೇ ॥ ೧೪೦ ॥

ತಸ್ಮಾದುದಕಂ ಸೂರ್ಯಸ್ಯ ತಪತೋಽತಿ ಹಿ ಕಥ್ಯತೇ ।
ನಾವೃಷ್ಟ್ಯಾ ತಪತೇ ಸೂರ್ಯೋ ನಾವೃಷ್ಟ್ಯಾ ಪರಿವಿಷ್ಯತೇ ॥ ೧೪೧ ॥

---

೧೩೭. ಅಂತಹ ಮಹಾ ಪ್ರಳಯಕಾಲದಲ್ಲಿ ನೂರಾರು ವರ್ಷಗಳು ಅನಾವೃಷ್ಟಿಯಾಗಿರುವುವು. ಆಗ ಅಲ್ಪಶಕ್ತಿಯುಳ್ಳ ಭೂತಗಳೆಲ್ಲವೂ ನಾಶವಾಗಿ ಭೂಗತವಾಗುವುವು. ಪ್ರಕೃತಿಗಳಲ್ಲಿ ಲೀನಗಳಾಗುವುವು.

೧೩೮. ಆಗ ಪ್ರಾಣಿಗಳೆಲ್ಲವೂ ತಮ್ಮ ತಮ್ಮ ಪ್ರಕೃತಿಗಳಲ್ಲಿ ಲಯವಾಗುವುವು. ಆಗ ಸೂರ್ಯದೇವನು ತನ್ನ ಸಪ್ತಾಶ್ವಗಳಿಂದಲಂಕೃತವಾದ ರಥಾರೂಢನಾಗಿ ಹೊಳೆಯುವನು.

೧೩೯. ಆಗ ಪೂಜ್ಯನಾದ ಸೂರ್ಯದೇವನು ಭಯಂಕರಗಳಾದ ತನ್ನ ಕಿರಣಗಳಿಂದ ಜಲವನ್ನು ಸ್ವೀಕರಿಸುತ್ತಾ ಬರುವನು. ಆಗ ಅವನ ರಶ್ಮಿಗಳು, ಅಶ್ವಗಳು ಹಸುರಾಗಿಯೂ, ಪ್ರಕಾಶಮಾನವಾಗಿಯೂ ಇರುವುವು.

೧೪೦. ಆಗ ಸೂರ್ಯದೇವನು ಕ್ರಮವಾಗಿ ದೇದೀಪ್ಯಮಾನಗಳಾದ ತನ್ನ ರಶ್ಮಿಗಳಿಂದ ಭೂಮಿ, ವನ, ಧನ, ಜಲ ಇವೇ ಮೊದಲಾದುವುಗಳನ್ನು ಪ್ರಲಯಾಗ್ನಿಯ ಮೂಲಕ ದಹಿಸಲಿಚ್ಛಿಸುವನು.

೧೪೧. ಆದುದರಿಂದ ಹೀಗೆ ಪ್ರಜ್ವಲಿಸುವ ಸೂರ್ಯನಿಂದ ಜಲವು ಕುದಿಯುವುದು. ಅನಾವೃಷ್ಟಿಯಿಂದ ಸೂರ್ಯನು ತಪಿಸುವದೂ ಇಲ್ಲ. ಬೇರೆ ವೇಷಾದಿಗಳನ್ನೂ ಹೊಂದುವುದಿಲ್ಲ.

**ನಾವೃಷ್ಟ್ಯಾ ಪರಿಚಿನ್ವಂತಿ ವಾರಿಣಾ ದೀಪ್ಯತೇ ರವಿಃ ।**
**ತಸ್ಮಾದಪಃ ಪಿಬನ್ ಯಾ ವೈ ದೀಪ್ಯತೇ ರವಿರಂಬರೇ ॥ ೧೪೨ ॥**

**ತಸ್ಯ ತೇ ರಶ್ಮಯಃ ಸಪ್ತ ಪಿಬಂತ್ಯಂಭೋ ಮಹಾರ್ಣವಾತ್ ।**
**ತೇನಾಹಾರೇಣ ಸಂದೀಪ್ತಾಃ ಸೂರ್ಯಾಃ ಸಪ್ತ ಭವತ್ಯುತ ॥ ೧೪೩ ॥**

**ತತಸ್ತೇ ರಶ್ಮಯಃ ಸಪ್ತ ಸೂರ್ಯಾಭೂತಾಶ್ಚತುರ್ದಿಶಂ ।**
**ಚತುರ್ಲೋಕಮಿಮಂ ಸರ್ವಂ ದಹಂತಿ ಶಿಖಿನಸ್ತದಾ ॥ ೧೪೪ ॥**

**ಪ್ರಾಪ್ನುವಂತಿ ಚ ಭಾಭಿಸ್ತು ಹ್ಯೂರ್ಧ್ವಂ ಚಾಧಶ್ಚ ರಶ್ಮಿಭಿಃ ।**
**ದೀಪ್ಯಂತೇ ಭಾಸ್ಕರಾಃ ಸಪ್ತ ಯುಗಾಂತಾಗ್ನಿಃ ಪ್ರತಾಪಿನಃ ॥ ೧೪೫ ॥**

**ತೇ ವಾರಿಣಾ ಚ ಸಂದೀಪ್ತಾ ಬಹುಸಾಹಸ್ರರಶ್ಮಯಃ ।**
**ಖಂ ಸಮಾವೃತ್ಯ ತಿಷ್ಠಂತಿ ನಿರ್ದಹಂತೋ ವಸುಂಧರಾಂ ॥ ೧೪೬ ॥**

---

೧೪೨. ಅನಾವೃಷ್ಟಿಯಿಂದ ಸೂರ್ಯನು ವೃದ್ಧಿಯಾಗದೇ ತಪ್ತವಾದ ಉದಕದಿಂದ ಜ್ವಲಿಸುವನು. ಅಂತಹ ಉದಕಪಾನದಿಂದ ಸೂರ್ಯನು ಆಕಾಶದಲ್ಲಿ ಪ್ರಕಾಶಿಸುವನು.

೧೪೩. ಸೂರ್ಯದೇವನ ಸಪ್ತಕಿರಣಗಳೂ ಮಹಾಸಮುದ್ರದಿಂದ ಪ್ರಲಯೋದಕವನ್ನು ಸ್ವೀಕರಿಸುತ್ತವೆ. ಆ ಆಹಾರದಿಂದ ದೀಪ್ತವಾದ, ಸಪ್ತವಾದ ಕಿರಣಗಳೂ ಸಪ್ತಸೂರ್ಯಗಳಾಗುತ್ತವೆ.

೧೪೪. ಅನಂತರ-ಸಪ್ತಕಿರಣಗಳೂ ಏಳು ಸೂರ್ಯಗಳಾಗಿ ನಾಲ್ಕು ದಿಕ್ಕುಗಳಲ್ಲಿಯೂ ತನ್ನ ಅಗ್ನಿಜ್ವಾಲೆಗಳಿಂದ ನಾಲ್ಕು ಲೋಕಗಳನ್ನೂ ದಹಿಸುವುವು.

೧೪೫. ಆ ಬಳಿಕ ಸಪ್ತಸೂರ್ಯರೂ ತಮ್ಮ ಜಾಜ್ವಲ್ಯಮಾನಕಿರಣಗಳಿಂದ ಪ್ರಳಯಾಗ್ನಿಯನ್ನು ಸುರಿಸುತ್ತಾ ಅತಿಭಯಂಕರವಾದ ಕಾಂತಿಯಿಂದ ಕೂಡಿ ಕೆಳಗೂ ಮೇಲೆಯೂ ಸರ್ವದಿಕ್ಕುಗಳಲ್ಲಿಯೂ ವ್ಯಾಪಿಸಿ ಭೂಲೋಕ, ಭುವರ್ಲೋಕ, ಸ್ವರ್ಗಲೋಕಾದಿಗಳನ್ನೂ ದಹಿಸಿವುವು.

೧೪೬. ಆ ಸಪ್ತಸೂರ್ಯರು ಕಿರಣಗಳೂ ಕುದಿಯುವ ಜಲದಿಂದ ದೀಪ್ತವಾಗಿ ಅನೇಕ ಸಹಸ್ರರಶ್ಮಿಗಳಾಗಿ ಆಕಾಶವನ್ನು ಆವರಿಸಿ ಭೂಮಂಡಲವನ್ನು ದಹಿಸುವುವು.

ತತಸ್ತೇಷಾಂ ಪ್ರತಾಪೇನ ದಹ್ಯಮಾನಾ ವಸುಂಧರಾ ।
ಸಾದ್ರಿನದ್ಯರ್ಣವಾ ಪೃಥ್ವೀ ವಿಸ್ನೇಹಾ ಸಮಪದ್ಯತ ॥ ೧೪೭ ॥

ದೀಪ್ತಾಭಿಃ ಸಂತತಾಭಿಶ್ಚ ಚಿತ್ರಾಭಿಶ್ಚ ಸಮಂತತಃ ।
ಅಧಶ್ಚೋರ್ಧ್ವಶ್ಚ ತಿರ್ಯಕ್ ಚ ಸಂರುದ್ಧಂ ಸೂರ್ಯರಶ್ಮಿಭಿಃ ॥ ೧೪೮ ॥

ಸೂರ್ಯಾಗ್ನೀನಾಂ ಪ್ರವೃದ್ಧಾನಾಂ ಸಂಸ್ಪೃಷ್ಟಾನಾಂ ಪರಸ್ಪರಂ ।
ಏಕತ್ವಮುಪಯಾತಾನಾಮೇಕಜ್ವಾಲಂ ಭವತ್ಯುತ ॥ ೧೪೯ ॥

ಸರ್ವಲೋಕಪ್ರಣಾಶಂಚ ಸೋಗ್ನಿರ್ಭೂತ್ವಾ ತು ಮಂಡಲೀ ।
ಚತುರ್ಲೋಕಮಿದಂ ಸರ್ವಂ ನಿರ್ದಹತ್ಯಾಶು ತೇಜಸಾ ॥ ೧೫೦ ॥

ತತಃ ಪ್ರಲೀಯತೇ ಸರ್ವಂ ಜಂಗಮಂ ಸ್ಥಾವರಂ ತದಾ ।
ನಿವೃಕ್ಷಾ ವಿಸ್ತೃಣಾ ಭೂಮಿಃ ಕೂರ್ಮಪೃಷ್ಠಸಮಾ ಭವೇತ್ ॥ ೧೫೧ ॥

---

೧೪೭. ತರುವಾಯ ಸಹಸ್ರರಶ್ಮಿಗಳಿಂದ ಸುಡಲ್ಪಟ್ಟ ಭೂಮಂಡಲವು ನದೀ, ಪರ್ವತ, ಅರಣ್ಯ, ಸಮುದ್ರ ಇವುಗಳಿಂದ ಕೂಡಿ ನಿಸ್ಸಾರವಾಗಿ ಒಣಗಿ ಹೋಗುವುದು.

೧೪೮. ಅನಂತರ ಪ್ರಳಯಕಾಲದ ಸಹಸ್ರಾರು ಸೂರ್ಯರ ಅಸಂಖ್ಯಾತವಾದ ಕಿರಣಗಳು ಪ್ರಜ್ವಲಿಸುತ್ತಲೂ ನಿರಂತರವಾಗಿ ದಹಿಸುತ್ತಲೂ ಸರ್ವತ್ರದಲ್ಲಿಯೂ ವಿಚಿತ್ರವಾಗಿ ಕಾಣುತ್ತಲೂ ಲೋಕಗಳನ್ನೇ ದಹಿಸುತ್ತಲೂ ಕೆಳಗು ಮೇಗೂ ಹೊರಗೂ ಸುತ್ತಲೂ ವ್ಯಾಪಿಸಿ ದಹಿಸಿವುವು.

೧೪೯. ಹೀಗೆ ಸರ್ವತ್ರವ್ಯಾಪ್ತವಾದ ಸೂರ್ಯಕಿರಣಗಳು ವೃದ್ಧಿಯನ್ನು ಹೊಂದಿ ಪರಸ್ಪರ ಸಂಬಂಧವಾಗಿ ಏಕೀಭವಿಸಿ ಅಖಂಡವಾಗಿ ಪ್ರಜ್ವಲಿಸುವುವು.

೧೫೦. ಕರಾಳವಾದ ಆ ಪ್ರಳಯಾಗ್ನಿಯು ಮಂಡಲಾಕಾರವೂ ಸರ್ವಲೋಕ ನಾಶಕವೂ, ಅತಿಭಯಂಕರವೂ ಆಗಿ ತನ್ನ ದಿವ್ಯತೇಜಸ್ಸುಗಳಿಂದ ಈ ನಾಲ್ಕು ಲೋಕಗಳನ್ನೂ ಅತಿ ಜಾಗ್ರತೆಯಾಗಿ ಸುಟ್ಟು ಭಸ್ಮಮಾಡುವುದು.

೧೫೧. ಅನಂತರ ಸ್ಥಾವರ ಜಂಗಮಾತ್ಮಕವಾದ ಭೂಮಂಡಲವೆಲ್ಲವೂ ಲಯವಾಗಲೂ ಭೂಮಂಡಲದಲ್ಲಿ ವೃಕ್ಷಗಳು, ತೃಣಗಳು ಲತಾಕುಂಜಾದಿಗಳು ಇವುಗಳಿಲ್ಲದೇ ಆಮೆಯ ಬೆನ್ನಿನಂತೆ ಸಮವಾಗುವುದು.

ಅಂಬರೀಷಮಿವಾಭಾತಿ ಸರ್ವಂ ಮಾರಿಷಿತಂ ಜಗತ್ ।
ಸರ್ವಮೇವ ತದಾರ್ಚಿರ್ಭಿಃ ಪೂರ್ಣಂ ಜಜ್ವಾಲ್ಯತೇ ನಭಃ ॥ ೧೫೨ ॥

ಪಾತಾಲೇ ಯಾನಿ ಭೂತಾನಿ ಮಹೋದಧಿಗತಾನಿ ಚ ।
ತತಸ್ತಾನಿ ಪ್ರಲೀಯಂತೇ ಭೂಮಿತ್ವಮುಪಯಾಂತಿ ಚ ॥ ೧೫೩ ॥

ದ್ವೀಪಾಶ್ಚ ಪರ್ವತಾಶ್ಚೈವ ವರ್ಷಾಣ್ಯಥ ಮಹೋದಧಿಃ ।
ಸರ್ವಂ ತದ್ಭಸ್ಮಸಾಚ್ಚಕ್ರೇ ಸರ್ವಾತ್ಮಾ ಪಾವಕಸ್ತು ಸಃ ॥ ೧೫೪ ॥

ಸಮುದ್ರೇಭ್ಯೋ ನದೀಭ್ಯಶ್ಚ ಪಾತಾಲೇಭ್ಯಶ್ಚ ಸರ್ವತಃ ।
ಪಿಬನ್ನಪಃ ಸಮಿದ್ಧೋಗ್ನಿಃ ಪೃಥಿವೀಮಾಶ್ರಿತೋ ಜ್ವಲನ್ ॥ ೧೫೫ ॥

ತತಃ ಸಂವರ್ತಕಃ ಶೈಲಾನತಿಕ್ರಮ್ಯ ಮಹಾಂಸ್ತಥಾ ।
ಲೋಕಾನ್ ಸಂಹರತೇ ದೀಪ್ತೋ ಘೋರಃ ಸಂವರ್ತಕೋಽನಲಃ ॥ ೧೫೬ ॥

---

೧೫೨. ಜಾಜ್ವಲ್ಯಮಾನವಾಗಿ ಉರಿಯುತ್ತಿರುವ ಜಗತ್ತೆಲ್ಲಾ ಕಾದಿರುವ ಬಾಣ್ಲೆಯಂತೆ ತೇಜೋಮಯವಾಗುವುದು. ಭೂಮಿ, ಆಕಾಶ, ಅಂತರಿಕ್ಷ ಇವೆಲ್ಲಾ ಸೂರ್ಯಕಿರಣಗಳಿಂದ ವ್ಯಾಪ್ತವಾಗಿ ಪ್ರಜ್ವಲಿಸುವುವು.

೧೫೩. ಆ ಪ್ರಲಯಕಾಲದಲ್ಲಿ ಅಗ್ನಿಯು ಎಲ್ಲವನ್ನೂ ದಹಿಸುವುದು. ಆಗ ಪಾತಾಳ ಸಮುದ್ರ ಇವುಗಳಲ್ಲಿರುವ ಪ್ರಾಣಿಗಳೆಲ್ಲಾ ಭೂಮಿಗೆ ಬಂದು ಲಯವಾಗುವುವು.

೧೫೪. ಆಗ ಪ್ರಲಯಾಗ್ನಿಯು, ವ್ಯಾಪ್ತವಾಗಿ ದ್ವೀಪಗಳು, ಸಮುದ್ರಗಳು, ಪರ್ವತಗಳು, ದೇಶಗಳು, ವನಗಳು ಇವೇಮೊದಲಾದ ಸರ್ವವನ್ನೂ ಸುಟ್ಟು ಭಸ್ಮಮಾಡುವುದು.

೧೫೫. ಆ ಪ್ರಲಯಾಗ್ನಿಯು ಸಮುದ್ರ, ನದಿ, ಪಾತಾಳ ಇವುಗಳಿಂದ ಜಲವನ್ನು ಪಾನಮಾಡಿ ಅಭಿವೃದ್ಧವಾಗಿ ಭೂಮಂಡಲವನ್ನು ಆವರಿಸಿಕೊಂಡು ಅಖಂಡವಾಗಿ ಪ್ರಜ್ವಲಿಸುವುದು.

೧೫೬. ಅನಂತರ ಪ್ರಲಯಾಗ್ನಿಯು ಅತಿಘೋರವಾಗಿ ಜ್ವಲಿಸುತ್ತಾ ಪರ್ವತಗಳನ್ನೂ ಆಕ್ರಮಿಸಿ ಮಹಾವತಾರವನ್ನು ಪಡೆದು ಜ್ವಲಿಸುತ್ತಾ ಲೋಕಗಳನ್ನು ಆಕ್ರಮಿಸಿ ದಹಿಸುವುದು.

ತತಃ ಸ ಪೃಥಿವೀಂ ಭಿತ್ವಾ ರಸಾತಲಮಶೋಷಯತ್ ।
ನಿರ್ದಹ್ಯ ತಾಂಸ್ತು ಪಾತಾಲಾನ್ನಾಗಲೋಕಮಥಾದಹತ್ ॥ ೧೫೭ ॥

ಅಧಸ್ತಾತ್ ಪೃಥಿವೀಂ ದಗ್ಧ್ವಾ ಹ್ಯೂರ್ಧ್ವಂ ಸ ದಹತೇ ದಿವಂ ।
ಯೋಜನಾನಾಂ ಸಹಸ್ರಾಣಿ ಹ್ಯಯುತಾನ್ಯರ್ಬುದಾನಿ ಚ ॥ ೧೫೮ ॥

ಉದತಿಷ್ಠಚ್ಛಿಖಾಸ್ತಸ್ಯ ಬಹ್ನೇಃ ಸಂವರ್ತಕಸ್ಯ ತು ।
ಗಂಧರ್ವಾಂಶ್ಚ ಪಿಶಾಂಚಾಂಶ್ಚ ಸಮಹೋರಗರಾಕ್ಷಸಾನ್ ।
ತದಾ ದಬಿತಿ ಸಂದೀಪ್ತೋ ಗೋಲಕಂ ಚೈವ ಸರ್ವಶಃ ॥ ೧೫೯ ॥

ಭೂರ್ಲೋಕಂತು ಭುವರ್ಲೋಕಂ ಸ್ವರ್ಲೋಕಂಚ ಮಹಸ್ತಥಾ ।
ಘೋರಂ ದಹತಿ ಕಾಲಾಗ್ನಿರೇವಂ ಲೋಕಚತುಷ್ಟಯಂ ॥ ೧೬೦ ॥

---

೧೫೭. ತರುವಾಯ ಆ ಪ್ರಳಯಾಗ್ನಿಯು ಭೂಮಿಯನ್ನು ಭೇದಿಸಿ ಪಾತಾಳ ಲೋಕವನ್ನು ಪ್ರವೇಶಿಸಿ ಅದನ್ನೂ ಸುಡುವುದು. ಅನಂತರ ಆ ಪಾತಾಳವನ್ನು ಸುಟ್ಟು ನಾಗಲೋಕವನ್ನು ದಹಿಸುವುದು.

೧೫೮. ಹೀಗೆ ಅಗ್ನಿಯು ಕೆಳಗಿನ ಲೋಕಗಳನ್ನು ಸುಟ್ಟು ತರುವಾಯ ಭೂಮಂಡಲವನ್ನು ದಹಿಸಿ ಸ್ವರ್ಗವನ್ನೂ ಆವರಿಸುವುದು. ಪ್ರಳಯಾಗ್ನಿಯ ಜ್ವಾಲೆಗಳು ಸಾವಿರ ಹತ್ತುಸಾವಿರ ಅರ್ಬುದ ಯೋಜನಗಳಷ್ಟು ವ್ಯಾಪಿಸುವುವು.

೧೫೯. ಆ ಪ್ರಳಯಕಾಲದ ಅಗ್ನಿಯಿಂದ ಉಂಟಾದ ಘೋರವಾದ ಜ್ವಾಲೆಗಳು ಅನೇಕ ರೂಪಗಳಾಗಿ ಗಂಧರ್ವರು, ಪಿಶಾಚಿಗಳು, ಮಹಾಸರ್ಪಗಳು, ರಾಕ್ಷಸರು ಇವರೇ ಮೊದಲಾದ ಸರ್ವವನ್ನೂ ದಹಿಸಿ ಭೂಗೋಳವನ್ನೂ ಭಸ್ಮಮಾಡುವುದು.

೧೬೦. ಈ ರೀತಿಯಲ್ಲಿ ಪ್ರಲಯಾಗ್ನಿಯು ಸರ್ವತ್ರವ್ಯಾಪ್ತವಾಗಿ ಘೋರ ರೂಪವನ್ನು ಹೊಂದಿ ಭಯಂಕರವಾದ ಜ್ವಾಲೆಗಳಿಂದ ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕವೆಂಬ ಈ ನಾಲ್ಕು ಲೋಕಗಳನ್ನು ಸುಟ್ಟು ಭಸ್ಮ ಮಾಡುವುದು.

**ವ್ಯಾಪ್ತೇಷು ತೇಷು ಲೋಕೇಷು ತಿರ್ಯಗೂರ್ಧ್ವಮಥಾಗ್ನಿನಾ ।**
**ತತ್ತೇಜಃ ಸಮನುಪ್ರಾಪ್ತಂ ಕೃತ್ಸ್ನಂ ಜಗದಿದಂ ಶನೈಃ ।**
**ಅಯೋಗುಡನಿಭಂ ಸರ್ವಂ ತದಾ ಹ್ಯೇವಂ ಪ್ರಕಾಶತೇ ॥ ೧೬೧ ॥**

**ತತೋ ಗಜಕುಲಾಕಾರಾಸ್ತಡಿದ್ಭಿಃ ಸಮಲಂಕೃತಾಃ ।**
**ಉತ್ತಿಷ್ಠಂತಿ ತದಾ ಘೋರಾ ವ್ಯೋಮ್ನಿ ಸಂವರ್ತಕಾ ಘನಾಃ ॥ ೧೬೨ ॥**

**ಕೇಚಿನ್ನೀಲೋತ್ಪಲಶ್ಯಾಮಾಃ ಕೇಚಿತ್ಕುಮುದಸನ್ನಿಭಾಃ ।**
**ಕೇಚಿದ್ವೈಡೂರ್ಯಸಂಕಾಶಾ ಇಂದ್ರನೀಲನಿಭಾಃ ಪರೇ ॥ ೧೬೩ ॥**

**ಶಂಖಕುಂದನಿಭಾಶ್ಚಾನ್ಯೇ ಜಾತ್ಯಂಜನನಿಭಾಸ್ತಥಾ ।**
**ಧೂಮ್ರವರ್ಣಾ ಘನಾಃ ಕೇಚಿತ್ಕೇಚಿತ್ಪೀತಾಃ ಪಯೋಧರಾಃ ॥ ೧೬೪ ॥**

**ಕೇಚಿದ್ರಾಸಭವರ್ಣಾಭಾ ಲಾಕ್ಷಾರಕ್ತನಿಭಾಸ್ತಥಾ ।**
**ಮನಃಶಿಲಾಭಾಸ್ತ್ವಪರೇ ಕಪೋತಾಭಾಸ್ತಥಾಂಬುದಾಃ ॥ ೧೬೫ ॥**

---

೧೬೧. ಅನಂತರ ಈ ಪ್ರಳಯಾಗ್ನಿಯು ಕ್ರಮೇಣ ಕೆಳಗೆ ಮೇಗು ಮಧ್ಯಗತವೂ ಆದ ನಾಲ್ಕು ಲೋಕಗಳನ್ನೂ ವ್ಯಾಪಿಸಲಾಗಿ ಭೂಗೋಳವು ಅಗ್ನಿಯಿಂದ ಕಾಯಿಸಲ್ಪಟ್ಟು ಚೆನ್ನಾಗಿ ಕಾಯಿಸಲ್ಪಟ್ಟ ಕಬ್ಬಿಣದ ಗುಂಡಿನಂತೆ ಹೊಳೆಯುವುದು.

೧೬೨. ಅನಂತರ ಗಜಗಳ ತಂಡದಂತೆ ಕಪ್ಪಾಗಿರುವ ಪ್ರಲಯಕಾಲದ ಸಂವರ್ತನಾಮಕವಾದ ಮೇಘಗಳು ಮಿಂಚು ಗುಡುಗುಗಳಿಂದ ಕೂಡಿ ಆಕಾಶದಲ್ಲಿ ಹರಡುವುವು.

೧೬೩–೧೬೬. ಆ ಪ್ರಲಯಕಾಲದ ಮೇಘಗಳಲ್ಲಿ ಕೆಲವು ನೈದಲೆ ಪುಷ್ಪದಂತೆ ಕಪ್ಪಾಗಿಯೂ, ಮತ್ತೆ ಕೆಲವು ಕುಮುದಕುಸುಮದಂತೆ ಬಿಳುಪಾಗಿಯೂ, ಇನ್ನು ಕೆಲವು ವೈಡೂರ್ಯಮಣಿಯಂತೆ ಶುಭ್ರವಾಗಿಯೂ, ಕೆಲವು ಇಂದ್ರನೀಲಮಣಿಯಂತೆ ಪ್ರಕಾಶಮಾನವಾಗಿಯೂ, ಕೆಲವು ಶಂಖಕುಂದಪುಷ್ಪಗಳಂತೆ ಶುಭ್ರವಾಗಿಯೂ, ಕೆಲವು ಕಾಡಿಗೆಯಂತೆ ಅತಿಕಪ್ಪಾಗಿಯೂ, ಕೆಲವು ಮೋಡಗಳು ಧೂಮ್ರವರ್ಣವಾಗಿಯೂ, ಕೆಲವು ಮೇಘಗಳು ಹೊಂಬಣ್ಣವಾಗಿಯೂ, ಕೆಲವು ಪಯೋಧರಗಳು ಕತ್ತೆಗಳು ಇವುಗಳಂತೆ ಬೂದುಬಣ್ಣವುಳ್ಳವುಗಳಾಗಿಯೂ, ಕೆಲವು ಜಲಧರಗಳು ಲಾಕ್ಷಾರಸದಂತೆ ಕೆಂಪಾಗಿಯೂ, ಕೆಲವು ವಾರಿಧಾರಿಗಳು ಮನಶ್ಶಿಲೆಯಂತೆ ಹಳದಿಯು

ಇಂದ್ರಗೋಪನಿಭಾಃ ಕೇಚಿದುತ್ತಿಷ್ಠಂತಿ ಘನಾದಿವಿ ।
ಕೇಚಿತ್ಪುರಧರಾಕಾರಾಃ ಕೇಚಿದ್ಗಜಕುಲೋಪಮಾಃ ॥ ೧೬೬ ॥

ಕೇಚಿತ್ಪರ್ವತಸಂಕಾಶಾಃ ಕೇಚಿಸ್ಥಲನಿಬಾ ಘನಾಃ ।
ಕುಂಡಾಗಾರನಿಭಾಃ ಕೇಚಿತ್ಕೇಚಿನ್ಮೀನಕುಲೋಪಮಾಃ ॥ ೧೬೭ ॥

ಬಹುರೂಪಾ ಘೋರರೂಪಾ ಘೋರಸ್ವರನಿನಾದಿನಃ ।
ತದಾ ಜಲಧರಾಃ ಸರ್ವೇ ಪೂರಯಂತಿ ನಭಃ ಸ್ಥಲಂ ॥ ೧೬೮ ॥

ತತಸ್ತೇ ಜಲದಾ ಘೋರಾ ನವೀನಾ ಭಾಸ್ಕರಾತ್ಮಿಕಾಃ ।
ಸಪ್ತಧಾ ಸಂವೃತಾತ್ಮಾನಸ್ತಮಗ್ನಿಂ ಶಮಯಂತ್ಯುತ ॥ ೧೬೯ ॥

ತತಸ್ತೇ ಜಲದಾ ವರ್ಷಂ ಮುಂಚಂತಿ ಚ ಮಹೋದ್ಯಮಂ ।
ಸುಘೋರಮಶಿವಂ ಸರ್ವಂ ನಾಶಯಂತಿ ಚ ಪಾವಕಂ ॥ ೧೭೦ ॥

---

ಬಣ್ಣವಾಗಿಯೂ, ಕೆಲವು ಪಾರಿವಾಳಗಳಂತೆ ಕಂದುಬಣ್ಣವಾಗಿಯೂ, ಕೆಲವು ಮಿಂಚಿನ ಹುಳುಗಳಂತೆ ಬಿಳುಪಾಗಿಯೂ ಇರುವವು ಈ ಮೇಘತಂಡಗಳು ಆಕಾಶದಲ್ಲಿ ಉತ್ಪನ್ನವಾಗುವುವು. ಕೆಲವು ನಗರಾಕಾರವಾಗಿಯೂ, ಕೆಲವು ಗಜಕುಲಾಕಾರವಾಗಿಯೂ ಇರುತ್ತವೆ.

೧೬೭. ಅವುಗಳಲ್ಲಿ ಕೆಲವು ಮೋಡಗಳು ಪರ್ವತಾಕಾರವಾಗಿಯೂ, ಕೆಲವು ಭೂಗೋಳದಂತೆ ದುಂಡಾಗಿಯೂ, ಅಲವು ಕುಂಡಾಕಾರವಾಗಿಯೂ, ಕೆಲವು ಮೀನಿನ ಗುಂಪಿನಂತೆ ಆಕಾರವುಳ್ಳವುಗಳಾಗಿಯೂ ಇರುತ್ತವೆಯೆಂದು ತಿಳಿಯಬೇಕು.

೧೬೮. ಪ್ರಲಯಕಾಲದ ಮೇಘಗಳು ಘೋರರೂಪವಾಗಿಯೂ, ಭಯಂಕರಗಳಾದ ಕಾಂತಿ, ಧ್ವನಿಗಳುಳ್ಳವುಗಳಾಗಿಯೂ ಇದ್ದುಕೊಂಡು ಆಕಾಶದಲ್ಲಿ ವ್ಯಾಪ್ತವಾಗುತ್ತವೆ.

೧೬೯. ತರುವಾಯ ಆ ಮೇಘಗಳು ನವೀನವಾದ ಸೂರ್ಯನಂತೆ ಪ್ರಕಾಶಿಸುತ್ತಾ ಏಳು ವಿಧಗಳಾಗಿ ಆ ಸಪ್ತವಿಧವಾದ ಪ್ರಳಯಾಗ್ನಿಗಳನ್ನು ಶಮನಮಾಡುವುವು.

೧೭೦. ಅನಂತರ ಆ ಪ್ರಲಯಕಾಲದ ಮೋಡಗಳು ಮಹಾಪ್ರಯತ್ನಪೂರ್ವಕವಾಗಿಯೂ, ಭಯಂಕರವಾಗಿಯೂ ಮಳೆಯನ್ನು ಕರೆದು ಘೋರರೂಪವೂ, ಅಮಂಗಳವೂ ಆದ ಪ್ರಲಯಾಗ್ನಿಯನ್ನು ಶಮನಮಾಡುವುವು.

ಪ್ರವೃಷ್ಟೈಶ್ಚ ತಥಾತ್ಯರ್ಥಂ ವಾರಿಭಿಃ ಪೂರ್ಯತೇ ಜಗತ್ ।
ಅದ್ಭಿಸ್ತೇಜೋಽಭಿಭೂತಂಚ ತದಾಗ್ನಿಃ ಪ್ರಾವಿಶತ್ಯಪಃ ॥ ೧೭೧ ॥

ನಷ್ಟೇ ಚಾಗ್ನೌ ವರ್ಷಶತೇ ಪಯೋದಾಃ ಪಾಕಸಂಭವಾಃ ।
ಪ್ಲಾವಯಂತಿ ಜಗತ್ಸರ್ವಂ ಬೃಹಜ್ಜಾಲಪರಿಸ್ರವೈಃ ॥ ೧೭೨ ॥

ಧಾರಾಭಿಃ ಪೂರಯಂತೀಮಂ ಚೋದ್ಯಮಾನಾಃ ಸ್ವಯಂಭುವಾ ।
ಅನ್ಯೇ ತು ಸಲಿಲೌಘೈಸ್ತು ವೇಲಾಮಭಿಭವಂತ್ಯಪಿ ।
ಸಾದ್ರಿದ್ವೀಪಾಂತರಂ ಪೃಥ್ವೀ ಹ್ಯದ್ಭಿಃ ಸಂಛಾದ್ಯತೇ ತದಾ ॥ ೧೭೩ ॥

ತಸ್ಯ ವೃಷ್ಟ್ಯಾ ಚ ತೋಯಂ ತತ್ಸರ್ವಂ ಹಿ ಪರಿಮಂಡಿತಂ ।
ಪ್ರವಿಶತ್ಯುದಧೌ ವಿಪ್ರಾಃ ಪೀತಂ ಸೂರ್ಯಸ್ಯ ರಶ್ಮಿಭಿಃ ॥ ೧೭೪ ॥

---

೧೭೧. ಹೀಗೆ ಪ್ರಲಯಕಾಲದ ಮೋಡಗಳು ಮಳೆಯನ್ನು ಸುರಿಸಲು ಆ ಜಲವು ಜಗತ್ತಿನಲ್ಲಿ ತುಂಬಿಹೋಗುವುದು. ಹೀಗೆ ಪ್ರಲಯಾಗ್ನಿಯು ಪ್ರಲಯೋದಕದಿಂದ ಶಾಂತವಾಗಿ ಆ ಜಲವನ್ನು ಪ್ರವೇಶಿಸುವುದು.

೧೭೨. ಹೀಗೆ ಪ್ರಲಯಕಾಲದ ಮೋಡಗಳು ಅಖಂಡವಾಗಿಯೂ, ಅವಿಚ್ಛಿನ್ನವಾಗಿಯೂ, ನೂರಾರು ವರ್ಷಗಳವರೆಗೂ ಮಳೆಯನ್ನು ಸುರಿಸಿ ಪ್ರಲಯಾಗ್ನಿಯನ್ನು ಶಾಂತಗೊಳಿಸುವುವು. ಹೀಗೆ ಅಖಂಡವಾಗಿ ಮಳೆಯನ್ನು ಧಾರಾಕಾರವಾಗಿ ಸುರಿಸಲು ಜಗತ್ತೆಲ್ಲವೂ ಆ ಪ್ರಲಯೋದಕದಲ್ಲಿ ಮುಳುಗಿ ತೇಲಾಡುವುದು.

೧೭೩. ಬ್ರಹ್ಮದೇವನಿಂದ ಪ್ರೇರಿತವಾದ ಮೇಘಗಳು ಜಲಧಾರೆಗಳಿಂದ ಈ ಭೂಮಂಡಲವನ್ನು ತುಂಬುತ್ತವೆ. ಇತರವಾದ ಮೇಘಗಳೂ ಸಹ ನೀರನ್ನು ಸುರಿಸಿ ಸಮುದ್ರಗಳನ್ನು ಎಲ್ಲೆ ಮೀರುವಂತೆ ಮಾಡುತ್ತವೆ. ತರುವಾಯ ಪರ್ವತಗಳು, ದ್ವೀಪಗಳು, ಇವುಗಳಿಂದ ಸಹಿತವಾದ ಭೂಮಂಡಲವು ಜಲದಲ್ಲಿ ಮುಳುಗಿ ಹೋಗುವುದು.

೧೭೪. ಎಲೈ ವಿಪ್ರೋತ್ತಮರೇ, ಪ್ರಲಯಕಾಲದ ಮೋಡಗಳು ಕರೆದ ಮಳೆಯ ಜಲವು ಜಗತ್ತನ್ನೇ ಆವರಿಸಿಕೊಂಡು, ಪ್ರಲಯಾಗ್ನಿಯಿಂದ ಶೋಷಿತವಾದ ಸಮುದ್ರವನ್ನು ತುಂಬಿ ತುಳುಕುವಂತೆ ಮಾಡುತ್ತವೆ.

**ಆದಿತ್ಯರಶ್ಮಿಭಿಃ ಪೀತಂ ಜಲಮಭ್ರೇಷು ತಿಷ್ಠತಿ ।**
**ಪುನಃ ಪತತಿ ತದ್ಭೂಮೌ ತೇನ ಪೂರ್ಯಂತಿ ಚಾರ್ಣವಾಃ ॥ ೧೭೫ ॥**

**ತತಃ ಸಮುದ್ರಾಃ ಸ್ವಾಂ ವೇಲಾಂ ಪರಿಕ್ರಾಮಂತಿ ಸರ್ವಶಃ ।**
**ಪರ್ವತಾಶ್ಚ ವಿಶೀರ್ಯಂತೇ ಮಹೀ ಚಾಪ್ಸು ನಿಮಜ್ಜತಿ ॥ ೧೭೬ ॥**

**ತತಸ್ತು ಸಹಸೋದ್ಭ್ರಾಂತಃ ಪಯೋದಾಂಸ್ತಾನ್ನಭಸ್ತಲೇ ।**
**ಸಂವೇಷ್ಟಯತಿ ಘೋರಾತ್ಮಾ ದಿವಿ ವಾಯುಃ ಸಮಂತತಃ ॥ ೧೭೭ ॥**

**ತಸ್ಮಿನ್ನೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ।**
**ಪೂರ್ಣೇ ಯುಗಸಹಸ್ರೇ ವೈ ನಿಃಶೇಷಃ ಕಲ್ಪ ಉಚ್ಯತೇ ॥ ೧೭೮ ॥**

---

೧೭೫. ಸೂರ್ಯನ ಕಿರಣಗಳು ಪಾನಮಾಡಿದ ಜಲವೆಲ್ಲವೂ ಮೋಡಗಳಲ್ಲಿರುತ್ತವೆ. ಆ ಉದಕವೇ ಸಮುದ್ರಗಳಲ್ಲಿ ಬಿದ್ದು ಸಮುದ್ರಗಳನ್ನು ಪೂರ್ಣ ಮಾಡುತ್ತದೆ. ಸಮುದ್ರಗಳು ತುಂಬಿಹೋಗುತ್ತವೆ.

೧೭೬. ಸಪ್ತಸಮುದ್ರಗಳೂ ದಡವನ್ನು ಮೀರಿ ಹರಿಯುವುವು. ಆಗ ಪರ್ವತಗಳು ಕುಸಿದು ಬೀಳುತ್ತವೆ. ಅನಂತರ ಭೂಮಂಡಲವು ಜಲದಲ್ಲಿ ಮುಳುಗಿ ಹೋಗುತ್ತದೆ.

೧೭೭. ಅನಂತರ ಅಕಸ್ಮಾತ್ತಾಗಿ ಉಂಟಾದ ಪ್ರಲಯಕಾಲದ ವಾತವು ಭಯಂಕರವಾಗಿ ಉದ್ಭವಿಸಿ, ಆಕಾಶವನ್ನಾವರಿಸಿ, ಅಲ್ಲಿರುವ ಮೇಘಗಳೆಲ್ಲವನ್ನೂ ಆವರಿಸಿ ಚದುರಿಸುವುದು.

೧೭೮. ಅಂತಹ ಭಯಂಕರವಾದ ಏಕಾರ್ಣವದಲ್ಲಿ ಚರಾಚರಾತ್ಮಕವಾದ ಜಗತ್ತೆಲ್ಲವೂ ಮುಳುಗಿಹೋಗುವುದು. ಹೀಗೆ ಒಂದು ಸಹಸ್ರ ಯುಗಗಳಾಗಲು ಅದಕ್ಕೆ ನಿಃಶೇಷಕಲ್ಪವೆಂದು ಮಹಾತ್ಮರು ಹೇಳುವರು.

**ಅಥಾಂಭಸಾ ವೃತೇ ಲೋಕೇ ಪ್ರಾಹುರೇಕಾರ್ಣವಂ ಬುಧಾಃ ।**
**ಅಥ ಭೂಮಿತಲಂ ಖಂ ಚ ವಾಯುಶ್ಚೈಕಾರ್ಣವೇ ತದಾ ।**
**ನಷ್ಟೇ ಭಾವೇಽವಲೀನಾಂ ತತ್ ಪ್ರಾಜ್ಞಾಯತ ನ ಕಿಂಚನ || ೧೭೯ ||**

**ಪಾರ್ಥಿವಾಸ್ತ್ವಥ ಸಾಮುದ್ರಾ ಆಪೋ ಹ್ಯೈಮಾಶ್ಚ ಸರ್ವಶಃ ।**
**ಪ್ರಸರಂತ್ಯೋ ವ್ರಜಂತ್ಯೇಕಂ ಸಲಿಲಾಖ್ಯಾಂ ಭಜಂತ್ಯುತ || ೧೮೦ ||**

**ಆಗತಾಗತಿಕಂ ಚೈವ ತದಾ ತತ್ಸಲಿಲಂ ಸ್ಮೃತಂ ।**
**ಪ್ರಚ್ಛಾದ್ಯ ತಿಷ್ಠತಿ ಮಹೀಮರ್ಣವಾಖ್ಯಂ ಚ ತಜ್ಜಲಂ || ೧೮೧ ||**

**ಆಭಾಂತಿ ಯಸ್ಮಾತ್ತಾ ಭಾಭಿರ್ಭಾ ಶಬ್ದವ್ಯಾಪ್ತಿದೀಪ್ತಿಷು ।**
**ಭಸ್ಮ ಸರ್ವಮನುಪ್ರಾಪ್ಯ ತಸ್ಮಾದಂಭೋ ನಿರುಚ್ಯತೇ || ೧೮೨ ||**

---

೧೭೯. ಹೀಗೆ ಜಲವು ಲೋಕವೆಲ್ಲವನ್ನೂ ಆವರಿಸಲು ಅದನ್ನು ಜ್ಞಾನಿಗಳು ಏಕಾರ್ಣವವೆಂದು ಹೇಳುವರು. ಆಗ ಭೂಮಿ, ಆಕಾಶ, ವಾಯು ಮೊದಲಾದುವು ಏಕಾರ್ಣವದಲ್ಲಿ ಮುಳುಗಲು ಯಾವ ವಸ್ತುವೂ ಇಲ್ಲದೆ ಜಗತ್ತೇ ಜಲಮಯ ವೆಂದು ಪ್ರಖ್ಯಾತವಾಗುವುದು.

೧೮೦. ಭೂಮಿಯೆಲ್ಲವೂ ಜಲಮಯವಾಗಿ ಕಾಣುವುದು. ಆ ಜಲವು ಸುವರ್ಣಮಯವಾಗಿ ಸರ್ವತ್ರ ವ್ಯಾಪ್ತವಾಗಿ, ಜಲಪ್ರಲಯವೆಂದು ಪ್ರಖ್ಯಾತ ವಾಗುವುದು.

೧೮೧. ಆ ಪ್ರಲಯೋದಕವು ಮೊರೆಯುತ್ತಾ ಅಲ್ಲಿಂದಿಲ್ಲಿಗೆ ಹರಿಯುತ್ತ, ಭೂಮಂಡಲವನ್ನೇ ಅಕ್ರಮಿಸಿ ಪ್ರಲಯಾರ್ಣವವೆಂದು ಖ್ಯಾತಿಗೊಳ್ಳುವುದು.

೧೮೨. ಆ ಜಲವೆಲ್ಲವೂ ಕಾಂತಿಯಿಂದ ಹೊಳೆಯುತ್ತಿರುವುದರಿಂದಲೂ, ಭಾ ಎಂಬ ಧಾತುವು ದೀಪ್ತಿವಾಚಕವಾಗಿರುವುದರಿಂದಲೂ, ಸರ್ವವೂ ಜಲದಲ್ಲಿ ಭಸ್ಮ ವಾಗಿರುವುದರಿಂದಲೂ ಜಲಕ್ಕೆ ಅಂಭವೆಂಬ ನಾಮವು ಪ್ರಾಪ್ತವಾಗಿರುತ್ತದೆ.

ನಾನಾತ್ವೇ ಚೈವ ಶೀಘ್ರೇ ಚ ಧಾತುರ್ವೈ ಅರ ಉಚ್ಯತೇ ।
ಏಕಾರ್ಣವೇ ತದಾ ಯೋ ವೈ ನ ಶೀಘ್ರಾಸ್ತೇನ ತಾ ನರಾಃ ॥ ೧೮೩ ॥

ತಸ್ಮಿನ್ ಯುಗಸಹಸ್ರಾಂತೇ ದಿವಸೇ ಬ್ರಹ್ಮಣೋ ಗತೇ ।
ತಾವಂತಂ ಕಾಲಮೇವಂ ತು ಭವತ್ಯೇಕಾರ್ಣವಂ ಜಗತ್ ॥
ತದಾ ತು ಸರ್ವವ್ಯಾಪಾರಾ ನಿವರ್ತಂತೇ ಪ್ರಜಾಪತೇಃ ॥ ೧೮೪ ॥

ಏವಮೇಕಾರ್ಣವೇ ತಸ್ಮಿನ್ನಷ್ಟೇ ಸ್ಥಾವರಜಂಗಮೇ ।
ತದಾ ಸ ಭವತಿ ಬ್ರಹ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥ ೧೮೫ ॥

ಸಹಸ್ರಶೀರ್ಷಾ ಸುಮನಾಃ ಸಹಸ್ರಪಾತ್ ।
ಸಹಸ್ರಚಕ್ಷುರ್ವದನಃ ಸಹಸ್ರವಾಕ್ ॥
ಸಹಸ್ರಬಾಹುಃ ಪ್ರಥಮಃ ಪ್ರಜಾಪತಿ ।
ಸ್ತ್ರಯೀಪಥೇ ಯಃ ಪುರುಷೋ ನಿರುಚ್ಯತೇ ॥ ೧೮೬ ॥

---

೧೮೩. ಅರವೆಂಬ ಧಾತುವು ನಾನಾರ್ಥಕವಾಗಿಯೂ, ಶೀಘ್ರಗಾಮಿವಾಚಕವಾಗಿಯೂ, ಶೀಘ್ರಾರ್ಥಕವಾಗಿಯೂ ಇರುತ್ತದೆ. ಆ ಏಕಾರ್ಣವದಲ್ಲಿ ಶೀಘ್ರಗಾಮಿತ್ವವೂ, ನಾನಾತ್ವವೂ ಇಲ್ಲದಿರುವುದರಿಂದ ಅವುಗಳಿಗೆ ನರಾ ಎಂಬ ನಾಮವು ಪ್ರಾಪ್ತವಾಗಿದೆ.

೧೮೪ ಹೀಗೆ ಬ್ರಹ್ಮದೇವನಿಗೆ ಸಾವಿರಯುಗದ ಕಾಲವು ಕಳೆಯುವವರೆಗೂ ಜಗತ್ತೆಲ್ಲವೂ ಏಕಾರ್ಣವದಲ್ಲಿ ಮುಳುಗಿಹೋಗುವುದು ಆಗ ಬ್ರಹ್ಮದೇವನ ಸಕಲ ವ್ಯಾಪಾರಗಳೂ ನಿಂತುಹೋಗುತ್ತವೆ.

೧೮೫. ಹೀಗೆ ಚರಾಚರಾತ್ಮಕವಾದ ಜಗತ್ತೆಲ್ಲವೂ ಆ ಪ್ರಲಯೋದಕದಲ್ಲಿ ಮುಳುಗಿಹೋಗುವುದು. ಆಗ ಸಾಕ್ಷಾತ್ಪರಬ್ರಹ್ಮನು ಸಹಸ್ರಾರು ನೇತ್ರಗಳೂ, ಪಾದಗಳೂ, ಶಿರಸ್ಸುಗಳೂ ಇವುಗಳುಳ್ಳವನಾಗುವನು.

೧೮೬. ವೇದಗಳು, ಅಂತಹ ಪುರುಷನನ್ನು ಸಾವಿರಾರು ಶಿರಸ್ಸುಗಳು, ಪಾದಗಳು, ಮನಸ್ಸು, ನೇತ್ರಗಳು, ಮುಖಗಳು, ವಾಕ್ಕುಗಳು, ಭುಜಗಳು ಇವು ಉಳ್ಳವನನ್ನಾಗಿಯೂ, ಆದಿಬ್ರಹ್ಮನೆಂಬುದಾಗಿಯೂ ಸ್ತುತಿಸುತ್ತವೆ.

ಆದಿತ್ಯವರ್ಣೋ ಭುವನಸ್ಯಗೋಪ್ತಾ ।
ಹ್ಯಪೂರ್ವ ಏಕಃ ಪ್ರಥಮಸ್ತು ರಾಷಾಟ್ ॥
ಹಿರಣ್ಯಗರ್ಭಃ ಪುರುಷೋ ಮಹಾ ವೈ ।
ಸಂಪದ್ಯತೇ ವೈ ತಮಸಃ ಪರಸ್ತಾತ್ ॥ ೧೮೭ ॥

ಚತುರ್ಯುಗಸಹಸ್ರಾಂತೇ ಸರ್ವತಃ ಸಲಿಲಪ್ಲುತೇ ।
ಸುಷುಪ್ಸುರಪ್ರಕಾಶಾಂ ಸ್ವಾಂ ರಾತ್ರಿಂ ತು ಕುರುತೇ ಪ್ರಭುಃ ॥ ೧೮೮ ॥

ಚತುರ್ವಿಧಾ ಯದಾ ಶೇತೇ ಪ್ರಜಾಃ ಸರ್ವಾಂಡಮಂಡಿತಾಃ ।
ಪಶ್ಯಂತೇ ತಂ ಮಹಾತ್ಮಾನಂ ಕಾಲಂ ಸಪ್ತ ಮಹರ್ಷಯಃ ॥ ೧೮೯ ॥

ಜನಲೋಕವಿವರ್ತಂತಸ್ತಪಸಾ ಲಬ್ಧ ಚಕ್ಷುಷಃ ।
ಭೃಗ್ವಾದಯೋ ಮಹಾತ್ಮಾನಃ ಪೂರ್ವೇ ವ್ಯಾಖ್ಯಾತಲಕ್ಷಣಾಃ ॥ ೧೯೦ ॥

ಸತ್ಯಾದೀನ್ ಸಪ್ತಲೋಕಾನ್ ವೈ ತೇ ಹಿ ಪಶ್ಯಂತಿ ಚಕ್ಷುಷಾ ।
ಬ್ರಹ್ಮಾಣಂ ತೇ ತು ಪಶ್ಯಂತಿ ಮಹಾಬ್ರಾಹ್ಮೀಷು ರಾತ್ರಿಷು ॥ ೧೯೧ ॥

---

೧೮೭. ಆಗ ಪರಮಪುರುಷನಾದ ಪರಬ್ರಹ್ಮನು ಸೂರ್ಯನಂತೆ ಕಾಂತಿಯುತನೂ, ಜಗತ್ಪಾಲಕನೂ, ಅಪೂರ್ವನೂ, ಅದ್ವಿತೀಯನೂ, ಆದಿಪುರುಷನೂ, ಇಂದ್ರನೂ, ಹಿರಣ್ಯಗರ್ಭನೂ, ಮಹಾಪುರುಷನೂ, ತಮೋಗುಣಾತೀತನೂ ಆಗಿ ಪ್ರಕಾಶಿಸುವನು.

೧೮೮. ಅನಂತರ ಸ್ವಾಮಿಯಾದ ಭಗವಂತನು ನಾಲ್ಕುಸಹಸ್ರ ಯುಗಗಳ ಕೊನೆಯಲ್ಲಿ ಏಕಾರ್ಣವದಲ್ಲಿ ನಿದ್ರಿಸಲಿಚ್ಛೆಯಿಂದ ಅಂಧಕಾರಮಯವಾದ ರಾತ್ರಿಯನ್ನು ಸೃಷ್ಟಿಮಾಡುವನು.

೧೮೯ ಸಕಲ ಬ್ರಹ್ಮಾಂಡಗತರಾದ ನಾಲ್ಕು ವಿಧವಾದ ಜೀವರಾಶಿಗಳು ಭಗವಂತನ ಉದರದಲ್ಲಿ ನಿದ್ರಿಸುತ್ತಿರುವರು. ಆಗ ಮಹಾತ್ಮರಾದ ಸಪ್ತಮಹರ್ಷಿಗಳು, ಮಹಾಮಹಿಮನೂ ಕಾಲರೂಪಿಯೂ ಆದ ಭಗವಂತನನ್ನು ನೋಡಿ ಹೊಗಳಿದರು.

೧೯೦–೧೯೧. ತರುವಾಯ ಜನಲೋಕದಿಂದ ಹಿಂದಕ್ಕೆ ಬಂದಂಥವರೂ, ತಪೋಮಹಿಮೆಯಿಂದ ಲಬ್ಧವಾದ ದಿವ್ಯಜ್ಞಾನವಂತರೂ, ಮಹಾತ್ಮರೂ, ಪೂರ್ವದಲ್ಲಿಯೇ ನಿರೂಪಿಸಿರುವ ಲಕ್ಷಣವುಳ್ಳವರೂ, ಪುರಾಣಪುರುಷರೂ ಆದ ಭೃಗ್ವಾದಿ ಸಪ್ತಮಹರ್ಷಿಗಳು ತಮ್ಮ ಜ್ಞಾನದೃಷ್ಟಿಯಿಂದ ಸತ್ಯಲೋಕವೇ ಮೊದಲಾದ ಏಳು ಲೋಕಗಳನ್ನೂ, ಪರಬ್ರಹ್ಮನನ್ನೂ ಬ್ರಹ್ಮಸಂಬದ್ಧಿಗಳಾದ ಆ ಮಹಾರಾತ್ರಿಗಳಲ್ಲಿ ನೋಡುವರು.

ಸಪ್ತರ್ಷಯಃ ಪ್ರಪಶ್ಯಂತಿ ಸುಪ್ತಂ ಕಾಲಂ ಸ್ವರಾತ್ರಿಷು ।
ಕಲ್ಪಾನಾಂ ಪರಮೇಷ್ಠಿತ್ವಾತ್ತಸ್ಮಾದಾದ್ಯಃ ಸ ಪಠ್ಯತೇ ॥ ೧೯೨ ॥

ಸ ಯಷ್ಟ್ವಾ ಸರ್ವಭೂತಾನಾಂ ಕಲ್ಪಾದಿಷು ಪುನಃ ಪುನಃ ।
ಏವಮಾವೇಶಯಿತ್ವಾ ತು ಸ್ವಾತ್ಮನ್ಯೇವ ಪ್ರಜಾಪತಿಃ ॥ ೧೯೩ ॥

ಅಥಾತ್ಮನಿ ಮಹಾತೇಜಾಃ ಸರ್ವಮಾದಾಯ ಸರ್ವಕೃತ್ ।
ತತಸ್ತೇ ವಸತೇ ರಾತ್ರಿಂ ತಮಸ್ಯೇಕಾರ್ಣವೇ ಜಲೇ ॥ ೧೯೪ ॥

ತತೋ ರಾತ್ರಿಕ್ಷಯೇ ಪ್ರಾಪ್ತೇ ಪ್ರತಿಬುದ್ಧ ಪ್ರಜಾಪತಿಃ ।
ಮನಃ ಸಿಸೃಕ್ಷಯಾ ಯುಕ್ತಂ ಸರ್ಗಾಯ ನಿದಧೇ ಪುನಃ ॥ ೧೯೫ ॥

---

೧೯೨. ಮಹಾತ್ಮರಾದ ಸಪ್ತರ್ಷಿಗಳು, ಆ ರಾತ್ರಿಗಳಲ್ಲಿ ಸುಪ್ತನೂ, ಕಾಲ ರೂಪಿಯೂ ಆದ ಭಗವಂತನನ್ನು ನೋಡುವರು. ಆ ಪರಮಪುರುಷನು, ಕಲ್ಪಗಳು ಉಂಟಾಗುವುದಕ್ಕಿಂತ ಪೂರ್ವದಲ್ಲಿಯೇ ಪರಸ್ಥಾನದಲ್ಲಿದ್ದುದರಿಂದ ಅವನು ಆದಿ ಪುರುಷನೆಂದು ವರ್ಣಿಸಲ್ಪಟ್ಟಿರುವನು.

೧೯೩. ಆ ಪರಬ್ರಹ್ಮನೇ ಕಲ್ಪಗಳ ಆದಿಭಾಗದಲ್ಲಿ ಸಕಲಭೂತಗಳನ್ನೂ ಸೃಷ್ಟಿಸಿ ಪೂಜಿಸುವನು. ಅನಂತರ ಸೃಷ್ಟಿಸಿದ ಭೂತಗಳಲ್ಲಿ ತಾನು ಪ್ರವೇಶಿಸುವನು. ಅಂದರೆ ಅಂತರ್ಯಾಮಿಯಾಗಿ ರಕ್ಷಿಸುವನು.

೧೯೪. ತರುವಾಯ ಮಹಾತೇಜಸ್ವಿಯೂ, ಸರ್ವಕಾರಕನೂ ಆದ ಶ್ರೀಮನ್ನಾರಾಯಣನು ಸರ್ವಪ್ರಾಣಿಗಳನ್ನೂ ತನ್ನ ಉದರದಲ್ಲಿಟ್ಟುಕೊಂಡು ಸಕಲ ವ್ಯಾಪಾರಗಳನ್ನು ಮಾಡುತ್ತಾ, ತಮೋಮಯವಾದ ಏಕಾರ್ಣವದಲ್ಲಿ ವಟಪತ್ರಶಾಯಿ ಯಾಗಿ ಯೋಗನಿದ್ರೆಯನ್ನು ಮಾಡುವನು.

೧೯೫. ಅನಂತರ ರಾತ್ರಿಯಕಾಲವು ಹೀಗೆ ಕಳೆದುಹೋಗಲಾಗಿ ಪ್ರಬುದ್ಧನಾದ ಭಗವಂತನು ಪ್ರಜೆಗಳನ್ನು ಪುನಃ ಸೃಷ್ಟಿಮಾಡಲಿಚ್ಛಿಸುವನು.

**ಏವಂ ಸಲೋಕೇ ನಿರ್ವೃತ್ತೇ ಉಪಶಾಂತೇ ಪ್ರಜಾಪತೌ ।**
**ಬ್ರಹ್ಮನೈಮಿತ್ತಿಕೇ ತಸ್ಮಿನ್ ಕಲ್ಪಿತೇ ವೈ ಪ್ರಸಂಯಮೇ ॥ ೧೯೬ ॥**

**ದೇಹೈರ್ವಿಯೋಗಃ ಸತ್ವಾನಾಂ ತಸ್ಮಿನ್ ವೈ ಕೃತ್ಸ್ನಶಃ ಸ್ಮೃತಃ ।**
**ತತೋ ದಗ್ಧೇಷು ಭೂತೇಷು ಸರ್ವೇಷ್ವಾದಿತ್ಯರಶ್ಮಿಭಿಃ ।**
**ದೇವರ್ಷಿಮನುವರ್ಯೇಷು ತಸ್ಮಿನ್ ಸಂಕಲನೇ ತದಾ ॥ ೧೯೭ ॥**

**ಗಂಧರ್ವಾದೀನಿ ಸತ್ವಾನಿ ಪಿಶಾಚಾಂತಾನಿ ಸರ್ವಶಃ ।**
**ಕಲ್ಪದಾವಪ್ರತಪ್ತಾನಿ ಜನಮೇವಾಶ್ರಯಂತಿ ವೈ ॥ ೧೯೮ ॥**

**ತಿರ್ಯಗ್ಯೋನೀನಿ ಸತ್ವಾನಿ ನಾರಕೇಯಾನಿ ಯಾನ್ಯಪಿ ।**
**ತದಾ ತಾನ್ಯಪಿ ದಗ್ಧಾನಿ ಧುತಪಾಪಾನಿ ಸರ್ವಶಃ ।**
**ಜನೇ ತಾನ್ಯುಪಪದ್ಯಂತೇ ಯಾವತ್ ಸಂಪ್ಲವತೇ ಜಗತ್ ॥ ೧೯೯ ॥**

---

೧೯೬. ಪೂರ್ವದಲ್ಲಿ ಹೇಳಿದ ಪ್ರಕಾರವಾಗಿ ಲೋಕಗಳೆಲ್ಲವೂ ನಾಶವಾಗಲು ಬ್ರಹ್ಮದೇವನು ಶಾಂತನಾಗುವನು. ಅಂತಹ ಬ್ರಹ್ಮನಿಮಿತ್ತಿಕವಾದ ಆ ಕಲ್ಪದಲ್ಲಿ ಸರ್ವಪ್ರಾಣಿಗಳಿಗೆ ಸಂಪೂರ್ಣವಾಗಿ ದೇಹವಿಯೋಗವುಂಟಾಗುವುದು.

೧೯೭–೧೯೮. ಅನಂತರ ಸೂರ್ಯರಶ್ಮಿಗಳಿಂದ ಸಕಲಭೂತಗಳೂ ದಗ್ಧವಾಗಲು ಭೂಮಂಡಲಗತವಾದ ಸರ್ವಪ್ರಾಣಿಗಳಿಗೂ ಸಂಪೂರ್ಣವಾಗಿ : ದೇಹವಿಯೋಗ ವುಂಟಾಗುವುವು. ಆಗ ದೇವತೆಗಳು, ಋಷಿಗಳು, ಮನೂತ್ತಮರು, ಗಂಧರ್ವರು, ಪಿಶಾಚಾಂತಗಳಾದ ಪ್ರಾಣಿಗಳು ಇವುಗಳು ಕಲ್ಪಾದಿಯಲ್ಲಿ ತಾಪವನ್ನು ಹೊಂದದೇ ಜನಲೋಕವನ್ನು ಹೊಂದುವುವು.

೧೯೯. ಅಂತಹ ಸಮಯದಲ್ಲಿ ತಿರ್ಯಕ್ಪ್ರಾಣಿಗಳೂ, ನರಕಗತವಾದ ಪ್ರಾಣಿಗಳೂ ಕೂಡ ಸುಟ್ಟು ಭಸ್ಮವಾಗುವುವು. ಆ ಪ್ರಳಯಕಾಲದಲ್ಲಿ ಪಾಪರಹಿತವಾದ ಪುಣ್ಯಪ್ರಾಣಿಗಳೆಲ್ಲವೂ ಜನಲೋಕದಲ್ಲಿ ವಾಸಮಾಡುವುವು.

**ವ್ಯುಷ್ಟಾಯಾಂತು ರಜನ್ಯಾಂ ತು ಬ್ರಹ್ಮಣೋವ್ಯಕ್ತಯೋನಯೇ |**
**ಜಾಯಂತೇ ಹಿ ಪುನಸ್ತಾನಿ ಸರ್ವಭೂತಾನಿ ಕೃತ್ಸ್ನಶಃ || ೨೦೦ ||**

**ಋಷಯೋ ಮನವೋ ದೇವಾಃ ಪ್ರಜಾಃ ಸರ್ವಾಶ್ಚತುರ್ವಿಧಾಃ |**
**ತೇಷಾಮುಪೀಹ ಸಿದ್ಧಾನಾಂ ನಿಧನೋತ್ಪತ್ತಿರುಚ್ಯತೇ || ೨೦೧ ||**

**ಯಥಾ ಸೂರ್ಯಸ್ಯ ಲೋಕೇಽಸ್ಮಿನ್ನುದಯಾಸ್ತಮನಂ ಸ್ಮೃತಂ |**
**ತಥಾ ಜನ್ಮನಿರೋಧಶ್ಚ ಭೂತಾನಾಮಿಹ ದೃಶ್ಯತೇ || ೨೦೨ ||**

**ಆಭೂತಸಂಪ್ಲವಾತ್ತಸ್ಮಾದ್ಭವಃ ಸಂಸಾರ ಉಚ್ಯತೇ |**
**ಯಥಾ ಸರ್ವಾಣಿ ಭೂತಾನಿ ಜಾಯಂತೇ ಹಿ ವರ್ಷಾಸ್ವಿಹ || ೨೦೩ ||**

**ಸ್ಥಾವರಾದೀನಿ ಸತ್ವಾನಿ ಕಲ್ಪೇ ಕಲ್ಪೇ ತಥಾ ಪ್ರಜಾಃ |**
**ಯಥಾರ್ತಾವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ || ೨೦೪ ||**

---

೨೦೦. ಅವ್ಯಕ್ತತತ್ತ್ವಾಭಿಮಾನಿಯಾದ ಬ್ರಹ್ಮದೇವನ ಆ ರಾತ್ರಿಯು ಕಳೆದು ಹೋಗಲಾಗಿ ಆ ಸರ್ವಭೂತಗಳೂ ಸೃಷ್ಟಿಗುಪಕ್ರಮವಾಗಲು ಪುನಃ ಪೂರ್ಣವಾಗಿಯೂ ಜನಿಸುವುವು.

೨೦೧. ಋಷಿಗಳು, ಮನುಗಳು, ದೇವತೆಗಳು, ಸಿದ್ಧರು ಎಂಬ ಚತುರ್ವಿಧ ಪ್ರಾಣಿಗಳು ಇವುಗಳ ಜನನಮರಣಗಳು ಹೇಳಲ್ಪಡುತ್ತವೆ.

೨೦೨. ಈ ಲೋಕದಲ್ಲಿ ಸೂರ್ಯನಿಗೆ ಪ್ರತಿ ದಿನದಲ್ಲಿಯೂ ಉದಯಾಸ್ತಮಯಗಳು ಹೇಗೆ ಉಂಟಾಗುವುವೋ, ಹಾಗೆ ಸರ್ವಭೂತಗಳಿಗೂ ಕೂಡ ಜನನಮರಣಗಳು ಸಿದ್ಧವಾಗಿರುತ್ತವೆಯೆಂದು ಮಹಾತ್ಮರು ಹೇಳುವರು.

೨೦೩. ಸಂಪೂರ್ಣವಾಗಿ ಭೂತಗಳು ನಾಶವಾಗುವವರೆಗೂ ಉಂಟಾಗುವ ಉತ್ಪತ್ತಿಗೆ ಸಂಸಾರವೆಂದು ನಾವು ಸಂಭವಿಸಿರುತ್ತದೆ. ಅದರಂತೆ ಸರ್ವಭೂತಗಳೂ ಆ ಯುಗಗಳಲ್ಲಿ ಉತ್ಪನ್ನವಾಗುವುವು.

೨೦೪. ಪ್ರತಿಯೊಂದು ಕಲ್ಪದಲ್ಲಿಯೂ ಸ್ಥಾವರಾದಿಯಾದ ಪ್ರಾಣಿಗಳೂ ಮತ್ತು ಪ್ರಜೆಗಳೂ ಆಯಾ ಋತುಕಾರ್ಯಗಳೂ ನಾನಾ ರೂಪಗಳಾಗಿ ಪರ್ಯಾಯ ಕ್ರಮದಿಂದ ಉತ್ಪನ್ನವಾಗುತ್ತವೆ.

ದೃಶ್ಯಂತೇ ತಾನಿ ತಾನ್ಯೇವ ತಥಾ ಬ್ರಹ್ಮಾತ್ರರಾತ್ರಿಷು ।
ಪ್ರತ್ಯಾಹಾರೇ ಚ ಸರ್ಗೇ ಚ ಗತಿಮಂತಿ ಧ್ರುವಾಣಿ ಚ ॥ ೨೦೫ ॥

ನಿಷ್ಕ್ರಮಂತೇ ವಿಶಂತೇ ಚ ಪ್ರಜಾಕಾರಂ ಪ್ರಜಾಪತಿಂ ।
ಬ್ರಹ್ಮಾಣಂ ಸರ್ವಭೂತಾನಿ ಮಹಾಯೋಗಂ ಮಹೇಶ್ವರಂ ॥ ೨೦೬ ॥

ಸಂಸ್ರಷ್ಟಾ ಸರ್ವಭೂತಾನಾಂ ಕಲ್ಪಾದಿಷು ಪುನಃ ಪುನಃ ।
ವ್ಯಕ್ತಾವ್ಯಕ್ತೋ ಮಹಾದೇವಸ್ತಸ್ಯ ಸರ್ವಮಿದಂ ಜಗತ್ ॥ ೨೦೭ ॥

ಯೇನೈವ ಸೃಷ್ಟಾಃ ಪ್ರಥಮಂ ಪ್ರಯಾತಾ ।
ಆಪ್ತೋ ಹಿ ಮಾರ್ಗೇಣ ಮಹೀತಲೇಸ್ಮಿನ್ ॥
ಪೂರ್ವಪ್ರಯಾತೇನ ತಥಾ ಹ್ಯಪ್ತೋಽನಾ ।
ತೇನೈವ ತೇನೈಪ ತಿ ಸಂಪ್ರಜಂತಿ ॥ ೨೦೮ ॥

---

೨೦೫. ಇದರಂತೆ, ಬ್ರಹ್ಮದೇವನ ಹಗಲು ರಾತ್ರಿಗಳೆಂಬ ಸೃಷ್ಟಿಪ್ರಲಯ ಕಾಲಗಳಲ್ಲಿ ಚರಾಚರಾತ್ಮಕವಾದ ಸಕಲ ಪ್ರಾಣಿಗಳೂ ಜನನ ಮರಣಗಳನ್ನು ಹೊಂದುವುವು

೨೦೬. ಸೃಷ್ಟಿಪ್ರಲಯ ಕಾಲಗಳಲ್ಲಿ ಸ್ಥಾವರಜಂಗಮಗಳಾದ ಸರ್ವಪ್ರಾಣಿಗಳೂ ಪ್ರಜಾಪತಿಯೂ ಪ್ರಜಾರೂಪಿಯೂ ಮಹಾಯೋಗಿಯೂ ಮಹೇಶ್ವರನೂ ಆದ ಪರಮಪುರುಷನನ್ನು ಪ್ರವೇಶಿಸುತ್ತವೆ. ಮತ್ತು ಅವನಿಂದ ಸೃಷ್ಟವಾಗುತ್ತವೆ.

೨೦೭. ವ್ಯಕ್ತಾವ್ಯಕ್ತನೂ, ಮಹಾದೇವನೂ ಆದ ಭಗವಂತನು ಕಲ್ಪಾದಿಯಲ್ಲಿ ಸರ್ವಭೂತಗಳನ್ನೂ ಸೃಷ್ಟಿಮಾಡುವನು. ಆದುದರಿಂದ ಈ ಜಗತ್ತೆಲ್ಲವೂ ಸ್ವಾಮಿಯಾದ ಆ ಪರಮಾತ್ಮನದೇ ಆಗಿರುತ್ತದೆ.

೨೦೮. ಯಾವ ಭಗವಂತನು ಸೃಷ್ಟಿಯ ಆದಿಯಲ್ಲಿ ಈ ಭೂಮಂಡಲದಲ್ಲಿ ಮೊದಲು ಜಲವನ್ನು ಸೃಷ್ಟಿಸಿದನೋ ಸರ್ವತ್ರವ್ಯಾಪ್ತವಾದ ಅದರಿಂದ ಇತರ ಭೂತಗಳು ಸೃಷ್ಟವಾದವೋ, ಆ ಭೂತಗಳೆಲ್ಲವೂ ಜಲದ ಮೂಲಕವೇ (ಆ ಭಗವಂತನಲ್ಲಿ) ಲಯವನ್ನು ಹೊಂದುವುವು.

ಯಥಾ ಶುಭೇನ ತ್ವಶುಭೇನ ಚೈವ ।
ತತ್ರೈವ ತತ್ರೈವ ವಿವರ್ತಮಾನಾಃ ॥
ಮರ್ತ್ಯಾಸ್ತು ದೇಹಾಂತರಭಾವಿತತ್ವಾತ್ ।
ರವೇರ್ವಶಾದೂರ್ಧ್ವಮದಶ್ಚರಂತಿ ॥ ೨೦೯ ॥

ಯೇ ಚಾಪಿ ದೇವಾ ಮನವಃ ಪ್ರಜೇಶಾ ।
ಅನ್ಯೇಪಿ ಯೇ ಸ್ವರ್ಗಗತಾಶ್ಚ ಸಿದ್ಧಾಃ ॥
ಸದ್ಭಾವಿತಾಖ್ಯಾತಿವಿಶಾಚ್ಚ ಧರ್ಮ್ಯಾಃ ।
ಪುನರ್ನಿಸರ್ಗೇಣ ಭವಂತಿ ಸತ್ವಾಃ ॥ ೨೧೦ ॥

ಅತ ಊರ್ದ್ಧ್ವಂ ಪ್ರವಕ್ಷ್ಯಾಮಿ ಕಾಲಮಾಭೂತಸಂಪ್ಲವಂ ।
ಮನ್ವಂತರಾಣಿ ಯಾನಿ ಸ್ಯುರ್ವ್ಯಾಖ್ಯಾತಾನಿ ಮಯಾ ದ್ವಿಜಾಃ ।
ಸಹ ಪ್ರಜ್ಞಾನಿಸರ್ಗೇಣ ಸಹ ದೇವೈಶ್ಚತುರ್ದಶ ॥ ೨೧೧ ॥

ಸ ಯುಗಾಖ್ಯಾ ಸಹಸ್ರಂ ತು ಸರ್ವಾಣ್ಯೇವಾಂತರಾಣಿ ವೈ ।
ಅಸ್ಯಾಃ ಸಹಸ್ರೇ ದ್ವೇ ಪೂರ್ಣೇ ನಿಃಶೇಷಃ ಕಲ್ಪ ಉಚ್ಯತೇ ॥ ೨೧೨ ॥

---

೨೦೯. ಈ ಲೋಕದಲ್ಲಿ ಪ್ರಜೆಗಳು ತಾವು ಮಾಡಿದ ಶುಭಾಶುಭ ಕರ್ಮಗಳಿಂದ ನಾನಾ ಯೋನಿಗಳಲ್ಲಿ ಜನಿಸಿ ತಮಗೆ ಅನುಗುಣವಾದ ಸುಖದುಃಖಗಳನ್ನು ಅನುಭವಿಸುವರು. ತರುವಾಯ ಸೂಕ್ಷ್ಮರೂಪಗಳನ್ನು ಪಡೆದು ಸೂರ್ಯನ ಮೂಲಕವಾಗಿ ಊರ್ಧ್ವಲೋಕಗಳಲ್ಲಿಯೂ, ಅಧೋಲೋಕಗಳಲ್ಲಿಯೂ, ಸಂಚರಿಸುವರು.

೨೧೦. ಲೋಕದಲ್ಲಿ ದೇವತೆಗಳು, ಮನುಷ್ಯರು, ರಾಜರುಗಳು, ಸಿದ್ಧರು ಇವರೇ ಮೊದಲಾದವರು ತಮ್ಮ ತಮ್ಮ ಪುಣ್ಯಕರ್ಮಾನುಗುಣವಾಗಿ ಪುನಃ ಪುನಃ ಜನನ ಮರಣಗಳನ್ನು ಪಡೆಯುವರು.

೨೧೧. ಇನ್ನು ಮೇಲೆ ಭೂತಗಳು ಪ್ರಲಯವಾಗುವವರೆಗೂ ನಡೆಯುವ ಸಂಗತಿಗಳನ್ನು ತಿಳಿಸುವೆನು. ಎಲೈ ವಿಪ್ರೋತ್ತಮರೇ, ನಾನು ನಿಮಗೆ ಮನ್ವಂತರಗಳನ್ನು ತಿಳಿಸಿರುವೆನು. ಆ ಮನ್ವಂತರಗಳಲ್ಲಿ ಹದಿನಾಲ್ಕು ಲೋಕಗಳು, ದೇವತೆಗಳು, ಮಹರ್ಷಿಗಳು, ಜ್ಞಾನ, ಸಾಧನೆಗಳು ಇವುಗಳು ಉತ್ಪನ್ನವಾಗುವುವು.

೨೧೨. ಸರ್ವ ಯುಗಗಳಿಗೂ ಅಂತರಗಳು ಒಂದು ಸಹಸ್ರ ವರ್ಷಗಳಿರುತ್ತವೆ. ಹಾಗೆ ಎರಡು ಸಹಸ್ರವರ್ಷಗಳು ಪೂರ್ಣವಾದರೆ ನಿಶ್ಶೇಷಕಲ್ಪವಾಗುವುದು.

ಏತದ್ಬ್ರಾಹ್ಮಮಹೋ ಜ್ಞೇಯಂ ತಸ್ಯ ಸಂಖ್ಯಾಂ ನಿಬೋಧತ ।
ನಿಮೇಷಸ್ತುಲ್ಯ ಮಾತ್ರಾ ಹಿ ಕೃತೋ ಲಘ್ವಕ್ಷರೇಣ ತು ॥ ೨೧೩ ॥

ಮಾನುಷಾಕ್ಷಿನಿಮೇಷಾಸ್ತು ಕಾಷ್ಠಾ ಪಂಚದಶ ಸ್ಮೃತಾ ।
ಲವಃ ಕ್ಷಣಾಸ್ತು ಪಂಚೈವ ವಿಂಶತ್ಕಾಷ್ಠಾ ತು ತೇ ತ್ರಯಃ ॥ ೨೧೪ ॥

ಪ್ರಸ್ಥಃ ಸಪ್ತೋದಕಾಶ್ಚೈವ ಸಾಧಿಕಾಸ್ತು ಲವಃ ಸ್ಮೃತಃ ।
ಲವಾಸ್ತ್ರಿಂಶತ್ಕಲಾ ಜ್ಞೇಯಾ ಮುಹೂರ್ತಸ್ತ್ರಿಂಶತಃ ಕಲಾಃ ॥ ೨೧೫ ॥

ಮುಹೂರ್ತಾಸ್ತು ಪುನಸ್ತ್ರಿಂಶದಹೋರಾತ್ರಮಿತಿ ಸ್ಥಿತಿಃ ।
ಅಹೋರಾತ್ರಂ ಕಲಾನಾಂ ತು ವ್ಯಧಿಕಾನಿ ಶತಾನಿ ಷಟ್ ॥ ೨೧೬ ॥

ತಾಶ್ಚೈವ ಸಂಖ್ಯಯಾ ಜ್ಞೇಯಂ ಚಂದ್ರಾದಿತ್ಯಗತಿರ್ಯಥಾ ।
ನಿಮೇಷಃ ದಶ ಪಂಚೈವ ಕಾಷ್ಠಾಸ್ತಾಸ್ತ್ರಿಂಶತಃ ಕಲಾ ॥ ೨೧೭ ॥

---

೨೧೩. ಈ ನಿಶ್ಶೇಷಕಲ್ಪವೇ ಬ್ರಹ್ಮದೇವನ ಅಹಸ್ಸಾಗಿದೆ. ಅದರ ಸಂಖ್ಯೆಯನ್ನು ತಿಳಿಸುವೆನು ಕೇಳಿರಿ. ಏಕಮಾತ್ರೆಯುಳ್ಳ ಒಂದು ಲಘ್ವಕ್ಷರವನ್ನು ಉಚ್ಚರಿಸುವ ಕಾಲಕ್ಕೆ ನಿಮೇಷವೆಂಬ ಸಂಜ್ಞೆಯುಂಟಾಗಿದೆ.

೨೧೪–೨೧೫. ಮನುಷ್ಯರ ಕಣ್ಣಿನ ರೆಪ್ಪೆಯನ್ನು ಹೊಡೆಯುವ ಕಾಲಕ್ಕೆ ನಿಮೇಷವೆಂಬ ಸಂಜ್ಞೆಯುಂಟಾಗಿದೆ. ಇಂತಹ ಹದಿನೈದು ನಿಮೇಷಗಳಿಗೆ ಒಂದು ಕಾಷ್ಠವೆಂದೂ ಐದು ಕ್ಷಣಗಳಿಗೆ ಒಂದು ಲವವೆಂದೂ, ಇಪ್ಪತ್ತು ಕಾಷ್ಠಗಳಿಗೆ ಒಂದು ಕ್ಷಣವೆಂದೂ, ಅಂತಹ ಮೂರು ಕ್ಷಣಗಳಿಗೆ ಪ್ರಸ್ಥವೆಂದೂ, ಸಪ್ತೋದಕ ವೆಂದೂ ಸಂಜ್ಞೆಯುಂಟಾಗಿವೆ. ಮೂವತ್ತು ಲವಗಳು, ಮೂವತ್ತು ಕಲೆಗಳು ಒಂದು ಮುಹೂರ್ತವಾಗುವುದು.

೨೧೬–೨೧೭. ಅಂತಹ ಮೂವತ್ತು ಮುಹೂರ್ತಗಳು ಅಹೋರಾತ್ರಿಗಳೆಂಬ ಒಂದು ದಿವಸವಾಗಿದೆ. ಒಂದು ದಿವಸಕ್ಕೆ 'ಸಾವಿರದ ಇನ್ನೂರು ಕಲೆಗಳಿರುತ್ತವೆ. ಅವುಗಳನ್ನು ಸಂಖ್ಯೆಯಿಂದಲೇ ತಿಳಿಯಬೇಕು. ಆ ಸಂಖ್ಯೆಯನ್ನೂ ಚಂದ್ರಾದಿತ್ಯರ ಗತಿಯಿಂದಲೇ ತಿಳಿಯಬೇಕು. ಹದಿನೈದು ನಿಮೇಷಗಳಿಗೆ ಒಂದು ಕಾಷ್ಠವೆಂದೂ ಅಂತಹ ಮೂವತ್ತು ಕಾಷ್ಠಗಳಿಗೆ ಒಂದು ಕಲೆಯೆಂದೂ ನಾಮಗಳು ಉಂಟಾಗಿವೆ.

**ತ್ರಿಂಶತ್ಕಲಾ ಮುಹೂರ್ತಸ್ತು ದಶಭಾಗಃ ಕಲಾ ಸ್ಮೃತಾ ।**
**ಚತ್ವಾರಿಂಶತ್ಕಲಾನಾಂ ತು ಮುಹೂರ್ತ ಇತಿ ಸಂಜ್ಞಿತಃ ॥ ೨೧೮ ॥**

**ಮುಹೂರ್ತಾಶ್ಚ ಲವಾಶ್ಚಾಪಿ ಪ್ರಮಾಣಜ್ಞೈಃ ಪ್ರಕಲ್ಪಿತಾಃ ।**
**ತಸ್ಮಾನೇನಾಂಭಸಾಶ್ಚಾಪಿ ಪಲಾನ್ಯಥ ತ್ರಯೋದಶ ॥ ೨೧೯ ॥**

**ಮಾಗಧೇನ್ಯೈವ ಮಾನೇನ ಜಲಪ್ರಸ್ಥೋ ವಿಧೀಯತೇ ।**
**ಏತೇ ಚಾಪ್ಯುದಕಪ್ರಸ್ಥಾಶ್ಚತ್ವಾರೋ ನಾಲಿಕೋ ಘಟಃ ॥ ೨೨೦ ॥**

**ಹೇಮಮಾಷೈಃ ಕೃತಚ್ಛಿದ್ರೈಶ್ಚತುರ್ಭಿಶ್ಚತುರಂಗುಲೈಃ ।**
**ಸಮಾಹನಿ ಚ ರಾತ್ರೌ ಚ ಮುಹೂರ್ತೋ ವೈ ದ್ವಿನಾಲಿಕೌ ॥ ೨೨೧ ॥**

**ರವೇರ್ಗತಿವಿಶೇಷೇಣ ಸರ್ವೇಷು ನೃಷು ನಿತ್ಯಶಃ ।**
**ಅಧಿಕಂ ಷಟ್ ಶತಂ ಪಂಚ ಕಲಾನಾಂ ಪ್ರವಿಧೀಯತೇ ॥ ೨೨೨ ॥**

---

೨೧೮. ಮೂವತ್ತು ಕಲೆಗಳಿಗೆ ಒಂದು ಮುಹೂರ್ತವೆಂದು ಸಂಜ್ಞೆಯುಂಟಾಗಿದೆ. ಕೆಲವರು ಹತ್ತನ್ನು ಜಾಸ್ತಿ ಹೇಳುತ್ತಾರೆ. ಅಂದರೆ ನಲವತ್ತು ಕಲೆಗಳು ಒಂದು ಮುಹೂರ್ತವಾಗುವುದು.

೨೧೯. ಕಾಲಪ್ರಮಾಣವನ್ನರಿತ ಮಹಾತ್ಮರು ಮುಹೂರ್ತಗಳನ್ನೂ ಲವಗಳನ್ನೂ ಕಲ್ಪಿಸಿರುತ್ತಾರೆ. ಇವುಗಳಿಂದಲೂ ಈ ಪ್ರಮಾಣದಿಂದ ಜಲಪ್ರಮಾಣದಿಂದಲೂ ಹದಿಮೂರು ಫಲಗಳಾಗುತ್ತವೆ.

೨೨೦. ಮಗಧದೇಶದ ಅಳತೆಯ ಕ್ರಮದಿಂದ ಜಲದ ಅಳತೆಯು ಉಕ್ತವಾಗಿದೆ. ನಾಲ್ಕು ಉದಕಪ್ರಸ್ಥಗಳಿಗೆ ಒಂದು ನಾಲಿಕಘಟವೆಂಬ ಸಂಜ್ಞೆಯು ಸಂಭವಿಸಿರುತ್ತವೆ.

೨೨೧. ನಾಲ್ಕು ಅಂಗುಲದಷ್ಟು ಪ್ರಮಾಣವಿರುವ ಸುವರ್ಣಮಯವಾದ ಉದ್ದಗಳಿಂದ ಕೊರೆಯಲ್ಪಟ್ಟ ಘಟವು ನೀರುತುಂಬುವ ಕಾಲಕ್ಕೆ ಮುಹೂರ್ತವೆಂದು ಕೆಲವು ದೇಶದಲ್ಲಿ ಸಂಜ್ಞೆಯಿದೆ. ಇಂತಹ ಸಮಮುಹೂರ್ತವಿರುವ ಅಹೋರಾತ್ರಿಗಳು ಒಂದು ದಿವಸವಾಗುವುದು. ಕೆಲವು ದಿವಸಗಳಲ್ಲಿ ಎರಡು ಗಳಿಗೆಗಳು ಅಧಿಕವಾಗುತ್ತವೆ.

೨೨೨. ನಿತ್ಯವಾದ ಸೂರ್ಯಚಂದ್ರರ ಗತಿವಿಶೇಷದಿಂದ ಸಮಸ್ತರಾದ ಪ್ರಜೆಗಳ ದಿನಪ್ರಮಾಣವನ್ನು ತಿಳಿಯಬೇಕು. ಅಂತಹ ದಿವಸದಲ್ಲಿ ಹನ್ನೊಂದು ನೂರು ಕಲೆಗಳು ಅಧಿಕವಾಗಿದೆಯೆಂದು ತಿಳಿಯಬೇಕು.

ತದಹರ್ಮಾನುಷಂ ಜ್ಞೇಯಂ ನಾಕ್ಷತ್ರಂ ತುಂ ದಶಾಧಿಕಂ ।
ಸಾವನೇನ ತು ಮಾಸೇನ ಹ್ಯಬ್ದೋಯಂ ಮಾನುಷಃ ಸ್ಮೃತಃ ॥ ೨೨೩ ॥

ಏತದ್ದಿವ್ಯಮಹೋರಾತ್ರಮಿತಿ ಶಾಸ್ತ್ರವಿನಿಶ್ಚಯಃ ।
ಅಹ್ನಾನೇ ನ ತು ಯಾ ಸಂಖ್ಯಾ ಮಾಸರ್ತ್ವಯನವಾರ್ಷಿಕೀ ॥ ೨೨೪ ॥

ತದಾ ಬದ್ಧಮಿದಂ ಜ್ಞಾನಂ ಸಂಜ್ಞಾಯಾ ಹ್ಯುಪಲಕ್ಷ್ಯತಾಂ ।
ಕಲಾನಾಂ ಸುಪರೀಮಾಣಾತ್ಕಾಲ ಇತ್ಯಭಿದೀಯತೇ ॥ ೨೨೫ ॥

ಯದಹರ್ಬ್ರಹ್ಮಣಃ ಪ್ರೋಕ್ತಂ ದಿವ್ಯಾ ಕೋಟೀ ತು ತತ್ ಸ್ಮೃತಾ ।
ಶತಾನಾಂ ಚ ಸಹಸ್ರಾಣಿ ದಶದ್ವಿಗುಣಿತಾನಿ ಚ ॥
ನವತಿಂ ಚ ಸಹಸ್ರಾಣಿ ತಥೈವಾನ್ಯಾನಿ ಯಾನಿ ತು ॥ ೨೨೬ ॥

ಏತಚ್ಛ್ರುತ್ವಾ ತು ಋಷಯೋ ವಿಸ್ಮಯಂ ಪರಮಾದ್ಭುತಂ ।
ಸಂಸ್ಥಾಸಂಭಜನಂ ಜ್ಞಾನಮಪೃಚ್ಛನ್ನಂತರಂ ತದಾ ॥ ೨೨೭ ॥

೨೨೩. ಮೇಲೆ ಹೇಳಿದ ಪ್ರಮಾಣವು ಮನುಷ್ಯರ ಗಣನಾಪ್ರಕಾರವಾಗಿ ತಿಳಿಸಿರುತ್ತದೆ. ಇದಕ್ಕೆ ಹತ್ತು ಕಲೆಗಳು ಅಧಿಕವಾದರೆ ನಕ್ಷತ್ರ ಮಾನವಾಗುತ್ತದೆ. ಸಾವನಮಾಸದಿಂದ ಮನುಷ್ಯರ ಸಂವತ್ಸರದ ಪ್ರಮಾಣವನ್ನು ತಿಳಿಯಬೇಕು.

೨೨೪. ಕಾಲಜ್ಞಾನವನ್ನರಿತ ಶಾಸ್ತ್ರಜ್ಞರು ಇದನ್ನು ದಿವ್ಯವಾದ ಅಹೋ ರಾತ್ರಿಗಳೆಂದು ಹೇಳುವರು. ಇಂತಹ ಹಗಲಿನಿಂದಲೇ ಮಾಸ, ಋತು, ಅಯನ, ಸಂವತ್ಸರಗಳೆಂಬ ಸಂಜ್ಞೆಗಳು ಉಂಟಾಗುವುವು.

೨೨೫. ಈ ರೀತಿಯಾದ ಕಲಾಸಂಬಂಧದಿಂದಲೇ, ಹಗಲು, ರಾತ್ರಿ, ದಿನ, ಪಕ್ಷ, ಮಾಸ, ಸಂವತ್ಸರವೇ ಮೊದಲಾದ ಕಾಲಜ್ಞಾನವು ಉಂಟಾಗುವುದು. ಕಲೆಗಳ ಸಂಬಂಧದಿಂದಲೇ ಕಾಲವೆಂಬ ನಾಮವು ಸಂಭವಿಸಿರುತ್ತದೆ.

೨೨೬. ದೇವಮಾನ ರೀತಿಯಿಂದ ಅಂತಹ ಕೋಟಿ ವರ್ಷಗಳಾದರೆ ಬ್ರಹ್ಮ ದೇವನ ಒಂದು ಹಗಲಾಗುವುದು. ಅಂದರೆ ಒಂದು ಕೋಟಿ ಇಪ್ಪತ್ತು ಲಕ್ಷದ ತೊಂಭತ್ತುಸಾವಿರ ವರ್ಷಗಳೆಂದು ಸೂತಮುನಿಯು ಹೇಳಿದನು.

೨೨೭. ಆಗ ಮಹರ್ಷಿಗಳು ಈ ವಿಷಯಗಳನ್ನು ಕೇಳಿ ಪರಮಾಶ್ಚರ್ಯವನ್ನು ಹೊಂದಿ ಪ್ರಲಯಾದಿ ಸ್ಥಿತಿಗತಿಗಳನ್ನು ಪುನಃ ಪ್ರಶ್ನೆ ಮಾಡಿದರು.

|| ಋಷಯ ಊಚುಃ ||

ಸಂಪ್ಲಾವನಸ್ಯ ಕಾಲಂ ತು ಮಾನುಷೇಣೈವ ಸಮ್ಮಿತಂ |
ಮಾನೇನ ಶ್ರೋತುಮಿಚ್ಛಾಮಃ ಸಂಕ್ಷೇಪಾರ್ಥಪದಾಕ್ಷರಂ || ೨೨೮ ||

ತೇಷಾಂ ಶ್ರುತ್ವಾ ಸ ದೇವಸ್ತು ವಾಯುರ್ಲೋಕಹಿತೇ ರತಃ |
ಸಂಕ್ಷೇಪಾದ್ದಿವ್ಯಚಕ್ಷುಷ್ಮಾನ್ ಪ್ರೋವಾ ಚ ಭಗವಾನ್ ಪ್ರಭುಃ || ೨೨೯ ||

ಏತೇ ರಾತ್ರ್ಯಹನೀ ಪೂರ್ವಂ ಕೀರ್ತಿತೇ ತ್ವಿಹ ಲೌಕಿಕೇ |
ತಾಸಾಂ ಸಂಖ್ಯಾಯ ವರ್ಷಾಗ್ರಂ ಬ್ರಾಹ್ಮ್ಯಂ ವಕ್ಷ್ಯಾಮ್ಯಹಃ ಕ್ಷಯೇ ||

ಕೋಟಿಶತಾನಿ ಚತ್ವಾರಿ ವರ್ಷಾಣಿ ಮಾನುಷಾಣಿ ತು |
ದ್ವಾತ್ರಿಂಶಚ್ಚ ತಥಾ ಕೋಟ್ಯಃ ಸಂಖ್ಯಾತಾಃ ಸಂಖ್ಯಯಾ ದ್ವಿಜೈಃ || ೨೩೧ ||

ತಥಾ ಶತಸಹಸ್ರಾಣಿ ಏಕೋನನವತಿಃ ಪುನಃ |
ಅಶೀತಿಶ್ಚ ಸಹಸ್ರಾಣಿ ಏಷ ಕಾಲಃ ಪ್ಲವಸ್ಯ ತು || ೨೩೨ ||

---

೨೨೮. ಮಹರ್ಷಿಗಳು ಪುನಃ ಪ್ರಶ್ನಿಸಿದರು---ಎಲೈ ವಾಯುದೇವನೇ, ಪ್ರಲಯ ಕಾಲದ ಪ್ರಮಾಣವನ್ನೂ ಮನುಷ್ಯಮಾನರೀತಿಯಾಗಿಯೂ ಸಂಕ್ಷೇಪವಾಗಿಯೂ ನಿನ್ನಿಂದ ಕೇಳಿ ತಿಳಿಯಲು ಬಯಸುತ್ತೇವೆ ಅದನ್ನು ತಿಳಿಸಬೇಕೆಂದು ಬೇಡಿದರು.

೨೨೯. ಲೋಕಹಿತಾಪೇಕ್ಷಿಯೂ, ಪೂಜ್ಯನೂ, ಸ್ವಾಮಿಯೂ, ಆದ ವಾಯು ದೇವನು ಆ ಮುನಿಗಳ ಭಾಷಣಗಳನ್ನು ಕೇಳಿ ದಿವ್ಯಜ್ಞಾನದಿಂದ ಅದನ್ನು ತಿಳಿದು ಸಂಕ್ಷೇಪವಾಗಿ ಹೇಳಲುಪಕ್ರಮಿಸಿದನು.

೨೩೦. ಎಲೈ ಮುನಿವರ್ಯರೇ, ಲೌಕಿಕವಾಗಿ ಮನುಷ್ಯಮಾನರೀತಿಯಲ್ಲಿ ಅಹೋರಾತ್ರಿಗಳ ಪ್ರಮಾಣವನ್ನು ಪೂರ್ವದಲ್ಲಿಯೇ ನಿರೂಪಿಸಿರುವೆನು. ಅವುಗಳ ಸಂಖ್ಯೆಯನ್ನೂ, ಬ್ರಹ್ಮದೇವನ ಅಹಃಪ್ರಮಾಣವನ್ನೂ ತದನಂತರವಾಗುವ ಪ್ರಳಯ ಕಾಲದ ಸಂಖ್ಯೆಯನ್ನೂ ಮನುಷ್ಯಮಾನರೀತಿಯಿಂದ ತಿಳಿಸುವೆನು ಕೇಳಿರೆಂದನು.

೨೩೧-೨೩೨. ಎಲೈ ಮುನಿವರ್ಯರೇ ಬ್ರಹ್ಮದೇವನ ರಾತ್ರಿಯಲ್ಲಾಗುವ ಪ್ರಲಯಕಾಲವು ಮನುಷ್ಯಪ್ರಮಾಣರೀತಿಯಾಗಿನ್ನೂ ನಾನ್ನೂರುಮೂವತ್ತೆರಡು ಕೋಟಿ ಎಂಬತ್ತೊಂಬತ್ತು ಲಕ್ಷದ ಎಂಬತ್ತುಸಾವಿರ ವರ್ಷಗಳಾಗಿರುವುವು.

ಮಾನುಷಾಖ್ಯೇಣ ಸಂಖ್ಯಾತಃ ಕಾಲೋ ಹ್ಯಾಭೂತ ಸಂಪ್ಲವಃ ।
ಸಪ್ತ ಸೂರ್ಯಾತಸ್ತದಾಃಗ್ನೇಷು ತದಾ ಲೋಕೇಷು ತೇಷು ವೈ ॥ ೨೩೩ ॥

ಮಹಾಭೂತೇಷು ಲೀಯಂತೇ ಪ್ರಜಾಃ ಸರ್ವಾಶ್ಚತುರ್ವಿಧಾಃ ।
ಸಲಿಲೇನಾಪ್ಲುತೇ ಲೋಕೇ ನಷ್ಟೇ ಸ್ಥಾವರಜಂಗಮೇ ॥ ೨೩೪ ॥

ವಿನಿವೃತ್ತೇ ಚ ಸಂಹಾರೇ ಉಪಶಾಂತೇ ಪ್ರಜಾಪತೌ ।
ನಿರಾಲೋಕೇ ಪ್ರದಗ್ಧೇತು ನೈಶೇನ ತು ಸಮಾವೃತೇ ॥
ಈಶ್ವರಾಧಿಷ್ಠಿತೇ ಹ್ಯಸ್ಮಿಂಸ್ತದಾಹ್ಯೇಕಾರ್ಣವೇ ತದಾ ॥ ೨೩೫ ॥

ತಾವದೇಕಾರ್ಣವೋ ಜ್ಞೇಯೋ ಯಾವದಾಸೀದಹಃ ಪ್ರಭೋಃ ।
ರಾತ್ರಿಸ್ತು ಸಲಿಲಾವಸ್ಥಾ ನಿವೃತ್ತೌ ಚಾಪ್ಯಹಃ ಸ್ಮೃತಂ ॥ ೨೩೬ ॥

---

೨೩೩. ಆಗ ಪಂಚ ಭೂತಗಳವರೆಗೂ ನಾಶವಾಗುವುದು. ಈ ಅವಾಂತರ ಪ್ರಲಯವು ಮಾನುಷ ಮಾನದಿಂದ ನಿರೂಪಿಸಲ್ಪಟ್ಟಿದೆ. ಆಗ ಏಳು ಸೂರ್ಯರು ಏಕಕಾಲದಲ್ಲಿ ಲೋಕಗಳಲ್ಲಿ ಪ್ರಕಾಶಿಸುವರು.

೨೩೪. ಆಗ ಚತುರ್ವಿಧಗಳಾದ ಪ್ರಾಣಿಗಳೆಲ್ಲವೂ ಮಹಾಭೂತಗಳಲ್ಲಿ ಲಯವಾಗುವುವು. ಪ್ರಲಯೋದಕದಿಂದ ಲೋಕವೆಲ್ಲವೂ ವ್ಯಾಪ್ತವಾಗಲು ಚರಾಚರಾತ್ಮಕವಾದ ಜಗತ್ತು ನಾಶವಾಗುವುದು.

೨೩೫. ಸಂಹಾರವೆಲ್ಲಾ ಮುಗಿಯಲಾಗಿ ಪ್ರಜಾಪತಿಯಾದ ದೇವನು ಶಾಂತವಾಗುವನು. ಆಗ ಕಾಂತಿಯು ನಷ್ಟವಾಗಿ ರಾತ್ರಿಯ ಅಂಧಕಾರವು ಜಗತ್ತನ್ನು ಆವರಿಸುವುದು. ಅಂತಹ ಅಂಧಕಾರಮಯವಾದ ಪ್ರಲಯಾರ್ಣವದಲ್ಲಿ ಶ್ರೀಭಗವಂತನಾದ ಈಶನೊಬ್ಬನೇ ಯೋಗನಿದ್ರಾವಶನಾಗುವನು.

೨೩೬. ಸ್ವಾಮಿಯಾದ ಭಗವಂತನ ಅಹಸ್ಸು, ಅಂದರೆ ಹಗಲು ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೂ ಏಕಾರ್ಣವವು ಇರುವುದು. ಬ್ರಹ್ಮನ ರಾತ್ರಿಯು ಸಲಿಲಾಕಾರವಾಗಿರುವುದು. ರಾತ್ರಿಯು ಕಳೆಯಲು ಅಹಸ್ಸುಂಟಾಗುವುದು.

ಅಹೋರಾತ್ರಸ್ತಥೈವಾಸ್ಯ ಕ್ರಮೇಣಪರಿವರ್ತತೇ ।
ಅಭೂತಸಂಪ್ಲವೋ ಹ್ಯೇಷ ಅಹೋರಾತ್ರಃ ಸ್ಮೃತಃ ಪ್ರಭೋಃ ॥ ೨೩೭ ॥

ತ್ರೈಲೋಕ್ಯೇ ಯಾನಿ ಸತ್ವಾನಿ ಗತಿಮಂತಿ ಧ್ರುವಾಣಿ ಚ ।
ಅಭೂತೇಭ್ಯಃ ಪ್ರಲೀಯಂತೇ ತಸ್ಮಾದಾಭೂತಸಂಪ್ಲವಃ ॥ ೨೩೮ ॥

ಅಗ್ರೇ ಭೂತಃ ಪ್ರಜಾನಾಂ ತು ತಸ್ಮಾದ್ಭೂತಃ ಪ್ರಜಾಪತಿಃ ।
ಆಭೂತಃ ಪ್ಲವತೇ ಚೈವ ತಸ್ಮಾದಾಭೂತ ಸಂಪ್ಲವಃ ॥ ೨೩೯ ॥

ಶಾಶ್ವತೇ ಚಾ ವ್ಯೃತತ್ವೇ ಚ ಶಬ್ದೇ ಚಾಭೂತಸಂಪ್ಲವಃ ।
ಅತೀತಾ ವರ್ತಮಾನಾಶ್ಚ ತಥೈವಾನಾಗತಾಃ ಪ್ರಜಾಃ ॥
ದಿವ್ಯಸಂಖ್ಯಾ ಪ್ರಸಂಖ್ಯಾತಾ ಹ್ಯಪರಾರ್ಧಗುಣೀಕೃತಾ ॥ ೨೪೦ ॥

೨೩೭. ಬ್ರಹ್ಮದೇವನ ಅಹೋರಾತ್ರಿಗಳು ಕ್ರಮವಾಗಿ ಪರಿವರ್ತಿತವಾಗುತ್ತದೆ. ಶ್ರೀಭಗವಂತನ ಅಹೋರಾತ್ರಿಗಳಲ್ಲಿ ಅವಾಂತರ ಪ್ರಲಯವು ನಡೆಯುವುದರಿಂದ ಇದಕ್ಕೆ ಆಭೂತಸಂಪ್ಲವವೆಂಬ ಸಂಜ್ಞೆಯು ಉಂಟಾಗಿರುತ್ತದೆ.

೨೩೮. ಈ ಮೂರು ಲೋಕಗಳಲ್ಲಿಯೂ ಚರಾಚರಾತ್ಮಕವಾದ ಯಾವ ಪ್ರಾಣಿಗಳಿರುತ್ತವೆಯೋ ಅವುಗಳು ಮಾತ್ರ ಅಂದರೆ ಪಂಚಮಹಾಭೂತಗಳನ್ನು ಬಿಟ್ಟು ಉಳಿದ ಪ್ರಾಣಿಗಳು ಲಯವನ್ನು ಹೊಂದುವುವು. ಆದುದರಿಂದ ಆ ಪ್ರಲಯಕ್ಕೆ ಆಭೂತಸಂಪ್ಲವವೆಂಬ ನಾಮವು ಪ್ರಾಪ್ತವಾಯಿತು.

೨೩೯. ಪ್ರಜೆಗಳಿಂದ ಮೊದಲು ಇರತಕ್ಕವನಾದುದರಿಂದ ಬ್ರಹ್ಮನಿಗೆ ಭೂತವೆಂಬ ಸಂಜ್ಞೆಯು ಪ್ರಾಪ್ತವಾಗಿದೆ. ಅಂತಹ ಬ್ರಹ್ಮನ ವಿನಾ ಉಳಿದ ಸಕಲವೂ ನಾಶವಾಗುವುದರಿಂದ ಆ ಲಯಕ್ಕೆ ಆಭೂತಸಂಪ್ಲವವೆಂಬ ನಾಮವುಂಟಾಗಿದೆ.

೨೪೦. ಆಭೂತಸಂಪ್ಲವವೆಂಬ ಶಬ್ದವು ಶಾಶ್ವತ ಅಥವಾ ಸ್ಥಿರವೆಂಬ ಅರ್ಥವನ್ನೂ ತಿಳಿಸುತ್ತದೆ. ಭೂತಭವಿಷ್ಯದ್ವರ್ತಮಾನಕಾಲದಲ್ಲಿರುವ ಪ್ರಜೆಗಳು ದಿವ್ಯ ಸಂಖ್ಯೆಯಿಂದ ಅಪರಾರ್ಧದ್ವಿಗುಣೀಕೃತವೆಂಬ ಸಂಖ್ಯೆಯನ್ನು ತಿಳಿಯಬೇಕು.

ಪರಾರ್ಧದ್ವಿಗುಣಂ ಚಾಪಿ ಪರಮಾಯುಃ ಪ್ರಕೀರ್ತಿತಂ ।
ಏತಾವಾನ್ ಸ್ಥಿತಿಕಾಲಸ್ತು ಹ್ಯಜಸ್ಯೇಹ ಪ್ರಜಾಪತೇಃ ॥
ಸ್ಥಿತ್ಯಂತೇ ಪ್ರತಿಸರ್ಗಸ್ಯ ಬ್ರಹ್ಮಣಃ ಪರಮೇಷ್ಠಿನಃ ॥ ೨೪೧ ॥

ಯಥಾ ವಾಯುಪ್ರವೇಗೇನ ದೀಪಾರ್ಚಿರುಪಶಾಮ್ಯತಿ ।
ತಥೈವಂ ಪ್ರತಿಸರ್ಗೇಣ ಬ್ರಹ್ಮಾ ಸಮುಪಶಾಮ್ಯತಿ ॥ ೨೪೨ ॥

ತಥಾ ಹ್ಯಪ್ರತಿಸಂಸೃಷ್ಟೇ ಮಹದಾದೌ ಮಹೇಶ್ವರೇ ।
ಮಹತ್ಪ್ರಲೀಯತೇಽವ್ಯಕ್ತೇ ಗುಣಸಾಮ್ಯಂ ತತೋ ಭವೇತ್ ॥ ೨೪೩ ॥

ಇತ್ಯೇಷ ಚ ಸಮಾಖ್ಯಾತೋ ಮಯಾ ಹ್ಯಾಭೂತಸಂಪ್ಲವಃ ।
ಬ್ರಹ್ಮನೈಮಿತ್ತಿಕೋ ಹ್ಯೇಷ ಸಂಪ್ರಕ್ಷಾಲನಸಂಯಮಃ ॥ ೨೪೪ ॥

---

೨೪೧. ಹೀಗೆ ಹೇಳಿದ ಪರಾರ್ಧದಿಂದ ದ್ವಿಗುಣಿತವಾದ ಕಾಲವೇ, ಪ್ರಜಾಪತಿಯಾದ ಬ್ರಹ್ಮದೇವನ ಪರಮಾಯುಷ್ಯಕಾಲವಾಗಿದೆ. ಸ್ಥಿತಿಕಾಲವೂ ಸಹ ಇಷ್ಟೇ ಆಗಿರುತ್ತದೆ. ಸ್ಥಿತಿಯ ಕೊನೆಯ ಭಾಗದಲ್ಲಿ ಪ್ರಲಯವು ಉಂಟಾಗುವುದು.

೨೪೨. ವಾಯುವಿನ ಹೊಡತದಿಂದ ದೀಪಗಳು ಹೇಗೆ ಶಾಂತವಾಗುವುವೋ ಹಾಗೆ ಪ್ರಲಯಕಾಲವು ಒದಗಿದಾಗ ಬ್ರಹ್ಮನು ಶಾಂತನಾಗಿರುವನು.

೨೪೩. ಮಹತ್ತತ್ವಾದಿಗಳು ಪರಬ್ರಹ್ಮನಲ್ಲಿ ಲಯವಾಗದೇ ಅವ್ಯಕ್ತ ತತ್ವವಾದ ಪ್ರಕೃತಿಯಲ್ಲಿ ಲಯವಾಗುವುವು. ಆಗ ಗುಣಗಳಿಗೆ ಸಾಮ್ಯಾವಸ್ಥೆಯುಂಟಾಗುವುದು.

೨೪೪. ಎಲೈ ಮುನಿವರ್ಯರೇ, ಈ ರೀತಿಯಾಗಿ ಬ್ರಹ್ಮನಿಮಿತ್ತಿಕವೂ ಸಂಪ್ರಕ್ಷಾಳನ ಯೋಗಮಯವೂ ಆದ ಆಭೂತಸಂಪ್ಲವವೆಂಬ ಲಯಸ್ವರೂಪವನ್ನು ನಿಮಗಾಗಿ ನಿರೂಪಿಸಿರುವೆನೆಂದು ಹೇಳಿದನು.

**ಸಮಾಸೇನ ಸಮಾಖ್ಯಾತಃ ಭೂಯಃ ಕಿಂ ವರ್ತಯಾಮಿ ವಃ ।**
**ಯ ಇದಂ ಧಾರಯೇನ್ನಿತ್ಯಂ ಶೃಣುಯಾದ್ವಾಪ್ಯಭೀಕ್ಷ್ಣಶಃ ॥**
**ಕೀರ್ತನಾಚ್ಛ್ರವಣಾಚ್ಚಾಪಿ ಮಹತೀಂ ಸಿದ್ಧಿಮಾಪ್ನುಯಾತ್ ॥ ೨೪೫ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಅನುಷಂಗಪಾದೋ " ನಾಮ ಅಷ್ಟತ್ರಿಂಶೋಽಧ್ಯಾಯಃ**

---

೨೪೫. ಎಲೈ ವಿಪ್ರರೇ, ನಿಮಗೆ ನಾನು ಆಭೂತಸಂಪ್ಲವವನ್ನು ಸಂಕ್ಷೇಪವಾಗಿ ತಿಳಿಸಿರುವೆನು. ನಿಮಗೆ ನಾನು ಇನ್ನೂ ಬೇರೆ ಯಾವ ವಿಷಯಗಳನ್ನು ಹೇಳಲಿ ತಿಳಿಸಿರೆಂದನು. ಯಾವನು ಈ ವಿಷಯಗಳನ್ನು ಶ್ರವಣಮನನ ಕೀರ್ತನಾದಿಗಳನ್ನು ಪದೇ ಪದೇ ಮಾಡುವನೋ ಅವನು ಮಹಾಸಿದ್ಧಿಯನ್ನು ಪಡೆಯುವನೆಂದು ಸೂತನು ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಅನುಷಂಗಪಾದ "ವೆಂಬ ಮೂವತ್ತೆಂಟನೆಯ ಅಧ್ಯಾಯವು ಸಮಾಪ್ತವಾದುದು.



## ಮೂವತ್ತೆಂಟನೆಯ ಅಧ್ಯಾಯದ ಸಾರಾಂಶವು



ಸಂಹಾರಪಾದರೂಪವಾದ ಈ ಅಧ್ಯಾಯದಲ್ಲಿ ಸಕಲ ಮನ್ವಂತರಗಳು, ಸಪ್ತರ್ಷಿಗಳು, ದೇವತೆಗಳು, ಇವರ ಸೃಷ್ಟಿಕ್ರಮವು ಮತ್ತು ಆಭೂತಸಂಪ್ಲವವು ನಿರೂಪಿತವಾಗಿವೆ. ದಕ್ಷಬ್ರಹ್ಮನಿಗೆ ಸುವ್ರತೆಯೆಂಬ ಕುಮಾರಿಯಿದ್ದಳು. ಅವಳನ್ನು ಬ್ರಹ್ಮ, ಈಶ್ವರ, ಧರ್ಮ ಮತ್ತು ದಕ್ಷೇಶ್ವರ ಇವರು ನಾಲ್ವರು ಮನಸ್ಸಿನಲ್ಲಿ ಸ್ಮರಣೆಮಾಡಿದರು. ಆಗ ಅವಳಿಗೆ ನಾಲ್ವರು ಕುಮಾರರು ಜನಿಸಿ, ಸಾವರ್ಣಿಮನುಗಳಾದರು. ಅವರ ವಂಶಗಳಲ್ಲಿ ಅನೇಕರಾದ ದೇವತೆಗಳು, ಮಹರ್ಷಿಗಳು ಉದ್ಭವಿಸಿದರು.

ಹೀಗೆ ಮನ್ವಂತರವು ಕಳೆಯಲು ಪ್ರಲಯವು ಸಂಭವಿಸುವುದು. ಆಗ ಮೂರು ಲೋಕಗಳು ನಾಶವಾಗುವುವು. ಆಗ ದೇವಾದಿಗಳು ಮಹರ್ಲೋಕವನ್ನು ಹೊಂದುವರು. ಅದೂ ನಷ್ಟವಾದರೆ ಜನಲೋಕಕ್ಕೆ ಹೋಗುವರು. ಆಗ ಪ್ರಲಯಕಾಲವು ಸಂಭವಿಸುವುದು. ಸಪ್ತಸೂರ್ಯರು ಏಕಕಾಲದಲ್ಲಿ ಉದಯಿಸಿ ಲೋಕಗಳನ್ನು ಸುಡುವರು. ಆಗ ಭೂಗೋಳವು ಕಾದ ಕಬ್ಬಿಣದ ಗುಂಡಿನಂತೆ ಕೆಂಪಗೆ ಕಾಣುವುದು. ತರುವಾಯ ಪ್ರಲಯಕಾಲದ ಮೇಘಗಳು ಧಾರಾಕಾರವಾಗಿ ಮಳೆಯನ್ನು ಸುರಿಸುವುದು. ಆಗ ಈ ಜಗತ್ತೆಲ್ಲ ಆ ಪ್ರಲಯೋದಕದಲ್ಲಿ ಮುಳುಗಿಹೋಗುವುದು. ಆಗ ಪರಬ್ರಹ್ಮನೊಬ್ಬನೇ ಯೋಗನಿದ್ರಾರೂಢನಾಗಿರುವನು. ತರುವಾಯ ಸತ್ಯಲೋಕವಾಸಿಗಳಾದ ದೇವತೆಗಳು ಆ ಭಗವಂತನನ್ನು ಹೊಗಳುವರು. ಹೀಗೆ ಬ್ರಹ್ಮನ ರಾತ್ರಿಯಲ್ಲಿ ಪ್ರಲಯವೂ ಹಗಲಲ್ಲಿ, ಸೃಷ್ಟಿಯೂ ಆಗುವುವು.



—|| ಹರಿಃ ಓಂ ||—

—|| ಶ್ರೀ ವೇದವ್ಯಾಸಾಯ ನಮಃ ||—

# ಶ್ರೀಮದ್ವಾಯುಮಹಾಪುರಾಣಂ

## ಏಕೋನ ಚತ್ವಾರಿಂಶೋಽಧ್ಯಾಯಃ

**|| ವಾಯುರುವಾಚ ||**

**ಅಸಾಧಾರಣವೃತ್ತ್ಯೈಸ್ತು ಹುತಶೇಷಾದಿಭಿರ್ದ್ವಿಜೈಃ ।**
**ಧರ್ಮೈರ್ವೈಶೇಷಿಕೈಶ್ಚೈವ ಹ್ಯಾಚರ್ಣಸೂಕ್ಷ್ಮದರ್ಶಿಭಿಃ || ೧ ||**

**ತೇ ದೇವೈಃ ಸಹ ತಿಷ್ಠಂತಿ ಮಹರ್ಲೋಕನಿವಾಸಿನಃ ।**
**ಚತುರ್ದಶೈತೇ ಮನವಃ ಕೀರ್ತಿತಾಃ ಕೀರ್ತಿವರ್ಧನಾಃ || ೨ ||**

**ಅತೀತಾ ವರ್ತಮಾನಾಶ್ಚ ತಥೈವಾನಾಗತಾಶ್ಚ ಯೇ ।**
**ಋಷಿಭಿರ್ದೇವತೈಶ್ಚೈವ ಸಹ ಗಂಧರ್ವರಾಕ್ಷಸೈಃ || ೩ ||**

**ಮನ್ವಂತರಾಧಿಕಾರೇಷು ಜಾಯಂತೀಹ ಪುನಃ ಪುನಃ ।**
**ದೇವಾಃ ಸಪ್ತರ್ಷಯಶ್ಚೈವ ಮನವಃ ಪಿತರಸ್ತಥಾ || ೪ ||**

---

### ಮೂವತ್ತೊಂಭತ್ತನೆಯ ಅಧ್ಯಾಯವು

೧–೨. ವಾಯುದೇವನು ಹೇಳಿದನು :—ಮಹರ್ಲೋಕನಿವಾಸಿಗಳೂ, ಕೀರ್ತಿವರ್ಧಕರೂ ಆದ ಹದಿನಾಲ್ಕುಜನ ಮನುಗಳು, ಅಸಾಧಾರಣ ವ್ಯಾಪಾರವಂತರೂ, ಹುತಾವಶಿಷ್ಟರೂ ಆದ ಬ್ರಾಹ್ಮಣರಿಂದಲೂ, ಧರ್ಮವಂತರೂ, ಸೂಕ್ಷ್ಮದರ್ಶಿಗಳೂ ಆದ ದೇವತೆಗಳಿಂದಲೂ ಕೂಡಿರುವರು. ಇಂತಹ ಮನುಗಳನ್ನು ನಿಮಗಾಗಿ ವರ್ಣಿಸಿರುವೆನೆಂದು ಹೇಳಿದನು.

೩–೪. ದೇವತೆಗಳು, ಸಪ್ತರ್ಷಿಗಳು, ಮನುಗಳು ಮತ್ತು ಪಿತೃಗಳು ಇವರು ಭೂತಭವಿಷ್ಯದ್ವರ್ತಮಾನಕಾಲಕರಾದ ಋಷಿಗಳು, ದೇವತೆಗಳು, ಗಂಧರ್ವರು ಮತ್ತು ರಾಕ್ಷಸರು ಇವರ ಸಂಗಡ ಮನ್ವಂತರಾಧಿಕಾರಗಳಲ್ಲಿ ಪದೇ ಪದೇ ಉದ್ಭವಿಸುವರು

ಸರ್ವೇ ಹ್ಯಪಿ ಕ್ರಮಾಶೀತಾ ಮಹರ್ಲೋಕಂ ಸಮಾಶ್ರಿತಾಃ ।
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈರ್ಧಾರ್ಮಿಕೈಃ ಸಹಿತೈಃ ಸುರಾಃ ॥ ೫ ॥

ಶೈಸ್ತಥ್ಯಕಾರಿಭಿರ್ಯುಕ್ತೈಃ ಶ್ರದ್ಧಾವದ್ಭಿರದರ್ಪಿತೈಃ ।
ವರ್ಣಾಶ್ರಮಾಣಾಂ ಧರ್ಮೇಷು ಶ್ರೌತಸ್ಮಾರ್ತೇಷು ಸಂಸ್ಥಿತೈಃ ॥
ವಿನಿವೃತ್ತಾಧಿಕಾರಾಸ್ತೇ ಯಾವನ್ಮನ್ವಂತರಕ್ಷಯಃ ॥ ೬ ॥

॥ ಋಷಯ ಊಚುಃ ॥

ಮಹರ್ಲೋಕೇತಿ ಯತ್ ಪ್ರೋಕ್ತಂ ಮಾತರಿಶ್ವಂಸ್ತ್ವಯಾ ವಿಭೋ ।
ಪ್ರತಿಲೋಕೇ ಚ ಕರ್ತವ್ಯಂ ಅನೇಕೈಃ ಸಮಧಿಷ್ಠಿತಾಃ ॥ ೭ ॥

ಯಾವಂತಶ್ಚೈವ ತೇ ಲೋಕಾ ದಹ್ಯಂತೇ ಯೇ ನ ತೇ ಪ್ರಭೋ ।
ಏತನ್ನಃ ಕಥಯ ಪ್ರೀತ್ಯಾ ತ್ವಂ ಹಿ ವೇತ್ಥ ಯಥಾತಥಂ ॥ ೮ ॥

---

೫–೬. ಆ ಸಮಸ್ತರಾದ ದೇವತೆಗಳು ತಮ್ಮ ತಮ್ಮ ಅಧಿಕಾರಗಳಿಂದ ನಿವೃತ್ತರಾಗಿ ಸತ್ಯವಾದಿಗಳೂ, ಶ್ರದ್ಧಾಯುಕ್ತರೂ, ಅಹಂಕಾರವರ್ಜಿತರೂ, ವರ್ಣಾಶ್ರಮಾಚಾರವಂತರೂ, ಶ್ರೌತಸ್ಮಾರ್ತಧರ್ಮವುಳ್ಳವರೂ, ಸದ್ಧರ್ಮನಿರತರೂ ಆದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಂದ ಸಹಿತರಾಗಿ ಮನ್ವಂತರ ಕ್ಷಯವಾಗುವವರೆಗೂ ಭೂರಾದಿ ಲೋಕಗಳನ್ನು ಬಿಟ್ಟು ಮಹರ್ಲೋಕವನ್ನು ಹೊಂದುವರು.

೭. ತರುವಾಯ ಮಹರ್ಷಿಗಳು ಕೇಳಿದರು :—ಎಲೈ ಪ್ರಭುವಾದ ವಾಯುದೇವನೇ, ನೀನು ಯಾವುದನ್ನು ಮಹರ್ಲೋಕವೆಂಬುದಾಗಿ ನಿರೂಪಿಸಿರುವಿಯೋ ಅದನ್ನೂ, ಪ್ರತಿಲೋಕಗಳಲ್ಲಿಯೂ ಮಾಡಬೇಕಾದ ಕಾರ್ಯಗಳನ್ನೂ, ಅವುಗಳಲ್ಲಿರುವ ಪ್ರಜೆಗಳನ್ನೂ ತಿಳಿಸುವವನಾಗು.

೮. ಎಲೈ ಸ್ವಾಮಿಯಾದ ವಾಯುದೇವನೇ, ಪ್ರಲಯಕಾಲದಲ್ಲಿ ಯಾವ ಲೋಕಗಳು ದಗ್ಧವಾಗುತ್ತವೆ ? ಯಾವ ಲೋಕಗಳು ಸುಟ್ಟುಹೋಗುವುದಿಲ್ಲ ಈ ವಿಷಯಗಳನ್ನು ನೀನು ಚೆನ್ನಾಗಿ ತಿಳಿದಿರುತ್ತೀಯೆ ಆದುದರಿಂದ ನೀನು ಪ್ರೀತಿಯಿಂದ ಯಥಾರ್ಥವಾಗಿ ನಮಗೆ ತಿಳಿಸಬೇಕೆಂದು ಋಷಿಗಳು ವಾಯುದೇವನನ್ನು ಬೇಡಿಕೊಂಡರು.

**ಏವಮುಕ್ತಸ್ತತೋ ವಾಯುರ್ಮುನಿಭಿರ್ವಿನಯಾತ್ಮಭಿಃ ।**
**ಪ್ರೋವಾಚ ಮಧುರಂ ವಾಕ್ಯಂ ಯಥಾತತ್ತ್ವೇನ ತತ್ತ್ವವಿತ್ ॥ ೯ ॥**

**॥ ವಾಯುರುವಾಚ ॥**

**ಚತುರ್ದಶೈವ ಸ್ಥಾನಾನಿ ವರ್ಣಿತಾನಿ ಮಹರ್ಷಿಭಿಃ ।**
**ಲೋಕಾಖ್ಯಾನಿ ತು ಯಾನಿ ಸ್ಯುರ್ಯೇಷು ತಿಷ್ಠಂತಿ ಮಾನವಾಃ ॥ ೧೦ ॥**

**ಸಪ್ತ ತೇಷು ಕೃತಾನ್ಯಾಹುರಕೃತಾನಿ ತು ಸಪ್ತ ವೈ ।**
**ಭೂರಾದಯಸ್ತು ಸಂಖ್ಯಾತಾಃ ಸಪ್ತ ಲೋಕಾಃ ಕೃತಾಸ್ತ್ವಿಹ ॥ ೧೧ ॥**

**ಅಕೃತಾನಿ ತು ಸಪ್ತೈವ ಪ್ರಾಕೃತಾನಿ ತು ಯಾನಿ ವೈ ।**
**ಸ್ಥಾನಾನಿ ಸ್ಥಾನಿಭಿಃ ಸಾರ್ಧಂ ಕೃತಾನಿ ತು ನಿಬಂಧನಂ ॥ ೧೨ ॥**

---

೯. ಈ ರೀತಿಯಲ್ಲಿ ವಿನಯಯುಕ್ತರಾದ ಮುನಿಗಳಿಂದ ಪ್ರಾರ್ಥಿತನೂ ತತ್ತ್ವವೇದಿಯೂ ಆದ ವಾಯುದೇವನು ವಿನಯಾನ್ವಿತರಾದ ಮುನಿಗಳನ್ನು ಕುರಿತು ಮಧುರವೂ, ಯಥಾರ್ಥವೂ ಆದ ವಿಷಯಗಳನ್ನು ಹೇಳಲುಪಕ್ರಮಿಸಿದನು.

೧೦. ವಾಯುದೇವನು ಹೇಳಿದನು:—ಎಲೈ ವಿಪ್ರವರ್ಯರೇ, ಮಹಾತ್ಮರು ವರ್ಣಿಸಿರುವ ಲೋಕಗಳು ಹದಿನಾಲ್ಕುಗಳಾಗಿವೆ. ಪೂರ್ವದಲ್ಲಿಯೇ ವರ್ಣಿಸಿರುವ ಭೂರಾದಿ ಲೋಕಗಳಲ್ಲಿ ಮನುಷ್ಯರೇ ಮೊದಲಾದವರು ವಾಸಮಾಡುವರು.

೧೧. ಆ ಹದಿನಾಲ್ಕು ಲೋಕಗಳಲ್ಲಿ ಏಳು ಲೋಕಗಳು ಕೃತಕನಾಮಕ ವಾಗಿಯೂ, ಮಿಕ್ಕ ಸಪ್ತಲೋಕಗಳು ಅಕೃತವೆಂಬುದಾಗಿಯೂ ಮಹಾತ್ಮರು ಹೇಳುವರು. ಅವುಗಳಲ್ಲಿ ಭೂರಾದಿ ಸಪ್ತಲೋಕಗಳು ಕೃತಲೋಕಗಳೆಂಬುದಾಗಿ ಈ ಲೋಕದಲ್ಲಿ ಪ್ರಖ್ಯಾತವಾಗಿವೆ.

೧೨. ಅದರಂತೆಯೇ ಕೃತಕವಲ್ಲದ ಪ್ರಕೃತಿ ಸಂಬಂಧಿಯಾದ ಸ್ಥಾನಗಳು ಏಳು ಇವೆ. ಕೆಲವು ಸ್ಥಾನಗಳು ಅವುಗಳಲ್ಲಿರುವ ಪ್ರಜೆಗಳೂ ಕೃತಕವಾಗಿರುವರೆಂದು ತಿಳಿಯಬೇಕು.

ಪೃಥಿವೀಂ ಚಾಂತರಿಕ್ಷಂ ಚ ದಿವ್ಯಂ ಯಚ್ಚ ಮಹಃ ಸ್ಮೃತಂ ।
ಸ್ಥಾನಾನ್ಯೇತಾನಿ ಚತ್ವಾರಿ ಸ್ಮೃತಾನ್ಯಾರ್ಣವಕಾನಿ ಚ ॥ ೧೩ ॥

ಕ್ಷಯಾತಿಶಯಯುಕ್ತಾನಿ ತಥಾಯುಕ್ತಾನಿ ವಕ್ಷ್ಯತೇ ।
ಯಾನಿ ನೈಮಿತ್ತಿಕಾನಿ ಸ್ಯುಸ್ತಿಷ್ಠಂತ್ಯಾಭೂತಸಂಪ್ಲವಂ ॥ ೧೪ ॥

ಜನಸ್ತಪಶ್ಚ ಸತ್ಯಂ ಚ ಸ್ಥಾನಾನ್ಯೇತಾನಿ ತ್ರೀಣಿ ತು ।
ಐಕಾಂತಿಕಾನಿ ಸತ್ವಾನಿ ತಿಷ್ಠಂತೀಹಾಪ್ರಸಂಯಮಾತ್ ॥ ೧೫ ॥

ವ್ಯಕ್ತಾನಿ ತು ಪ್ರವಕ್ಷ್ಯಾಮಿ ಸ್ಥಾನಾನ್ಯೇತಾನಿ ಸಪ್ತ ವೈ ।
ಭೂಲೋಕಃ ಪ್ರಥಮಸ್ತೇಷಾಂ ದ್ವಿತೀಯಸ್ತು ಭುವಃ ಸ್ಮೃತಃ ॥ ೧೬ ॥

ಸ್ವಸ್ತೃತೀಯಸ್ತು ವಿಜ್ಞೇಯಶ್ಚತುರ್ಥೋ ವೈ ಮಹಃ ಸ್ಮೃತಃ ।
ಜನಸ್ತು ಪಂಚಮೋ ಲೋಕಸ್ತಪಃ ಷಷ್ಠೋ ವಿಭಾವ್ಯತೇ ॥ ೧೭ ॥

---

೧೩. ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕ ಎಂಬ ಈ ನಾಲ್ಕು ಲೋಕಗಳೂ ಆರ್ಣವಕವೆಂದು ಪ್ರಖ್ಯಾತವಾಗಿವೆ. ಅಂದರೆ ಪ್ರತಿಮನು ಕಲ್ಪಗಳಲ್ಲಿಯೂ ಈ ನಾಲ್ಕು ಲೋಕಗಳೂ ನಾಶವನ್ನು ಹೊಂದುವುವೆಂದು ಮಹಾತ್ಮರು ಹೇಳುವರು.

೧೪. ಮೇಲೆ ನಿರೂಪಿಸಿದ ನಾಲ್ಕು ಲೋಕಗಳೂ ಅತ್ಯಂತವಾಗಿ ನಶ್ವರಗಳೂ, ನೈಮಿತ್ತಿಕಗಳೂ, ಆಭೂತಸಂಪ್ಲವಕನಾಮಕಗಳೂ ಆಗಿವೆ. ಅಂದರೆ ಅವಾಂತರ ಪ್ರಲಯದವರೆಗೂ ಇದ್ದು ನಾಶವನ್ನು ಹೊಂದುತ್ತವೆ.

೧೫. ಜನಲೋಕ, ತಪೋಲೋಕ, ಸತ್ಯಲೋಕವೆಂಬ ಈ ಮೂರು ಲೋಕಗಳು ಶಾಶ್ವತಗಳು ಇವುಗಳಲ್ಲಿ ಮುಕ್ತಿಗೆ ಯೋಗ್ಯರಾದ ಮಹಾತ್ಮರೂ, ಪ್ರಾಣಿಗಳೂ ಮಹಾಪ್ರಲಯದವರೆಗೂ ವಾಸಮಾಡುವರು.

೧೬–೧೮. ಹೀಗೆ ಪ್ರಖ್ಯಾತವಾದ ಸಪ್ತಲೋಕಗಳನ್ನೂ ಈಗ ನಾಮಸಹಿತವಾಗಿ ನಿರೂಪಿಸುವೆನು ಕೇಳಿರೆಂದನು. ಅವುಗಳಲ್ಲಿ ಭೂಲೋಕವು ಮೊದಲನೆಯದಾಗಿಯೂ, ಭುವರ್ಲೋಕವು ದ್ವಿತೀಯದಾಗಿಯೂ, ಸ್ವರ್ಗಲೋಕವು ಮೂರನೆಯದಾಗಿಯೂ, ಮಹರ್ಲೋಕವು ನಾಲ್ಕನೆಯದಾಗಿಯೂ, ಜನಲೋಕವು ಐದನೆಯ

ಸತ್ಯಂ ತು ಸಪ್ತಮೋ ಲೋಕೋ ನಿರಾಲೋಕಸ್ತತಃ ಪರಂ ।
ಭೂರಿತಿ ವ್ಯಾಹೃತೇ ಪೂರ್ವಂ ಭೂರ್ಲೋಕಶ್ಚ ತತೋಽಭವತ್ ॥ ೧೮ ॥

ದ್ವಿತೀಯಂ ಭುವ ಇತ್ಯುಕ್ತೆ ಅಂತರಿಕ್ಷಂ ತತೋಽಭವತ್ ।
ತೃತೀಯಂ ಸ್ವರಿತೀತ್ಯುಕ್ತೇ ದಿವಂ ಪ್ರಾದುರ್ಬಭೂವಹ ॥ ೧೯ ॥

ವ್ಯಾಹಾರೈಸ್ತ್ರಿಭಿರೇತೈಸ್ತು ಬ್ರಹ್ಮಲೋಕಮಕಲ್ಪಯತ್ ।
ತತೋ ಭೂಃ ಪಾರ್ಥಿವೋ ಲೋಕ ಅಂತರಿಕ್ಷಂ ಭುವಃ ಸ್ಮೃತಂ ॥ ೨೦ ॥

ಸ್ವರ್ಲೋಕೋ ವೈ ದಿವಂ ಹ್ಯೇತತ್ ಪುರಾಣೇ ನಿಶ್ಚಯಂ ಗತಂ ।
ಭೂತಸ್ಯಾಧಿಪತಿಶ್ಚಾಗ್ನಿಸ್ತತೋ ಭೂತಪತಿಃ ಸ್ಮೃತಃ ॥ ೨೧ ॥

ವಾಯುರ್ಭುವಸ್ಯಾಧಿಪತಿಸ್ತೇನ ವಾಯುರ್ಭುವಸ್ಪತಿಃ ।
ಭವ್ಯಸ್ಯ ಸೂರ್ಯೋಽಧಿಪತಿಸ್ತೇನ ಸೂರ್ಯೋ ದಿವಸ್ಪತಿಃ ॥ ೨೨ ॥

---

ದಾಗಿಯೂ, ತಪೋಲೋಕವು ಆರನೆಯದಾಗಿಯೂ, ಸತ್ಯಲೋಕವು ಏಳನೆಯದಾಗಿಯೂ ಇರುತ್ತವೆ. ಅದರಿಂದ ಆಚೆ ನಿರಾಲೋಕವು ಅಂದರೆ ಯಾವ ಲೋಕವೂ ಇಲ್ಲ. ಅವುಗಳಲ್ಲಿ ಭೂಲೋಕವು ಭೂಃ ಎಂಬ ವ್ಯಾಹೃತಿಯಿಂದ ಉತ್ಪನ್ನವಾಗಿದೆ.

೧೯. ಭುವವೆಂಬ ವ್ಯಾಹೃತಿಯಿಂದ ಎರಡನೆಯದಾದ ಅಂತರಿಕ್ಷಲೋಕವು ಉತ್ಪನ್ನವಾಗಿದೆ. ಸ್ವ ಎಂಬ ವ್ಯಾಹೃತಿಯಿಂದ ಮೂರನೆಯದಾದ ಸ್ವರ್ಗಲೋಕವು ಉತ್ಪನ್ನವಾಗಿದೆ.

೨೦. ಈ ಮೂರು ವ್ಯಾಹೃತಿಗಳಿಂದ ಬ್ರಹ್ಮನು ಮೂರು ಲೋಕಗಳನ್ನೂ ಸೃಷ್ಟಿಸಿರುವನು. ಆದುದರಿಂದ ಭೂಲೋಕವು ಪೃಥಿವೀಲೋಕವಾಗಿಯೂ, ಭುವರ್ಲೋಕವು ಅಂತರಿಕ್ಷಲೋಕವಾಗಿಯೂ, ಇರುತ್ತದೆ.

೨೧-೨೨. ಸ್ವರ್ಗಲೋಕವೆಂದರೆ ದೇವಲೋಕಕ್ಕೆ ಹೆಸರು ಬಂದಿದೆಯೆಂದು ಪುರಾಣದಲ್ಲಿ ಪ್ರಸಿದ್ಧವಾಗಿದೆ. ಅಗ್ನಿಯು ಭೂತಗಳಿಗೆ ಅಧಿಪತಿಯಾಗಿರುವುದರಿಂದ ಭೂತಪತಿಯೆಂದು ಪ್ರಖ್ಯಾತವಾಗಿದೆ. ವಾಯುದೇವನು ಭೂಲೋಕಕ್ಕೆ ಅಂತರಿಕ್ಷಕ್ಕೆ ಅಧಿಪತಿಯಾಗಿರುವುದರಿಂದ ಭುವಸ್ಪತಿಯೆಂದು ಪ್ರಸಿದ್ಧನಾಗಿರುವನು. ಸೂರ್ಯನು ಮಂಗಳಕರವಾದ ಸ್ವರ್ಲೋಕಕ್ಕೆ ಅಧಿಪತಿಯಾಗಿರುವುರಿಂದ ದಿವಸ್ಪತಿಯೆಂದು ಪ್ರಖ್ಯಾತನಾಗಿರುವನು.

ಮಹೇತಿ ವ್ಯಾಹೃತೇಸ್ತೈವಂ ಮಹರ್ಲೋಕಸ್ತತೋಽಭವತ್ ।
ವಿನಿವೃತ್ತಾಧಿಕಾರಾಣಾಂ ದೇವಾನಾಂ ತತ್ರ ವೈ ಕ್ಷಯಃ ॥ ೨೩ ॥

ಜನಸ್ತು ಪಂಚಮೋ ಲೋಕಸ್ತಸ್ಮಾಜ್ಜಾಯಂತಿ ವೈ ಜನಾಃ ।
ತಾಸಾಂ ಸ್ವಾಯಂಭುವಾದ್ಯಾನಾಂ ಪ್ರಜಾನಾಂ ಜನನಾಜ್ಜನಃ ॥ ೨೪ ॥

ಯಾಸ್ತಾಃ ಸ್ವಾಯಂಭುವಾದ್ಯಾ ಹಿ ಪುರಸ್ತಾತ್ಪರಿಕೀರ್ತಿತಾಃ ।
ಕಲ್ಪದಗ್ಧೇ ತದಾ ಲೋಕೇ ಪ್ರತಿಷ್ಠಂತಿ ತದಾ ತಪಃ ॥ ೨೫ ॥

ಋಭುಃ ಸನತ್ಕುಮಾರಾದ್ಯಾ ಯತ್ರ ಸಂತ್ಯೂರ್ಧ್ವರೇತಸಃ ।
ತಪಸಾ ಭಾವಿತಾತ್ಮಾನಸ್ತತ್ರ ಸಂತೀತಿ ವಾ ತಪಃ ॥ ೨೬ ॥

ಸತ್ಯೇತಿ ಬ್ರಹ್ಮಣಃ ಶಬ್ದಃ ಸತ್ತಾಮಾತ್ರಸ್ತು ಸಃ ಸ್ಮೃತಃ ।
ಬ್ರಹ್ಮಲೋಕಸ್ತತಃ ಸತ್ಯಂ ಸಪ್ತಮಃ ಸ ತು ಭಾಸ್ಕರಃ ॥ ೨೭ ॥

---

೨೩. ಮಹಾ ಎಂಬ ವ್ಯಾಹೃತಿಯಿಂದ ಮಹರ್ಲೋಕವು ಉತ್ಪನ್ನವಾಗಿದೆ ಬ್ರಹ್ಮೇಂದ್ರಾದ್ಯಧಿಕಾರದಿಂದ ನಿವೃತ್ತರಾನ ದೇವತೆಗಳು ಮಹರ್ಲೋಕದಲ್ಲಿ ವಾಸಿಸಿ ಕೊನೆಯಲ್ಲಿ ಕ್ಷಯುವನ್ನು ಹೊಂದುವರು.

೨೪. ಜನಲೋಕವು ಐದನೆಯ ಲೋಕವಾಗಿದೆ. ಆ ಲೋಕದಿಂದ ಜನರು ಉದ್ಭವಿಸುವರು. ಆ ಲೋಕವು ಬ್ರಹ್ಮಾದಿ ದೇವತೆಗಳ ಜನನಕ್ಕೆ ಕಾರಣವಾಗಿರುವುದರಿಂದ ಜನಲೋಕವೆಂದು ಪ್ರಖ್ಯಾತವಾಗಿದೆ.

೨೫. ಮೇಲೆ ತಿಳಿಸಿದ ಸ್ವಾಯಂಭುವಮನುವೇ ಮೊದಲಾದ ದೇವತೆಗಳು ಮೇಲೆ ಹೇಳಿದ ಲೋಕಗಳು ಪ್ರಲಯದಿಂದ ದಗ್ಧವಾದರೆ ಅಲ್ಲಿಂದ ತಪೋಲೋಕಕ್ಕೆ ಹೋಗಿ ಆ ತಪೋಲೋಕದಲ್ಲಿ ವಾಸಿಸುವರು.

೨೬. ಊರ್ಧ್ವರೇತಸ್ಕರೂ ತಪಸಿದ್ಧಿಯನ್ನು ಪಡೆದವರೂ ಆದ ಋಭು ಸನತ್ಕುಮಾರನೇ ಮೊದಲಾದ ದೇವತೆಗಳು ಯಾವ ಲೋಕದಲ್ಲಿ ತಪಸ್ಸಿದ್ಧಿಯನ್ನು ಹೊಂದಿದರೋ ಆ ಲೋಕಕ್ಕೆ ತಪೋಲೋಕವೆಂಬ ಸಂಜ್ಞೆಯು ಉಂಟಾಗಿರುತ್ತದೆ.

೨೭. ಸತ್ಯವೆಂಬುದಾಗಿ ಬ್ರಹ್ಮವಾಚಕವಾದ ಸತ್ಯಶಬ್ದವು ನಿಜವನ್ನು ಹೇಳುತ್ತದೆ. ಮತ್ತು ಸರ್ವದಾ ಇರತಕ್ಕದೆಂದು ಸ್ಥಿತಿಯನ್ನೂ ತಿಳಿಸುತ್ತದೆ. ಆದುದರಿಂದ ಬ್ರಹ್ಮದೇವನ ಸತ್ಯಲೋಕವು ಏಳನೆಯದೂ, ಸರ್ವದಾ ಪ್ರಜ್ವಲಿಸುವುದೂ ಆಗಿರುತ್ತದೆ.

ಗಂಧರ್ವಾಪ್ಸರಸೋ ಯಕ್ಷಾ ಗುಹ್ಯಕಾಸ್ತು ಸರಾಕ್ಷಸಾಃ ।
ಸರ್ವಭೂತಪಿಶಾಚಾಶ್ಚ ನಾಗಾಶ್ಚ ಸಹ ಮಾನುಷೈಃ ॥
ಸ್ವರ್ಲೋಕವಾಸಿನಃ ಸರ್ವೇ ದೇವಾ ಭುವಿನಿವಾಸಿನಃ ॥ ೨೮ ॥

ಮರುತೋ ಮಾತರಿಶ್ವಾನೋ ರುದ್ರಾ ದೇವಾಸ್ತಥಾಶ್ವಿನೌ ।
ಅನಿಕೇತಾಂತರಿಕ್ಷಾಸ್ತೇ ಭುವರ್ಲೋಕ್ಯಾ ದಿವೌಕಸಃ ॥ ೨೯ ॥

ಆದಿತ್ಯಾ ಋಭವೋ ವಿಶ್ವೇ ಸಾಧ್ಯಾಶ್ಚ ಪಿತರಸ್ತಥಾ ।
ಋಷಯೋಽಂಗಿರಸಶ್ಚೈವ ಭುವರ್ಲೋಕಂ ಸಮಾಶ್ರಿತಾಃ ॥ ೩೦ ॥

ಏತೇ ವೈಮಾನಿಕಾ ದೇವಾಸ್ತಾರಾಗ್ರಹನಿವಾಸಿನಃ ।
ಇತ್ಯೇತೇ ಕ್ರಮಶಃ ಪ್ರೋಕ್ತಾ ಬ್ರಹ್ಮವ್ಯಾಹಾರಸಂಭವಾಃ ॥ ೩೧ ॥

ಭೂರ್ಲೋಕ ಪ್ರಥಮಾ ಲೋಕಾ ಮಹದಂತಾಶ್ಚ ತೇ ಸ್ಮೃತಾಃ ।
ಆರಭ್ಯಂತೇ ತು ತನ್ಮಾತ್ರೈಃ ಶುದ್ಧಾಸ್ತೇಷಾಃ ಪರಸ್ಪರಂ ॥ ೩೨ ॥

---

೨೮. ಗಂಧರ್ವರು, ಅಪ್ಸರಸರು, ಯಕ್ಷರು, ಗುಹ್ಯಕರು, ರಾಕ್ಷಸರು, ಸರ್ಪಗಳು, ಭೂತಪ್ರೇತ ಪಿಶಾಚಗಳು, ನಾಗಗಳು ಮತ್ತು ಮನುಷ್ಯರು, ಸ್ವರ್ಲೋಕವಾಸಿಗಳಾದ ಸರ್ವದೇವತೆಗಳು ಇವರು ಭೂಲೋಕದಲ್ಲಿ ವಾಸಿಸುವರು.

೨೯. ಮರುತ್ತುಗಳು, ವಾಯುಗಳು, ರುದ್ರರು, ಅಶ್ವನೀದೇವತೆಗಳು ಮನೆಯಿಲ್ಲದೇ ಅಂತರಿಕ್ಷದಲ್ಲಿ ವಾಸಿಸುವರು. ಇವರು ಭುವರ್ಲೋಕವಾಸಿಗಳಾದ ದೇವತೆಗಳಾಗಿರುವರು.

೩೦. ಆದಿತ್ಯರು, ಋಭುಗಳು, ವಿಶ್ವೇದೇವತೆಗಳು, ಸಾಧ್ಯರು, ಪಿತೃಗಳು, ಋಷಿಗಳು, ಅಂಗಿರಸರು ಇವರೂ ಸಹ ಭುವರ್ಲೋಕವಾಸಿಗಳಾಗಿರುವರು.

೩೧. ಈ ವೈಮಾನಿಕ ದೇವತೆಗಳು ನಕ್ಷತ್ರಗ್ರಹಗಳ ಲೋಕದಲ್ಲಿ ವಾಸ ಮಾಡುವರು. ಈ ರೀತಿಯಾಗಿ ಬ್ರಹ್ಮಜ್ಞಾನಿಗಳಾದ ಮಹಾತ್ಮರ ವಿಷಯಗಳನ್ನು ಕ್ರಮವಾಗಿ ನಿಮಗೆ ತಿಳಿಸಿರುತ್ತೇನೆಂದು ಮುನಿಯು ಹೇಳಿದನು.

೩೨. ಭುವರ್ಲೋಕವೇ ಮೊದಲಾದ ಮಹದಂತಗಳಾದ ಲೋಕಗಳು ತನ್ಮಾತ್ರಗಳಿಂದ ಆರಬ್ಧವಾಗಿವೆ. ಮತ್ತು ಪರಸ್ಪರ ಸಂಬಂಧಿಗಳೂ ಪರಿಶುದ್ಧಿಗಳೂ ಆಗಿವೆ.

ಶುಕ್ರಾದ್ಯಾಶ್ಚಾಕ್ಷುಷಾಂತಾಶ್ಚ ಯೇ ವ್ಯತೀತಾ ಭುವಂ ಶ್ರಿತಾಃ ।
ಮಹರ್ಲೋಕಶ್ಚತುರ್ಥಸ್ತು ತಸ್ಮಿಂಸ್ತೇ ಕಲ್ಪವಾಸಿನಃ ॥ ೩೩ ॥

ಭೂರ್ಲೋಕಪ್ರಥಮಾ ಲೋಕಾ ಮಹದಂತಾಶ್ಚ ಯೇ ಸ್ಮೃತಾಃ ।
ತಾನ್ ಸರ್ವಾನ್ ಸಪ್ತ ಸೂರ್ಯಾಸ್ತೇ ಅರ್ಚಿರ್ಭಿರ್ನಿರ್ದಹಂತಿ ವೈ ॥ ೩೪ ॥

ಮರೀಚಿಃ ಕಶ್ಯಪೋ ದಕ್ಷಸ್ತಥಾ ಸ್ವಾಯಂಭುವೋಂಗಿರಾಃ ।
ಭೃಗುಃ ಪುಲಸ್ತ್ಯಃ ಪುಲಹಃ ಕ್ರತುರಿತ್ಯೇವಮಾದಯಃ ॥ ೩೫ ॥

ಪ್ರಜಾನಾಂ ಪತಯಃ ಸರ್ವೇ ವರ್ತಂತೇ ತತ್ರ ತೈಃ ಸಹ ।
ನಿಃಸತ್ವಾ ನಿರ್ಮಮಾಶ್ಚೈವ ತತ್ರ ತೇ ಹ್ಯೂರ್ಧ್ವರೇತಸಃ ॥ ೩೬ ॥

ಋಭುಃ ಸನತ್ಕುಮಾರಾದ್ಯಾ ವೈರಾಜ್ಯಾಸ್ತೇ ತಪೋಧನಾಃ ।
ಮನ್ವಂತರಾಣಾಂ ಸರ್ವೇಷಾಂ ಸಾವರ್ಣಾನಾಂ ತತಃ ಸ್ಮೃತಾಃ ॥
ಚತುರ್ದಶಾನಾಂ ಸರ್ವೇಷಾಂ ಪುನರಾವೃತ್ತಿ ಹೇತವಃ ॥ ೩೭ ॥

೩೩. ಶುಕ್ರಾದಿಯಾದ ಚಾಕ್ಷುಷಾಂತರಾದ ಯಾವ ದೇವತೆಗಳು ಅತೀತರಾಗಿರುವರೋ ಮತ್ತು ಭೂಲೋಕದಲ್ಲಿ ವಾಸಿಸುವರೋ ಅವರೆಲ್ಲರೂ ನಾಲ್ಕನೆಯದಾದ ಮಹರ್ಲೋಕದಲ್ಲಿ ವಾಸಿಸುವರು.

೩೪. ಭೂಲೋಕವೇ ಮೊದಲಾದ ಮಹದಂತಗಳಾದ ಯಾವ ಲೋಕಗಳು ಇರುವುವೋ ಅವುಗಳೆಲ್ಲವನ್ನೂ ಏಳು ಸೂರ್ಯರು ತಮ್ಮ ಜ್ವಾಲೆಗಳಿಂದ ದಹಿಸುವರು.

೩೫–೩೬. ಮರೀಚಿ, ಕಶ್ಯಪ, ದಕ್ಷ, ಸ್ವಾಯಂಭುವ, ಅಂಗಿರಸ, ಭೃಗು, ಪುಲಸ್ತ್ಯ, ಪುಲಹ, ಕ್ರತು ಇವರೇ ಮೊದಲಾದವರೂ ಸಮಸ್ತರಾದ ಪ್ರಜಾಪತಿಗಳು ನಿರ್ಬಲರೂ, ನಿರಹಂಕಾರಿಗಳೂ, ಊರ್ಧ್ವರೇತಸ್ಕರೂ ಆದ ಮಹಾತ್ಮರು ಇವರು ಈ ಲೋಕದಲ್ಲಿ ವಾಸಿಸುವರು.

೩೭. ಋಭುವು, ಸನತ್ಕುಮಾರರು ಇವರೇ ಮೊದಲಾದ ವಿರಾಗಿಗಳಾದ ತಪೋಧನರು ಮಹರ್ಲೋಕವಾಸಿಗಳಾಗಿರುವರು. ಸಕಲ ಮನ್ವಂತರವಾಸಿಗಳೂ, ಸಾವರ್ಣಿಗಳೂ, ಚತುರ್ದಶ ಮನುಗಳೂ ಇವರು ಪುನರಾವೃತ್ತಿಶೂನ್ಯರಾಗಿರುವರು.

ಯೋಗಂ ತಪಶ್ಚ ಸತ್ಯಂ ಚ ಸಮಾಧಾಯ ತದಾತ್ಮನಿ ।
ಷಷ್ಠೇ ಕಾಲೇ ನಿವರ್ತಂತೇ ತತ್ರದಾಹವಿಪರ್ಯಯೇ ॥ ೩೮ ॥

ಸತ್ಯಂ ತು ಸಪ್ತಮೋ ಲೋಕೋ ಹ್ಯಪುನರ್ಮಾರ್ಗಗಾಮಿನಾಂ ।
ಬ್ರಹ್ಮಲೋಕಃ ಸಮಾಖ್ಯಾತೋ ಹ್ಯಪ್ರತೀಘಾತಲಕ್ಷಣಃ ॥ ೩೯ ॥

ಪರ್ಯಾಸಪರಿಮಾಣ್ಯೇನ ಭೂರ್ಲೋಕಃ ಸಮಿತಿಃ ಸ್ಮೃತಃ ।
ಭೂಮ್ಯಂತರಂ ಯದಾದಿತ್ಯಾದಂತರಿಕ್ಷಂ ಭುವಃ ಸ್ಮೃತಂ ॥ ೪೦ ॥

ಸೂರ್ಯಧ್ರುವಾಂತರಂ ಯಚ್ಚ ಸ್ವರ್ಗಲೋಕೋ ದಿವಃ ಸ್ಮೃತಃ ।
ಧ್ರುವಾಜ್ಜನಾಂತರಂ ಯಚ್ಚ ಮಹರ್ಲೋಕಸ್ತದುಚ್ಯತೇ ॥ ೪೧ ॥

---

೩೮. ಆಗ ಮಹಾತ್ಮರು ಯೋಗ, ಸತ್ಯ ಇವುಗಳನ್ನು ಹೊಂದಿ ಮನಶ್ಶಾಂತತೆಯಿಂದ ಇದ್ದುಕೊಂಡು ಆರನೆಯ ಕಾಲದಲ್ಲಿ ಅಲ್ಲಿಂದ ಹಿಂದಕ್ಕೆ ಹೋಗುವರು. ಅವರು ಪ್ರಲಯಕಾಲದಲ್ಲಿ ಲಯವಾಗುವರು.

೩೯. ಸತ್ಯಲೋಕವು ಏಳನೆಯ ಲೋಕವಾಗಿಯೂ, ಪುನರಾವೃತ್ತಿರಹಿತವಾಗಿಯೂ, ಯಾವವಿಧ ವಿಕಾರರಹಿತವಾಗಿಯೂ, ಉಪದ್ರವವಿಲ್ಲುದುದಾಗಿಯೂ, ಬ್ರಹ್ಮದೇವನದಾಗಿಯೂ ಇರುತ್ತದೆ.

೪೦. ಪರ್ಯಾಸಪರಿಮಾಣದಿಂದ ಭೂಲೋಕಕ್ಕೆ ಸಮ್ ಎಂಬುದಾಗಿ ಹೆಸರು ಬಂದಿದೆ. ಭೂಮಿಯ ಮೇಲೆ ಸೂರ್ಯಮಂಡಲದವರೆಗೂ ಇರುವ ಅಂತರಿಕ್ಷಕ್ಕೆ ಭುವರ್ಲೋಕವೆಂಬ ನಾಮವು ಉಂಟಾಗಿದೆ.

೪೧. ಸೂರ್ಯಮಂಡಲದಿಂದ ಧ್ರುವಮಂಡಲದವರೆಗೂ ಇರುವ ಲೋಕಕ್ಕೆ ಸ್ವರ್ಗಲೋಕ ಅಥವಾ ದಿವವೆಂಬ ನಾಮವು ಸಂಭವಿಸಿರುತ್ತದೆ. ಧ್ರುವಮಂಡಲದಿಂದ ಜನಲೋಕದವರೆಗೂ ಇರುವ ಲೋಕಕ್ಕೆ ಮಹರ್ಲೋಕವೆಂಬ ಸಂಜ್ಞೆಯು ಉಂಟಾಗಿರುವುದು.

ವಿಖ್ಯಾತಾಃ ಸಪ್ತಲೋಕಾಸ್ತು ತೇಷಾಂ ವಕ್ಷ್ಯಾಮಿ ಸಿದ್ಧಯಃ ।
ಭೂರ್ಲೋಕವಾಸಿನಃ ಸರ್ವೇ ಹ್ಯನ್ನಾದಾಸ್ತು ರಸಾತ್ಮಕಾಃ ॥ ೪೨ ॥

ಭುವೇ ಸ್ವರ್ಗೇ ಚ ಯೇ ಸರ್ವೇ ಸೋಮಪಾ ಆಜ್ಯಪಾಶ್ಚ ತೇ ।
ಚತುರ್ಥೇ ಯೇಪಿ ವರ್ತಂತೇ ಮಹರ್ಲೋಕಂ ಸಮಾಶ್ರಿತಾಃ ॥ ೪೩ ॥

ವಿಜ್ಞೇಯಾ ಮಾನಸೀ ತೇಷಾಂ ಸಿದ್ಧಿರ್ವೈ ಪಂಚಲಕ್ಷಣಾ ।
ಸದ್ಯಶ್ಚೋತ್ಪದ್ಯತೇ ತೇಷಾಂ ಮನಸಾ ಸರ್ವಮೀಪ್ಸಿತಂ ॥ ೪೪ ॥

ಏತೇ ದೈವಾ ಯಜಂತೇ ವೈ ಯಜ್ಞೈಃ ಸರ್ವೈಃ ಪರಸ್ಪರಂ ।
ಅತೀತಾನ್ ವರ್ತಮಾನಾಂಶ್ಚ ವರ್ತಮಾನಾನನಾಗತಾನ್ ॥ ೪೫ ॥

ಪ್ರಥಮಾನಂತರೈರಿಷ್ಟ್ವಾ ಹ್ಯಂತರಾಃ ಸಾಂಪ್ರತೈಃ ಪುನಃ ।
ನಿವರ್ತತೀತ್ಯಾಸಂಬಂಧೋಽತೀತೇ ದೇವಗಣೇ ತತಃ ॥ ೪೬ ॥

---

೪೨. ಎಲೈ ವಿಪ್ರೋತ್ತಮರೇ, ಹೀಗೆ ಸಪ್ತಲೋಕಗಳೂ ಸುಪ್ರಸಿದ್ಧವಾಗಿವೆ. ಈಗ ಆ ಸಪ್ತಲೋಕಗಳಲ್ಲಿ ಆಗತಕ್ಕ ಸಿದ್ಧಿಗಳನ್ನು ತಿಳಿಸುವೆನು ಕೇಳಿರಿ. ಭೂಲೋಕವಾಸಿಗಳಾದ ಸರ್ವರೂ ರಸಾತ್ಮಕವಾದ ಅನ್ನಭಕ್ಷಕರಾಗಿರುವರು.

೪೩–೪೪. ಭುವರ್ಲೋಕ, ಸ್ವರ್ಗಲೋಕವಾಸಿಗಳೆಲ್ಲರೂ ಸೋಮಪಾಯಿಗಳೂ ಮತ್ತು ಆಜ್ಯಪಾಯಿಗಳೂ ಆಗಿರುವರು. ನಾಲ್ಕನೆಯದಾದ ಮಹರ್ಲೋಕವಾಸಿಗಳಾದ ದೇವತೆಗಳೆಲ್ಲರೂ ಪಂಚಲಕ್ಷಣಾತ್ಮಕವಾದ ಮನಸ್ಸಿದ್ಧಿಯುಳ್ಳವರಾಗಿರುವರು. ಆ ದೇವತೆಗಳು ಮನಸ್ಸಿನಲ್ಲಿ ಯಾವುದನ್ನು ಬಯಸುವರೋ ಅವೆಲ್ಲವೂ ಕೂಡಲೇ ಅವರಿಗೆ ಸಿದ್ಧವಾಗುವುವು.

೪೫. ಈ ದೇವತೆಗಳು ಸಮಸ್ತವಾದ ಯಜ್ಞಗಳಿಂದ ಪರಸ್ಪರವಾಗಿ ಪೂಜಿಸುವರು. ಈಗ ಇರತಕ್ಕ ದೇವತೆಗಳು ಅತೀತರಾದ ದೇವತೆಗಳನ್ನೂ, ಮುಂದೆ ಬರುವ ಭವಿಷ್ಯದ್ದೇವತೆಗಳು ವರ್ತಮಾನದೇವತೆಗಳನ್ನೂ ಅನ್ಯೋನ್ಯವಾಗಿ ಪೂಜಿಸುವರು.

೪೬. ಮೊದಲಿದ್ದ ದೇವಗಣಗಳು ಅನಂತರ ಬಂದ ದೇವತೆಗಳನ್ನೂ ಅವರು ಈಗಿರುವ ದೇವಗಣಗಳನ್ನೂ, ಈ ವರ್ತಮಾನ ದೇವತೆಗಳು ಭವಿಷ್ಯದ್ದೇವಗಣಗಳನ್ನೂ, ಹೀಗೆ ಪರಸ್ಪರವಾಗಿ ಯಜ್ಞಯಾಗಾದಿಗಳಿಂದ ಪೂಜಿಸುವರು. ಹೀಗೆ ಹಿಂದಿನ ಮುಂದಿನ ದೇವತೆಗಳಿಗೆ ಪರಸ್ಪರಸಂಬಂಧವಿರುತ್ತದೆ.

ವಿನಿವೃತ್ತಾಧಿಕಾರಾಣಾಂ ಸಿದ್ಧಿಸ್ತೇಷಾಂ ತು ಮಾನಸೀ ।
ತೇಷಾಂ ತು ಮಾನಸೀ ಜ್ಞೇಯಾ ಶುದ್ಧಾ ಸಿದ್ಧಿಪರಂಪರಾ ॥ ೪೭ ॥

ಉಕ್ತಾ ಲೋಕಾಶ್ಚ ಚತ್ವಾರೋ ಜನಸ್ಯಾನುವಿಧಿಸ್ತಥಾ ।
ಸಮಾಸೇನ ಮಯಾ ವಿಪ್ರಾ ಭೂಯಸ್ತಂ ವರ್ತಯಾಮಿ ವಃ ॥ ೪೮ ॥

॥ ವಾಯುರುವಾಚ ॥

ಮರೀಚಿಃ ಕಶ್ಯಪೋ ದಕ್ಷೋ ವಸಿಷ್ಠಶ್ಚಾಂಗಿರಾ ಭೃಗುಃ ।
ಪುಲಸ್ತ್ಯಃ ಪುಲಹಶ್ಚೈವ ಕ್ರತುರಿತ್ಯೇವಮಾದಯಃ ॥ ೪೯ ॥

ಪೂರ್ವಂ ತೇ ಸಂಪ್ರಸೂಯಂತೇ ಬ್ರಹ್ಮಣೋ ಮನಸಾ ಇಹ ।
ತತಃ ಪ್ರಜಾಃ ಪ್ರತಿಷ್ಠಾಪ್ಯ ಜನಮೇವಾಶ್ರಯಂತಿ ತೇ ॥ ೫೦ ॥

ಕಲ್ಪದಾಹಪ್ರದೀಪ್ತೇಷು ತದಾ ಕಾಲೇಷು ತೇಷು ವೈ ।
ಭೂರಾದಿಷು ಮಹಾಂತೇಷು ಭೃಶಂ ವ್ಯಾಪ್ತೇಷ್ವಥಾಗ್ನಿನಾ ॥ ೫೧ ॥

---

೪೭. ಅಧಿಕಾರಿಗಳನ್ನು ತ್ಯಜಿಸಿರುವ ಆ ದೇವತೆಗಳಿಗೆ ಸಿದ್ಧಿಯು ಮಾನಸಿಕವಾಗಿರುವುದು. ಅವರ ಮನಸ್ಸಿದ್ಧಿಗಳು ಶುದ್ಧವಾಗಿಯೂ, ಪರಂಪರೆಯಾಗಿಯೂ, ನಿತ್ಯವಾಗಿಯೂ ಇರುತ್ತವೆ.

೪೮. ಉಕ್ತವಾದ ನಾಲ್ಕು ಲೋಕಗಳೂ ಜನೋಲೋಕವನ್ನು ಅನುಸರಿಸಿಕೊಂಡಿರುತ್ತವೆ. ಎಲೈ ವಿಪ್ರೋತ್ತಮರೇ, ಅವುಗಳನ್ನು ಸಂಕ್ಷೇಪವಾಗಿ ವರ್ಣಿಸುವೆನು ಕೇಳಿರೆಂದು ಸೂತನು ಹೇಳಿದನು.

೪೯–೫೦. ವಾಯುದೇವನು ಹೇಳಿದನು:––ಈ ಜಗತ್ತಿನಲ್ಲಿ ಬ್ರಹ್ಮದೇವನ ಮನಸ್ಸಿನಿಂದ ಮರೀಚಿ, ಕಶ್ಯಪ, ದಕ್ಷ, ವಸಿಷ್ಠ, ಅಂಗಿರಸ, ಭೃಗು, ಪುಲಸ್ತ್ಯ, ಪುಲಹ, ಕ್ರತು ಇವರೇ ಮೊದಲಾದ ಮಹರ್ಷಿಗಳು ಉದ್ಭವಿಸಿ ತರುವಾಯ ಪ್ರಜೆಗಳನ್ನು ಸೃಷ್ಟಿಸಿ ಸ್ಥಾಪಿಸುವರು. ಬಳಿಕ ಅವರು ಜನೋಲೋಕಕ್ಕೆ ಹೋಗುವರು.

೫೧. ಪ್ರಲಯಕಾಲದ ಅಗ್ನಿಜ್ವಾಲೆಗಳಿಂದ ಲೋಕಗಳೆಲ್ಲವೂ ವ್ಯಾಪ್ತವಾಗಲು ಭೂಲೋಕ ಮೊದಲುಗೊಂಡು ಮಹರ್ಲೋಕದವರೆಗೂ ಅಗ್ನಿಯು ಹರಡುತ್ತದೆ ಅಥವಾ ವ್ಯಾಪ್ತವಾಗುವುದು.

ಶಿಖಾ ಸಂವರ್ತಕಾ ಜ್ಞೇಯಾ ಪ್ರಾಪ್ನುವಂತಿ ಸದಾ ಜನಾಃ ।
ಯಾಮಾದಯೋ ಗಣಾಃ ಸರ್ವೇ ಮಹರ್ಲೋಕನಿವಾಸಿನಃ ॥ ೫೨ ॥

ಮಹರ್ಲೋಕೇಷು ದೀಪ್ತೇಷು ಜನಮೇವಾಶ್ರಯಂತಿ ತೇ ।
ಸರ್ವೇ ಸೂಕ್ಷ್ಮಶರೀರಾಸ್ತೇ ತತ್ರಸ್ಥಾಸ್ತು ಭವಂತಿ ತೇ ॥ ೫೩ ॥

ತೇಷಾಂ ತೇ ತುಲ್ಯಸಾಮರ್ಥ್ಯಾಸ್ತುಲ್ಯಮೂರ್ತಿಧರಾಸ್ತಥಾ ।
ಜನಲೋಕೇ ವಿವರ್ತಂತೇ ಯಾವತ್ಸಂಪ್ಲವತೇ ಜಗತ್ ॥ ೫೪ ॥

ವ್ಯುಷ್ಟಾಯಾಂ ತು ರಜನ್ಯಾಂ ವೈ ಬ್ರಹ್ಮಣೋ ವ್ಯಕ್ತಯೋನಿನಃ ।
ಅಹರಾದೌ ಪ್ರಸೂಯಂತೇ ಪೂರ್ವವತ್ಕ್ರಮಶಸ್ತ್ವಿಹ ॥ ೫೫ ॥

---

೫೨. ಆಗ ಸಂವರ್ತಕ ನಾಮಕವಾದ ಪ್ರಲಯಾಗ್ನಿಯ ಜ್ವಾಲೆಗಳು ಪ್ರಜೆಗಳನ್ನು ಸುಟ್ಟು ಭಸ್ಮಮಾಡುವುವು. ಆಗ ಯಾಮಾದಿ ಸರ್ವದೇವತೆಗಳೂ ತಮ್ಮ ಲೋಕವನ್ನು ಬಿಟ್ಟು ಮಹರ್ಲೋಕವನ್ನು ಹೊಂದುವರು.

೫೩. ಪ್ರಲಯಾಗ್ನಿಯ ಜ್ವಾಲೆಗಳು ಮಹರ್ಲೋಕವನ್ನು ವ್ಯಾಪಿಸಿ ಸುಡಲಾಗಿ ಅಲ್ಲಿ ವಾಸಿಸುವ ದೇವಾದಿಗಳೆಲ್ಲರೂ ಸೂಕ್ಷ್ಮಶರೀರಗಳನ್ನು ಹೊಂದಿ ಅಲ್ಲಿಂದ ಜನಲೋಕಕ್ಕೆ ಹೋಗುವರು. ಜನಲೋಕದ ದೇವಾದಿಗಳೆಲ್ಲರೂ ಸೂಕ್ಷ್ಮವಾದ ಮಹರ್ಲೋಕದಲ್ಲಿ ಶರೀರಗಳಿಂದ ಪ್ರಕಾಶಿಸುವರು.

೫೪. ಆ ದೇವಮಹರ್ಷ್ಯಾದಿಗಳು ಸಮಾನವಾದ ಸಾಮರ್ಥ್ಯವುಳ್ಳವರಾಗಿಯೂ, ಸಮಾನವಾದ ಆಕಾರವುಳ್ಳವರಾಗಿಯೂ, ಮಹಾ ಪ್ರಲಯಕಾಲದವರೆಗೂ ವಾಸಮಾಡುವರು.

೫೫. ಅನಂತರ ಅವ್ಯಕ್ತಕಾರಣನಾದ ಬ್ರಹ್ಮದೇವನ ರಾತ್ರಿಯು ಅಂದರೆ ಪ್ರಲಯಕಾಲವು ಕಳೆಯಲಾಗಿ, ಬ್ರಹ್ಮದೇವನ ಹಗಲಿನಲ್ಲಿಪೂರ್ವದಂತೆ ಕ್ರಮವಾಗಿ ಪ್ರಜೆಗಳು ಉತ್ಪನ್ನವಾಗುವರು.

**ಸ್ವಾಯಂಭುವಾದಯಃ ಸರ್ವೇ ಮರೀಚ್ಯಂತಾಸ್ತು ಸಾಧಕಾಃ ।**
**ದೇವಾಸ್ತೇ ವೈ ಪುನಸ್ತೇಷಾಂ ಜಾಯಂತೇ ನಿಧನೇಷ್ವಿಹ ॥ ೫೬ ॥**

**ಯಾಮಾದಯಃ ಕ್ರಮೇಣೈವ ಕನಿಷ್ಠಾದ್ಯಾಃ ಪ್ರಜಾಪತೇಃ ।**
**ಪೂರ್ವಂ ಪೂರ್ವಂ ಪ್ರಸೂಯಂತೇ ಪಶ್ಚಿಮೇ ಪಶ್ಚಿಮಾಸ್ತಥಾ ॥ ೫೭ ॥**

**ದೇವಾನ್ವಯೇ ದೇವತಾ ಹಿ ಸಪ್ತ ಸಂಭೂತಯಃ ಸ್ಮೃತಾಃ ।**
**ವ್ಯತೀತಾಃ ಕಲ್ಪಜಾಸ್ತೇಷಾಂ ತಿಸ್ರಃ ಶಿಷ್ಟಾಸ್ತಥಾ ಪರೇ ॥ ೫೮ ॥**

**ಆವರ್ತಮಾನಾ ದೇವಾಸ್ತೇ ಕ್ರಮೇಣೈತೇ ನ ಸರ್ವಶಃ ।**
**ಗತ್ವಾ ಜವಂತವೀಭಾವಂಶ ಕೃತ್ವಃ ಪುನಃ ಪುನಃ ॥ ೫೯ ॥**

---

೫೬. ಸ್ವಾಯಂಭುವಾದಿಯೂ, ಮರೀಚಿಮುನಿಯೇ ಕೊನೆಯಾಗಿಯೂ, ಇರುವ ಸಮಸ್ತರಾದ ಸಾಧಕ ದೇವತೆಗಳು ಪ್ರಲಯಕಾಲವು ಮುಗಿದು ಸೃಷ್ಟಿಗೆ ಉಪಕ್ರಮವಾಗಲು, ಪುನಃ ಉದ್ಭವಿಸುವರು.

೫೭. ಯಾಮಾದಿಗಳೂ, ಕನಿಷ್ಠಾದಿಗಳೂ ಆದ ದೇವತೆಗಳು ಬ್ರಹ್ಮದೇವನಿಂದ ಸೃಷ್ಟಿಕ್ರಮವಾಗಿ ಮೊದಲು ಮೊದಲು ಜನಿಸುವರು. ತರುವಾಯ ಹುಟ್ಟಬೇಕಾದ ದೇವತೆಗಳು ಅನಂತರ ಹುಟ್ಟುವರು.

೫೮. ದೇವತೆಗಳ ವಂಶದಲ್ಲಿ ದೇವತೆಗಳೂ, ಮುನಿಗಳ ವಂಶದಲ್ಲಿ ಮುನಿಗಳೂ ಇತರರ ವಂಶದಲ್ಲಿ ಇತರರೂ ಜನಿಸುವರು. ಒಂದು ಜನ್ಮದಲ್ಲಿ ಮನುಷ್ಯರು ಮಾಡಿದ ಕರ್ಮಗಳು ಅವರಿಗೆ ಏಳು ಜನ್ಮಗಳನ್ನು ಕೊಡುತ್ತವೆ. ಪೂರ್ವದ ಕಲಿಯುಗದಲ್ಲಿ ಜನಿಸಿದ ದೇವತೆಗಳ ಪೈಕಿ ಮೂರು ಜಾತಿಯ ದೇವತೆಗಳು ಉಳಿಯುವರು.

೫೯. ದೇವತೆಗಳೆಲ್ಲರೂ ಕ್ರಮವಾಗಿ ಜನನ ಮರಣಗಳನ್ನು ಹೊಂದುವರು. ಆದರೆ ಎಲ್ಲರೂ ಹಾಗೆ ಜನನ ಮರಣಗಳನ್ನು ಹೊಂದುವದಿಲ್ಲ. ಆದರೆ ಕೆಲವರು ಪುನಃ ಜನಿಸುವುದಿಲ್ಲ. ಕೆಲವರು ಮಾತ್ರ ಸ್ವಧರ್ಮಾನುಸಾರವಾಗಿ ಹತ್ತು ಸಲ ಪದೇ ಪದೇ ಹುಟ್ಟುವರು.

ತತಸ್ತೇ ವೈ ಗಣಾಃ ಸರ್ವೇ ದೃಷ್ಟ್ವಾ ಭಾವೇಷ್ವನಿತ್ಯತಾಂ ।
ಭಾವಿನೋಽರ್ಥಸ್ಯ ಚ ಬಲಾತ್ ಪುಣ್ಯಾಖ್ಯಾತಿಬಲೇನ ಚ ॥ ೬೦ ॥

ನಿವೃತ್ತವೃತ್ತಯಃ ಸರ್ವೇ ಸ್ವಸ್ಥಾಃ ಸುಮನಸಸ್ತಥಾ ।
ವೈ ರಾಜೇ ತೂಪಪದ್ಯಂತೇ ಲೋಕಮುತ್ಸೃಜ್ಯ ತಜ್ಜನಂ ॥ ೬೧ ॥

ತತೋಽನ್ಯೇನ್ಯೈವ ಕಾಲೇನ ನಿತ್ಯಯುಕ್ತಾಸ್ತಪಸ್ವಿನಃ ।
ಕಥನಾಚ್ಚೈವ ಧರ್ಮಸ್ಯ ತೇಷಾಂ ತೇ ಜಜ್ಞಿರೇಽನ್ವಯೇ ॥ ೬೨ ॥

ಇಹೋತ್ಪನ್ನಾಸ್ತತಸ್ತೇ ವೈ ಸ್ಥಾನಾ ಆಪೂರಯಂತ್ಯುತ ।
ದೇವತ್ವೇ ಚ ಋಷಿತ್ವೇ ಚ ಮನುಷ್ಯತ್ವೇ ಚ ಸರ್ವಶಃ ॥ ೬೩ ॥

ಏವಂ ದೇವಗಣಾಃ ಸರ್ವೇ ದಶಕೃತ್ವೋ ನಿವರ್ತ್ಯ ವೈ ।
ವೈರಾಜೇಷೂಪಪನ್ನಾಸ್ತೇ ದಶ ತಿಷ್ಠಂತ್ಯುಪಪ್ಲವಾನ್ ॥ ೬೪ ॥

---

೬೦–೬೧. ಅನಂತರ ದೇವತೆಗಳೆಲ್ಲರೂ ಈ ಜಗತ್ತು ಅನಿತ್ಯವೆಂದು ತಿಳಿದು ಮುಂದೆ ಬರತಕ್ಕ ಅನರ್ಥಪರಂಪರೆಗಳಿಂದಲೂ ಪೂರ್ಣಕೀರ್ತಿಗಳ ಶಕ್ತಿಯಿಂದಲೂ ಸಮಸ್ತ ವ್ಯಾಪಾರಗಳನ್ನು ಬಿಟ್ಟು ಸ್ವಸ್ಥರಾಗಿ ಜನಲೋಕವನ್ನು ಬಿಟ್ಟು ವೈರಾಜ ನಾಮಕವಾದ ಲೋಕದಲ್ಲಿ ಜನಿಸುವರು

೬೨. ಅನಂತರ ನಿತ್ಯರೂ ವಿವೇಕಯುಕ್ತರೂ ಆದ ತಪಸ್ವಿಗಳು ಕೆಲವು ಕಾಲ ಕಳೆಯಲು ತಮ್ಮ ತಮ್ಮ ಧರ್ಮಾನುಗುಣವಾಗಿ ಅವರ ವಂಶಗಳಲ್ಲಿ ಜನಿಸುವರು.

೬೩. ತರುವಾಯ ಅವರು ಈ ಲೋಕದಲ್ಲಿ ದೇವತೆಗಳಾಗಿಯೂ, ಮಹರ್ಷಿಗಳಾಗಿಯೂ, ಮನುಷ್ಯರಾಗಿಯೂ ಜನಿಸಿ ತಮ್ಮ ಸೃಷ್ಟಿಯಿಂದ ಲೋಕವನ್ನು ಪೂರ್ಣಮಾಡುವರು.

೬೪. ಹೀಗೆ ದೇವಗಣಗಳೆಲ್ಲಾ ಹತ್ತುಸಲ ಜನನ ಮರಣಗಳನ್ನು ಪಡೆದು, ಕೊನೆಗೆ ವೈರಾಜನಾಮಕಲೋಕವನ್ನು ಹೊಂದಿ ಅಲ್ಲಿ ಮಹಾಪ್ರಲಯದವರೆಗೂ ಇರುವರು.

**ಪೂರ್ಣೇ ಪೂರ್ಣೇ ತತಃ ಕಲ್ಪೇ ಸ್ಥಿತ್ವಾ ವೈರಾಜಕೇ ಪುನಃ ।**
**ಬ್ರಹ್ಮಲೋಕೇ ವಿವರ್ತಂತೇ ಪೂರ್ವಪೂರ್ವಕ್ರಮೇಣ ತು ॥ ೬೫ ॥**

**ಏತಸ್ಮಿನ್ ಬ್ರಹ್ಮಲೋಕೇ ತು ಕಲ್ಪೇ ವೈರಾಜಕೇ ಗತೇ ।**
**ವೈರಾಜಂ ಪುನರಪ್ಯೇಕೇ ಕಲ್ಪಸ್ಥಾನಮಕಲ್ಪಯನ್ ॥ ೬೬ ॥**

**ಏವಂ ಪೂರ್ವಾನುಪೂರ್ವ್ಯೇಣ ಬ್ರಹ್ಮಲೋಕಗತೇನ ವೈ ।**
**ಏವಂ ತೇಷು ವ್ಯತೀತೇಷು ತಪಸಾ ಪರಿಕಲ್ಪಿತೇ ॥**
**ವೈರಾಜೇ ತೂಪಪದ್ಯಂತೇ ದಶಕೃತ್ವೋ ನಿವರ್ತತೇ ॥ ೬೭ ॥**

**ಏವಂ ದೇವಯುಗಾನೀಹ ವ್ಯತೀತಾನಿ ಸಹಸ್ರಶಃ ।**
**ನಿಧನಂ ಬ್ರಹ್ಮಲೋಕೇ ತು ಗತಾನಾಮೃಷಿಭಿಃ ಸಹಃ ॥ ೬೮ ॥**

---

೬೫. ಆ ಬಳಿಕ ಆಯಾ ಕಲ್ಪಗಳು ಪೂರ್ಣವಾಗಲು ಆ ದೇವತೆಗಳು ಹತ್ತು ಕಲ್ಪಗಳು ವೈರಾಜನಾಮಕಲೋಕದಲ್ಲಿದ್ದು ಕ್ರಮವಾಗಿ ಪೂರ್ವ ಪೂರ್ವ ಲೋಕಗಳನ್ನು ಬಿಟ್ಟು ಬ್ರಹ್ಮದೇವನ ಸತ್ಯಲೋಕವನ್ನು ಹೊಂದುವರು.

೬೬. ತರುವಾಯ ವೈರಾಜಕ ಕಲ್ಪಗಳು ಕಳೆಯಲಾಗಿ ಈ ಸತ್ಯಲೋಕವಾಸಿಗಳಾದ ದೇವಗಣಗಳು ವೈರಾಜನಾಮಕವಾದ ಕಲ್ಪಸ್ಥಾನವನ್ನು ಪುನಃ ಹೊಂದುವರು.

೬೭. ಹೀಗೆ ಅವು ಕಳೆದು ಹೋಗಲು ಆ ದೇವತೆಗಳು ತಪಸ್ಸಿನಿಂದ ಯುಕ್ತರಾಗಿ ತಪೋನಿರ್ಮಿತವಾದ ವೈರಾಜಕಲ್ಪದಲ್ಲಿ ಹತ್ತುಸಲ ಜನನ ಮರಣಗಳನ್ನು ಹೊಂದುವರು.

೬೮. ಈ ರೀತಿಯಾಗಿ ಸಹಸ್ರಾರು ದೇವಯುಗಗಳು ಕಳೆಯಲಾಗಿ ನಶ್ವರವಾದ ದೇವತೆಗಳು ಋಷಿಗಳ ಸಂಗಡ ಸತ್ಯಲೋಕವನ್ನು ಹೊಂದಿ ಬ್ರಹ್ಮದೇವನ ಸಂಗಡ ಮುಕ್ತರಾಗುವರು.

|| ಸೂತ ಉವಾಚ ||

ನ ಶಕ್ಯಮಾನುಪೂರ್ವ್ಯೇಣ ತೇಷಾಂ ವಕ್ತುಂ ಪ್ರವಿಸ್ತರಂ ।
ಅನಾದಿತ್ವಾಚ್ಚ ಕಾಲಸ್ಯ ಹ್ಯಸಂಖ್ಯಾನಾಚ್ಚ ಸರ್ವಶಃ ॥
ಏವಮೇವ ನ ಸಂದೇಹೋ ಯಥಾವತ್ಕಥಿತಂ ಮಯಾ || ೧೯ ||

ತದುಪಶ್ರುತ್ಯ ವಾಕ್ಯಾರ್ಥಮೃಷಯಃ ಸಂಶಯಾನ್ವಿತಾಃ ।
ಸೂತಮಾಹುಃ ಪುರಾಣಜ್ಞಂ ವ್ಯಾಸಶಿಷ್ಯಂ ಮಹಾಮತಿಂ || ೨೦ ||

|| ಋಷಯ ಊಚುಃ ||

ವೈರಾಜಾಸ್ತೇ ಯದಾಹಾರಾ ಯತ್ಸತ್ವಾಶ್ಚ ಯದಾಶ್ರಯಾಃ ।
ತಿಷ್ಠಂತಿ ಚೈವ ಯತ್ಕಾಲಂ ತನ್ನೋ ಬ್ರೂಹಿ ಯಥಾತಥಂ || ೨೧ ||

---

೧೯ ಸೂತಮುನಿಯು ಹೇಳಿದನು--ಎಲೈ ಮುನಿಪರ್ಯರೇ, ಆ ದೇವವಂಶವನ್ನು ಕ್ರಮವಾಗಿಯೂ ವಿಸ್ತಾರವಾಗಿಯೂ ಹೇಳಲು ಸಾಧ್ಯವಿಲ್ಲ. ಏಕೆಂದರೆ ಕಾಲವು ಅನಾದಿಯಾಗಿರುವುದರಿಂದಲೂ ವಂಶವು ಅಸಂಖ್ಯಾಕವಾಗಿಯೂ ಇರುವುದರಿಂದಲೂ ವಿಸ್ತಾರವಾಗಿಯೂ ಸಂಪೂರ್ಣವಾಗಿ ಹೇಳಲು ಸಾಧ್ಯವಿಲ್ಲ. ನಾನು ನಿಜವಾದ ವಿಷಯಗಳನ್ನು ಹೇಳುವೆನು ಕೇಳಿರೆಂದನು.

೨೦. ಈ ಮಾತುಗಳನ್ನು ಕೇಳಿದ ಮುನಿಗಳು ಸಂದೇಹಯುಕ್ತರಾಗಿ ಪುರಾಣವೇತ್ತನೂ ವ್ಯಾಸರ ಶಿಷ್ಯನೂ, ಜ್ಞಾನಿಯೂ ಆದ ಸೂತನನ್ನು ಕುರಿತು ಹೇಳಿದರು.

೨೧. ಮುನಿಗಳು ಸೂತರನ್ನು ಕೇಳಿದರು—ಎಲೈ ಸೂತಮುನಿಯೇ ವೈರಾಜನಾಮಕರಾದ ದೇವತೆಗಳಿಗೆ ಆಹಾರವಾವುದು? ಅವರ ಶಕ್ತಿಯೆಷ್ಟಿದೆ, ಅವರಿಗೆ ಆಶ್ರಯವಾವುದು, ಅವರು ಎಲ್ಲಿಯವರೆಗೂ ಇರುವರು? ಇವೆಲ್ಲವನ್ನು ಜ್ಞಾನಿಯಾದ ನೀನು ಯಥಾರ್ಥವಾಗಿ ತಿಳಿಸಬೇಕೆಂದು ಪ್ರಾರ್ಥಿಸಿದರು.

ತದುಕ್ತಮೃಷಿಭಿರ್ವಾಕ್ಯಂ ಶ್ರುತ್ವಾ ಲೋಕಾರ್ಥತತ್ವವಿತ್ |
ಸೂತಃ ಪೌರಾಣಿಕೋ ವಾಕ್ಯಂ ವಿನಯೇನೇದಮಬ್ರವೀತ್ || ೭೨ ||

ತತಃ ಪ್ರಾಪ್ಯಂತ ತೇ ಸರ್ವೇ ಶುದ್ಧಿಶುದ್ಧತಮಾತ್ಮಯೇ |
ಆಭೂತಸಂಪ್ಲವಾಸ್ತತ್ರ ದಶ ತಿಷ್ಠಂತಿ ತೇ ಜನಾಃ || ೭೩ ||

ಸರ್ವೇ ಸೂಕ್ಷ್ಮಶರೀರಾಸ್ತೇ ವಿದ್ವಾಂಸೋ ಘನಮೂರ್ತಯಃ |
ಸ್ಥಿತಲೋಕಸ್ಥಿತತ್ವಾಚ್ಚ ತೇಷಾಂ ಭೂತಂ ನ ವಿದ್ಯತೇ || ೭೪ ||

ಊಚುಃ ಸನತ್ಕುಮಾರಾದ್ಯಾಃ ಸಿದ್ಧಾಸ್ತೇ ಯೋಗಧರ್ಮಿಣಃ |
ಖ್ಯಾತಿಂ ನೈಮಿತ್ತಿಕೀಂ ತೇಷಾಂ ಪರ್ಯಾಯೇ ಸಮುಪಸ್ಥಿತೇ || ೭೫ ||

---

೭೨. ತತ್ವಜ್ಞಾನಿಯೂ ಪೌರಾಣಿಕರತ್ನನೂ ಆದ ಸೂತಮುನಿಯು ಮಹರ್ಷಿಗಳ ಆ ಮಾತುಗಳನ್ನು ಕೇಳಿ ವಿನಯಯುಕ್ತನಾಗಿ ಸಪ್ರೀತಿಯಿಂದ ಋಷಿಗಳಿಗೆ ಮುಂದೆ ಹೇಳುವಂತೆ ವಿಜ್ಞಾಪಿಸಿಕೊಂಡನು.

೭೩. ಎಲೈ ವಿಪ್ರೋತ್ತಮರೇ ಅನಂತರ ಅತ್ಯಂತ ಪರಿಶುದ್ಧರೂ, ಮಹಾತ್ಮರೂ ಆದ ವೈರಾಜನಾಮಕರಾದ ದಶಸಂಖ್ಯಾತರಾದ ದೇವತೆಗಳೆಲ್ಲರೂ ಪ್ರಲಯ ಕಾಲದ ವರೆಗೂ ಸತ್ಯಲೋಕದಲ್ಲಿ ವಾಸಮಾಡುವರು.

೭೪ ಆ ದೇವತೆಗಳೆಲ್ಲರೂ ಸೂಕ್ಷ್ಮಶರೀರಿಗಳೂ, ಪಂಡಿತರೂ, ಘನಮೂರ್ತಿಗಳೂ ಲೋಕಸ್ಥಿತಿಗೆ ಕಾರಣರೂ ಆಗಿರುವುದರಿಂದ ಅವರಿಗೆ ಭೂತಸಂಬಂಧವೇ ಇಲ್ಲ, ಅವರು ಕೇವಲ ತೇಜೋಮಯರಾಗಿರುವರು.

೭೫. ಸನತ್ಕುಮಾರರೇ ಮೊದಲಾದವರೂ ಯೋಗಾಭ್ಯಾಸನಿರತರೂ ಆದ ಸಿದ್ಧಪುರುಷರು ಅವರ ಪರ್ಯಾಯಕಾಲವು ಒದಗಲಾಗಿ ನೈಮಿತ್ತಿಕವಾದ ಅವರ ಖ್ಯಾತಿಯನ್ನು ಹೊಗಳುವರು.

ಸ್ಥಾನತ್ಯಾಗೇ ಮನಶ್ಚಾಪಿ ಯುಗಪತ್ಸಂಪ್ರವರ್ತತೇ।
ಊಚುಃ ಸರ್ವೇ ತದಾನ್ಯೋಽನ್ಯಂ ವೈರಾಜಾಶ್ಶುದ್ಧಬುದ್ಧಯಃ ॥ ೭೬ ॥

ಏವಮೇವ ಮಹಾಭಾಗಾಃ ಪ್ರಣವಂ ಸಂಪ್ರವಿಶ್ಯ ಹ।
ಬ್ರಹ್ಮಲೋಕೇ ಪ್ರವರ್ತಾಮಸ್ತನ್ನಃ ಶ್ರೇಯೋ ಭವಿಷ್ಯತಿ ॥ ೭೭ ॥

ಏವಮುಕ್ತ್ವಾ ತದಾ ಸರ್ವೇ ಬ್ರಹ್ಮಾಂತೇ ವ್ಯವಸಾಯಿನಃ।
ಯೋಜಯಿತ್ವಾ ತದಾ ಸರ್ವೇ ವರ್ತಂತೇ ಯೋಗಧರ್ಮಿಣಃ ॥ ೭೮ ॥

ತತ್ರೈವ ಸಂಪ್ರಲೀಯಂತೇ ಶಾಂತಾ ದೀಪಾರ್ಚಿಷೋ ಯಥಾ।
ಬ್ರಹ್ಮಕಾಯಮವರ್ತಂತ ಪುನರಾವೃತ್ತಿದುರ್ಲಭಂ ॥ ೭೯ ॥

ಲೋಕಂ ತಂ ಸಮನುಪ್ರಾಪ್ಯ ಸರ್ವೇ ತೇ ಭಾವನಾಮಯಂ।
ಆನಂದಂ ಬ್ರಹ್ಮಣಃ ಪ್ರಾಪ್ಯ ಹ್ಯಮೃತತ್ವಾಯ ತೇ ಗತಾಃ ॥ ೮೦ ॥

---

೭೬. ಆ ಸ್ಥಾನವನ್ನು ಬಿಡುವಾಗ ಅವರೆಲ್ಲರೂ ಏಕಮತೀಕರಾಗುವರು. ಆಗ ಶುದ್ಧಮನಸ್ಕರೂ, ವೈರಾಜನಾಮಕರೂ ಆದ ಆ ದೇವತೆಗಳೆಲ್ಲರೂ ಪರಸ್ಪರವಾಗಿ ಮಾತನಾಡುವರು.

೭೭. ತರುವಾಯ ಅವರೆಲ್ಲರೂ ಏಕಮನಸ್ಕರಾಗಿ ನಾವು ಪ್ರಣವೋಪಾಸಕರಾಗಿ ಬ್ರಹ್ಮದೇವನ ಸತ್ಯಲೋಕಕ್ಕೆ ಹೋಗೋಣ ಅದರಿಂದ ನಮಗೆ ಶ್ರೇಯಸ್ಸುಂಟಾಗುವುದೆಂದು ಪರಸ್ಪರವಾಗಿ ಹೇಳಿಕೊಂಡರು.

೭೮. ತರುವಾಯ ಅವರೆಲ್ಲರೂ ಈ ರೀತಿಯಾಗಿ ಮಾತನಾಡಿಕೊಂಡು ಬ್ರಹ್ಮದೇವನ ಸಮೀಪದಲ್ಲಿ ಯೋಗಪರಾಯಣರಾಗಿಯೂ, ತಪೋನಿರತರಾಗಿಯೂ ಬ್ರಹ್ಮಧ್ಯಾನಪರರಾಗಿಯೂ ಇರುವರು.

೭೯. ತರುವಾಯ ಆ ದೇವತೆಗಳು ದೀಪಜ್ವಾಲೆಯು ಶಾಂತವಾಗುವಂತೆ ಬ್ರಹ್ಮನಲ್ಲಿಯೇ ಲೀನರಾಗಿ ಪುನರಾವೃತ್ತಿಶೂನ್ಯವೂ ದುರ್ಲಭವೂ ಆದ ಬ್ರಹ್ಮಪದವಿಯನ್ನು ಹೊಂದುವರು.

೮೦. ಅನಂತರ ಅವರೆಲ್ಲರೂ ಹೀಗೆ ಆಲೋಚನೆಯನ್ನು ಮಾಡಿ ಜ್ಞಾನಸ್ವರೂಪನಾದ ಬ್ರಹ್ಮನ ಲೋಕವನ್ನು ಪಡೆದು ಬ್ರಹ್ಮಾನಂದವನ್ನು ಅನುಭವಿಸುತ್ತಾ ಮುಕ್ತರಾಗುವರು.

ವೈರಾಜ್ಯೇಭ್ಯಸ್ತಥೈವೋರ್ಧ್ವಮಂತರೇ ಷಡ್ಗುಣೇ ತತಃ ।
ಬ್ರಹ್ಮಲೋಕಃ ಸಮಾಖ್ಯಾತೋ ಯತ್ರ ಬ್ರಹ್ಮಾ ಪುರೋಹಿತಃ ॥ ೮೧ ॥

ತೇ ಸರ್ವೇ ಪ್ರಣವಾತ್ಮಾನೋ ಬುದ್ಧಶುದ್ಧತಪಾಸ್ತಥಾ ।
ಆನಂದಂ ಬ್ರಹ್ಮಣಃ ಪ್ರಾಪ್ಯಾಮೃತತ್ವಂ ಚ ಭಜಂತ್ಯುತ ॥ ೮೨ ॥

ದ್ವಂದ್ವೈಸ್ತೇ ನಾಭಿಭೂಯಂತೇ ಭಾವತ್ರಯವಿವರ್ಜಿತಾಃ ।
ಆಧಿಪತ್ಯಂ ವಿನಾ ತುಲ್ಯಾ ಬ್ರಹ್ಮಣಸ್ತೇ ಮಹೌಜಸಃ ॥ ೮೩ ॥

ಪ್ರಭಾವವಿಜಯೈಶ್ವರ್ಯಸ್ಥಿತಿವೈರಾಗ್ಯದರ್ಶನೈಃ ।
ತೇ ಬ್ರಹ್ಮಲೌಕಿಕಾಃ ಸರ್ವೇ ಗತಿಂ ಪ್ರಾಪ್ಯ ವಿವರ್ತನೀಂ ॥ ೮೪ ॥

---

೮೧. ಆ ವೈರಾಜನಾಮಕ ಲೋಕಗಳಿಗಿಂತಲೂ ಮೇಲ್ಭಾಗದಲ್ಲಿ ಷಡ್ಗುಣೈಶ್ವರ್ಯಗಳಿಂದ ಕೂಡಿರುವ ಲೋಕಮಾನ್ಯವಾದ ಬ್ರಹ್ಮದೇವನ ಲೋಕವು ಸರ್ವಮಾನ್ಯವಾಗಿರುವುದು. ಅದರಲ್ಲಿ ಬ್ರಹ್ಮದೇವನು ಮುಖ್ಯಯಜಮಾನನಾಗಿರುವನು.

೮೨. ಅಲ್ಲಿರುವ ಸಮಸ್ತರಾದ ಜ್ಞಾನಿಗಳು ಪ್ರಣವೋಪಾಸಕರೂ, ಶುದ್ಧರೂ, ಬುದ್ಧರೂ, ತಪಸ್ವಿಗಳೂ, ಯೋಗಿಗಳೂ ಆಗಿ ಬ್ರಹ್ಮಾನಂದವನ್ನು ಹೊಂದಿ ಮುಕ್ತರಾಗುವರು.

೮೩. ಅಲ್ಲಿರುವ ಸಮಸ್ತರಾದ ಮುಕ್ತರಿಗೂ ಸಂಸಾರ ಸುಖದುಃಖಾದಿ ಸಂಬಂಧವೂ, ತಾಪತ್ರಯಗಳೂ ಇರುವುದಿಲ್ಲ. ಮಹಾತೇಜಸ್ವಿಗಳಾದ ಅವರು ಬ್ರಹ್ಮದೇವನ ಅಧಿಕಾರವನ್ನು ಬಿಟ್ಟು ಉಳಿದ ವಿಷಯಗಳಲ್ಲಿ ಸಮನಾಗಿರುವರು. ಅಂದರೆ ಎಲ್ಲರೂ ಅನುಗುಣವಾದ ಸುಖವನ್ನು ಪಡೆಯುವರು.

೮೪. ಬ್ರಹ್ಮಲೋಕವಾಸಿಗಳಾದ ಸರ್ವದೇವಋಷ್ಯಾದಿಗಳೂ ಪ್ರಭಾವ, ವಿಜಯ, ಐಶ್ವರ್ಯ, ಸ್ಥಿತಿ, ಗತಿ, ವೈರಾಗ್ಯ ಮತ್ತು ಜ್ಞಾನ ಇವುಗಳಿಂದ ಕೂಡಿ ಉತ್ತಮವಾದ ಗತಿಯನ್ನು ಪಡೆಯುವರು.

ಬ್ರಹ್ಮಣಾ ಸಹ ದೇವೈಶ್ಚ ಸಂಪ್ರಪ್ತೇ ಪ್ರತಿಸಂಚ ।
ತಪಸೋಂತೇ ಕ್ರಿಯಾತ್ಮಾನೋ ಬುದ್ಧಾವಸ್ಥಾ ಮನೀಷಿಣಃ ॥
ಬ್ರಹ್ಮಣಾ ಸಹ ದೇವೈಶ್ಚ ಸಂಪ್ರಾಪ್ತೇ ಪ್ರತಿಸಂಚರೇ ।
ತಪಸೋಂತೇ ಕ್ರಿಯಾತ್ಮಾನೋ ಬುದ್ಧಾವಸ್ಥಾ ಮನೀಷಿಣಃ ॥
ಅವ್ಯಕ್ತೇ ಸಂಪ್ರಲೀಯಂತೇ ಸರ್ವೇಶೇ ಕ್ಷಣದರ್ಶನಃ ॥ ೮೫ ॥

ಇತ್ಯೇತದಮೃತಂ ಶುಕ್ರಂ ನಿತ್ಯಮಾಕ್ಷಯಮವ್ಯಯಂ ।
ದೇವರ್ಷಿಯೋ ಬ್ರಹ್ಮಸತ್ರಂ ಸನಾತನಮುಪಾಸತೇ ॥ ೮೬ ॥

ಅಪುನಮಾರ್ಗಗಾದೀನಾಂ ತೇಷಾಂ ಚೈವೋರ್ಧ್ವರೇತಸಾಂ ।
ಕರ್ಮಾಭ್ಯಾಸಕೃತಾ ಶುದ್ಧಿರ್ವೇದಾಂತೇಷೂಪಲಕ್ಷ್ಯತೇ ॥ ೮೭ ॥

ತತ್ರ ತೇಽಭ್ಯಾಸಿನೋ ಯುಕ್ತಾಃ ಪರಾಂ ಕಾಷ್ಠಾಮುಪಾಸತೇ ।
ಹಿತ್ವಾ ಶರೀರಂ ಪ್ರಾಪ್ತಾನಮಮೃತತ್ವಾಯ ತೇ ಗತಾಃ ॥ ೮೮ ॥

---

೮೫. ಬ್ರಹ್ಮಲೋಕವಾಸಿಗಳೂ, ಸತ್ಕರ್ಮಾನುಷ್ಠಾತೃಗಳೂ, ಜ್ಞಾನರೂಪಿಗಳೂ, ಮಹಾತ್ಮರೂ, ತತ್ವದರ್ಶಿಗಳೂ, ಸೂಕ್ಷ್ಮದರ್ಶಿಗಳೂ ಆದ ಮಹಾತ್ಮರೆಲ್ಲರೂ ಪ್ರಲಯಕಾಲವು ಬರಲು ಬ್ರಹ್ಮದೇವನ ಸಂಗಡ ಅವ್ಯಕ್ತತತ್ವದಲ್ಲಿ ಲೀನರಾಗಿ ಮುಕ್ತರಾಗುವರು.

೮೬. ಹೀಗೆ ದೇವರ್ಷಿಗಳು, ಅಮೃತವೂ, ಶುಭ್ರವೂ, ನಿತ್ಯವೂ, ಅಕ್ಷಯವೂ, ನಾಶರಹಿತವೂ, ಸನಾತನವೂ, ಬ್ರಹ್ಮರೂಪವೂ ಆದ ಯಜ್ಞವನ್ನು ಉಪಾಸನೆ ಮಾಡುತ್ತಾರೆ.

೮೭. ಪುನರಾವೃತ್ತಿರಹಿತವಾದ ಪರಮಪದಮಾರ್ಗಗಾಮಿಗಳೂ, ಊರ್ಧ್ವರೇತಸ್ಕರೂ ಆದ ಮಹಾತ್ಮರ ಕರ್ಮಾಭ್ಯಾಸದಿಂದುಂಟಾದ ದಿವ್ಯಸಿದ್ಧಿಯು ವೇದಾಂತಗಳಲ್ಲಿ ಉಕ್ತವಾಗಿದೆ.

೮೮. ಆ ಮಹಾತ್ಮರು ಸತ್ಯಲೋಕದಲ್ಲಿ ಯೋಗಾಭ್ಯಾಸನಿರತರೂ ಪರಮಪದ ಮಾರ್ಗಾವಲಂಬಿಗಳೂ ಆಗಿ ಪಾಪವನ್ನೂ, ಸ್ಥೂಲಶರೀರವನ್ನೂ ತ್ಯಜಿಸಿ (ಮೋಕ್ಷವನ್ನು) ದಿವ್ಯಪದವಿಯನ್ನು ಹೊಂದುವರು.

**ವೀತರಾಗಾ ಜಿತಕ್ರೋಧಾ ನಿರ್ಮೋಹಾಃ ಸತ್ಯವಾದಿನಃ ।**
**ಶಾಂತಾಃ ಪ್ರಣಿಹಿತಾತ್ಮಾನೋ ದಯಾವಂತೋ ಜಿತೇಂದ್ರಿಯಾಃ || ೮೯ ||**

**ನಿಃಸಂಗಾಃ ಶುಚಯಶ್ಚೈವ ಬ್ರಹ್ಮಸಾಯುಜ್ಯಗಾಃ ಸ್ಮೃತಾಃ ।**
**ಅಕಾಮಯುಕ್ತೈರ್ಯೇ ವೀರಾಸ್ತಪೋಭಿರ್ದಗ್ಧಕಿಲ್ಬಿಷಾಃ ।**
**ತೇಷಾಮಭ್ರಂಶಿನೋ ಲೋಕಾ ಅಪ್ರಮೇಯಸುಖಾಃ ಸ್ಮೃತಾಃ || ೯೦ ||**

**ಏತದ್ಬ್ರಹ್ಮಪದಂ ದಿವ್ಯಂ ಪರಮಂ ವ್ಯೋಮ್ನಿ ಭಾಸ್ವರಂ ।**
**ಯತ್ರ ಗತ್ವಾ ನ ಶೋಚಂತಿ ಹ್ಯಮರಾ ಬ್ರಹ್ಮಣಾ ಸಹ || ೯೧ ||**

**|| ಋಷಯ ಊಚುಃ ||**

**ಕಸ್ಮಾದೇಷ ಪರಾರ್ಧಶ್ಚ ಕಶ್ಚೈಷ ಪರ ಉಚ್ಯತೇ ।**
**ಏತದ್ವೇದಿತುಮಿಚ್ಛಾಮಸ್ತನ್ನೋ ನಿಗದ ಸತ್ತಮ || ೯೨ ||**

೮೯–೯೦. ಆ ಮಹಾತ್ಮರು, ರಾಗರಹಿತರೂ, ಕಾಮಕ್ರೋಧಶೂನ್ಯರೂ, ಮೋಹವರ್ಜಿತರೂ, ಸತ್ಯವಾದಿಗಳೂ, ಶಾಂತರೂಪಿಗಳೂ, ಶಾಂತಾತ್ಮರೂ, ದಯಾವಂತರೂ, ಜಿತೇಂದ್ರಿಯರೂ, ನಿಸ್ಸಂಗಿಗಳೂ, ಶುಚಿಗಳೂ, ಬ್ರಹ್ಮಸಾಯುಜ್ಯಕ್ಕೆ ಅರ್ಹರೂ, ಅಕಾಮ್ಯವಾದ ತಪಸ್ಸುಗಳಿಂದ ದಗ್ಧವಾದ ಪಾಪವುಳ್ಳವರೂ ಆಗಿ ನಾಶರಹಿತವೂ, ಅಪ್ರಮೇಯವೂ, ಸುಖಮಯವೂ ಆದ ದಿವ್ಯಲೋಕವನ್ನು ಹೊಂದುವರೆಂದು ಜ್ಞಾನಿಗಳು ಹೇಳುವರು

೯೧. ಇಂತಹ ಬ್ರಹ್ಮಪದವಿಯು ದಿವ್ಯವೂ, ಉತ್ತಮವೂ, ಪ್ರಕಾಶಕವೂ ಆಗಿ ಅಂತರಿಕ್ಷದಲ್ಲಿ ಪ್ರಕಾಶಿಸುತ್ತದೆ. ಅಲ್ಲಿಗೆ ದೇವಋಷ್ಯಾದಿಮಹಾತ್ಮರು ಬ್ರಹ್ಮದೇವನೊಡನೇ ದಿವ್ಯಪದವಿಯನ್ನು ಹೊಂದಿ, ಮುಕ್ತರಾಗುವರು. ಅಲ್ಲಿ ದುಃಖವು ಲೇಶಮಾತ್ರವೂ ಇರುವುದಿಲ್ಲ.

೯೨. ಮಹರ್ಷಿಗಳು ಹೇಳಿದರು.—ಎಲೈ ಸೂತಮುನಿಯೇ, ಇದು ಹೇಗೆ ಪರಾರ್ಧವಾಗಿದೆ? ಪರನೆಂದರೆ ಯಾರು? ಇವುಗಳನ್ನು ತಿಳಿಯಲಿಚ್ಛಿಸುತ್ತೇವೆ. ನೀನು ಎಲ್ಲವನ್ನೂ ತಿಳಿದ ಜ್ಞಾನಿಯಾದುದರಿಂದ ತಿಳಿಸು ಎಂದು ಬೇಡಿದರು.

|| ಸೂತ ಉವಾಚ ||

ಶೃಣುಧ್ವಂ ಮೇ ಪರಾರ್ಧಂ ಚ ಪರಿಸಂಖ್ಯಾಂ ಪರಸ್ಯ ಚ |
ಏಕಂ ದಶ ಶತಂಚೈವ ಸಹಸ್ರಂಚೈವ ಸಂಖ್ಯಯಾ || ೯೩ ||

ವಿಜ್ಞೇಯಮಾಸಹಸ್ರಂ ತು ಸಹಸ್ರಾಣಿ ದಶಾಯುತಂ |
ಏಕಂ ದಶಸಹಸ್ರಂ ತು ನಿಯುತಂ ಪ್ರೋಚ್ಯತೇ ಬುಧೈಃ || ೯೪ ||

ತಥಾ ಶತಸಹಸ್ರಾಣಾಮರ್ಬುದಂ ಕೋಟಿರುಚ್ಯತೇ |
ಅರ್ಬುದಂ ದಶಕೋಟ್ಯಸ್ತು ಹ್ಯಬ್ಜಂ ಕೋಟಿಶತಂ ವಿದುಃ || ೯೫ ||

ಸಹಸ್ರಮಪಿ ಕೋಟೀನಾಂ ಖರ್ವಮಾಹುರ್ಮನೀಷಿಣಃ |
ದಶಕೋಟಿಸಹಸ್ರಾಣಿ ನಿಖರ್ವಮಿತಿ ತಂ ವಿದುಃ || ೯೬ ||

ಶತಂ ಕೋಟಿಸಹಸ್ರಾಣಾಂ ಶಂಖುರಿತ್ಯಭಿದೀಯತೇ |
ಸಹಸ್ರಂ ತು ಸಹಸ್ರಾಣಾಂ ಕೋಟೀನಾಂ ದಶಧಾ ಪುನಃ ||
ಗುಣಿತಾನಿ ಸಮುದ್ರಂ ವೈ ಪ್ರಾಹುಃ ಸಂಖ್ಯಾವಿದೋ ಜನಾಃ || ೯೭ ||

---

೯೩–೯೫. ಸೂತಮುನಿಯು ಹೇಳಿದನು :---ಎಲೈ ಮುನಿವರ್ಯರೇ, ಪರ, ಪರಾರ್ಧ, ಪರಸಂಖ್ಯಾ ಈ ಮೂರನ್ನು ತಿಳಿಸುವೆನು ಕೇಳಿರಿ. ಈ ಲೋಕದಲ್ಲಿ ಒಂದು ಹತ್ತು ನೂರು ಸಾವಿರವೆಂದು ಪ್ರತಿಯೊಂದು, ಸಂಖ್ಯೆಯೂ ದಶಾಧಿಕವಾಗಿರುತ್ತದೆ. ಹತ್ತು ಸಾವಿರಕ್ಕೆ ಅಯುತವೆಂದೂ, ನೂರು ಸಾವಿರಕ್ಕೆ (ಲಕ್ಷಕ್ಕೆ) ನಿಯುತವೆಂದೂ ನೂರುಲಕ್ಷಕ್ಕೆ ಅಥವಾ ಕೋಟಿಗೆ ಅರ್ಬುದವೆಂದೂ, ದಶಕೋಟಿ ಅಥವಾ ಶತಕೋಟಿಗೆ ಅಬ್ಜವೆಂದೂ ಸಂಜ್ಞೆಯು ಪ್ರಾಪ್ತವಾಗಿವೆ.

೯೬–೯೭. ಕಾಲಜ್ಞರಾದ ಮಹಾತ್ಮರು ಸಹಸ್ರ ಕೋಟಿಗಳನ್ನು ಖರ್ವವೆಂದು ಹೇಳುವರು. ಹತ್ತು ಸಹಸ್ರ ಕೋಟಿಗಳಿಗೆ ನಿಖರ್ವವೆಂದು ಹೇಳುವರು. ನೂರು ಕೋಟಿ ಸಹಸ್ರಗಳಿಗೆ ಶಂಖುವೆಂದು ನಾಮವನ್ನು ಕೊಟ್ಟಿರುವರು. ಸಹಸ್ರದಿಂದ ಸಹಸ್ರ ಕೋಟಿಗಳನ್ನು ಗುಣಿಸಿದರೆ ಸಮುದ್ರವೆಂಬ ನಾಮವನ್ನು ಪಡೆಯುಬಹುದೆಂದು ಸಂಖ್ಯಾಜ್ಞಾನಿಗಳು ಹೇಳುವರು.

ಕೋಟೀನಾಂ ಸಹಸ್ರಮಯುತಮಿತ್ಯಯಂ ಮಧ್ಯ ಉಚ್ಯತೇ ।
ಕೋಟಿಸಹಸ್ರನಿಯುತಾ ಸ ಚಾಂತ ಇತಿ ಸಂಜ್ಞಿತಃ ॥ ೯೮ ॥

ಕೋಟಿಕೋಟಿಸಹಸ್ರಾಣಿ ಪರಾರ್ಧ್ದ ಇತಿ ಕೀರ್ತ್ಯತೇ ।
ಪರಾರ್ಧದ್ವಿಗುಣಂಚಾಪಿ ಪರಮಾಹುರ್ಮನೀಷಿಣಃ ॥ ೯೯ ॥

ಶತಮಾಹುಃ ಪರಿವೃಢಂ ಸಹಸ್ರಂ ಪರಿಪದ್ಮಕಂ ।
ವಿಜ್ಞೇಯಮಯುತಂ ತಸ್ಮಾನ್ನಿಯುತಂ ಪ್ರಯುತಂ ತತಃ ॥ ೧೦೦ ॥

ಅರ್ಬುದಂ ನಿರ್ಬುದಂಚೈವ ಖರ್ಬುದಂಚ ತತಃ ಸ್ಮೃತಂ ।
ಖರ್ವಂಚೈವ ನಿಖರ್ವಂಚ ಶಂಕುಃ ಪದ್ಮಂ ತಥೈವ ಚ ॥ ೧೦೧ ॥

ಸಮುದ್ರಂ ಮಧ್ಯಮಂಚೈವ ಪರಾರ್ಧ್ದಮಪರಂ ತತಃ ।
ಏವಮಷ್ಟಾದಶೈತಾನಿ ಸ್ಥಾನಾನಿ ಗಣನಾವಿಧೌ ॥ ೧೦೨ ॥

---

೯೮–೯೯. ಕೋಟಿಗಳಿಂದ ಗುಣಿತವಾದ ಹತ್ತುಸಹಸ್ರ ಕೋಟಿಗಳಿಗೆ ಮಧ್ಯವೆಂಬ ಸಂಜ್ಞೆಯೂ, ಕೋಟಿಗಳು ಶತಸಹಸ್ರ ಕೋಟಿಗಳಿಂದ ಗುಣಿತವಾದರೆ, ಅಂತವೆಂಬ ನಾಮವೂ, ಕೋಟಿಯಿಂದ ಗುಣಿಸಲ್ಪಟ್ಟ ಕೋಟಿ ಸಂಖ್ಯೆಗಳಿಗೆ ಪರಾರ್ಧವೆಂಬ ನಾಮಧೇಯವೂ ಸಂಭವಿಸಿರುತ್ತವೆ. ಆ ಪರಾರ್ಧವನ್ನು ಎರಡರಿಂದ ಗುಣಿಸಿದರೆ ಕೊನೆಯ ಸಂಖ್ಯೆಯಾಗುವುದೆಂದು ಮಹಾತ್ಮರಾದ ಸಂಖ್ಯಾಕೋವಿದರು ಹೇಳುವರು

೧೦೦. ನೂರು ಸಂಖ್ಯೆಗೆ ಪರಿವೃಢವೆಂದೂ, ಸಾವಿರಕ್ಕೆ ಪರಿಪದ್ಮಕವೆಂದೂ, ಹತ್ತುಸಾವಿರಕ್ಕೆ ಅಯುತವೆಂದೂ, ಲಕ್ಷಕ್ಕೆ ನೂರುಸಾವಿರಕ್ಕೆ ನಿಯುತವೆಂದೂ, ಹತ್ತು ಲಕ್ಷಕ್ಕೆ ಪ್ರಯುತವೆಂದೂ ಸಂಜ್ಞೆಯು ಪ್ರಾಪ್ತವಾಗಿವೆ.

೧೦೧–೧೦೨. ಮತ್ತು ಅರ್ಬುದ, ನಿರ್ಬುದ, ಖರ್ಬುದ, ಖರ್ವ, ನಿಖರ್ವ, ಶಂಖ, ಪದ್ಮ, ಸಮುದ್ರ, ಮಧ್ಯಮ, ಪರಾರ್ಧ, ಅಪರಾರ್ಧ ಎಂಬ ಹದಿನೆಂಟು ಸಂಖ್ಯೆಗಳನ್ನು, ಸಂಖ್ಯೆಗಳನ್ನು ತಿಳಿದಿರುವ ಜ್ಞಾನಿಗಳು ಹೇಳುವರು. ಒಂದರಿಂದ ಅಪರಾರ್ಧದವರೆಗೂ ಹದಿನೆಂಟು ಸಂಖ್ಯೆಗಳು ಇರುತ್ತವೆಯೆಂದು ಜ್ಞಾನಿಗಳ ಮತವು.

ಶತಾ ನೀತಿ ವಿಜಾನೀಯಾತ್ ಸಂಜ್ಞಿತಾನಿ ಮಹರ್ಷಿಭಿಃ ।
ಕಲ್ಪಸಂಖ್ಯಾ ಪ್ರವೃತ್ತಸ್ಯ ಪರಾರ್ದ್ಧಂ ಬ್ರಹ್ಮಣಃ ಸ್ಮೃತಂ ॥ ೧೦೩ ॥

ತಾವಚ್ಛೇಷೋಽಪಿ ಕಾಲೋಸ್ಯ ತಸ್ಯಾಂತೇ ಪ್ರತಿಸೃಜ್ಯತೇ ।
ಪರ ಏಷ ಪರಾರ್ದ್ಧಂಚ ಸಂಖ್ಯಾತಃ ಸಂಖ್ಯಯಾ ಮಯಾ ॥ ೧೦೪ ॥

ಯಸ್ಮಾದಸ್ಯ ಪಂ ವೀರ್ಯಂ ಪರಮಾಯುಃ ಪರಂತಪಃ ।
ಪರಾ ಶಕ್ತಿಃ ಪರೋ ಧರ್ಮಃ ಪರಾ ವಿದ್ಯಾ ಪರಾ ಧೃತಿಃ ॥ ೧೦೫ ॥

ಪರಂ ಬ್ರಹ್ಮ ಪರಂ ಜ್ಞಾನಂ ಪರಮೈಶ್ವರ್ಯಮೇವಚ ।
ತಸ್ಮಾತ್ಪರತರಂ ಭೂತಂ ಬ್ರಹ್ಮಣೋಽನ್ಯನ್ನ ವಿದ್ಯತೇ ॥ ೧೦೬ ॥

---

೧೦೩. ಮಹಾತ್ಮರೂ, ಸಂಖ್ಯಾವಿದರೂ ಆದ ಮಹರ್ಷಿಗಳು ಒಂದರಿಂದ ನೂರರವರೆಗೆ ಪರಸ್ಪರ ಹತ್ತರಿಂದ ಗುಣಿತವಾದ ಸಂಖ್ಯೆಯನ್ನು ಹೇಳುವರು. ಕಲ್ಪಸಂಖ್ಯೆಯಲ್ಲಿ ಪ್ರವೃತ್ತನಾದ ಬ್ರಹ್ಮದೇವನಿಗೆ ಪರಾರ್ಧಸಂಖ್ಯೆಯನ್ನು ಮಹಾತ್ಮರು ಹೇಳುವರು.

೧೦೪. ಬ್ರಹ್ಮದೇವನು ತನಗೆ ಕೊನೆಯದಾದ ಪರಾರ್ಧಕಾಲದವರೆಗೂ ಸುಮ್ಮನಿದ್ದು ತರುವಾಯ ಸೃಷ್ಟಿಯನ್ನು ಮಾಡುವನು. ಪರನೆಂದರೆ ಬ್ರಹ್ಮನೆಂದೂ ಪರಾರ್ಧವೆಂದರೆ ಒಂದರಿಂದ ಹದಿನೆಂಟರವರೆಗೆ ದಶಗುಣಿತವಾದ ಕಾಲವೆಂದೂ ತಿಳಿಯಬೇಕು. ಇದನ್ನು ನಿಮಗಾಗಿ ವರ್ಣಿಸಿರುವೆನು.

೧೦೫–೧೦೬. ಆದುದರಿಂದ ಬ್ರಹ್ಮನು ಪರಶಬ್ದವಾಚ್ಯನಾಗಿರುವನು. ಅವನ ಜ್ಞಾನ, ಐಶ್ವರ್ಯ ಇವೆರಡೂ ಪರಮೋತ್ತಮವಾಗಿರುವುದು. ಮತ್ತು ಯಾವುದರಿಂದ ಬ್ರಹ್ಮದೇವನ ವೀರ್ಯ, ಆಯುಷ್ಯ, ತಪಸ್ಸು, ಶಕ್ತಿ, ಧರ್ಮ, ವಿದ್ಯಾ, ಧೈರ್ಯ ಇವುಗಳು ಸರ್ವೋತ್ತಮವಾಗಿಯೂ, ಅಸಂಖ್ಯಾತವಾಗಿಯೂ ಇರುತ್ತನೆಯೋ ಅದರಿಂದ ಪರಶಬ್ದವಾಚ್ಯನಾದ ಬ್ರಹ್ಮದೇವನಿಗಿಂತಲೂ ಉತ್ತಮವಾದ ಪ್ರಾಣಿಯೋ ಈ ಜಗತ್ತಿನಲ್ಲಿ ಇಲ್ಲವೆಂದು ಘಂಟಾಘೋಷವಾಗಿ ಹೇಳಬಹುದು.

ಪರೇ ಸ್ಥಿತೋ ಹ್ಯೇಷಃ ಪರಂ ಸರ್ವಾರ್ಥೇಷು ತತಃ ಪರಃ ।
ಸಂಖ್ಯಾತಸ್ತು ಪರೋ ಬ್ರಹ್ಮ ತಸ್ಯಾರ್ಧಂ ತು ಪರಾರ್ಧಿಕಾ ॥ ೧೦೭ ॥

ಸಂಖ್ಯೇಯಂ ಚಾಪ್ಯಸಂಖ್ಯೇಯಂ ಸತತಂ ಚಾಪಿತಂ ತ್ರಿಕಂ ।
ಸಂಖ್ಯೇಯಂ ಸಂಖ್ಯಯಾ ದೃಷ್ಟಮಪರಾರ್ಧಾದ್ವಿಭಾಷ್ಯತೇ ॥ ೧೦೮ ॥

ರಾಶೌ ದೃಷ್ಟೇ ನ ಸಂಖ್ಯಾಸ್ತಿ ತದಸಂಖ್ಯಸ್ಯಲಕ್ಷಣಂ ।
ಅನಂತ್ಯಂ ಸಿಕತಾಖ್ಯೇಷು ದೃಷ್ಟವಾನ್ ಪಂಚಲಕ್ಷಣಂ ॥ ೧೦೯ ॥

ಈಶ್ವರೈಸ್ತತ್ರಸಂಖ್ಯಾತಂ ಶುದ್ಧತ್ವಾದ್ದಿವ್ಯದೃಷ್ಟಿಭಿಃ ।
ಏವಂ ಜ್ಞಾನಪ್ರತಿಷ್ಠತ್ವಾತ್ ಸರ್ವಂ ಬ್ರಹ್ಮಾನುಪಶ್ಯತಿ ॥ ೧೧೦ ॥

---

೧೦೭. ಆ ಬ್ರಹ್ಮದೇವನು ಪರಮೋತ್ತಮಸ್ಥಾನದಲ್ಲಿರುವುದರಿಂದಲೂ ಸಮಸ್ತ ವಿಷಯಗಳಲ್ಲಿಯೂ ಉತ್ತಮನಾದುದರಿಂದಲೂ, ಸಂಖ್ಯೆಯಿಂದ ಗಣನಾತೀತನಾಗಿರುವುದರಿಂದಲೂ ಪರನಾಮಕನಾಗಿರುವನು. ಅವನ ಅರ್ಧಕ್ಕೆ ಪರಾರ್ಧವೆಂದು ಸಂಜ್ಞೆಯು ಉಂಟಾಗಿದೆ.

೧೦೮. ಆ ಬ್ರಹ್ಮದೇವನು ಒಂದು ವಿಧದಿಂದ ಸಂಖ್ಯೆಯನ್ನು ಹೇಳಲು ಅರ್ಹನಾದುದರಿಂದ ಸಂಖ್ಯೇಯನೂ, ಸಂಖ್ಯೆಯನ್ನು ತಿಳಿಸಲು ಅನರ್ಹನಾದುದರಿಂದ ಅಸಂಖ್ಯೇಯನೂ ಮತ್ತು ಸರ್ವತ್ರ ವ್ಯಾಪ್ತನಾಗಿರುವುದರಿಂದಲೂ ಮೂರು ವಿಧ ನಾಮಗಳನ್ನು ಹೊಂದಿರುವನು. ಸಾಮಾನ್ಯವಾಗಿ ಸಂಖ್ಯಾತನಾದರೂ ವಿಶೇಷವಾಗಿ ಅಸಂಖ್ಯಾತನಾಗಿರುವನು. ಅವನು ಪರಾರ್ಧ, ಅಪರಾರ್ಧನೆಂದು ಉಭಯ ನಾಮಕನಾಗಿರುವನು.

೧೦೯. ಧಾನ್ಯರಾಶಿಯಲ್ಲಿ ಸಂಖ್ಯೆಯನ್ನು ಎಣಿಸಲು ಹೇಗೆ ಅಸಾಧ್ಯವೋ ಹಾಗೆ ಬ್ರಹ್ಮನ ಲಕ್ಷಣಗಳನ್ನು ಎಣಿಸಲು ಸಾಧ್ಯವಿಲ್ಲ. ಮರಳುಕಾಡುಗಳಲ್ಲಿ ಹೇಗೆ ಕೊನೆಯು ಕಾಣುವುದಿಲ್ಲವೋ ಹಾಗೆ ಬ್ರಹ್ಮನ ಗುಣಗಳಿಗೂ ಕೊನೆಯಿಲ್ಲ. ಹೀಗೆ ಬ್ರಹ್ಮನು ಪಂಚಲಕ್ಷಣೋಪೇತನಾಗಿರುವನು.

೧೧೦. ದಿವ್ಯದೃಷ್ಟಿಯುಳ್ಳ ಸ್ವತಂತ್ರರಾದ ಮಹಾತ್ಮರು ಪರಿಶುದ್ಧವಾದ ದಿವ್ಯಜ್ಞಾನದಿಂದ ಇಂತಹ ಜ್ಞಾನಕ್ಕೆ ವಿಷಯನೂ, ಸರ್ವಾತ್ಮಕನೂ, ನಿತ್ಯನೂ ಆದ ಬ್ರಹ್ಮನನ್ನು ತಿಳಿಯುವರು.

**ಏತಚ್ಛ್ರುತ್ವಾ ತು ತೇ ಸರ್ವೇ ನೈಮಿಷೇಯಾಸ್ತಪಸ್ವಿನಃ |**
**ಬಾಷ್ಪಪರ್ಯಾಕುಲಾಕ್ಷಾಸ್ತು ಪ್ರಹರ್ಷಾದ್ಗದ್ಗದಸ್ವರಾಃ || ೧೧೧ ||**

**ಪಪ್ರಚ್ಛುರ್ಮಾತರಿಶ್ವಾನಂ ಸರ್ವೇ ತೇ ಬ್ರಹ್ಮವಾದಿನಃ |**
**ಬ್ರಹ್ಮಲೋಕಸ್ತು ಭಗವನ್ ಯಾವನ್ಮಾತ್ರಾಂತರಃ ಪ್ರಭೋ || ೧೧೨ ||**

**ಯೋಜನಾಗ್ರೇಣ ಸಂಖ್ಯಾತಃ ಸಾಧನಂ ಯೋಜನಸ್ಯ ತು |**
**ಕ್ರೋಶಸ್ಯ ಚ ಪರೀಮಾಣಂ ಶ್ರೋತುಮಿಚ್ಛಾಮಿ ತತ್ವತಃ || ೧೧೩ ||**

**ತೇಷಾಂ ತದ್ವಚನಂ ಶ್ರುತ್ವಾ ಮಾತರಿಶ್ವಾ ವಿನೀತವಾಕ್ |**
**ಉವಾಚ ಮಧುರಂ ವಾಕ್ಯಂ ಯಥಾದೃಷ್ಟಿಂ ಯಥಾಕ್ರಮಂ || ೧೧೪ ||**

---

೧೧೧-೧೧೨. ನೈಮಿಷಾರಣ್ಯವಾಸಿಗಳೂ, ಮಹಾತಪಸ್ವಿಗಳೂ ಆದ ಎಲ್ಲಾ ಮಹರ್ಷಿಗಳೂ ಈ ವಿಷಯಗಳನ್ನು ಕೇಳಿ ಆನಂದಾಶ್ರುಗಳಿಂದ ಪೂರ್ಣವಾದ ನೇತ್ರವುಳ್ಳವರೂ, ಸಂತೋಷಬಾಷ್ಪಗಳಿಂದ ರುದ್ಧಕಂಠರೂ ಆಗಿ ವಾಯುದೇವನನ್ನು ಪ್ರಾರ್ಥಿಸಿದರು. ಮತ್ತು ಬ್ರಹ್ಮಜ್ಞಾನಿಗಳಾದ ಮುನಿಗಳು ಎಲೈ ಸೂತನೇ, ಪೂಜ್ಯನಾದ ಬ್ರಹ್ಮದೇವನ ಲೋಕವು ಈ ಭೂಮಿಗೆ ಎಷ್ಟು ದೂರದಲ್ಲಿದೆ. ಅದರ ಪ್ರಮಾಣವೆಷ್ಟು ತಿಳಿಸಬೇಕೆಂದು ಕೇಳಿದರು.

೧೧೩. ಎಲೈ ವಾಯುದೇವನೇ, ಯೋಜನವೆಂದರೇನು ? ಕ್ರೋಶವೆಂದರೆ ಎಷ್ಟು ಪರಿಮಾಣವು ? ಇವುಗಳ ಪರಿಮಾಣದಿಂದ ಬ್ರಹ್ಮಲೋಕವು ಎಷ್ಟು ದೂರ ದಲ್ಲಿದೆ ? ಯೋಜನಗಳ ಸಂಖ್ಯೆಯು ಎಷ್ಟು ? ಇದನ್ನು ಸತ್ಯವಾಗಿ ತಿಳಿಯಬೇಕೆಂಬ ಇಚ್ಛೆಯು ನಮಗುಂಟಾಗಿದೆ. ಆದುದರಿಂದ ತಿಳಿಸಬೇಕೆಂದು ಬೇಡಿದರು.

೧೧೪. ಮಹರ್ಷಿಗಳ ಆ ಮಾತನ್ನು ಕೇಳಿದ ವಾಯುದೇವನು ವಿನಯಾನ್ವಿತ ನಾಗಿ ಮಧುರವೂ, ಕ್ರಮಬದ್ಧವೂ, ಯಥಾಶ್ರುತವೂ ಆದ ಭಾಷಣವನ್ನು ಮಾಡಿದನು.

॥ ವಾಯುರುವಾಚ ॥

**ಏತದ್ವೋಽಹಂ ಪ್ರವಕ್ಷ್ಯಾಮಿ ಶೃಣಧ್ವಂ ಮೇವಿವಕ್ಷಿತಂ ।**
**ಅವ್ಯಕ್ತಾದ್ವ್ಯಕ್ತಭಾಗೋ ವೈ ಮಹಾಸ್ಥೂಲೋ ವಿಭಾಷ್ಯತೇ ॥ ೧೧೫ ॥**

**ದಶೈವ ಮಹತಾಂ ಭಾಗಾ ಭೂತಾದಿಃ ಸ್ಥೂಲ ಉಚ್ಯತೇ ।**
**ದಶಭಾಗಾಧಿಕಂ ಚಾಪಿ ಭೂತಾದಿಃ ಪರಮಾಣುಕಃ ॥ ೧೧೬ ॥**

**ಪರಮಾಣುಃ ಸುಸೂಕ್ಷ್ಮಸ್ತು ಭಾವಗ್ರಾಹ್ಯೋ ನ ಚಕ್ಷುಷಾ ।**
**ಯದಭೇದ್ಯತಮಂ ಲೋಕೇ ವಿಜ್ಞೇಯಂ ಪರಮಾಣು ತತ್ ॥ ೧೧೭ ॥**

**ಜಾಲಾಂತರಗತಂ ಭಾನೋರ್ಯತ್ಸೂಕ್ಷ್ಮಂ ದೃಶ್ಯತೇ ರಜಃ ।**
**ಪ್ರಥಮಂ ತತ್ಪ್ರಮಾಣಾನಾಂ ಪರಮಾಣುಂ ಪ್ರಚಕ್ಷತೇ ॥ ೧೧೮ ॥**

---

೧೧೫. ವಾಯುದೇವನು ಹೇಳಿದನು--ಎಲೈ ಮುನಿವರ್ಯರೇ, ಈ ವಿಷಯಗಳನ್ನು ನಾನು ನಿಮಗಾಗಿ ನಿರೂಪಿಸುವೆನು. ನಾನು ಹೇಳಬೇಕೆಂದಿರುವ ಮಾತುಗಳನ್ನು ಕೇಳಿರಿ. ನಾನು ಹೇಳುವ ವಿಷಯವು ಅವ್ಯಕ್ತಜನ್ಯವೂ, ವ್ಯಕ್ತರೂಪವೂ, ಮಹಾ ಸ್ಥೂಲರೂಪವೂ, ಆಗಿರುವುದು.

೧೧೬. ಮಹತ್ತತ್ವದ ಭಾಗಗಳು ಹತ್ತು ವಿಧವಾಗಿವೆ. ಅದು ಭೂತಾದಿಗಳ ಸ್ಥೂಲರೂಪವೇ ಆಗಿದೆ. ಈ ದಶಭಾಗಗಳಿಗಿಂತಲೂ ಅಧಿಕವಾದ ಭೂತಾದಿಗಳು ಪರಮಾಣುರೂಪಗಳಾಗಿವೆ ಎಂದು ಹೇಳುವರು.

೧೧೭. ಎಲೈ ಮುನೀಶ್ವರರೇ, ಪರಮಾಣುಗಳು ಬಹಳ ಸೂಕ್ಷ್ಮಗಳಾಗಿವೆ. ಅವು ಮನೋಮಾತ್ರ ಗೋಚರಗಳಾಗಿವೆ. ಈ ಸ್ಥೂಲವಸ್ತುಗಳನ್ನು ಗ್ರಹಿಸುವ ಚರ್ಮಚಕ್ಷುಸ್ಸುಗಳಿಗೆ ಗೋಚರವಾಗಿಲ್ಲ. ಲೋಕದಲ್ಲಿ ಅಭೇದ್ಯವಾದ ತಮಸ್ಸು ಹೇಗೆ ಅತ್ಯಂತ ಸೂಕ್ಷ್ಮವಾಗಿರುತ್ತದೆಯೋ ಹಾಗೆಯೇ ಪರಮಾಣುಗಳೂ ಕೂಡ ಅತಿ ಸೂಕ್ಷ್ಮವಾಗಿರುತ್ತವೆ.

೧೧೮. ಕಿಟಕಿಗಳ ಮೂಲಕವಾಗಿ ಮನೆಯೊಳಗೆ ಬೀಳುವ ಸೂರ್ಯನ ರಶ್ಮಿಗಳಲ್ಲಿ (ಬಿಸಿಲಿನಲ್ಲಿ)ಕಾಣಿಸುವ ಸೂಕ್ಷ್ಮವಾದ ಧೂಳಿನ ಭಾಗಕ್ಕೆ ಪರಮಾಣುವೆಂಬ ಸಂಜ್ಞೆಯು ಉಂಟಾಗಿರುವುದು. ಅಂತಹ ಪರಮಾಣುಗಳೇ ಪರಿಮಾಣಗಳಿಗೆ ಪ್ರಮಾಣಗಳಿಗೆ ಮೂಲಕಾರಣಗಳಾಗಿವೆ.

ಅಷ್ಟಾನಾಂ ಪರಮಾಣೂನಾಂ ಸಮುದಾಯೋ ಯದಾ ಭವೇತ್ ।
ತ್ರಸರೇಣುಃ ಸಮಾಖ್ಯಾತಸ್ತತ್ಪದ್ಮರಜ ಉಚ್ಯತೇ ॥ ೧೧೯ ॥

ತ್ರಸರೇಣವಶ್ಚ ಯೋಽಷ್ಟ್ಯಷ್ಟೌ ರಥರೇಣುಸ್ತು ಸ ಸ್ಮೃತಃ ।
ತೇಽಷ್ಟ್ಯಷ್ಟೌ ಸಮವಾಯಸ್ಥಾ ಬಾಲಾಗ್ರಂ ತತ್ಸ್ಮೃತಂ ಬುಧೈಃ ॥ ೧೨೦ ॥

ಬಾಲಾಗ್ರಾಣ್ಯಷ್ಟದ್ಯೂಕಾ ತಚ್ಚಾಷ್ಟಕಂ ಭವೇತ್ ।
ಯೂಕಾಷ್ಟಕಂ ಯವಂ ಪ್ರಾಹುರಂಗುಲಂ ತು ಯವಾಷ್ಟಕಂ ॥ ೧೨೧ ॥

ದ್ವಾದಶಾಂಗುಲಪರ್ವಾಣಿ ವಿತಸ್ತಿಸ್ಥಾನಮುಚ್ಯತೇ ।
ರತ್ನಿಶ್ಚಾಂಗುಲಪರ್ವಾಣಿ ವಿಜ್ಞೇಯೋ ಹ್ಯೇಕವಿಂಶತಿಃ ॥ ೧೨೨ ॥

ಚತ್ವಾರಿ ವಿಂಶತಿಶ್ಚೈವ ಹಸ್ತಃ ಸ್ಯಾದಂಗುಲಾನಿ ತು ।
ಕಿಷ್ಕುರ್ದ್ವಿರತ್ನಿರ್ವಿಜ್ಞೇಯೋ ದ್ವಿಚತ್ವಾರಿಂಶದಂಗುಲಃ ॥ ೧೨೩ ॥

---

೧೧೯. ಇಂತಹ ಪರಮಾಣುಗಳೆಂಟು ಕೂಡಿದರೆ ತ್ರಸರೇಣುವಾಗುವುದು. ಅದಕ್ಕೆ ಪದ್ಮರಜಸ್ಸೆಂಬ ಸಂಜ್ಞೆಯೂ ಉಂಟಾಗಿರುತ್ತದೆ.

೧೨೦. ಅಂತಹ ಎಂಟು ತ್ರಸರೇಣುಗಳು ಕೂಡಿದರೆ ರಥರೇಣುವಾಗುವುವು ಆ ರಥರೇಣುಗಳ ಎಂಟರ ಸಮುದಾಯಕ್ಕೆ ಬಾಲಾಗ್ರವೆಂಬ ಸಂಜ್ಞೆಯು ಪ್ರಾಪ್ತವಾಗಿದೆ ಯೆಂದು ಪಂಡಿತರು ಹೇಳುವರು.

೧೨೧. ಅಂತಹ ಬಾಲಾಗ್ರಗಳು ಎಂಟು ಕೂಡಿದರೆ ಲಿಕ್ಷೆಯಾಗುವುದು. ಆ ಲಿಕ್ಷೆಗಳ ಎಂಟಕ್ಕೆ ಯೂಕವೆಂದೂ ಆ ಯೂಕಾಷ್ಟಕಕ್ಕೆ ಯವವೆಂದೂ ಯವಾಷ್ಟಕ ಗಳಿಗೆ ಅಂಗುಲವೆಂಬ ಸಂಜ್ಞೆಯೂ ಉಂಟಾಗಿವೆ.

೧೨೨. ದ್ವಾದಶಾಂಗುಲಗಳು ಕೂಡಿದರೆ ಒಂದು ಗೇಣಾಗುವುದು. ಇಪ್ಪತ್ತೊಂದು ಅಂಗುಲಗಳಿಗೆ ಮುಷ್ಟಿಮೊಳವೆಂದೂ ರತ್ನಿಯೆಂಬ ಸಂಜ್ಞೆಯು ಉಂಟಾಗಿವೆ.

೧೨೩. ಇಪ್ಪತ್ತನಾಲ್ಕು ಅಂಗುಲಗಳಿಗೆ ಒಂದು (ಹಸ್ತ) ಅಥವಾ ಮೊಳವೆಂದೂ ಎರಡು ಮುಷ್ಟಿಹಿಡಿದ ಮೊಳಗಳು ಅಂದರೆ ನಲವತ್ತೆರಡು ಅಂಗುಲಗಳಿಗೆ(ದ್ವಿರತ್ನಿ ಗಳಿಗೆ)ಕಿಷ್ಕುವೆಂದೂ ನಾಮಗಳು ಪ್ರಾಪ್ತವಾಗಿವೆ.

ಷಣ್ಣವತ್ಯಂಗುಲಂಚೈವ ಧನುರಾಹುರ್ಮನೀಷಿಣಃ ।
ಏತದ್ಗವ್ಯೂತಿಸಂಖ್ಯಾಯಾಂ ಪಾದಾನಾಂ ಧನುಷಃ ಸ್ಮೃತಃ ॥ ೧೨೪ ॥

ಧನುರ್ದಂಡೋ ಯುಗಂ ನಾಲೀ ತುಲ್ಯಾನ್ಯೇತಾನ್ಯಥಾಂಗುಲೈಃ ।
ಧನುಷಸ್ತ್ರಿಶತಂ ನಲ್ವಮಾಹುಃ ಸಂಖ್ಯಾವಿದೋ ಜನಾಃ ॥ ೧೨೫ ॥

ಧನುಃ ಸಹಸ್ರೇ ದ್ವೇ ಚಾಪಿ ಗವ್ಯೂತಿರುಪದಿಶ್ಯತೇ ।
ಅಷ್ಟೌ ಧನುಃ ಸಹಸ್ರಾಣಿ ಯೋಜನಂ ತು ವಿಧೀಯತೇ ॥ ೧೨೬ ॥

ಏತೇನ ಧನುಷಾ ಚೈವ ಯೋಜನಂ ತು ಸಮಾಪ್ಯತೇ ।
ಏತತ್ಸಹಸ್ರಂ ವಿಜ್ಞೇಯಂ ಶಕ್ರಕೋಶಾಂತರಂತಥಾ ॥ ೧೨೭ ॥

---

೧೨೪. ಪ್ರಮಾಣಜ್ಞರಾದ ಮಹಾತ್ಮರು ತೊಂಭತ್ತಾರು ಅಂಗುಲಗಳಿಗೆ ಒಂದು ಧನುಸ್ಸೆಂಬ ನಾಮವನ್ನು ಕೊಟ್ಟಿರುವರು. ಇಂತಹ ಧನುಸ್ಸಿನ ಪ್ರಮಾಣದಿಂದಲೇ ಗವ್ಯೂತಿ ಪ್ರಮಾಣವನ್ನು ಹೇಳುವರು. ಎರಡು ಹರಿದಾರಿಗಳಿಗೆ ಅಥವಾ ಎರಡು ಕ್ರೋಶಗಳಿಗೆ ಗವ್ಯೂತಿಯೆಂದು ನಾಮವಿರುತ್ತದೆ.

೧೨೫. ಅಂತಹ ಧನುಸ್ಸಿನ ದಂಡಕ್ಕೆ ಯುಗವೆಂದೂ ನಾಲೀ ಎಂದೂ ಸಂಜ್ಞೆಯು ಪ್ರಾಪ್ತವಾಗಿದೆ. ಧನುರ್ದಂಡ, ಯುಗ, ನಾಲೀ ಇವು ಮೂರು ಸಮಾಂಗಲ ಪ್ರಮಾಣವುಳ್ಳದ್ದಾಗಿದೆ. ಸಂಖ್ಯಾಪ್ರಮಾಣವೇತ್ತೃಗಳಾದ ಮಹಾತ್ಮರು ಅಂತಹ ಮುನ್ನೂರು ಧನುಸ್ಸುಗಳಿಗೆ ಒಂದು ನಲ್ವವೆಂಬ ನಾಮವನ್ನು ಕೊಟ್ಟಿರುವರು.

೧೨೬. ಅಂತಹ ಎಂಟುಸಾವಿರ ಧನುಸ್ಸುಗಳ ಪ್ರಮಾಣಕ್ಕೆ ಒಂದು ಗವ್ಯೂತಿ ಎಂಬ ಸಂಜ್ಞೆಯು ಸಂಭವಿಸಿರುತ್ತದೆ. ಇಂತಹ ಎಂಟು ಸಹಸ್ರ ಧನುಃಪ್ರಮಾಣಗಳಿಗೆ ಯೋಜನವೆಂಬ ಸಂಜ್ಞೆಯು ಸಂಭವಿಸಿರುತ್ತದೆ.

೧೨೭. ಈ ಧನುಸ್ಸಿನ ಪ್ರಮಾಣದಿಂದಲೇ ಯೋಜನ ಪ್ರಮಾಣವನ್ನು ತಿಳಿಯಬೇಕು. ಇಂಥ ಒಂದು ಸಹಸ್ರ ಧನುಃಪ್ರಮಾಣಗಳಿಗೆ ಒಂದು ಇಂದ್ರ ಕ್ರೋಶವೆಂಬ ಸಂಜ್ಞೆಯು ಅಥವಾ ಶಕ್ರಕ್ರೋಶವೆಂಬ ನಾಮವು ಬಂದಿದೆ.

**ಯೋಜನಾನಾಂ ತು ಸಂಖ್ಯಾತುಂ ಸಂಖ್ಯಾಜ್ಞಾನವಿಶಾರದೈಃ ।**
**ಏತೇನ ಯೋಜನಾಗ್ರೇಣ ಶೃಣುಧ್ವಂ ಬ್ರಹ್ಮಣೋಂತರಂ ॥ ೧೨೮ ॥**

**ಮಹೀತಲಾತ್ಸಹಸ್ರಾಣಾಂ ಶತಾದೂರ್ಧ್ವಂ ದಿವಾಕರಃ ।**
**ದಿವಾಕರಾತ್ಸಹಸ್ರೇಣ ತಾವದೂರ್ಧ್ವಂ ನಿಶಾಕರಃ ॥ ೧೨೯ ॥**

**ಪೂರ್ಣಂ ಶತಸಹಸ್ರಂ ತು ಯೋಜನಾನಾಂ ನಿಶಾಕರಾತ್ ।**
**ನಕ್ಷತ್ರಮಂಡಲಂ ಕೃತ್ಸ್ನಮುಪರಿಷ್ಟಾತ್ಪ್ರಕಾಶತೇ ॥ ೧೩೦ ॥**

**ಶತಂ ಸಹಸ್ರಂ ಸಂಖ್ಯಾತೋ ಮೇರುರ್ದ್ವಿಗುಣಿತಂ ಪುನಃ ।**
**ಗ್ರಹಾಂತರಮಥೈಕೈಕಮೂರ್ಧ್ವಂ ನಕ್ಷತ್ರಮಂಡಲಾತ್ ॥ ೧೩೧ ॥**

---

೧೨೮. ಸಂಖ್ಯಾಪ್ರಮಾಣವನ್ನು ತಿಳಿದಿರುವ ಮಹಾತ್ಮರು, ಯೋಜನ ಸ್ವರೂಪವನ್ನು ನಿರೂಪಿಸಿರುವರು. ಈ ಯೋಜನಗಳ ಪ್ರಮಾಣದಿಂದಲೇ ಬ್ರಹ್ಮ ಲೋಕದ ಅಳತೆಯನ್ನು ತಿಳಿಯಿರೆಂದು ಹೇಳಿದನು.

೧೨೯. ಭೂತಲಕ್ಕೆ ಲಕ್ಷಯೋಜನಗಳ ಮೇಲ್‌ಭಾಗದಲ್ಲಿ ಸೂರ್ಯಮಂಡಲ ವಿರುವುದು. ಆ ಸೂರ್ಯಮಂಡಲಕ್ಕೆ ಲಕ್ಷಯೋಜನದಷ್ಟು ಮೇಲೆ ಚಂದ್ರಮಂಡಲ ವಿರುವುದು. ಚಂದ್ರನಿಗೂ, ಸೂರ್ಯನಿಗೂ ಒಂದುಲಕ್ಷ ಯೋಜನದಷ್ಟು ಅಂತರಾಳ ವಿರುತ್ತದೆ.

೧೩೦. ಅಂತಹ ಚಂದ್ರಮಂಡಲಗಿಂತಲೂ ಲಕ್ಷಯೋಜನಗಳಷ್ಟು ಊರ್ಧ್ವ ಭಾಗದಲ್ಲಿ ಸಂಪೂರ್ಣವಾದ ನಕ್ಷತ್ರಮಂಡಲವು ಪ್ರಕಾಶಿಸುವುದು.

೧೩೧. ಮೇರುಗಿರಿಯು ಭೂಮಂಡಲಕ್ಕೆ ಎರಡುಲಕ್ಷ ಯೋಜನಗಳಷ್ಟು ಎತ್ತರದಲ್ಲಿದೆ. ಪ್ರತಿಯೊಂದು ಗ್ರಹಮಂಡಲವು ನತ್ರಕ್ಷಮಂಡಲಕ್ಕಿಂತಲೂ ಒಂದು ಲಕ್ಷ ಯೋಜನಗಳಷ್ಟು ಊರ್ಧ್ವಭಾಗದಲ್ಲಿರುತ್ತವೆ.

ತಾರಾಗ್ರಹಾಣಾಂ ಸರ್ವೇಷಾಮಧಸ್ತಾಚ್ಚರತೇ ಬುಧಃ ।
ತಸ್ಯೋರ್ಧ್ವಂ ಚರತೇ ಶುಕ್ರಸ್ತಸ್ಮಾದೂರ್ಧ್ವಂ ಚ ಲೋಹಿತಃ ॥ ೧೩೨ ॥

ತತೋ ಬೃಹಸ್ಪತಿಶ್ಚೋರ್ಧ್ವಂ ತಸ್ಮಾದೂರ್ಧ್ವಂ ಶನೈಶ್ಚರಃ ।
ಊರ್ಧ್ವಂ ಶತಸಹಸ್ರಂ ತು ಯೋಜನಾನಾಂ ಶನೈಶ್ಚರಾತ್ ॥ ೧೩೩ ॥

ಸಪ್ತರ್ಷಿಮಂಡಲಂ ಕೃತ್ಸ್ನಮುಪರಿಷ್ಟಾತ್ ಪ್ರಕಾಶತೇ ।
ಋಷಿಭಿಸ್ತು ಸಹಸ್ರಾಣಾಂ ಶತಾದೂರ್ಧ್ವಂ ವಿಭಾವ್ಯತೇ ॥ ೧೩೪ ॥

ಯೋಽಸೌ ತಾರಾಮಯೇ ದಿವ್ಯೇ ವಿಮಾನೇ ಹ್ರಸ್ವರೂಪಕೇ ।
ಉತ್ತಾನಪಾದಪುತ್ರೋಽಸೌ ಮೇಢಿಭೂತೋ ಧ್ರುವೋ ದಿವಿ ॥ ೧೩೫ ॥

ತ್ರೈಲೋಕ್ಯಸ್ಯೈಷ ಉತ್ಸೇಧೋ ವ್ಯಾಖ್ಯಾತೋ ಯೋಜನೈರ್ಮಯಾ ।
ಮನ್ವಂತರೇಷು ದೇವಾನಾಮಿಜ್ಯಾ ಯತ್ರೈವ ಲೌಕಿಕೀ ॥ ೧೩೬ ॥

---

೧೩೨. ಬುಧಗ್ರಹವು, ಸಮಸ್ತವಾದ ನಕ್ಷತ್ರಗಳು ಮತ್ತು ಗ್ರಹಗಳು ಇವುಗಳ ಮಂಡಲಗಳಿಗಿಂತಲೂ ಕೆಳಭಾಗದಲ್ಲಿರುತ್ತದೆ. ಆ ಬುಧನ ಮೇಲ್ಭಾಗದಲ್ಲಿ ಶುಕ್ರನೂ, ಅವನಗಿಂತ ಮೇಲೆ ಅಂಗಾರಕನೂ, ಸಂಚಾರಮಾಡುವರು.

೧೩೩. ಆ ಅಂಗಾರಕನಿಗಿಂತಲೂ ಮೇಲ್ಗಡೆಯಲ್ಲಿ ಬೃಹಸ್ಪತಿಯೂ ಅವನಿಗಿಂತಲೂ ಊರ್ಧ್ವಭಾಗದಲ್ಲಿ ಶನೈಶ್ಚರನೂ ಸಂಚರಿಸುವರು. ಪ್ರತಿಯೊಂದು ಗ್ರಹಗಳಿಗೂ ಒಂದುಲಕ್ಷ ಯೋಜನಗಳಷ್ಟು ಅಂತರಾಳವಿರುವುದು.

೧೩೪-೧೩೫. ಆ ಶನೇಶ್ವರನಿಗಿಂತಲೂ ಲಕ್ಷ ಯೋಜನಗಳ ದೂರದಲ್ಲಿ ಸಪ್ತರ್ಷಿಮಂಡಲವು ಕಂಗೊಳಿಸುವುದು. ಆ ಸಪ್ತರ್ಷಿಮಂಡಲಕ್ಕಿಂತಲೂ ಲಕ್ಷ ಯೋಜನಗಳಷ್ಟು ಊರ್ಧ್ವಭಾಗದಲ್ಲಿ ತಾರಾಮಯವೂ, ದಿವ್ಯವೂ, ಹ್ರಸ್ವಾಕಾರವೂ, ಸುಂದರವೂ ಆದ ವಿಮಾನದಲ್ಲಿ ಉತ್ತಾನಪಾದರಾಜಕುಮಾರನಾದ ಧ್ರುವಮಹಾರಾಯನು ಅಂತರಕ್ಷದಲ್ಲಿ ತಾರಾಗ್ರಹಮಂಡಲಗಳಿಗೆ ಆಧಾರಸ್ಥಂಭದಂತೆ ಅಚಲನಾಗಿ ಪ್ರಕಾಶಿಸುವನು.

೧೩೬. ಈ ಧ್ರುವಮಂಡಲವು ಮೂರು ಲೋಕಗಳಿಗಿಂತಲೂ ಅತ್ಯುನ್ನತವಾಗಿ ಹೊಳೆಯುವುದೆಂದು ಯೋಜನಗಳ ಪ್ರಮಾಣದಿಂದ ನಿಮಗೆ ನಾನು ತಿಳಿಸಿರುತ್ತೇನೆ. ಮನ್ವಂತರಗಳಲ್ಲಿ ದೇವತೋದ್ದೇಶ್ಯಕಗಳಾದ ಯಜ್ಞಯಾಗಾದಿ ಸಕಲ ಕರ್ಮಗಳೂ ಲೌಕಿಕವಾಗಿ ಈ ಲೋಕದಲ್ಲಿಯೇ ನಡೆಯುವುವು.

ವರ್ಣಾಶ್ರಮೇಭ್ಯ ಇಜ್ಯಾ ತು ಲೋಕೇಽಸ್ಮಿನ್ಯಾ ಪ್ರವರ್ತತೇ ।
ಸರ್ವೇಷಾಂ ದೇವಯೋನೀನಾಂ ಸ್ಥಿತಿಹೇತುಃ ಸ ವೈ ಸ್ಮೃತಃ ॥ ೧೩೭ ॥

ತ್ರೈಲೋಕ್ಯಮೇತದ್ವ್ಯಾಖ್ಯಾತಮತ ಊರ್ಧ್ವಂ ನಿಬೋಧತ ।
ಧ್ರುವಾದೂರ್ಧ್ವಂ ಮಹರ್ಲೋಕೋ ಯಸ್ಮಿಂಸ್ತೇ ಕಲ್ಪವಾಸಿನಃ ॥
ಏಕಯೋಜನಕೋಟೀ ಸಾ ಇತ್ಯೇವಂ ನಿಶ್ಚಯಂ ಗತಂ ॥ ೧೩೮ ॥

ದ್ವೇ ಕೋಟ್ಯೌ ತು ಮಹರ್ಲೋಕಾದ್ಯಸ್ಮಿಂಸ್ತೇ ಕಲ್ಪವಾಸಿನಃ ।
ಯತ್ರ ತೇ ಬ್ರಹ್ಮಣಃ ಪುತ್ರಾ ದಕ್ಷಾದ್ಯಾಃ ಸಾಧಕಾಃ ಸ್ಮೃತಾಃ ॥ ೧೩೯ ॥

ಚತುರ್ಗುಣೋತ್ತರಾದೂರ್ಧ್ವಂ ಜನಲೋಕಾತ್ತಪಃ ಸ್ಮೃತಂ ।
ವೈರಾಜಾ ಯತ್ರ ತೇ ದೇವಾ ಭೂತದಾಹವಿವರ್ಜಿತಾಃ ॥ ೧೪೦ ॥

---

೧೩೭. ಈ ಲೋಕದಲ್ಲಿ ವರ್ಣಾಶ್ರಮಾಚಾರಗಳಿಗೆ ಅರ್ಹವಾದ ಯಜ್ಞಯಾಗಾದಿ ಯಾವ ಸತ್ಕರ್ಮಗಳು ನಡೆಯುತ್ತವೆಯೋ ಆ ಸತ್ಕರ್ಮಗಳಿಗೆ ವಿಷಯರಾದ ದೇವತೆಗಳೆಲ್ಲರೂ ಧ್ರುವಮಂಡಲದಲ್ಲಿಯೇ ಇರುವರೆಂದು ಮಹಾತ್ಮರು ಹೇಳುವರು.

೧೩೮. ಈ ರೀತಿಯಾಗಿ ಮೂರು ಲೋಕಗಳ ವಿಷಯಗಳನ್ನು ನಿಮಗಾಗಿ ನಿರೂಪಿಸಿರುವೆನು. ಈ ಮೂರುಲೋಕಗಳ ಮೇಲ್ಭಾಗದಲ್ಲಿರುವ ಲೋಕಗಳನ್ನು ತಿಳಿಸುವೆನು ಕೇಳಿರಿ ಧ್ರುವಮಂಡಲಕ್ಕಿಂತಲೂ ಮೇಲ್ಭಾಗದಲ್ಲಿ ಮಹರ್ಲೋಕ ವಿರುವುದು. ಅದರಲ್ಲಿ ಕಲ್ಪವಾಸಿಗಳಾದ ದೇವತೆಗಳು ವಾಸಮಾಡುವರು. ಮಹರ್ಲೋಕವು ಧ್ರುವಮಂಡಲಕ್ಕೆ ಒಂದುಕೋಟಿ ಯೋಜನಗಳಷ್ಟು ಎತ್ತರದಲ್ಲಿದೆ ಯೆಂದು ನಿಶ್ಚಿತವಾಗಿದೆ.

೧೩೯. ಅಂತಹ ಮಹರ್ಲೋಕಕ್ಕೆ ಎರಡುಕೋಟಿ ಯೋಜನಗಳಷ್ಟು ಮೇಲ್ಗಡೆಯಲ್ಲಿ ಜನಲೋಕವಿರುವುದು. ಆ ಜನಲೋಕದಲ್ಲಿ ಬ್ರಹ್ಮದೇವನ ಮಾನಸ ಪುತ್ರರಾದ ದಕ್ಷಪ್ರಜಾಪತಿಯೇ ಮೊದಲಾದ ಸೃಷ್ಟಿಕರ್ತೃಗಳು ವಾಸಮಾಡುವರು.

೧೪೦. ಅಂತಹ ಜನಲೋಕಕ್ಕಿಂತಲೂ ನಾಲ್ಕು ಕೋಟಿಯೋಜನಗಳಷ್ಟು ಮೇಲ್ಭಾಗದಲ್ಲಿ ತಪೋಲೋಕವು ಪ್ರಕಾಶಿಸುವುದು. ಆ ತಪೋಲೋಕದಲ್ಲಿ ವೈರಾಜ ನಾಮಕರಾದ ದೇವತೆಗಳು ವಾಸಮಾಡುವರು. ಆ ದೇವತೆಗಳು ಆಭೂತಸಂಪ್ಲವ ರಹಿತರಾಗಿರುವರು.

**ಷಡ್ಗುಣಂ ತು ತಪೋಲೋಕಾತ್ಸತ್ಯಲೋಕಾಂತರಂ ಸ್ಮೃತಂ ।**
**ಅಪುನರ್ಮಾರಕಾಮಾನಾಂ ಬ್ರಹ್ಮಲೋಕಃ ಸ ಉಚ್ಯತೇ ॥ ೧೪೧ ॥**

**ಯಸ್ಮಾನ್ನ ಚ್ಯವತೇ ಭೂಯೋ ಬ್ರಹ್ಮಾಣಂ ಸ ಉಪಾಸತೇ ।**
**ಏಕಕೋಟಿಯೋರ್ಜನಾನಾಂ ಪಂಚಾಶನ್ನಿಯುತಾನಿ ತು ॥ ೧೪೨ ॥**

**ಊರ್ಧ್ವಂ ಭಾಗಸ್ತತೋಂಡಸ್ಯ ಬ್ರಹ್ಮಲೋಕಾತ್ಪರಃ ಸ್ಮೃತಃ ।**
**ಚತುರಶ್ಚೈವ ಕೋಟ್ಯಸ್ತು ನಿಯುತಾಃ ಪಂಚಷಷ್ಟಿ ಚ ॥ ೧೪೩ ॥**

**ಏಷೋರ್ಧ್ವಾಂಶಪ್ರಚಾರೋಸ್ಯ ಗತ್ಯಂತಶ್ಚಾಪರಃ ಸ್ಮೃತಃ ।**
**ಧ್ರುವಾಗ್ರಮೇತದ್ವ್ಯಾಖ್ಯಾತಂ ಯೋಜನಾಗ್ರಾದ್ಯಥಾಶ್ರುತಂ ॥ ೧೪೪ ॥**

**ಅಧೋಗತೀನಾಂ ವಕ್ಷ್ಯಾಮಿ ಭೂತಾನಾಂ ಸ್ಥಾನಕಲ್ಪನಾಂ ।**
**ಗಚ್ಛಂತಿ ಘೋರಕರ್ಮಾಣಃ ಪ್ರಾಣಿನೋ ಯತ್ರ ಕರ್ಮಭಿಃ ॥ ೧೪೫ ॥**

---

೧೪೧. ಆ ತಪೋಲೋಕದ ಮೇಲೆ ಆರುಕೋಟಿ ಯೋಜನಗಳ ದೂರದಲ್ಲಿ ಬ್ರಹ್ಮದೇವನ ಸತ್ಯಲೋಕವು ಹೊಳೆಯುತ್ತಿರುವುದು. ಆ ಸತ್ಯಲೋಕಕ್ಕೆ ಹೋದಂಥ ಮಹಾತ್ಮರಿಗೆ ಜನನ ಮರಣರೂಪವಾದ ಬಂಧವಿಲ್ಲ. ಅಂದರೆ ಅವರು ಬ್ರಹ್ಮನೊಡನೆ ಮುಕ್ತರಾಗುವರು.

೧೪೨-೧೪೪. ಆ ಬ್ರಹ್ಮಲೋಕವನ್ನು ಹೊಂದಿದ ಸತ್ಪುರುಷರಿಗೆ ಪುನಃ ಚ್ಯುತಿಯಿಲ್ಲ. ಅವರು ಬ್ರಹ್ಮದೇವನನ್ನು ಸೇವಿಸುತ್ತಾ ನಿತ್ಯತೃಪ್ತರಾಗಿರುವರು. ಇಂತಹ ಬ್ರಹ್ಮಲೋಕದ ಒಂದುಕೋಟಿ ಐವತ್ತುಲಕ್ಷ ಯೋಜನಗಳಷ್ಟು ಎತ್ತರದಲ್ಲಿ ಬ್ರಹ್ಮಾಂಡಕಟಾಹ ವಿರುವುದು. ಈ ಬ್ರಹ್ಮಾಂಡಕ್ಕೂ ಧ್ರುವಮಂಡಲಕ್ಕೂ ನಾಲ್ಕು ಕೋಟಿ ಅರವತ್ತೈದು ಲಕ್ಷಯೋಜನಗಳಷ್ಟು ಅಂತರಾಳವಿರುವುದು. ಆ ಬ್ರಹ್ಮಾಂಡದ ಆಚೆ ಸಂಚಾರವೇ ಇಲ್ಲ. ಧ್ರುವಮಂಡಲದಿಂದ ಈ ಯೋಜನಗಳು ಉಕ್ತವಾಗಿವೆ. ಇದು ಬ್ರಹ್ಮಾಂಡದ ಅರ್ಧಭಾಗವಿರುವುದು. ಮತ್ತೊಂದು ಅರ್ಧಾಂಶವು ಅವಶಿಷ್ಟವಾಗಿರುವುದು.

೧೪೫. ಎಲೈ ಮಹರ್ಷಿಗಳಿರಾ, ಈಗ ಭೂಮಂಡಲದ ಕೆಳಭಾಗದಲ್ಲಿರುವ ಭೂತಗಳಿಗೆ ವಾಸಸ್ಥಾನಗಳಾದ ಪಾತಾಳಾದಿ ಲೋಕಗಳನ್ನು ವರ್ಣಿಸುವೆನು. ಕ್ರೂರಕರ್ಮಿಗಳಾದ ಪ್ರಾಣಿಗಳು ಘೋರವಾದ ಈ ನರಕಾದಿಲೋಕಗಳನ್ನು ಹೊಂದುವರು.

**ನರಕೋ ರೌರವೋ ರೋಧಃ ಸೂಕರಸ್ತಾಲ ಏವ ಚ ।**
**ತಪ್ತಕುಂಭೋ ಮಹಾಜ್ವಾಲಃ ಶಬಲೋಽಥ ವಿಮೋಚನಃ ॥ ೧೪೬ ॥**

**ಕೃಮಿಶ್ಚ ಕೃಮಿಭಕ್ಷಶ್ಚ ಲಾಲಾಭಕ್ಷೋ ವಿಶಂಸನಃ ।**
**ಅಧಃಶಿರಾಃ ಪೂಯವಾಹೋ ರುಧಿರಾಂಧಸ್ತಥೈವ ಚ ॥ ೧೪೭ ॥**

**ತಥಾ ವೈತರಣಂ ಕೃಷ್ಣಮಸಿಪತ್ರವನಂ ತಥಾ ।**
**ಅಗ್ನಿಜ್ವಾಲೋ ಮಹಾಘೋರಃ ಸಂದಂಶೋಽಥ ಶ್ವಭೋಜನಃ ॥ ೧೪೮ ॥**

**ತಮಶ್ಚ ಕೃಷ್ಣಸೂತ್ರಶ್ಚ ಲೋಹಶ್ಚಾಪ್ಯಸಿಜಸ್ತಥಾ ।**
**ಅಪ್ರತಿಷ್ಠೋಽಥ ವೀಚ್ಯಶ್ವ ನರಕಾ ಹ್ಯೇವಮಾದಯಃ ॥ ೧೪೯ ॥**

**ತಾಮಸಾ ನರಕಾಃ ಸರ್ವೇ ಯಮಸ್ಯ ವಿಷಯೇ ಸ್ಥಿತಾಃ ।**
**ಯೇಷು ದುಷ್ಕೃತಕರ್ಮಾಣಃ ಪತಂತೀಹ ಪೃಥಕ್ ಪೃಥಕ್ ॥ ೧೫೦ ॥**

**ಭೂಮೇರಧಸ್ತಾತ್ತೇ ಸರ್ವೇ ರೌರವಾದ್ಯಾಃ ಪ್ರಕೀರ್ತಿತಾಃ ।**
**ರೌರವೇ ಕೂಟಸಾಕ್ಷೀ ತು ಮಿಥ್ಯಾ ಯಶ್ಚಾಭಿಶಂಸತಿ ॥**
**ಕ್ರೂರಗ್ರಹೇ ಪಕ್ಷವಾದೀ ಹ್ಯಸತ್ಯಃ ಪತತೇ ನರಃ ॥ ೧೫೧ ॥**

---

೧೪೬–೧೪೯. ಈ ಭೂಮಂಡಲದ ಕೆಳಭಾಗದಲ್ಲಿ ದುಷ್ಕರ್ಮಿಗಳಿಗೆ ವಿಷಯವಾದ ರೌರವ, ರೋಧ, ಸೂಕರ, ತಾಲ, ತಪ್ತಕುಂಭ, ಮಹಾಜ್ವಾಲ, ಶಬಲ, ವಿಮೋಚನ, ಕೃಮಿ, ಕೃಮಿಭಕ್ಷ, ಲಾಲಾಭಕ್ಷ, ವಿಶಂಸನ, ಅಧಃಶಿರಸ, ಪೂಯವಾಹ ರುಧಿರಾಂಧ, ವೈತರಣ, ಕೃಷ್ಣ, ಅಸಿಪತ್ರವನ, ಅಗ್ನಿಜ್ವಾಲ, ಮಹಾಘೋರ, ಸದಂಶ, ಶ್ವಭೋಜನ, ತಮಸ್ಸು, ಕೃಷ್ಣಸೂತ್ರ, ಲೋಹ, ಅಸಿಜ, ಅಪ್ರತಿಷ್ಠ ಮತ್ತು ವೀಚ್ಯಶ್ವ ಇವೇ ಮೊದಲಾದ ನರಕಗಳು ಅನೇಕವಾಗಿವೆ.

೧೫೦. ಈ ತಾಮಸ ನರಕಗಳೆಲ್ಲವೂ ಯಮದೇವನ ವೇಶಕ್ಕೆ ಸಂಬಂಧಪಟ್ಟು ಅವನ ಅಧೀನದಲ್ಲಿರುತ್ತವೆ. ದುಷ್ಕರ್ಮಗಳನ್ನು ಮಾಡಿರುವ ಮನುಷ್ಯರು ತಮ್ಮ ತಮ್ಮ ಕರ್ಮಾನುಗುಣವಾಗಿ ಆಯಾ ನರಕಗಳಲ್ಲಿ ಬಿದ್ದು ದುಃಖಗಳನ್ನು ಅನುಭವಿಸುವರು.

೧೫೧. ರೌರವಾದಿಯಾದ ಆ ನರಕಗಳೆಲ್ಲವೂ ಭೂಲೋಕದ ಕೆಳಭಾಗದಲ್ಲಿವೆ. ಸುಳ್ಳುಸಾಕ್ಷಿಯನ್ನು ಹೇಳುವವನೂ, ಅನೃತವಾದಿಯೂ, ಕ್ರೂರಕಲಹಾಭಿಮಾನಿಯೂ, ಅಸತ್ಯವಾದಿಯೂ, ದುಷ್ಕರ್ಮಿಯೂ ಆದ ಪುರುಷನು ರೌರವವೆಂಬ ಘೋರನರಕದಲ್ಲಿ ಬಿದ್ದು ದುಃಖವನ್ನು ಅನುಭವಿಸುವನು.

ರೋಧೇ ಗೋಘ್ನೋ ಭ್ರೂಣಹಾ ಚ ಹ್ಯಗ್ನಿಧಾತಾ ಪುರಸ್ಯ ಚ ।
ಸೂಕರೇ ಬ್ರಹ್ಮಹಾ ಮಜ್ಜೇತ್ಸುರಾಪಃ ಸ್ವರ್ಣತಸ್ಕರಃ ॥ ೧೫೨ ॥

ಕಾಲೇ ಪತೇತ್ ಕ್ಷತ್ರಿಯಹಾ ಹತ್ವಾ ವೈಶ್ಯಂ ಚ ದುರ್ಗತಿಂ ।
ಬ್ರಹ್ಮಹತ್ಯಾಂ ಚ ಯಃ ಕುರ್ಯಾರ್ಯದ್ಯಶ್ಚ ಸ್ಯಾದ್ಗುರುತಲ್ಪಗಃ ॥ ೧೫೩ ॥

ತಪ್ತಕುಂಭೀ ಸ್ವಸಾಗಾಮೀ ತಥಾ ರಾಜಭಟೆಶ್ಚ ಯಃ ।
ತಪ್ತಲೋಹೇ ಚಾಶ್ವವಣಿಕ್ ತಥಾ ಬಂಧನರಕ್ಷಿತಾ ॥ ೧೫೪ ॥

ಸಾಧ್ವೀವಿಕ್ರಯಕರ್ತಾ ಚ ಯಸ್ತು ಭಕ್ತಂ ಪರಿತ್ಯಜೇತ್ ।
ಮಹಾಜ್ವಾಲೇ ದುಹಿತರಂ ಸ್ನುಷಾಂ ಗಚ್ಛತಿ ಯಸ್ತು ವೈ ॥ ೧೫೫ ॥

---

೧೫೨. ಗೋಹತ್ಯವನ್ನು ಮಾಡಿದವನೂ, ಭ್ರೂಣಹತ್ಯವನ್ನು ಮಾಡಿದವನೂ, ಪರರ ಮನೆಮಠಗಳಿಗೆ ಬೆಂಕಿಯನ್ನು ಹಾಕಿದವನೂ, ನಗರದಾಹಕನೂ ಇವರು ರೋಧವೆಂಬ ನರಕಕ್ಕೆ ಸಿಲುಕಿ ದುಃಖಿಯಾಗುವರು. ಬ್ರಹ್ಮಹತ್ಯವನ್ನು ಮಾಡಿದವನೂ, ಸುರಾಪಾಯಿಯೂ, ಸುವರ್ಣಚೋರನೂ ಕೂಡ ಸೂಕರವೆಂಬ ನರಕದಲ್ಲಿ ಬೀಳುವರು.

೧೫೩. ಬ್ರಹ್ಮಹತ್ಯವನ್ನು, ಕ್ಷತ್ರಿಯಘಾತವನ್ನು ಮಾಡಿದವನೂ, ದುರ್ಗತಿಕನಾದ ವೈಶ್ಯನಾಶಕನೂ, ಗುರುಪತ್ನಿಗಾಮಿಯೂ ಆದ ಪುರುಷರು ಕಾಲವೆಂಬ ನರಕಕ್ಕೆ ಭಾಗಿಯಾಗುವರು.

೧೫೪. ಭಗಿನೀಗಾಮಿಯೂ, ರಾಜಸೇವಕನೂ, ತಪ್ತವಾದ ಲೋಹದಿಂದ ಪಶ್ವಾದಿಗಳಿಗೆ ಬರೆಹಾಕಿದವನೂ, ಅಶ್ವವ್ಯಾಪಾರಿಯೂ, ಕಾರಾಗೃಹರಕ್ಷಕನೂ ಆದ ಪುರುಷರು ತಪ್ತಕುಂಭವೆಂಬ ನರಕದಲ್ಲಿ ಬೀಳುವರು.

೧೫೫. ಸಾಧ್ವೀಮಣಿಯನ್ನು ಕ್ರಯಕ್ಕೆ ಮಾರಿದವನೂ, ಭಕ್ತರನ್ನು ತ್ಯಾಗಮಾಡಿದವನೂ, ಪುತ್ರಿಯಲ್ಲಿಯೂ, ಸೊಸೆಯಲ್ಲಿಯೂ, ಅತ್ಯಾಚಾರಮಾಡಿದವನೂ ಇವರು ಮಹಾಜ್ವಾಲವೆಂಬ ನರಕದಲ್ಲಿ ಮಹಾದುಃಖವನ್ನು ಬಹುಕಾಲ ಅನುಭವಿಸುವರು.

ವೇದೋ ವಿಕ್ರೀಯತೇ ಯೇನ ವೇದಂ ದೂಷಯತೇ ಚ ಯಃ ।
ಗುರೂಂಶ್ಚೈವಾವಮನ್ಯಂತೇ ವಾಕ್ರೋಶೈಸ್ತಾಡಯಂತಿ ಚ ॥ ೧೫೬ ॥

ಅಗಮ್ಯಗಾಮೀ ಚ ನರೋ ನರಕಂ ಶಬಲಂ ವ್ರಜೇತ್ ।
ವಿಮೋಹೇ ಪತಿತೇ ಚೌರೇ ಮರ್ಯಾದಾಂ ಯೋ ಭಿನಕ್ತಿ ವೈ ॥ ೧೫೭ ॥

ದುರಧ್ವಂ ಕುರುತೇ ಯಸ್ತು ಕೀಟಲೋಹಂ ಪ್ರಪದ್ಯತೇ ।
ದೇವಬ್ರಾಹ್ಮಣವಿದ್ವೇಷ್ಟಾ ಗುರೂಣಾಂ ಚಾಪ್ಯಪೂಜಕಃ ॥
ರತ್ನಂ ದೂಷಯತೇ ಯಸ್ತು ಕೃಮಿಭಕ್ಷ್ಯಂ ಪ್ರಪದ್ಯತೇ ॥ ೧೫೮ ॥

ಪರ್ಯಶ್ನಾತಿ ಯ ಏಕೋಽನ್ಯೋಂ ಬ್ರಾಹ್ಮಣೀಂ ಸುಹೃದಃ ಸುತಾಂ ।
ಲಾಲಾಭಕ್ಷೇ ಸ ಪತತಿ ದುರ್ಗಂಧೇ ನರಕೇ ಗತಃ ॥ ೧೫೯ ॥

ಕಾಂಡಕರ್ತಾ ಕುಲಾಲಶ್ಚ ನಿಷ್ಕಹರ್ತಾ ಚಿಕಿತ್ಸಕಃ ।
ಆರಾಮೇಷ್ವಗ್ನಿದಾತಾ ಯಃ ಪತತೇ ಸ ವಿಶಂಸನೇ ॥ ೧೬೦ ॥

೧೫೬-೧೫೭. ವೇದಗಳನ್ನು ದ್ರವ್ಯಕ್ಕೆ ವಿಕ್ರೇತನೂ, ವೇದನಿಂದಕನೂ, ಗುರುಗಳಿಗೆ ಅವಮಾನಮಾಡಿದವನೂ, ಗುರುದ್ರೋಹಿಯೂ, ಕ್ರೂರಭಾಷಣಗಳಿಂದ ಪರರಿಗೆ ಅವಮಾನಮಾಡಿದವನೂ, ಅಗಮ್ಯಗಮನವನ್ನು ಮಾಡಿದವನೂ, ಆದ ಇವರು ಶಬಲವೆಂಬ ನರಕಕ್ಕೆ ಭಾಗಿಯಾಗುವರು. ಮತ್ತು ಮರ್ಯಾದೆಯನ್ನು ಮೀರಿದವನೂ ಚೋರನೂ ಇವರು ವಿಮೋಹವೆಂಬ ನರಕಕ್ಕೆ ಹೋಗುವರು.

೧೫೮. ದುರ್ಮಾರ್ಗಕರ್ತನು ಕೀಟಲೋಹವೆಂಬ ನರಕಕ್ಕೆ ಹೋಗುವನು. ಮತ್ತು ವೇದಬ್ರಾಹ್ಮಣ ದ್ವೇಷಿಯೂ, ಗುರುಪೂಜಾವಿಮುಖನೂ, ರತ್ನದೂಷಕನೂ ಆದ ಪುರುಷರು ಕೃಮಿಭಕ್ಷ್ಯವೆಂಬ ನರಕಕ್ಕೆ ಹೋಗಿ ಮಹಾದುಃಖವನ್ನು ಪಡೆಯುವರು.

೧೫೯. ಯಾವ ಪುರುಷನು ಪರಸ್ತ್ರೀರಹಿತನಾಗುವನೋ ಮತ್ತು ಮಿತ್ರ ಕುಮಾರಿಯಲ್ಲಿ ಅತ್ಯಾಚಾರವನ್ನು ಮಾಡುವನೋ ಅಂತಹ ನೀಚನು ದುರ್ಗಂಧಿ ಯಾದ ಲಾಲಾಭಕ್ಷವೆಂಬ ನರಕಕ್ಕೆ ಸಿಕ್ಕಿ ಮಹಾದುಃಖಕ್ಕೆ ಭಾಗಿಯಾಗುವನು.

೧೬೦. ಅಶ್ವಚೋರನು, ಕುಂಬಾರನು, ಸುವರ್ಣಚೋರಿಯಾದ ಅಕ್ಕಸಾಲಿಯು, ವೈದ್ಯಜೀವಿಯು, ಉದ್ಯಾನಕ್ಕೆ ಬೆಂಕಿಯನ್ನು ಹಾಕುವವನು, (ಉದ್ಯಾನದಾಹಿಯು) ಇವರು ವಿಶಂಸನವೆಂಬ ನರಕದಲ್ಲಿ ಬಿದ್ದು ದುಃಖವನ್ನು ಹೊಂದುವರು.

ಅಸತ್ಪ್ರತಿಗ್ರಹೀ ಯಶ್ಚ ತಥೈವಾಯಾಜ್ಯಯಾಜಕಃ ।
ನಕ್ಷತ್ರೈರ್ಜೀವಿತೋ ಯಶ್ಚ ನರೋ ಗಚ್ಛತ್ಯಧೋಮುಖಂ ॥ ೧೬೧ ॥

ಕ್ಷೀರಂ ಸುರಾಂ ಚ ಮಾಂಸಂ ಚ ಲಾಕ್ಷಾಂ ಗಂಧಂ ರಸಂ ತಿಲಾನ್ ।
ಏವಮಾದೀನಿ ವಿಕ್ರೀಣನ್ ಘೋರೇ ಪೂಯವಹೇ ಪತೇತ್ ॥ ೧೬೨ ॥

ಯಃ ಕುಕ್ಕುಟಾನಿ ಬಧ್ನಾತಿ ಮಾರ್ಜಾರಾನ್ ಸೂಕರಾಂಶ್ಚ ತಾನ್ ।
ಪಕ್ಷಿಣಶ್ಚ ಮೃಗಾಚ್ಛಾಗಾನ್ಸೋಽಪ್ಯೇನಂ ನರಕಂ ವ್ರಜೇತ್ ॥ ೧೬೩ ॥

ಆಜೀವಿಕೋ ಮಾಹಿಷಕಸ್ತಥಾ ಚಕ್ರಧ್ವಜೀ ಚ ಯಃ ।
ರಂಗೋಪಜೀವಿಕೋ ವಿಪ್ರಃ ಶಾಕುನಿಗ್ರಾಮಯಾಜಕಃ ॥ ೧೬೪ ॥

ಅಗಾರದಾಹೀ ಗರದಃ ಕುಂಡಾಶೀ ಸೋಮವಿಕ್ರಯೀ ।
ಸುರಾಪೋ ಮಾಂಸಭಕ್ಷಶ್ಚ ತಥಾ ಚ ಪಶುಘಾತಕಃ ॥ ೧೬೫ ॥

---

೧೬೧. ದುಷ್ಟರಿಂದ ದಾನವನ್ನು ಸ್ವೀಕರಿಸಿದವನೂ, ಅನರ್ಹರಿಂದ ಯಾಗವನ್ನು ಮಾಡಿಸಿದವನೂ, ಜೋಯಿಸವನ್ನು ಹೇಳಿ ಜೀವನಮಾಡುವವನೂ, ಇವರು ಅಧೋಮುಖವೆಂಬ ನರಕಕ್ಕೆ ಸಿಕ್ಕಿ ಮಹಾದ್ದುಃಖವನ್ನು ಹೊಂದುವರು.

೧೬೨. ಹಾಲು, ಮೊಸರು, ಹೆಂಡ, ಮಾಂಸ, ಅರಗು, ಗಂಧ, ರಸ, ಎಳ್ಳು ಇವೇ ಮೊದಲಾದ ವಸ್ತುಗಳನ್ನು ಮಾರುವವರು ಅತ್ಯಂತ ಭಯಂಕರವಾದ ಪೂಯವಹವೆಂಬ ನರಕದಲ್ಲಿ ಬಿದ್ದು ನಾನಾ ದುಃಖಗಳನ್ನು ಅನುಭವಿಸುವರು.

೧೬೩. ಯಾವ ಪುರುಷನು ಕೋಳಿ, ಬೆಕ್ಕು, ಹಂದಿ, ಪಕ್ಷಿ, ಮೃಗ, ಕುರಿ, ಆಡು ಇವೇ ಮೊದಲಾದ ಪ್ರಾಣಿಗಳನ್ನು ಪಂಜರಾದಿಗಳಲ್ಲಿ ಬಂಧನಮಾಡುವನೋ ಅವನೂ ಕೂಡ ಪೂಯವಹವೆಂಬ ನರಕಕ್ಕೆ ಹೋಗುವನು

೧೬೪–೧೬೬. ಯಾವ ಪುರುಷನು ಕುರಿ, ಎಮ್ಮೆ, ರಥ, ನಾಟಕ ಇವುಗಳಿಂದಲೇ ಜೀವಿಸುವನೋ ಮತ್ತು ನಕುಲಾದಿಗಳಿಂದ ಜೀವಿಸುವನೋ ಮತ್ತು ಯಾಗಾದಿಗಳನ್ನು ಮಾಡುವನೂ, ಮನೆಮುರಕನೂ, ವಿಷದಾಯಕನೂ, ಸೋಮವಿಕ್ರಯಿಯೂ, ಸುರಾಪಾಯಿಯೂ, ಮಾಂಸಭಕ್ಷಕನೂ, ಪಶುಘಾತಕನೂ, ಮಹಿಷಘಾತಕನೂ,

ವಿಶ್ವಸ್ತಾ ಮಹಿಷಾದೀನಾಂ ಮೃಗಹಂತಾ ತಥೈವ ಚ ।
ಪರ್ವಕಾರಶ್ಚ ಸೂಚೀ ಯ ಯಶ್ಚ ಸ್ಯಾನ್ಮಿತ್ರಘಾತಕಃ ॥
ರುಧಿರಾಂಧೇ ಪತಂತ್ಯೇತೇ ಏವಮಾಹುರ್ಮನೀಷಿಣಃ ॥ ೧೬೬ ॥

ಉಪವಿಷ್ಟಮೇಕಪಂಕ್ತ್ಯಾಂ ವಿಷಮಂ ಭೋಜಯಂತಿ ಯೇ ।
ಪತಂತಿ ನರಕೇ ಘೋರೇ ವಿಂಡ್ಭುಜೇ ನಾತ್ರ ಸಂಶಯಃ ॥ ೧೬೭ ॥

ಮೃಷಾವಾದೀ ನರೋ ಯಶ್ಚ ತಥಾ ಪ್ರಾಕ್ರೋಶಕೋಽಶುಭಃ ।
ಪತೇತ್ತು ನರಕೇ ಘೋರೇ ಮೂತ್ರಾಕೀರ್ಣೇ ಚ ಪಾಪಕೃತ್ ॥ ೧೬೮ ॥

ಮಧುಗ್ರಾಹಾಭಿಹಂತಾರೋ ಯಾಂತಿ ವೈತರಣೀಂ ನರಾಃ ।
ಉನ್ಮತ್ತಾಶ್ಚಿತ್ತಭಗ್ನಾಶ್ಚ ಶೌಚಾಚಾರವಿವರ್ಜಿತಾಃ ॥ ೧೬೯ ॥

---

ಮೃಗನಾಶಕನೂ, ವಂಚಕನೂ, ಕಲಹಕಾರನೂ, ಮಿತ್ರವಂಚಕನೂ ಆದ ಇವರು ಘೋರವಾದ ರುಧಿರಾಂಧವೆಂಬ ನರಕಕ್ಕೆ ಹೋಗುವರೆಂದು ಜ್ಞಾನಿಗಳು ಹೇಳುವರು.

೧೬೭. ಒಂದೇ ಪಂಕ್ತಿಯಲ್ಲಿ ಕುಳಿತಿರುವರಿಗೆ ಪಂಕ್ತಿವಂಚನೆ ಮಾಡಿದವರು ಭಯಂಕರವೂ, ಅಮೇಧ್ಯಭಕ್ಷಕವೂ ಆದ ನರಕದಲ್ಲಿ ಬೀಳುವರು ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ.

೧೬೮. ಮೃಷಾವಾದಿಯಾದ ಪುರುಷನೂ, ಅತ್ಯಂತ ಕೋಪಿಷ್ಠನಾದ ನರನೂ, ಅಮಂಗಳಕರನಾದ ಮನುಜನೂ ಪಾಪಿಷ್ಠನಾದ ಪುರುಷನೂ ಕೂಡ ಮೂತ್ರಮಯವೂ ಘೋರವೂ ಆದ ನರಕದಲ್ಲಿ ಬೀಳುವರು.

೧೬೯. ಜೇನುಗೂಡನ್ನು ನಾಶಮಾಡಿದವನೂ, ದುಂಬಿಗಳನ್ನೂ ಮೊಸಳೆ ಮೊದಲಾದ ಜಲಚರಪ್ರಾಣಿಗಳನ್ನೂ ನಾಶಮಾಡಿದವನೂ, ಹುಚ್ಚನೂ, ಚಿತ್ತ ವಿಕಾರಿಯೂ, ಶೌಚಾಚಾರವಿಹೀನನೂ ಇವರು ವೈತರಣಿಯೆಂಬ ನರಕವನ್ನು ಹೊಂದುವರು.

ಕ್ರೋಧನಾ ದುಃಖದಾಶ್ಚೈವ ಕುಹಕಾಃ ಕೃಷ್ಣಗಾಮಿನಃ ।
ಅಸಿಪತ್ರವನೇ ಛೇಧೀ ತಥಾಹ್ಯೌರಭಿಕಾಶ್ಚ ಯೇ ॥
ಕರ್ತನೈಶ್ಚ ವಿಕೃಷ್ಯಂತೇ ಮೃಗವ್ಯಾಧಾಃ ಸುದಾರುಣೈಃ ॥ ೧೭೦ ॥

ಆಶ್ರಮಪ್ರತ್ಯವಸಿತಾ ಅಗ್ನಿಜ್ವಾಲೇ ಪತಂತಿ ವೈ ।
ಭೋಜ್ಯಂತೇ ಶ್ಯಾಮಶಬಲೈರಯಸ್ತುಂಡೈಶ್ಚ ವಾಯಸೈಃ ॥ ೧೭೧ ॥

ಇಜ್ಯಾಯಾಂ ವ್ರತಮಾಲೋಪಾತ್ಸಂದಂಶೇ ನರಕೇ ಪತೇತ್ ।
ಸ್ಕಂಧಂತೇ ಯದಿ ವಾ ಸ್ವಪ್ನೇ ವ್ರತಿನೋ ಬ್ರಹ್ಮಚಾರಿಣಃ ॥ ೧೭೨ ॥

ಪುತ್ರೈರಧ್ಯಾಪಿತಾ ಯೇ ಚ ಪುತ್ರೈರಾಜ್ಞಾಪಿತಾಶ್ಚ ಯೇ ।
ತೇ ಸರ್ವೇ ನರಕಂ ಯಾಂತಿ ನಿಯತಂ ತು ಶ್ವಭೋಜನೇ ॥ ೧೭೩ ॥

---

೧೭೦. ಕೋಪಿಷ್ಠರೂ ಪರರಿಗೆ ದುಃಖದಾತೃಗಳೂ, ಕುಹಕರೂ, ವಕ್ರಗಾಮಿಗಳೂ, ಪ್ರಾಣಿಹಿಂಸಕರೂ, ಬೇಟೆಗಾರರೂ ಆದ ಇವರು ಅಸಿಪತ್ರವನವೆಂಬ ನರಕಕ್ಕೆ ಹೋಗುವರು. ಮತ್ತು ಅಲ್ಲಿ ಛೇದಭೇದವೇ ಮೊದಲಾದ ಮಹಾದುಃಖವನ್ನು ಹೊಂದುವರು.

೧೭೧ ವರ್ಣಾಶ್ರಮಭ್ರಷ್ಟರಾದ ಪುರುಷರು ಅಗ್ನಿಜ್ವಾಲೆಯೆಂಬ ನರಕದಲ್ಲಿ ಬೀಳುವರು. ತರುವಾಯ ಕಪ್ಪಗೂ, ಚಿತ್ರವರ್ಣವಾಗಿಯೂ ಇರುವ ಅಯೋಮಯವಾದ ನರಕಕ್ಕೆ ಹೋಗಿ ಕಾಗೆಗಳ ಕೊಕ್ಕಿನಿಂದ ಕೊತ್ತಿ ತಿನ್ನಲ್ಪಡುತ್ತಾರೆ.

೧೭೨. ಯಾಗದಿಂದಲೂ, ಸತ್ಕರ್ಮಗಳಿಂದಲೂ ಭ್ರಷ್ಟರಾದ ಪುರುಷರು ಸಂದಂಶವೆಂಬ ನರಕಕ್ಕೆ ಹೋಗುವರು. ನಿಯಮಿತರಾದ ಬ್ರಹ್ಮಚಾರಿಗೆ ಸ್ವಪ್ನದಲ್ಲಿ ಸ್ಖಲನವಾದರೆ ಘೋರವಾದ ಮೇಲೆ ಹೇಳಿದ ನರಕವುಂಟಾಗುವುದು.

೧೭೩. ಯಾರು ಪುತ್ರರಿಂದ ವಿದ್ಯೆಯನ್ನು ಕಲಿಯುತ್ತಾರೆಯೋ ಮತ್ತು ಅವರಿಂದ ಆಜ್ಞಾಪಿಸಲ್ಪಡುತ್ತಾರೆಯೋ ಅವರೆಲ್ಲರೂ ನಿಯಮಿತವಾಗಿಯೂ ಶ್ವಭೋಜನವೆಂಬ ನರಕಕ್ಕೆ ನಿಶ್ಚಿತವಾಗಿಯೂ ಹೋಗುವರು.

**ವರ್ಣಾಶ್ರಮವಿರುದ್ಧಾನಿ ಕ್ರೋಧಹರ್ಷಸಮನ್ವಿತಾಃ ।**
**ಕರ್ಮಾಣಿ ಯೇ ತು ಕುರ್ವಂತಿ ಸರ್ವೇ ನಿರಯಗಾಮಿನಃ ॥ ೧೭೪ ॥**

**ಉಪರಿಷ್ಟಾತ್ಸ್ಥಿತೋ ಘೋರ ಉಷ್ಣಾತ್ಮಾ ರೌರವೋ ಮಹಾನ್ ।**
**ಸುದಾರುಣಸ್ತು ಶೀತಾತ್ಮಾ ತಸ್ಯಾಧಸ್ತಾತ್ತಪಃ ಸ್ಮೃತಃ ॥ ೧೭೫ ॥**

**ಏವಮಾದಿಕ್ರಮೇಣೈವ ವರ್ಣ್ಯಮಾನಾನ್ನಿಬೋಧತ ।**
**ಭೂಮೇರಧಸ್ತಾತ್ಸಪ್ತೈವ ನರಕಾಃ ಪರಿಕೀರ್ತಿತಾಃ ॥ ೧೭೬ ॥**

**ಅಧರ್ಮಸೂನವಸ್ತೇ ಸ್ಯುರಂಧತಾಮಿಸ್ರಕಾದಯಃ ।**
**ರೌರವಃ ಪ್ರಥಮಸ್ತೇಷಾಂ ಮಹಾರೌರವ ಏವ ಚ ॥ ೧೭೭ ॥**

---

೧೭೪. ಯಾವ ಪುರುಷರು ಕಾಮಕ್ರೋಧಗಳಿಂದಲೂ, ಸಂತೋಷಾತಿಶಯದಿಂದಲೂ, ವರ್ಣಾಶ್ರಮಾಚಾರಗಳಿಗೆ ವಿರುದ್ಧವಾದ ಕರ್ಮಗಳನ್ನು ಮಾಡುವವರೋ ಅವರೆಲ್ಲರೂ ನರಕಕ್ಕೆ ಭಾಗಿಯಾಗುವರು.

೧೭೫. ರೌರವನಾಮಕವಾದ ನರಕವು ಮೇಲ್ಭಾಗದಲ್ಲಿ ಕಪ್ಪಾಗಿಯೂ, ಭಯಂಕರವಾಗಿಯೂ, ಅತ್ಯುಷ್ಣವಾಗಿಯೂ, ವಿಶಾಲವಾಗಿಯೂ ಇರುತ್ತದೆ. ಅದರ ಕೆಳಭಾಗದಲ್ಲಿ ಅತಿಭಯಂಕರವೂ, ಅತಿ ಶೀತಲವೂ ಆದ ತಪ ಎಂಬ ನರಕವು ವಿಖ್ಯಾತವಾಗಿದೆ.

೧೭೬. ಇದೇ ರೀತಿಯಾಗಿಯೇ ಮುಂದೆ ವರ್ಣಿಸುವ ನರಕಗಳನ್ನು ತಿಳಿಯಿರಿ. ಈ ಭೂಮಂಡಲದ ಕೆಳಭಾಗದಲ್ಲಿ ಸಪ್ತನರಕಗಳು ಸುಪ್ರಸಿದ್ಧಗಳಾಗಿವೆ. ಅವುಗಳನ್ನು ತಿಳಿಸುವೆನು ಕೇಳಿರೆಂದನು.

೧೭೭. ಅಂಧತಾಮಿಸ್ರವೇ ಮೊದಲಾದ ಆ ನರಕಗಳು ಅಧರ್ಮಪುತ್ರಗಳಾಗಿರುವುವು. ಅವುಗಳಲ್ಲಿ ರೌರವವೆಂಬ ನರಕವು ಮೊದಲನೆಯದಾಗಿದೆ. ಅದರ ಕೆಳಭಾಗದಲ್ಲಿ ಮಹಾರೌರವವೆಂಬ ಮತ್ತೊಂದು ನರಕವು ಸುಪ್ರಸಿದ್ಧವಾಗಿದೆ.

**ಅಸ್ಯಾಧಃ ಪುನರಪ್ಯನ್ಯಃ ಶೀತಸ್ತಪ ಇತಿ ಸ್ಮೃತಃ |**
**ತೃತೀಯಃ ಕಾಲಸೂತ್ರಃ ಸ್ಯಾನ್ಮಹಾಹವಿವಿಧಿಃ ಸ್ಮೃತಃ || ೧೭೮ ||**

**ಅಪ್ರತಿಷ್ಠಶ್ಚತುರ್ಥಃ ಸ್ಯಾದವೀಚೀ ಪಂಚಮಃ ಸ್ಮೃತಃ |**
**ಲೋಹಪೃಷ್ಠಸ್ತಮಸ್ತೇಷಾಮವಿಧೇಯಸ್ತು ಸಪ್ತಮಃ || ೧೭೯ ||**

**ಘೋರತ್ವಾದ್ರೌರವಃ ಪ್ರೋಕ್ತಃ ಸಾಂಬಕೋ ದಹನಃ ಸ್ಮೃತಃ |**
**ಸುದಾರುಣಸ್ತು ಶೀತಾತ್ಮಾ ತಸ್ಯಾಧಸ್ತಾತ್ತಪೋಽಧಮಃ || ೧೮೦ ||**

**ಸರ್ಪೋ ನಿಕೃಂತನಃ ಪ್ರೋಕ್ತಃ ಕಾಲಸೂತ್ರೇತಿ ದಾರುಣಃ |**
**ಅಪ್ರತಿಷ್ಠೇ ಸ್ಥಿತಿರ್ನಾಸ್ತಿ ಭ್ರಮಸ್ತಸ್ಮಿನ್ಸುದಾರುಣಃ || ೧೮೧ ||**

---

೧೭೮. ಅದರ ಕೆಳಭಾಗದಲ್ಲಿ ಶೀತಸ್ತಪಸವೆಂದು ಪ್ರಖ್ಯಾತವಾದ ಮತ್ತೊಂದು ನರಕವಿದೆ. ಅದು ಮೂರನೆಯದೂ, ಕಾಲಸೂತ್ರನಾಮಕವೂ, ಮಹಾಹವಿಧಿಯೆಂಬ ಖ್ಯಾತವೂ, ಘೋರವೂ ಆಗಿದೆ.

೧೭೯. ಅಪ್ರತಿಷ್ಠವೆಂಬ ನಾಲ್ಕನೆಯ ನರಕವು ಅದರ ಕೆಳಗಡೆಯಲ್ಲಿದೆ. ಅವೀಚೀಯೆಂಬ ನರಕವು ಐದನೆಯದಾಗಿಯೂ, ಲೋಹಪೃಷ್ಠವೆಂಬುದು ಆರನೆಯದಾಗಿಯೂ, ಅವಿಧೇಯವೆಂಬ ನರಕವು ಏಳನೆಯದಾಗಿಯೂ ಇರುತ್ತವೆ.

೧೮೦. ಅವುಗಳಲ್ಲಿ ಮೊದಲನೆಯ ನರಕವು ಅತಿ ಘೋರವಾಗಿರುವುದರಿಂದ ರೌರವವೆಂಬುದಾಗಿಯೂ, ದಹನವೆಂಬುದು ಜಲಸಹಿತವಾಗಿಯೂ, ಸುಧಾರಣವೆಂಬ ನರಕವು ಅತಿ ಶೀತವಾಗಿಯೂ ಅದರ ಕೆಳಭಾಗದಲ್ಲಿರುವ ತಪವೆಂಬ ನರಕವು ಅತ್ಯಂತ ಅಧಮವಾಗಿಯೂ ಇರುತ್ತವೆ.

೧೮೧. ನಿಕೃಂತನವೆಂಬ ನರಕವು ಸರ್ಪಮಯವಾಗಿದೆ. ಕಾಲಸೂತ್ರವೆಂಬುದು ಅತ್ಯಂತ ಭಯಂಕರವಾಗಿದೆ. ಅಪ್ರತಿಷ್ಠವೆಂಬ ನರಕದಲ್ಲಿ ಸ್ಥಿರವಾಗಿ ನಿಲ್ಲಲು ಅವಕಾಶವೇ ಇಲ್ಲ. ಅದರಲ್ಲಿ ಅತಿಭಯಂಕರವಾದ ಭ್ರಮಣವುಂಟಾಗುವುದು.

ಅವೀಚಿರ್ದಾರುಣಃ ಪ್ರೋಕ್ತೋ ಯಂತ್ರಸಂಪೀಡನಾಚ್ಚ ಸಃ ।
ತಸ್ಮಾತ್ಸುದಾರುಣೋ ಲೋಹಃ ಕರ್ಮಣಾಂ ಕ್ಷಯಣಾಚ್ಚ ಸಃ ॥ ೧೮೨ ॥

ತಥಾಭೂತೋ ಶರೀರಸ್ಥಾದವಿಧಿಭ್ಯಸ್ತು ಸ ಸ್ಮೃತಃ ।
ಪೀಡಬಂಧವಧಾಸಂಗಾದಪ್ರತೀಕಾರಲಕ್ಷಣಃ ॥ ೧೮೩ ॥

ಊರ್ಧ್ವಂ ಶೈಲಮಿತಾಸ್ತೇ ತು ನಿರಾಲೋಕಾಶ್ಚ ತೇ ಸ್ಮೃತಾಃ ।
ದುಃಖೋತ್ಕರ್ಷಸ್ತು ಸರ್ವೇಷು ಹ್ಯಧರ್ಮಸ್ಯ ನಿಮಿತ್ತತಃ ॥ ೧೮೪ ॥

ಊರ್ಧ್ವಂ ಲೋಕೈಃ ಸಮಾವೇತಾ ನಿರಾಲೋಕೌ ಚ ತಾವುಭೌ ।
ಕೂಟಾಂಗಾರಪ್ರಮಾಣೈಶ್ಚ ಶರೀರೀ ಮೂತ್ರನಾಯಕಃ ॥ ೧೮೫ ॥

---

೧೮೨. ಅವೀಚಿಯೆಂಬ ನರಕವು ಅತಿದಾರುಣವಾಗಿಯೂ, ಯಂತ್ರಗಳಿಂದ ಶರೀರವಲ್ಲಿರುವ ರಕ್ತವನ್ನು ಹೀರುವುದಾಗಿಯೂ ಇರುತ್ತದೆ. ಆ ಯಂತ್ರಗಳು ಲೋಹಮಯವಾಗಿಯೂ, ದುಷ್ಕರ್ಮನಾಶಕವಾಗಿಯೂ ಇರುತ್ತದೆ.

೧೮೩. ಹಾಗೆ ಕರ್ಮನಾಶಕವೂ, ಶರೀರಗತವಾದ ರಕ್ತಶೋಷಕವೂ ಆಗಿರುವುದರಿಂದ ಅವಿಧೇಯನಾಮಕವಾಗಿಯೂ ಇರುತ್ತದೆ. ಈ ನರಕದಲ್ಲಿ ಅತ್ಯಂತವಾದ ಪೀಡೆಯೂ, ಬಂಧನವೂ, ಕೊಲೆಯೂ ಸಂಭವಿಸುವುದರಿಂದ ಪರಿಹರಿಸಿಕೊಳ್ಳಲು ಅಶಕ್ಯವಾಗಿದೆ.

೧೮೪. ಈ ನರಕಗಳ ಮೇಲ್ಭಾಗದಲ್ಲಿ ಪರ್ವತಗಳು ಆವೃತಗಳಾಗಿರುವುದರಿಂದ ಕಾಂತಿಯಿಲ್ಲದೇ ನಿರಾಲೋಕನಾಮಕಗಳಾಗಿವೆ. ಈ ನರಕಗಳಲ್ಲಿ ಬಹಳವಾಗಿ ದುಃಖವು ಉಂಟಾಗುವುದು. ಆ ದುಃಖಗಳು ಪೂರ್ವಜನ್ಮದ ಅಧರ್ಮದ ಫಲವಾಗಿರುತ್ತವೆ.

೧೮೫. ಈ ಎರಡು ಲೋಕಗಳೂ, ಊರ್ಧ್ವಲೋಕಗಳಿಗೆ ಸಮನಾಗಿಯೂ, ಕಾಂತಿರಹಿತವಾಗಿಯೂ, ಅಂಧಕಾರದಂತಿರುವ ಪುರುಷನಾಯಕವಾಗಿಯೂ, ಕೃಷ್ಣಮಯವಾದ ಪುರುಷರಿಂದ ಸಹಿತವಾಗಿಯೂ ಇವೆ.

ಉಪಭೋಗಸಮರ್ಥೈಸ್ತು ಸದ್ಯೋ ಜಾಯಂತಿ ಕರ್ಮಭಿಃ ।
ದುಃಖಪ್ರಕರ್ಷಶ್ಚೋಗ್ರತ್ವಂ ತೇಷು ಸರ್ವೇಷು ವೈ ಸ್ಮೃತಃ ॥ ೧೮೬ ॥

ಯಾತನಾಶ್ಚಾಪ್ಯಸಂಖ್ಯೇಯಾ ನಾರಕಾನಾಂ ತಥಾ ಸ್ಮೃತಾಃ ।
ತತ್ರಾನುಭೂಯತೇ ದುಃಖಂ ಕ್ಷೀಣೇ ಕರ್ಮಣಿ ವೈ ಪುನಃ ॥ ೧೮೭ ॥

ತಿರ್ಯಗ್ಯೋನೌ ಪ್ರಸೂಯಂತೇ ಕರ್ಮಶೇಷೇ ಗತೇ ತತಃ ।
ದೇವಾಶ್ಚ ನಾರಕಾಶ್ಚೈವ ಹ್ಯೂರ್ಧ್ವಂ ಚಾಧಶ್ಚ ಸಂಸ್ಥಿತಾಃ ॥ ೧೮೮ ॥

ಧರ್ಮಾಧರ್ಮನಿಮಿತ್ತೇನ ಸದ್ಯೋ ಜಾಯಂತಿ ಮೂರ್ತಯಃ ।
ಉಪಭೋಗಾರ್ಥಮುತ್ಪತ್ತಿರೌಪಪತ್ತಿಕಕರ್ಮತಃ ॥ ೧೮೯ ॥

---

೧೮೬. ಅತಿಮುಖ್ಯವಾಗಿ ಅನುಭವಿಸಬೇಕಾಗಿರುವ ಕರ್ಮಗಳಿಂದ ಪ್ರಾಣಿಗಳು ಯಾತನಾಮಯಶರೀರದಿಂದ ಕೂಡಿ ನರಕಕ್ಕೆ ಬಂದು ಸೇರುವರು. ಸಮಸ್ತವಾದ ಆ ನರಕಗಳಲ್ಲಿಯೂ ಸಹಿಸಲಸಾಧ್ಯವಾದ ಮಹಾದುಃಖಗಳು ಉಂಟಾಗುವುವು.

೧೮೭. ಆ ನರಕಗಳಲ್ಲಿ ಯಾತನಾಸ್ಥಾನಗಳು ವಿಶೇಷವಾಗಿಯೂ, ಅಸಂಖ್ಯಾಕವಾಗಿಯೂ ಇವೆ. ಮನುಷ್ಯರು ಯಾತನೆಗಳನ್ನನುಭವಿಸಿ ಕರ್ಮಗಳು ಕ್ಷಯಿಸಲು ಪುನಃ ಜನನಮರಣಗಳನ್ನು ಹೊಂದುವರು.

೧೮೮. ಹೀಗೆ ಪ್ರಾಣಿಗಳು ತಮ್ಮ ಕರ್ಮಾನುಸಾರವಾಗಿ ನಾನಾಯೋನಿಗಳಲ್ಲಿ ಜನಿಸಿ ತರುವಾಯ ಸ್ವರ್ಗ, ನರಕಾದಿಗಳಲ್ಲಿ ಸುಖದುಃಖಗಳನ್ನು ಅನುಭವಿಸುವರು. ದೇವತೆಗಳು ಊರ್ಧ್ವದಲ್ಲಿರುವ ದೇವಲೋಕದಲ್ಲಿಯೂ, ನಾರಕಿಗಳು ಕೆಳಗಿರುವ ನರಕಲೋಕಗಳಲ್ಲಿಯೂ ಜನಿಸುವರು.

೧೮೯. ಹೀಗೆ ಪ್ರಜೆಗಳು ಧರ್ಮಾಧರ್ಮನಿಮಿತ್ತವಾಗಿ ನಾನಾರೂಪಿಗಳಾಗಿ ಸುಖದುಃಖಗಳನ್ನು ಅನುಭವಿಸುವುದಕ್ಕೋಸ್ಕರ ಪುನಃ ಪುನಃ ಜನಿಸಿ ತಮ್ಮ ಕರ್ಮಾನುಗುಣವಾಗಿ ಫಲಗಳನ್ನು ಅನುಭವಿಸುವರು.

**ಪಶ್ಯಂತಿ ನಾರಕಾ್ ದೇವಾ ಹ್ಯಧೋವಕ್ತ್ರಾ್ ಹ್ಯಧೋಗತಾನ್ ।**
**ನಾರಕಾಶ್ಚ ತಥಾ ದೇವಾನ್ ಸರ್ವಾನ್ ಪಶ್ಯಂತ್ಯಧೋಮುಖಾನ್ ॥ ೧೯೦ ॥**

**ಅನಗ್ರಮೂಲತಾ ಯಸ್ಮಾದ್ಧಾರಣಾಚ್ಚ ಸ್ವಭಾವತಃ ।**
**ತಸ್ಮಾದೂರ್ಧ್ವಮಧೋಭಾವೋ ಲೋಕಾಲೋಕೇ ನ ವಿದ್ಯತೇ ॥ ೧೯೧ ॥**

**ಏಷಾ ಸ್ವಾಭಾವಿಕೀ ಸಂಜ್ಞಾ ಲೋಕಾಲೋಕೇ ಪ್ರವರ್ತತೇ ।**
**ಅಥಾಬ್ರುವನ್ಪುನರ್ವಾಯುಂ ಬ್ರಾಹ್ಮಣಾಃ ಸತ್ರಿಣಸ್ತದಾ ॥ ೧೯೨ ॥**

**॥ ಋಷಯ ಊಚುಃ ॥**

**ಸರ್ವೇಷಾಮೇವ ಭೂತಾನಾಂ ಲೋಕಾಲೋಕನಿವಾಸಿನಾಃ ।**
**ಸಂಸಾರೇ ಸಂಸರಂತೀಹ ಯಾವಂತಃ ಪ್ರಾಣಿನಶ್ಚ ತಾನ್ ॥ ೧೯೩ ॥**

---

೧೯೦. ಸ್ವರ್ಗಗತರಾದ ದೇವತೆಗಳು ನರಕದಲ್ಲಿ ದುಃಖಗಳನ್ನು ಅನುಭವಿಸುತ್ತಿರುವ ಪುರುಷರನ್ನು ಬಗ್ಗಿನೋಡುವರು. ನರಕದಲ್ಲಿರುವ ಪ್ರಾಣಿಗಳು ತಲೆಯನ್ನು ಮೇಲಕ್ಕೆ ಎತ್ತಿ ಅಧೋಮುಖಿಗಳಾದ ದೇವತೆಗಳನ್ನೂ ನೋಡುವರು.

೧೯೧. ಲೋಕಾಲೋಕಪರ್ವತವು ಮೇಲೆಯೂ, ಕೆಳಗೂ ಇಲ್ಲದೆ ಮಧ್ಯಭಾಗದಲ್ಲಿದ್ದುಕೊಂಡು ಸಹಜವಾಗಿ ಜಗತ್ತಿಗೆ ಆಶ್ರಯವಾಗಿದೆ. ಆದುದರಿಂದ ಲೋಕಾಲೋಕಪರ್ವದಲ್ಲಿ ಊರ್ಧ್ವಭಾಗಾಧೋಭಾಗಗಳಿಲ್ಲ.

೧೯೨. ಲೋಕಾಲೋಕವೆಂಬ ಈ ನಾಮವು ಈ ಪರ್ವತಕ್ಕೆ ಸಹಜವಾಗಿಯೂ, ಅನ್ವರ್ಥವಾಗಿಯೂ ಇರುತ್ತದೆ. ತರುವಾಯ ಆ ಸತ್ರಯಾಗದಲ್ಲಿ ಮಿಳಿತರಾದ ಮುನಿಗಳೆಲ್ಲರೂ ವಾಯುದೇವನನ್ನು ಪುನಃ ಕೇಳಿದರು.

೧೯೩. ಋಷಿಗಳು ಹೇಳಿದರು :—ಎಲೈ ವಾಯುದೇವನೇ, ಲೋಕಾಲೋಕ ಪರ್ವತದಲ್ಲಿ ಪ್ರಾಣಿಗಳ ಮಧ್ಯದಲ್ಲಿ ಯಾವ ಯಾವ ಪ್ರಾಣಿಗಳು ಈ ಸಂಸಾರದಲ್ಲಿ ಉದ್ಭವಿಸುತ್ತವೆ. ಈ ವಿಷಯವನ್ನು ಹೇಳಬೇಕೆಂದು ಬೇಡಿಕೊಂಡರು.

ಸಂಖ್ಯಯಾ ಪರಿಸಂಖ್ಯಾಯ ತತಃ ಪ್ರಬ್ರೂಹಿ ಕೃತ್ಸ್ನಶಃ ।
ಋಷೀಣಾಂ ತದ್ವಚಃ ಶ್ರುತ್ವಾ ಮಾರುತೋ ವಾಕ್ಯಮಬ್ರವೀತ್ ॥ ೧೯೪ ॥

॥ ವಾಯುರುವಾಚ ॥

ನ ಶಕ್ಯಾ ಜಂತವಃ ಕೃತ್ಸ್ನಾಃ ಪ್ರಸಂಖ್ಯಾತುಂ ಕಥಂಚನ ।
ಅನಾದ್ಯಂತಾಶ್ಚ ಸಂಕೀರ್ಣಾ ಹ್ಯಪ್ಯೂಹೇನ ವ್ಯವಸ್ಥಿತಾಃ ॥
ಗಣನಾ ವಿನಿವೃತ್ತ್ಯೈಷಾಮಾನಾಂತ್ಯೇನ ಪ್ರಕೀರ್ತಿತಾಃ ॥ ೧೯೫ ॥

ನ ದಿವ್ಯಚಕ್ಷುಷಾ ಜ್ಞಾತುಂ ಶಕ್ಯಾ ಜ್ಞಾನೇನ ವಾ ಪುನಃ ।
ಚಕ್ಷುಷಾ ವೈ ಪ್ರಸಂಖ್ಯಾತುಮತೋ ಹ್ಯಂತೇ ನರಾಧಿಪಃ ॥ ೧೯೬ ॥

---

೧೯೪. ಎಲೈ ವಾಯುದೇವನೇ, ಆ ಗಿರಿಯಲ್ಲಿ ವಾಸಿಸುವ ಪ್ರಾಣಿಗಳಾವುವು ? ಅವುಗಳ ಸಂಖ್ಯೆಯು ಎಷ್ಟು? ಇವನ್ನು ಸಂಪೂರ್ಣವಾಗಿ ನಿರೂಪಿಸಬೇಕೆಂದು ಕೇಳಿದರು. ಹೀಗೆ ಹೇಳಿದ ಮುನಿಗಳ ಮಾತುಗಳನ್ನು ಕೇಳಿದ ವಾಯುದೇವನು ಮುಂದೆ ತಿಳಿಸುವಂತೆ ಹೇಳಿದನು.

೧೯೫, ವಾಯುದೇವನು ಹೇಳಿದನು:—ಎಲೈ ಮುನಿವರ್ಯರೇ, ಲೋಕಾಲೋಕಗಿರಿಯಲ್ಲಿರುವ ಪ್ರಾಣಿಗಳೆಲ್ಲವನ್ನೂ ಸಂಪೂರ್ಣವಾಗಿ ಸಂಖ್ಯೆಯಿಂದ ಗಣನೆ ಮಾಡಿ ಹೇಳಲು ಎಂದಿಗೂ ಸಾಧ್ಯವಿಲ್ಲ. ಏಕೆಂದರೆ ಅವು ಅನಾದ್ಯನಂತಗಳಾಗಿಯೂ, ಸಂಕೀರ್ಣವಾಗಿಯೂ ಇರುತ್ತವೆ. ಆದುದರಿಂದ ಕೇವಲ ಊಹಿಸಲು ಮಾತ್ರ ಸಾಧ್ಯವಾಗಿದೆ. ಅನಂತವಾದ್ದರಿಂದ ಅವು ಗಣನೆಗೆ ಮೀರಿವೆಯೆಂದು ವಾಯುದೇವನು ಹೇಳಿವನು.

೧೯೬. ಓ ವಿಪ್ರೋತ್ತಮರೇ, ಆ ಗಿರಿಯಲ್ಲಿರುವ ವಸ್ತುಗಳನ್ನರಿಯಲು ದಿವ್ಯ ಚಕ್ಷುಸ್ಸುಗಳಿಂದಲೂ, ದಿವ್ಯಜ್ಞಾನದಿಂದಲೂ ಕೂಡ ಅವನ್ನು ತಿಳಿಯಲು ಅಸಾಧ್ಯವಾಗಿರುವುದು. ಹೀಗಿರುವಲ್ಲಿ ಸಾಮಾನ್ಯವಾದ ಚರ್ಮಚಕ್ಷುಸ್ಸಿನಿಂದ ತಿಳಿಯಲು ಹೇಗೆ ತಾನೇ ಸಾಧ್ಯವಾದೀತು.

ಅನಾಧ್ಯಾನಾದವೇದ್ಯತ್ವಾನ್ನೈವ ಪ್ರಶ್ನೋ ವಿಧೀಯತೇ ।
ಬ್ರಹ್ಮಣಾ ಸಂಜ್ಞಿತಂ ಯತ್ತು ಸಂಖ್ಯಯಾ ತನ್ನಿಬೋಧತ ॥ ೧೯೭ ॥

ಯಃ ಸಹಸ್ರತಮೋ ಭಾಗಃ ಸ್ಥಾವರಾಣಾಂ ಭವೇದಿಹ ।
ಪಾರ್ಥಿವಾಃ ಕೃಮಯಸ್ತಾವತ್ಸಂಸೇಕಾದ್ಯೇಷು ಸಂಭವಾಃ ॥ ೧೯೮ ॥

ಸಂಸೇಕಜಾನಾಂ ಭಾಗೇನ ಸಹಸ್ರೇಣೈವ ಸಮ್ಮಿತಾಃ ।
ಔದಕಾ ಜಂತವಃ ಸರ್ವೇ ನಿಶ್ಚಯಾತ್ತದ್ವಿಚಾರಿತಂ ॥ ೧೯೯ ॥

ಸಹಸ್ರೇಣೈವ ಭಾಗೇನ ಸತ್ವಾನಾಂ ಸಲಿಲೌಕಸಾಂ ।
ವಿಹಂಗಮಾಸ್ತು ವಿಜ್ಞೇಯಾ ಲೌಕಿಕಾಸ್ತೇ ಚ ಸರ್ವಶಃ ॥ ೨೦೦ ॥

ಯಃ ಸಹಸ್ರತಮೋ ಭಾಗಸ್ತೇಷಾಂ ವೈ ಪಕ್ಷಿಣಾಂ ಭವೇತ್ ।
ಪಶವಸ್ತತ್ಸಮಾ ಜ್ಞೇಯಾ ಲೌಕಿಕಾಸ್ತು ಚತುಷ್ಪದಾಃ ॥ ೨೦೧ ॥

---

೧೯೭. ಆ ಲೋಕಾಲೋಕಗಿರಿಯಲ್ಲಿರುವ ಪ್ರಾಣಿಗಳು ಯೋಚಿಸುವುದಕ್ಕೂ, ಜ್ಞಾನಕ್ಕೂ ಅಸಾಧ್ಯವಾಗಿರುವುದರಿಂದ ಈ ವಿಷಯದಲ್ಲಿ ಪ್ರಶ್ನೆಯೇ ಹುಟ್ಟುವುದಿಲ್ಲ. ಪ್ರಶ್ನೆಯು ಹುಟ್ಟಿದರೆ ಅಸಂಗತವಾಗುವುದು. ಆದರೂ ಈ ವಿಷಯದಲ್ಲಿ ಬ್ರಹ್ಮದೇವನು ಯಾವ ಸಂಖ್ಯೆಯನ್ನು ಹೇಳಿರುವನೋ ಅದನ್ನು ನಿಮಗೋಸ್ಕರ ತಿಳಿಸುವೆನು ಕೇಳಿರೆಂದನು.

೧೯೮. ಈ ಲೋಕದಲ್ಲಿ ಸ್ಥಾವರವಸ್ತುಗಳು ಹೇಗೆ ಸಹಸ್ರಾರು ಭಾಗಗಳಾಗಿವೆಯೋ ಹೇಗೆ ಪಾರ್ಥಿವಸಂಬಂಧಿಯಾದ ಕ್ರಿಮಿಕೀಟಗಳೂ ಸಹ ಸಹಸ್ರಾರು ಸಂಖ್ಯಾಕಗಳಾಗಿ ಆ ಸ್ಥಾವರವಸ್ತುಗಳಿಂದಲೇ ಉತ್ಪನ್ನವಾಗಿವೆ.

೧೯೯. ಈ ರೀತಿಯಾದ ಸೇಚನೆಯ ಭಾಗದಿಂದ ಜನ್ಯವಾದ ಜಲಚರಗಳಾದ ಪ್ರಾಣಿಗಳೂ ಸಹ ಸಹಸ್ರಸಂಖ್ಯಾಕಗಳಾಗಿವೆಯೆಂದು ಜ್ಞಾನಿಗಳು ನಿಶ್ಚಿತವಾಗಿ ತಿಳಿದು ಹೇಳಿರುವ ವಿಷಯವಾಗಿದೆ.

೨೦೦. ಜಲದಲ್ಲಿ ಸಂಚರಿಸುವ ಈ ಸಹಸ್ರಾರು ಪ್ರಾಣಿಗಳಂತೆಯೇ ಲೌಕಿಕಗಳಾದ ಪಕ್ಷಿಗಳೂ ಸಹ ಸಹಸ್ರಸಂಖ್ಯಾಕಗಳಾಗಿವೆಯೆಂದು ತಿಳಿಯಬೇಕೆಂದನು.

೨೦೧. ಪಕ್ಷಿಗಳಲ್ಲಿ ಹೇಗೆ ಸಾವಿರಾರು ಭೇದಗಳಿವೆಯೋ ಅದರಂತೆಯೇ ಚತುಷ್ಪಾದಗಳಿರುವ ಲೌಕಿಕಪ್ರಾಣಿಗಳಲ್ಲಿಯೂ ಕೂಡ ಸಾವಿರಾರು ಪ್ರಭೇದಗಳಿವೆಯೆಂದು ಮಹಾತ್ಮರು ಹೇಳಿರುವರು.

ಚತುಷ್ಪದಾನಾಂ ಸರ್ವೇಷಾಂ ಸಹಸ್ರೇಣೈವ ಸಮ್ಮಿತಾಃ ।
ಭಾಗೇನ ದ್ವಿಪದಾ ಜ್ಞೇಯಾ ಲೌಕಿಕೇಸ್ಮಿಂಸ್ತು ಸರ್ವಶಃ ॥ ೨೦೨ ॥

ಯಃ ಸಹಸ್ರತಮೋ ಭಾಗೋ ಭಾಗೇ ತು ದ್ವಿಪದಾಂ ಪುನಃ ।
ಧಾರ್ಮಿಕಾಸ್ತೇನ ಭಾಗೇನ ವಿಜ್ಞೇಯಾಃ ಸಮ್ಮಿತಾಃ ಪುನಃ ॥ ೨೦೩ ॥

ಸಹಸ್ರೇಣೈವ ಭಾಗೇನ ಧಾರ್ಮಿಕೇಭ್ಯೋ ದಿವಂಗತಾಃ ।
ಯಃ ಸಹಸ್ರತಮೋ ಭಾಗೋ ಧಾರ್ಮಿಕಾಣಾಂ ಭವೇದ್ದಿವಿ ॥
ಸಂಮಿತಾಸ್ತೇನ ಭಾಗೇನ ಮೋಕ್ಷಿಣಸ್ತಾವದೇವ ಹಿ ॥ ೨೦೪ ॥

ಸ್ವರ್ಗೋಪಪಾದಕೈಸ್ತುಲ್ಯಾ ಯಾತನಾ ಸ್ಥಾನವಾಸಿನಃ ।
ಪತಿತಶ್ಚೂರ್ಣಮುದ್ದೇಶಾದ್ದುರಾತ್ಮಾನೋ ಮ್ರಿಯಂತಿ ಯೇ ॥
ರೌರವೇ ತಾಮಸೇ ಹ್ಯೇತೇ ಶೀತೋಷ್ಣಂ ಪ್ರಾಪ್ನುವಂತಿ ತೇ ॥ ೨೦೫ ॥

---

೨೦೨. ಚತುಷ್ಪಾದಿಗಳಾದ ಆ ಪ್ರಾಣಿಗಳ ಸಹಸ್ರಾರು ಸಂಖ್ಯೆಗಳಿಂದಲೇ ದ್ವಿಪಾದಗಳೂ, ಲೌಕಿಕಗಳೂ ಆದ ಪ್ರಾಣಿಗಳ ಸಹಸ್ರಾರು ಸಂಖ್ಯೆಗಳು ಈ ಲೋಕದಲ್ಲಿ ಉಂಟಾಗಿವೆಯೆಂದು ತಿಳಿಯಬೇಕು.

೨೦೩. ಆ ದ್ವಿಪಾದಪಶುಗಳು ಸಹಸ್ರಾರು ಭಾಗಗಳಿಂದಲೇ ಧಾರ್ಮಿಕಗಳೂ, ಲೌಕಿಕಗಳೂ ಆದ ಪ್ರಾಣಿಗಳೂ ಸಹ ಜನಿಸಿವೆಯೆಂಬುದು ಸರ್ವಸಮ್ಮತವಾದ ವಿಷಯವಾಗಿರುತ್ತದ.

೨೦೪. ಈ ಭೂಗತವಾದ ಸಹಸ್ರಾರು ಧಾರ್ಮಿಕಪ್ರಾಣಿಗಳ ಭಾಗಗಳಿಂದಲೇ ಸ್ವರ್ಗದಲ್ಲಿರುವ ಸಹಸ್ರಾರು ಧಾರ್ಮಿಕಕಾರ್ಯಗಳು ಸ್ವರ್ಗದಲ್ಲಿ ಉಂಟಾಗಿವೆ. ಧಾರ್ಮಿಕಗಳಾದ ಆ ಸಹಸ್ರಾರು ಭಾಗಗಳಿಂದಲೇ ಮೋಕ್ಷಗತವಾದ ಸಹಸ್ರಾರು ಭಾಗಗಳುಂಟಾಗಿವೆಯೆಂದು ಸರ್ವಸಮ್ಮತವಾದ ವಿಷಯವಾಗಿದೆ.

೨೦೫. ಸ್ವರ್ಗಗತವಾದ ಸಾವಿರ ಸಂಖ್ಯೆಯಿಂದಲೇ ಅದಕ್ಕೆ ಸಮವಾದ ಸಂಖ್ಯೆಯುಳ್ಳವರೇ ಯಾತನಾರೂಪವಾದ ನರಕದಲ್ಲಿ ವಾಸಿಸುವರು. ನೀಚರಾದ ನರಕವಾಸಿಗಳು ಮೇಲಿಂದ ಕೆಳಗೆ ಬಿದ್ದು ಪುಡಿಪುಡಿಯಾಗಿ ಸಾಯುವರು. ಮತ್ತು ತಾಮಸರೂಪವಾದ ರೌರವನರಕದಲ್ಲಿ ಶೀತೋಷ್ಣಾದಿದುಃಖಗಳನ್ನು ಅನುಭವಿಸುವರು.

ವೇದನಾಕಟುಕಾಸ್ತಬ್ಧಾ ಯಾತನಾಸ್ಥಾನಮಾಗತಾಃ ।
ಉಷ್ಣಸ್ತು ರೌರವೇ ಜ್ಞೇಯಸ್ತೇಜೋ ಘೋರರಸಾತ್ಮಕಃ ॥ ೨೦೬ ॥

ತತೋ ಘನಾತ್ಮಿಕಶ್ಚಾಪಿ ಶೀತಾತ್ಮಾ ಸತತಂ ತಪಃ ।
ಏವಂ ಸುದುರ್ಲಭಾಃ ಸಂತಃ ಸ್ವರ್ಗೇ ಚ ಧಾರ್ಮಿಕಾ ನರಾಃ ॥ ೨೦೭ ॥

ಏಷ ಸಂಖ್ಯಾ ಕೃತಾ ಸಂಖ್ಯಾ ಈಶ್ವರೇಣ ಸ್ವಯಂಭುವಾ ।
ಗಣನಾ ವಿನಿವೃತ್ತ್ಯೈಷಾ ಸಂಖ್ಯಾ ಬ್ರಾಹ್ಮೀ ಚ ಮಾನುಷೀ ॥ ೨೦೮ ॥

॥ ಋಷಯ ಊಚುಃ ॥

ಮಹೋಜನಸ್ತಪಃ ಸತ್ಯಂ ಭೂತೋ ಭಾವ್ಯೋ ಭವಸ್ತಥಾ ।
ಉಕ್ತಾ ಹ್ಯೇತೇ ತ್ವಯಾ ಲೋಕಾ ಲೋಕಾನಾಮಂತರೇಣ ಚ ॥
ಲೋಕಾಂತರಂ ಚ ಯಾದೃಗ್ವೈ ತನ್ನೋ ಬ್ರೂಹಿ ಯಥಾತಥಂ ॥ ೨೦೯ ॥

---

೨೦೬. ಯಾತನಾಸ್ಥಾನವನ್ನು ಹೊಂದಿದ ಪುರುಷರು ಅಧಿಕವಾದ ದುಃಖವೇದನೆಯಿಂದ ಸ್ತಬ್ಧರೂ, ಅಲಸರೂ ಆಗುವರು. ರೌರವವೆಂಬ ನರಕವು ಅತ್ಯುಷ್ಣವಾಗಿರುವುದು. ಮತ್ತು ಅತಿಪ್ರಕಾಶಕವಾಗಿಯೂ, ಘೋರಸ್ವರೂಪವಾಗಿಯೂ ಇರುವುದು.

೨೦೭. ಅನಂತರ ಗತವಾದ ತಪೋನಾಮಕ ನರಕವು ನಿಬಿಡಾಂಧಕಾರಮಯವಾಗಿಯೂ, ಅತಿಶೀತಲವಾಗಿಯೂ ಇರುವುದು. ಹೀಗೆ ಅಧರ್ಮಿಷ್ಠರು ಇಂತಹ ನರಕಗಳನ್ನು ಹೊಂದಿ ಮಹಾದುಃಖವನ್ನು ಪಡೆಯುವರು. ಧರ್ಮಿಷ್ಠರಾದ ಪುರುಷರಾದರೋ ದುರ್ಲಭವಾದ ಸ್ವರ್ಗಲೋಕದಲ್ಲಿ ದಿವ್ಯಸುಖವನ್ನು ಅನುಭವಿಸುವರು.

೨೦೮. ಪ್ರಭುವಾದ ಬ್ರಹ್ಮದೇವನು ಮೇಲೆ ನಿರೂಪಿಸಿದಂಥ ಒಂದರಿಂದ ಪರಾರ್ಧದವರೆಗೂ ಇರುವ ಸಂಖ್ಯೆಯನ್ನು ಮಾಡಿರುವನು. ಈ ಬ್ರಹ್ಮಸಂಖ್ಯೆಯು ಮನುಷ್ಯಗಣನೆಯಿಂದ ತಿಳಿಯಲಶಕ್ಯವಾಗಿದೆ. ಅದನ್ನು ಪುರುಷರು ತಿಳಿಯಲು ಸಾಧ್ಯದೇ ಇಲ್ಲ.

೨೦೯. ಮಹರ್ಷಿಗಳು ಹೇಳಿದರು :—ಓ ವಾಯುದೇವನೇ, ಭೂತಭವಿಷ್ಯದ್ವರ್ತಮಾನಕಾಲದಲ್ಲಿರುವ ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕಗಳು ಈ ಲೋಕಗಳನ್ನೂ, ಇವುಗಳ ಮಧ್ಯಗತವಾದ ಇತರ ಲೋಕಗಳನ್ನೂ ನಮಗಾಗಿ ಹೇಳಿರುತ್ತೀರಿ. ಇದಕ್ಕಿಂತಲೂ ಬೇರೆಯಾದ ಯಾವ ಯಾವ ಲೋಕಗಳಿವೆಯೋ ಅವನ್ನು ನಮಗೆ ದಯವಿಟ್ಟು ಯಥಾಸ್ಥಿತವಾಗಿ ತಿಳಿಸಬೇಕೆಂದು ಬೇಡಿದರು.

**ತೇಷಾಂ ತದ್ವಚನಂ ಶ್ರುತ್ವಾ ಋಷೀಣಾಮೂರ್ಧ್ವರೇತಸಾಂ ।**
**ಸ ವಾಯುರ್ದೃಷ್ಟತತ್ತ್ವಾರ್ಥ ಇದಂ ತತ್ತ್ವಮುವಾಚ ಹ ॥ ೨೧೦ ॥**

**॥ ವಾಯುರುವಾಚ ॥**

**ವ್ಯಕ್ತಂ ತರ್ಕೇಣ ಪಶ್ಯಂತಿ ಯೋಗಾತ್ಪ್ರತ್ಯಕ್ಷದರ್ಶಿನಃ ।**
**ಪ್ರತ್ಯಾಹಾರೇಣ ಧ್ಯಾನೇನ ತಪಸಾ ಚ ಕ್ರಿಯಾತ್ಮನಃ ॥ ೨೧೧ ॥**

**ಋಭುಃ ಸನತ್ಕುಮಾರಾದ್ಯಾಃ ಸಂಬುದ್ಧಾಃ ಶುದ್ಧಬುದ್ಧಯಃ ।**
**ವ್ಯಪೇತಾಶೋಕಾ ವಿರಜಾಃ ಸಂತೋ ಬ್ರಹ್ಮೇವಸತ್ತಮಾಃ ॥ ೨೧೨ ॥**

**ಅಕ್ಷಯಾಃ ಪ್ರೀತಿಸಂಯುಕ್ತಾ ಬ್ರಹ್ಮೇ ತಿಷ್ಠಂತಿ ಯೋಗಿನಃ ।**
**ಋಷೀಣಾಂ ವಾಲಖಿಲ್ಯಾನಾಂ ತೈರ್ಯಥಾಹೃತಮಿಾಶ್ವರೈಃ ॥ ೨೧೩ ॥**

**ಯಥಾ ಚೈವ ಮಯಾ ದೃಷ್ಟಂ ಸಾನ್ನಿಧ್ಯಂ ತತ್ರ ಕುರ್ವತಾ ।**
**ಅನರ್ಹಸತ್ಕೃತಾರ್ಥಾನಾಮಾಲಯಂ ಚೇಶ್ವರಸ್ಯ ತತ್ ॥ ೨೧೪ ॥**

---

೨೧೦. ಊರ್ಧ್ವರೇತಸ್ಕರೂ, ಮಹಾತ್ಮರೂ ಆದ ಮಹರ್ಷಿಗಳ ಆ ಮಾತುಗಳನ್ನು ಕೇಳಿದ ತತ್ತ್ವಜ್ಞನಾದ ವಾಯುದೇವನು ಮುಂದೆ ಹೇಳುವಂತೆ ತತ್ತ್ವಗಳನ್ನು ಹೇಳತೊಡಗಿದನು.

೨೧೧. ವಾಯುದೇವನು ಹೇಳಿದನು:—ಮಹಾತ್ಮರಾದ ತತ್ತ್ವಜ್ಞಾನಿಗಳು ತರ್ಕದಿಂದಲೂ, ಊಹೆಯಿಂದಲೂ, ಯೋಗಜಪ್ರತ್ಯಕ್ಷದಿಂದಲೂ ಮತ್ತು ಧ್ಯಾನ, ತಪಸ್ಸು, ನಿಷ್ಠತೆ ಮೊದಲಾದುವುಗಳಿಂದಲೂ ಯಾವ ಲೋಕಗಳನ್ನು ಸ್ಪಷ್ಟವಾಗಿ ನೋಡುತ್ತಾರೋ ಅವುಗಳನ್ನು ನಿಮಗಾಗಿ ತಿಳಿಸುವೆನು.

೨೧೨–೨೧೪. ಬ್ರಹ್ಮಜ್ಞಾನಿಗಳೂ, ಪರಿಶುದ್ಧಚಿತ್ತರೂ, ಶೋಕಶೂನ್ಯರೂ, ರಜೋಗುಣಾತೀತರೂ ಯಥಾರ್ಥವೇತ್ತೃಗಳೂ, ಸತ್ಪುರುಷರೂ, ಪ್ರೀತಿಯುಕ್ತರೂ ಆದ ಸನತ್ಕುಮಾರರು ವಾಲಿಖಿಲ್ಯರೇ ಮೊದಲಾದ ಯಾವ ಮಹಾತ್ಮರು ಬ್ರಹ್ಮಾಲಯದಲ್ಲಿ ಪ್ರೀತಿಯುಕ್ತರಾಗಿಯೂ, ಧ್ಯಾನಪರರಾಗಿಯೂ ವಾಸಿಸುವರೋ ಅವರ ಸಾನ್ನಿಧ್ಯದಿಂದ ನಾನೂ ಕೂಡ ಯಾವ ತತ್ತ್ವಾರ್ಥಗಳನ್ನು ಕೇಳಿ ತಿಳಿದಿರುವೆನೋ ಅಯೋಗ್ಯರಿಗೆ ಅನರ್ಹವೂ ಈಶ್ವರನ ಆಲಯದ ವಿಷಕವೂ ಆದ ಅಂತಹ ಯಥಾರ್ಥವನ್ನು ತಿಳಿಸುವೆನು ಕೇಳಿರೆಂದು ಹೇಳಿದನು.

ಈಶ್ವರಃ ಪರಮಾಣುತ್ವಾದ್ಭಾವಗ್ರಾಹ್ಯೋ ಮನೀಷಿಣಾಂ ।
ಜ್ಞಾನಂ ವೈರಾಗ್ಯಮೈಶ್ವರ್ಯಂ ತಪಃ ಸತ್ಯಂ ಕ್ಷಮಾ ಧೃತಿಃ ॥ ೨೧೫ ॥

ದ್ರಷ್ಟೃತ್ವಮಾತ್ಮಸಂಬಂಧಮಧಿಷ್ಠಾನತ್ವಮೇವ ಚ ।
ಅವ್ಯಯಾನಿ ದಶೈತಾನಿ ತಸ್ಮಿಂಸ್ತಿಷ್ಠಂತಿ ಶಂಕರೇ ॥ ೨೧೬ ॥

ವಿಭುತ್ವಾತ್ಪಲು ಯೋಗಾಗ್ನಿಬ್ರಂಹ್ಮಣೋಽನುಗ್ರಹೇ ರತಃ ।
ಸ ಲೋಕವಿಗ್ರಹೋ ಭೂತ್ವಾ ಸಾಹಾಯ್ಯಮುಪತಿಷ್ಠತೇ ॥ ೨೧೭ ॥

ಅಕ್ಷರಂ ಧ್ರುವಮವ್ಯಗ್ರಮುಷ್ಟವಂ ತ್ವೌಪಸರ್ಗಿಕಂ ।
ತಸ್ಯೇಶ್ವರಸ್ಯ ಯನ್ಮಾತ್ರಸ್ಥಾನಂ ಮಾಯಾಮಯಂ ಪರಂ ॥ ೨೧೮ ॥

ಮಾಯಯಾ ಕೃತವಾಚಷ್ಟೇ ಮಾಯೀ ದೇವೋ ಮಹೇಶ್ವರಃ ।
ದೇವಾನಾಮುಪಸಂಹಾರಸ್ತತ್ಪ್ರಮಾಣಂ ಹಿ ಕೀರ್ತ್ಯತೇ ॥ ೨೧೯ ॥

---

೨೧೫–೨೧೬. ಈಶ್ವರನು ಅತಿಸೂಕ್ಷ್ಮವಾದ ಪರಮಾಣುಸ್ವರೂಪನಾಗಿರುವುದರಿಂದ ಜ್ಞಾನಿಗಳು ಅವನನ್ನು ಧ್ಯಾನದಿಂದಲೇ ತಿಳಿಯುವರು. ಜ್ಞಾನ, ವೈರಾಗ್ಯ, ಐಶ್ವರ್ಯ, ತಪಸ್ಸು, ಸತ್ಯ, ಕ್ಷಮಾ, ಧೃತಿ, ದ್ರಷ್ಟೃತ್ವ, ಆತ್ಮಸಂಬಂಧ, ಅಧಿಷ್ಠಾನತೆ ಎಂಬ ನಾಶರಹಿತವಾದ ಈ ಹತ್ತು ಗುಣಗಳೂ ಸರ್ವದಾ ಆ ಭಗವಂತನಲ್ಲಿ ಇರುತ್ತವೆ.

೨೧೭. ಯೋಗಾಗ್ನಿಯು ವಿಭುವಾದುದರಿಂದಲೂ, ಬ್ರಹ್ಮನ ವಶವರ್ತಿಯಾಗಿರುವುದರಿಂದಲೂ ಪ್ರಲಯಕ್ಕೆ ಸಹಕಾರಿಯಾಗಿ ಭಗವಂತನಿಗೆ ಸಹಾಯವನ್ನು ಮಾಡುತ್ತದೆ.

೨೧೮. ಈಶ್ವರನ ಮಹಿಮೆಯು ಅಥವಾ ಅವನ ಸ್ಥಾನವು ನಾಶರಹಿತವೂ, ಸ್ಥಿರವೂ, ಅವ್ಯಯವೂ, ಎಂಟನೆಯದೂ, ಔಪಸರ್ಗಿಕವೂ (ನೈಮಿತ್ತಿಕವೂ) ಮಾಯಾಮಯವೂ, ಮಾತ್ರಾರೂಪವೂ ಆಗಿರುತ್ತದೆ.

೨೧೯. ಮಾಯಾವಿಯೂ, ದೇವನೂ ಆದ ಪರಮೇಶ್ವರನು ಮಾಯೆಯಿಂದ ಈ ಜಗತ್ತನ್ನು ಸೃಷ್ಟಿಸಿರುವನು. ತರುವಾಯ ದೇವತೆಗಳ ಉಪಸಂಹಾರವೂ (ಪ್ರಲಯವೂ) ಆಗುವುದು. ಅವರ ಪ್ರಮಾಣವನ್ನು ಹೇಳುವೆನು ಕೇಳಿರಿ.

ವಿಸ್ತರೇಣಾನುಪೂರ್ವ್ಯಾ ಚ ಬ್ರುವತೋ ಮೇ ನಿಬೋಧತ ।
ತ್ರಯೋದಶೈವ ಕೋಟ್ಯಸ್ತು ನಿಯುತಾ ದಶ ಪಂಚ ಚ ॥
ಭೂಲೋಕಾದ್ಬ್ರಹ್ಮಲೋಕೋ ವೈ ಯೋಜನೈಃ ಸಂಪ್ರಕೀರ್ತ್ಯತೇ ॥

ಏಕಯೋಜನಕೋಟೀ ತು ಪಂಚಾಶನ್ನಿಯುತಾನಿ ಚ ।
ಊರ್ಧ್ವಂ ಭಾಗವತಾಂಡಂ ತು ಬ್ರಹ್ಮಲೋಕಾತ್ಪರಂ ಸ್ಮೃತಂ ॥ ೨೨೧ ॥

ಏಷೋರ್ಧ್ವಗಪ್ರಚಾರಸ್ತು ಗತ್ಯಂತಂ ಚ ತತಃ ಸ್ಮೃತಂ ।
ನಿತ್ಯಾ ಹ್ಯಪರಿಸಂಖ್ಯೇಯಾಃ ಪರಸ್ಪರಗುಣಾಶ್ರಯಾಃ ॥ ೨೨೨ ॥

ಸೂಕ್ಷ್ಮಾಃ ಪ್ರಸವಧರ್ಮಿಣ್ಯಸ್ತತಃ ಪ್ರಕೃತಯಃ ಸ್ಮೃತಾಃ ।
ಯೇಭ್ಯೋಽಧಿಕತರಾ ಸಂಜಜ್ಞೇ ಕ್ಷೇತ್ರಜ್ಞೇ ಬ್ರಹ್ಮಸಂಜ್ಞಿತಃ ॥ ೨೨೩ ॥

---

೨೨೦. ಎಲೈ ಮುನಿಗಳೇ, ಈಗ ನಾನು ಆ ವಿಷಯವನ್ನು ವಿಸ್ತಾರವಾಗಿಯೂ, ಕ್ರಮವಾಗಿಯೂ ಹೇಳುವೆನು ಕೇಳಿರಿ. ಈ ಭೂಲೋಕದಿಂದ ಬ್ರಹ್ಮಲೋಕವು ಎಷ್ಟು ಯೋಜನ ದೂರದಲ್ಲಿದೆ ಎಂಬುದನ್ನು ತಿಳಿಸುವೆನು. ಬ್ರಹ್ಮಲೋಕವು ಭೂಲೋಕದಿಂದ ಹದಿಮೂರುಕೋಟಿಯು ಹದಿನೈದುಲಕ್ಷದ ಯೋಜನಗಳಷ್ಟು ಎತ್ತರದಲ್ಲಿದೆಯೆಂದು ಮಹಾತ್ಮರು ಹೇಳುವರು.

೨೨೧. ಇಂತಹ ಬ್ರಹ್ಮಲೋಕದಿಂದ ಈಶ್ವರನಾದ ಭಗವಲ್ಲೋಕವು ಒಂದು ಕೋಟಿಯು ಐವತ್ತುಲಕ್ಷಯೋಜನಗಳಷ್ಟು ಊರ್ಧ್ವಭಾಗದಲ್ಲಿ ಹೊಳೆಯುತ್ತಿರುವುದೆಂದು ಜ್ಞಾನಿಗಳು ಹೇಳುವರು.

೨೨೨. ಊರ್ಧ್ವಗತವಾದ ಲೋಕಗಳು ಒಂದಕ್ಕಿಂತಲೂ ಮತ್ತೊಂದು ಬಹಳೋನ್ನತವಾಗಿವೆಯೆಂದು ವರ್ಣಿತವಾಗಿವೆ. ಆಯಾ ಲೋಕಗಳಿಗೆ ಹೋಗುವ ಕ್ರಮಗಳನ್ನೂ ಈಗ ತಿಳಿಸುವೆನು. ಈ ಲೋಕಗಳು ನಿತ್ಯವಾಗಿಯೂ, ವರ್ಣನಸಾಧ್ಯವಾಗಿಯೂ, ಪರಸ್ಪರ ಗುಣಾಧಿಕವಾಗಿಯೂ ಇರುವವೆಂದು ಮಹಾತ್ಮರು ಹೇಳುವರು.

೨೨೩. ಈ ವಸ್ತುಗಳು ಅತಿಸೂಕ್ಷ್ಮವಾಗಿವೆ. ಅವುಗಳಿಗಿಂತಲೂ ಪ್ರಕೃತಿಯು ಅತ್ಯಂತ ಸೂಕ್ಷ್ಮವಾಗಿರುವುದು. ಇಂತಹ ಪ್ರಕೃತ್ಯಾದಿನಿಯಾಮಕನೂ, ಕ್ಷೇತ್ರಜ್ಞನೂ ಬ್ರಹ್ಮಸಂಜ್ಞಿಕನೂ ಆದ ಭಗವಂತನು ಅತಿಸೂಕ್ಷ್ಮನೂ, ಉತ್ತಮನೂ ಆಗಿರುವನು.

ತಾಸು ಪ್ರಕೃತಿಮುತ್ಸೂಕ್ಷ್ಮಮಧಿಷ್ಠಾತೃತ್ವಮವ್ಯಯಂ ।
ಅನುತ್ಪಾದ್ಯಂ ಪರಂಧಾಮ ಪರಮಾಣು ಪರೇಶಯಂ ॥ ೨೨೪ ॥

ಅಕ್ಷಯಶ್ಚಾಪ್ಯನುಹ್ಯಶ್ಚ ಅಮೂರ್ತಿರ್ಮೂರ್ತಿಮಾನಸೌ ।
ಪ್ರಾದುರ್ಭಾವಸ್ತಿರೋಭಾವಃ ಸ್ಥಿತಿಶ್ಚೈವಾಪ್ಯನುಗ್ರಹಃ ॥ ೨೨೫ ॥

ವಿಧಿರನ್ಯೈರನೌಪಮ್ಯಃ ಪರಮಾಣುರ್ಮಹೇಶ್ವರಃ ।
ಸ ತೇಜಾ ಏಷ ತಮಸೋ ಯಃ ಪರಸ್ತಾತ್ಪ್ರಕಾಶಕಃ ॥ ೨೨೬ ॥

ಯದಂಡಮಾಸೀತ್ಸೌವರ್ಣಂ ಪ್ರಥಮಂ ತ್ವೌಪಸರ್ಗಿಕಂ।
ಬೃಹತಂ ಸರ್ವತೋವೃತ್ತಮೀಶ್ವರಾದ್ವ್ಯವಜಾಯತ ॥ ೨೨೭ ॥

ಈಶ್ವರಾದ್ಬೀಜನಿರ್ಭೇದಃ ಕ್ಷೇತ್ರಜ್ಞೋ ಬೀಜ ಇಷ್ಯತೇ ।
ಯೋನಿಂ ಪ್ರಕೃತಿಮಾಚಷ್ಟೇ ಸಾ ಚ ನಾರಾಯಣಾತ್ಮಿಕಾ ॥ ೨೨೮ ॥

---

೨೨೪. ಆ ಮೂರ್ತಿಗಳಲ್ಲಿ ನಾಶರಹಿತನೂ, ಸೂಕ್ಷ್ಮರೂಪಿಯೂ, ಆಧೇಯನೂ ಅವ್ಯಯನೂ, ಉತ್ಪತ್ತಿರಹಿತನೂ, ಪರಂಧಾಮರೂಪನೂ (ಪುರೇಶಯನೂ) ಸರ್ವಾಂತರ್ಯಾಮಿಯೂ ಆದ ಪರಮೇಶ್ವರನು ಸನ್ನಿಹಿತನಾಗಿರುವನು.

೨೨೫-೨೨೬. ಆ ಭಗವಂತನು ಅಕ್ಷಯನೂ, ಊಹಿಸಲಶಕ್ಯನೂ, ಪ್ರಾಕೃತ ಶರೀರರಹಿತನೂ, ದಿವ್ಯಸುಂದರಮೂರ್ತಿಯೂ, ಪ್ರಾದುರ್ಭಾವ, ತಿರೋಭಾವ, ಸ್ಥಿತಿ, ಗತಿ ಅನುಗ್ರಹಾದಿಗಳುಳ್ಳವನೂ, ವಿಧಿರಹಿತನೂ, ಅಸದೃಶನೂ, ಪರಮಾಣು ಸ್ವರೂಪಿಯೂ, ಪರಮೇಶ್ವರನೂ, ತೇಜೋಮಯನೂ, ಪ್ರಕಾಶಕನೂ, ತಮೋಗುಣಾತೀತನೂ ಆಗಿರುವನೆಂದು ಮಹಾತ್ಮರು ಹೇಳುವರು.

೨೨೭. ಮೊದಲೇ ಬ್ರಹ್ಮದೇವನಿಂದ ಸೃಷ್ಟಿಸಲ್ಪಟ್ಟ ಆ ಬ್ರಹ್ಮಾಂಡವು ಸುವರ್ಣಮಯವಾಗಿಯೂ ಮಹತ್ತಾಗಿಯೂ ದುಂಡಾಗಿಯೂ ಇರುವುದು. ಇಂತಹ ಬ್ರಹ್ಮಾಂಡವನ್ನು ಶ್ರೀಭಗವಂತನೇ ಸೃಷ್ಟಿಸಿದನು.

೨೨೮. ಈಶ್ವರನು ಬೀಜಗಳಿಂದ ಮೊಳಕೆಗಳನ್ನು ಹೊರಡಿಸುವನು. ಬೀಜರೂಪಿಯಾದ ಭಗವಂತನೇ ಕ್ಷೇತ್ರಜ್ಞನಾಗಿರುವನು. ಬೀಜಾಂಕುರೋತ್ಪತ್ತಿಗಳಿಗೆ ಪ್ರಕೃತಿಯೇ ಮೂಲಕಾರಣವಾಗಿದೆ. ಅಂತಹ ಪ್ರಕೃತಿಯು ನಾರಾಯಣ ಸ್ವರೂಪವಾಗಿದೆಯೆಂದು ಜ್ಞಾನಿಗಳ ಮತವು.

**ವಿಭುರ್ಲೋಕಸ್ಯ ಸೃಷ್ಟ್ಯರ್ಥಂ ಲೋಕಸಂಸ್ಥಾನಮೇವ ಚ |**
**ಸನ್ನಿಸರ್ಗಃ ಸ ತನ್ಮಾ ಚ ಲೋಕಧಾತುರ್ಮಹಾತ್ಮನಃ || ೨೨೯ ||**

**ಪುರಸ್ತಾದ್ಬ್ರಹ್ಮಲೋಕಸ್ಯ ಹ್ಯಂಡಾದರ್ವಾಕ್ಚ ಬ್ರಹ್ಮಣಃ |**
**ತಯೋರ್ಮಧ್ಯೇ ಪುರಂ ದಿವ್ಯಂ ಸ್ಥಾನಂ ಯಸ್ಯ ಮನೋಮಯಂ || ೨೩೦ ||**

**ತದ್ವಿಗ್ರಹವತಃ ಸ್ಥಾನಮೀಶ್ವರಸ್ಯಾಮಿತೌಜಸಃ |**
**ಶಿವಂ ನಾಮ ಪುರಂ ತತ್ರ ಶರಣಂ ಜನ್ಮಭೀರುಣಾಂ || ೨೩೧ ||**

**ಸಹಸ್ರಾಣಾಂ ಶತಂ ಪೂರ್ಣಂ ಯೋಜನಾನಾಂ ದ್ವಿಜೋತ್ತಮಾಃ |**
**ಅಭ್ಯಂತರೇ ತು ವಿಸ್ತೀರ್ಣಂ ಮಹೀಮಂಡಲಸಂಸ್ಥಿತಂ || ೨೩೨ ||**

---

೨೨೯. ಸ್ವಾಮಿಯಾದ ಭಗವಂತನು ಈ ಲೋಕಗಳನ್ನೂ ಅವುಗಳ ಸ್ಥಿತಿಗತಿಗಳನ್ನೂ ಸೃಷ್ಟಿಸುವುದಕ್ಕೋಸ್ಕರ ಮೂಲಕಾರಣವೂ, ಲೋಕಾದ್ಧಾರಕವೂ ಆದ ಮೂಲಪ್ರಕೃತಿಯನ್ನು ಪ್ರೇರಿಸುವನು.

೨೩೦. ಸ್ವಾಮಿಯಾದ ಭಗವಂತನು, ಬ್ರಹ್ಮಲೋಕದ ಮುಂಭಾಗದಲ್ಲಿಯೂ (ಬ್ರಹ್ಮದೇವನ ಅಂಡದ) ಬ್ರಂಹ್ಮಾಂಡದ ಹಿಂಭಾಗದಲ್ಲಿಯೂ ಅಂದರೆ ಬ್ರಹ್ಮಲೋಕ ಬ್ರಹ್ಮಾಂಡಗಳ ಮಧ್ಯದಲ್ಲಿ ಅತಿಸುಂದರವೂ, ಮನೋಮಯವೂ, ಬಹ್ವಾಶ್ರಯವೂ ಆದ ದಿವ್ಯ ಪುರಿಯನ್ನು ಸೃಷ್ಟಿಮಾಡುವನು. ಅದೇ ಶಿವಪುರಿಯಾಗಿರುವುದು.

೨೩೧. ಆ ಸ್ಥಾನವು ಮಹಾತೇಜೋಮಯನೂ, ದಿವ್ಯಸುಂದರ ಮೂರ್ತಿಯೂ, ಆದ ಈಶ್ವರನ ವಾಸಸ್ಥಾನವಾಗಿದೆ. ಅದಕ್ಕೆ ಶಿವಪುರಿ ಎಂಬ ನಾಮವು ಪ್ರಖ್ಯಾತವಾಗಿದೆ. ಆ ಶಿವನಗರಿಯು ಜನನಮರಣಗಳಿಗೆ ಹೆದರಿದಂತಹ ಮಹಾತ್ಮರಿಗೆ ರಕ್ಷಕವೂ, ಆಶ್ರಯವೂ ಆಗಿದೆ.

೨೩೨. ಎಲೈ ವಿಪ್ರೋತ್ತಮರೇ, ಆ ಶಿವಪುರಿಯ ವಿಸ್ತೀರ್ಣತೆಯು ಶತಸಹಸ್ರ ಯೋಜನಗಳಷ್ಟು ಅಗಲವಾಗಿದೆ. ಅಂದರೆ ಒಂದು ಲಕ್ಷ ಯೋಜನಗಳಷ್ಟು ವಿಶಾಲವಾಗಿದೆ. ಆ ಈಶ್ವರನನಗರಿಯು ಭೂಮಂಡಲದ ಮಧ್ಯಭಾಗವು ಲಕ್ಷ ಯೋಜನ ಅಗಲವಾಗಿರುತ್ತದೆ.

ಮಧ್ಯಾಹ್ನಾರ್ಕಪ್ರಕಾಶೇನ ಪರತೇಜೋಽಭಿಮರ್ದಿನಾ ।
ಶಾತಕೌಂಭೇನ ಮಹತಾ ಪ್ರಾಕಾರೇಣಾರ್ಕವರ್ಚಸಾ ॥ ೨೩೩ ॥

ದ್ವಾರೈಶ್ಚತುರ್ಭಿಃ ಸೌವರ್ಣೈರ್ಮುಕ್ತಾದಾಮ ವಿಭೂಷಿತೈಃ ।
ತಪನೀಯನಿಭೈಃ ಶುಭ್ರೈರ್ಗಾಢಂ ಸುಕೃತವೇಷ್ಟನಂ ॥ ೨೩೪ ॥

ತಚ್ಚಾಕಾಶೇ ಪುರಂ ರಮ್ಯಂ ದಿವ್ಯಂ ಘಂಟಾದಿನಾದಿತಂ ।
ನ ತತ್ರ ಕ್ರಮತೇ ಮೃತ್ಯುರ್ನ ತಪೋ ನ ಜರಾ ಶ್ರಮಾಃ ॥ ೨೩೫ ॥

ನ ಹಿ ತಸ್ಯ ಪುರಸ್ಯಾನ್ಯೈರುಪಮಾಂ ಕರ್ತುಮರ್ಹಸಿ ।
ಸಹಸ್ರಾಣಾಂ ಶತಂ ಪೂರ್ಣಂ ಯೋಜನಾನಾಂ ದಿಶೋ ದಶ ॥ ೨೩೬ ॥

೨೩೩. ಈಶ್ವರನ ಆ ನಗರಿಯು ಮಧ್ಯಾಹ್ನದ ಸೂರ್ಯನಂತೆ ಕಾಂತಿಯುತವೂ, ಇತರ ತೇಜಸ್ಸುಗಳನ್ನು ತಿರಸ್ಕರಿಸುವುದೂ, ಸುವರ್ಣಮಯವೂ, ಅತಿ ಮಹತ್ತೂ, ಸೂರ್ಯನ ಕಾಂತಿಯಂತೆ ಕಾಂತಿಯುತವೂ ಆದ ಪ್ರಾಕಾರಗಳಿಂದ ಕೂಡಿ ರಂಜಿಸುತ್ತಿರುವುದು.

೨೩೪. ಆ ನಗರಿಯ ದ್ವಾರಗಳು ಸುವರ್ಣಮಯವೂ, ಮುತ್ತಿನಸರಗಳಿಂದಲಂಕೃತವೂ, ಸುವರ್ಣಕಾಂತಿಯುತವೂ, ಮಂಗಳಕರವೂ, ದೃಢವೂ ಆದ ಮೇಲ್ಕಟ್ಟುಗಳಿಂದ ಯುತವೂ ಆಗಿ ರಂಜಿಸುವುವು.

೨೩೫. ಆ ಶಿವನಗರಿಯು ರಮ್ಯವೂ, ದಿವ್ಯವೂ, ಘಂಟಾಧ್ವನಿಯಿಂದ ಮಂಜುಳವೂ, ಆಕಾಶಗತವೂ ಆಗಿ ರಂಜಿಸುವುದು. ಅದರಲ್ಲಿ ಮೃತ್ಯುವಿನ ಭೀತಿಯೂ, ತಾಪವೂ, ಮುದಿತನವೂ, ಶ್ರಮವೂ ಇರುವುದಿಲ್ಲ.

೨೩೬. ಆ ಶಿವಪುರಕ್ಕೆ ಸಮಾನವಾದ ನಗರಿಯು ಈ ಲೋಕದಲ್ಲಿ ಯಾವುದೂ ಇಲ್ಲ. ಆ ನಗರಿಯು ಪ್ರತಿ ದಿಕ್ಕಿನಲ್ಲಿಯೂ ಒಂದು ಲಕ್ಷ ಯೋಜನಗಳಷ್ಟು ವಿಶಾಲವಾಗಿರುತ್ತದೆ.

ತತ್ಪುರಂ ಗೋವೃಷಾಂಕಸ್ಯ ತೇಜಸಾ ವ್ಯಾಪ್ಯ ತಿಷ್ಠತಿ ।
ಭಾವೇನ ಮನಸೋ ಭೂಮಿರ್ವಿನ್ಯಸ್ತಾ ಕನಕಾಮಯಿಾ ॥ ೨೩೭ ॥

ರತ್ನವಾಲುಕಯಾ ತತ್ರ ವಿನ್ಯಸ್ತಾ ಶುಶುಭೇಽಧಿಕಂ ।
ಶಾರದೇಂದುಪ್ರಕಾಶಾನಿ ಬಾಲಸೂರ್ಯನಿಭಾನಿ ಚ ॥ ೨೩೮ ॥

ಅರ್ಧಶ್ವೇತಾರ್ಧರಕ್ತಾನಿ ಸೌವರ್ಣಾನಿ ತಥೈವ ಚ ।
ರಥಚಕ್ರಪ್ರಮಾಣಾನಿ ನಾಲೈರ್ಮರಕತಪ್ರಭೈಃ ॥ ೨೩೯ ॥

ಸೌಕುಮಾರೇಣ ರೂಪೇಣ ಗಂಧಿನಾಪ್ರತಿಮೇನ ಚ ।
ತತ್ರ ದಿವ್ಯಾನಿ ಪದ್ಮಾನಿ ವನೇಷೂಪವನೇಷು ಚ ॥ ೨೪೦ ॥

ಭೃಂಗಪತ್ರನಿಕಾಶಾನಿ ತಪನೀಯಾನಿ ಯಾನಿ ಚ ।
ಅರ್ಧಕೃಷ್ಣಾರ್ಧರಕ್ತಾನಿ ಸುಕುಮಾರಾಂತರಾಣಿ ಚ ॥ ೨೪೧ ॥

---

೨೩೭. ಆ ನಗರಿಯು ವೃಷಭಧ್ವಜನಾದ ಈಶ್ವರನ ದಿವ್ಯತೇಜಸ್ಸಿನಿಂದ ವ್ಯಾಪ್ತವಾಗಿದೆ. ಆ ನಗರಿಯ ಭೂಮಿಯು ಮನಸ್ಸಿನಿಂದಲೂ ಭಾವಿಸಲಶಕ್ಯವಾಗಿಯೂ, ಸುವರ್ಣಮಯವಾಗಿಯೂ ಇರುತ್ತದೆ.

೨೩೮. ರತ್ನಮಯವಾದ ಮರಳು ದಿಣ್ಣೆಗಳಿಂದ ಆ ಭೂಮಿಯು ಅಲಂಕೃತವಾಗಿದೆ. ಕೆಲವು ಭಾಗಗಳು ಶರತ್ಕಾಲದ ಚಂದ್ರಕಾಂತಿಯುತವಾಗಿಯೂ ಬಾಲಸೂರ್ಯನ ಕಾಂತಿಯುಕ್ತವಾಗಿಯೂ ಹೊಳೆಯುತ್ತಿರುವುವು.

೨೩೯–೨೪೦. ಆ ಶಿವಪುರಿಯಲ್ಲಿ ಅನೇಕ ಉಪವನಗಳೂ ಉದ್ಯಾನಗಳೂ ಶೋಭಿಸುತ್ತವೆ. ಅವುಗಳಲ್ಲಿರುವ ಕುಸುಮಗಳು ಅರ್ಧಭಾಗ ಬಿಳುಪಾಗಿಯೂ, ಅರ್ಧಭಾಗ ಕೆಂಪಾಗಿಯೂ, ಸುವರ್ಣಮಯವಾಗಿಯೂ, ರಥದ ಚಕ್ರದಂತೆ ವಿಶಾಲವಾಗಿಯೂ, ಪಚ್ಚೆಯ ದಂಟುಗಳಿಂದ ರಂಜಿತವಾಗಿಯೂ, ಅತಿ ಮನೋಹರವಾಗಿಯೂ, ಸುರೂಪವಾಗಿಯೂ, ಸುಗಂಧಿಯಾಗಿಯೂ, ಅಸದೃಶವಾಗಿಯೂ, ದೇವಭೋಗ್ಯವಾಗಿಯೂ ಇರುತ್ತವೆ.

೨೪೧–೨೪೨. ಈಶ್ವರ ನಗರಿಯ ಉದ್ಯಾನವನದಲ್ಲಿರುವ ಕಮಲಗಳು ಭ್ರಮರಗಳ ರೆಕ್ಕೆಗಳಂತೆ ಮನೋಹರವಾಗಿಯೂ ಕಳಿಂಗಪಕ್ಷಿಯ ರೆಕ್ಕೆಗಳಂತೆ ರಂಜಕವಾಗಿಯೂ, ಸುವರ್ಣಮಯವಾಗಿಯೂ ಅರ್ಧಭಾಗ ಕಪ್ಪುಗೂ ಕೆಂಪಗೂ

**ಆತಪತ್ರ ಪ್ರಮಾಣಾನಿ ಪಂಕಜೈಃ ಸಂವೃತಾನಿ ಚ ।**
**ಭೂಯಃ ಸಪ್ತ ಮಹಾನದ್ಯಸ್ತಾಸಾನ್ನಾವಮಾನಿ ಬೊಧತ ॥ ೨೪೨ ॥**

**ವರಾ ವರೇಣ್ಯಾ ವರದಾ ವರಾರ್ಹಾ ವರವರ್ಣಿನೀ ।**
**ವರಮಾ ವರಭದ್ರಾ ಚ ರಮ್ಯಾಸ್ತಸ್ಮಿನ್ ಪುರೋತ್ತಮೇ ॥ ೨೪೩ ॥**

**ಪದ್ಮೋತ್ಪಲದಲೋನ್ಮಿಶ್ರಂ ಫೇನಾದ್ಯಾವರ್ತವಿಗ್ರಹಂ ।**
**ಜಲಂ ಮಣಿದಲಪ್ರಖ್ಯಮಾವಹಂತಿ ಸರಿದ್ವರಾಃ । ॥ ೨೪೪ ॥**

**ನ ತು ಬ್ರಹ್ಮರ್ಷಯೋ ದೇವಾ ನಾಸುರಾಃ ಪಿತರಸ್ತಥಾ ।**
**ನ ಖಲ್ವನ್ಯೇಽಪ್ರಮೇಯಸ್ಯ ವಿದುರೀಶಸ್ಯ ತತ್ಪುರಂ ॥ ೨೪೫ ॥**

---

ಪ್ರಕಾಶವಾಗಿಯೂ ಅತ್ಯಂತ ಮೃದುವಾಗಿಯೂ ಛತ್ರಿಯಂತೆ ಅಗಲವಾಗಿಯೂ ಇರುತ್ತವೆ. ಇಂತಹ ನಾನಾಬಣ್ಣದ ಕುಸುಮಗಳಿಂದ ಉಪವನಗಳು ಕಂಗೊಳಿಸುತ್ತವೆ. ಮತ್ತು ಏಳು ಮಹಾನದಿಗಳು ಆ ನಗರಿಯಲ್ಲಿ ಪ್ರವಹಿಸುತ್ತವೆ. ಆ ಮಹಾನದಿಗಳ ನಾಮಗಳನ್ನು ಹೇಳುವೆನು ಕೇಳಿರೆಂದನು.

೨೪೩. ಆ ಮಹಾನಗರಿಯಲ್ಲಿ ವರಾ, ವರೇಣ್ಯಾ, ವರದಾ, ವರಾರ್ಹಾ ವರವರ್ಣಿನೀ, ವರಮಾ, ವರಭದ್ರಾ ಎಂಬ ಸಪ್ತ ಮಹಾನದಿಗಳು ಹರಿಯುತ್ತವೆ. ರಮ್ಯವಾದ ಈ ಮಹಾನದಿಗಳಿಂದ ಆ ಪುರೋತ್ತಮವು ಬಹು ಸುಂದರವಾಗಿರುವುದು.

೨೪೪. ಆ ಮಹಾನದಿಗಳು ಕಮಲಗಳು ಮತ್ತು ನೈದಲೆಗಳು ಇವುಗಳ ದಳಗಳಿಂದ ರಂಜಿತವಾಗಿಯೂ ನೊರೆ, ಸುಳಿಗಳಿಂದ ರಮ್ಯವಾಗಿಯೂ ಇರುವುವು. ಉತ್ತಮವಾದ ಮಹಾನದಿಗಳ ಜಲವು ರತ್ನಗಳ ಕಾಂತಿಯಂತೆ ಸ್ವಚ್ಛವಾಗಿಯೂ ಇರುತ್ತದೆ.

೨೪೫. ಅಪ್ರಮೇಯನೂ, ದೇವೇಶನೂ ಆದ ಪರಮೇಶನ ನಗರಿಯ ಮಹಿಮೆಗಳನ್ನು ತಿಳಿಯಲು ಬ್ರಹ್ಮರ್ಷಿಗಳು, ದೇವತೆಗಳು, ಅಸುರರು, ಪಿತೃಗಳು ಇವರೇ ಮೊದಲಾದವರಿಗೂ ಅಸಾಧ್ಯವಾಗಿರುತ್ತದೆ.

ತತ್ರ ಯೋ ಧ್ಯಾನಮುವ್ಯಗ್ರಾಃ ಸಂಯುಕ್ತಾ ವಿಜಿತೇಂದ್ರಿಯಾಃ ।
ಪಶ್ಯಂತೀಹ ಮಹಾತ್ಮಾನಃ ಪುರಂತದ್ವೃಷಾತ್ಮನಃ ॥ ೨೪೬ ॥

ಮಧ್ಯೇ ಪುರವರೇಂದ್ರಸ್ಯ ತಸ್ಯಾಪ್ರತಿಮತೇಜಸಃ ।
ಸುಮಹಾನ್ಮೇರುಸಂಕಾಶೋ ದಿವ್ಯೋ ಭದ್ರಶ್ರಿಯಾ ವೃತಃ ॥ ೨೪೭ ॥

ಸಹಸ್ರಪಾದಃ ಪ್ರಾಸಾದಸ್ತಪನೀಯಮಯಃ ಶುಭಃ ।
ಅನುಪಮೇಯೈ ರತ್ನೈಶ್ಚ ಸರ್ವತಃ ಸ ವಿಭೂಷಿತಃ ॥ ೨೪೮ ॥

ಸ್ಫಟಿಕೈಶ್ಚಂದ್ರಸಂಕಾಶೈರ್ವೈಡೂರ್ಯೈಃ ಸೋಮಸಂಪ್ರಭೈಃ ।
ಬಾಲಸೂರ್ಯಪ್ರಭೈಶ್ಚೈವ ಸೌವರ್ಣೈರಶ್ಚಾಗ್ನಿಸಂಪ್ರಭೈಃ ॥ ೨೪೯ ॥

ರಾಜತೈಶ್ಚಾಪಿ ಶುಶುಭೇ ಇಂದ್ರನೀಲಮಯೈಃ ಶುಭೈಃ ।
ದೃಢರ್ವಜ್ರಮಯೈಶ್ಚೈವ ಇತ್ಯೇವಂ ಸುಮಹಾಹಿತೈಃ ॥ ೨೫೦ ॥

---

೨೪೬. ಮಹಾತ್ಮನೂ, ವೃಷಭಧ್ವಜನೂ ಆದ ಪರಮಶಿವನ ನಗರಿಯ ಮಹಿಮೆಗಳನ್ನು ಜಿತೇಂದ್ರಿಯರೂ, ಯೋಗಾಭ್ಯಾಸನಿರತರೂ, ಧ್ಯಾನಾಸಕ್ತರೂ ಆದ ಮಹಾತ್ಮರು ಮಾತ್ರ ತಿಳಿಯಲು ಅರ್ಹರಾಗಿರುವರು.

೨೪೭–೨೪೮. ಅಸದೃಶಮಹಿಮನಾದ ಪರಮೇಶ್ವರನ ಆ ನಗರೋತ್ತಮದ ಮಧ್ಯಭಾಗದಲ್ಲಿ ಮಹಾಮೇರುವಿನಂತೆ ದಿವ್ಯಕಾಂತಿಯುತವೂ, ಸುವರ್ಣಮಯವೂ, ಅಸದೃಶವಾದ ರತ್ನಗಳಿಂದಮಂಡಿತವೂ, ಅತ್ಯಪೂರ್ವವೂ ಆದ ಶಿವನ ಅರಮನೆಯು ಪ್ರಕಾಶಿಸುವುದು.

೨೪೯–೨೫೦. ಪರಮೇಶ್ವರನ ಆ ಅರಮನೆಯು ಚಂದ್ರಸಮಾನವಾದಕಾಂತಿಯುಳ್ಳ ಸ್ಫಟಿಕಮಣಿಗಳಿಂದಲೂ, ಮಹಾಕಾಂತಿಯುಳ್ಳ ವೈಡೂರ್ಯಮಣಿಗಳಿಂದಲೂ, ಬಾಲಸೂರ್ಯನಂತೆ ಕಾಂತಿಯುತವೂ, ಸುವರ್ಣಾಗ್ನಿಗಳಂತೆ ಪ್ರಕಾಶವೂ ಆದ ರಜತಗಳಿಂದಲೂ, ಮಂಗಳಕರಗಳಾದ ಇಂದ್ರನೀಲಮಣಿಗಳಿಂದಲೂ, ಸುವರ್ಣದಲ್ಲಿ ಕೆತ್ತಲ್ಪಟ್ಟ ವಜ್ರಗಳಿಂದಲೂ, ಅಲಂಕೃತವಾಗಿ ಹೊಳೆಯುತ್ತಿದೆ.

ಜಲೈಶ್ಚ ವಿವಿಧಾಕಾರೈರ್ದೀಪ್ಯದ್ಭಿರಧಿವಾಸಿತಂ ।
ಚಂದ್ರರಶ್ಮಿಪ್ರಕಾಶಾಭಿಃ ಪತಾಕಾಭಿರಲಂಕೃತಂ ॥ ೨೫೧ ॥

ರುಕ್ಮಘಂಟಾನಿನಾದೈಶ್ಚ ನಿತ್ಯಪ್ರಮುದಿತೋತ್ಸವಃ ।
ಕಿನ್ನರಾಣಾಮಧೀವಾಸ್ಯೈಃ ಸಂಧ್ಯಾಭ್ರಾಕಾರರಾಜಿತೈಃ ॥ ೨೫೨ ॥

ಪರಿವಾರಸಮಂತಾತ್ತು ಹೇಮಪುಷ್ಪೋದಕಪ್ರಭೈಃ ।
ಯಥಾ ಹಿ ಮೇರುಶೈಲೋಂದ್ರೋ ಹೇಮಶೃಂಗೈರ್ವಿರಾಜತೇ ॥ ೨೫೩ ॥

ಚಾಮೀಕರಮಯೀಭಿಸ್ತು ಪತಾಕಾಭಿಸ್ತಥಾ ಪುರಂ ।
ಏವಂ ಪ್ರಾಸಾದರಾಜೋಽಸೌ ಭೂಮಿಕಾಭಿರ್ವಿರಾಜತೇ ॥ ೨೫೪ ॥

---

೨೫೧. ಈಶ್ವರನ ಆ ನಗರಿಯು ನಾನಾ ಬಣ್ಣಗಳಿಂದ ಹೊಳೆಯುತ್ತಿರುವ ಜಲಯಂತ್ರಗಳಿಂದಲಂಕೃತವೂ, ಚಂದ್ರನ ಕಿರಣಗಳಂತೆ ಹೊಳೆಯುತ್ತಿರುವ ಮಹಾ ಪತಾಕೆಗಳಿಂದ ಭೂಷಿತವೂ, ಆಗಿರುವುದು.

೨೫೨. ಆ ಶಿವಪುರಿಯು ಸುವರ್ಣಮಯವಾದ ಘಂಟಾಧ್ವನಿಯುತವೂ, ನಿತ್ಯವೂ, ಸಂತುಷ್ಟರಾದ ಪ್ರಜೆಗಳ ವಿವಿಧೋತ್ಸವಗಳಿಂದ ಭೂಷಿತವೂ, ಸಂಧ್ಯಾ ಕಾಲದ ಮೋಡಗಳಂತೆ ಪ್ರಕಾಶಿಸುವ ಕಿನ್ನರರವಿಮಾನಗಳಿಂದ ಮಂಡಿತವೂ, ದೇದೀಪ್ಯಮಾನವೂ, ಆಗಿದೆ.

೨೫೩–೨೫೪. ಸರ್ವತ್ರವ್ಯಾಪ್ತವಾದ ಪರಿವಾರಗಳಿಂದ ಭೂಷಿತವೂ, ಸುವರ್ಣಮಯವಾದ ಕಮಲ ಜಲ ಇವುಗಳಿಂದ ಮಂಡಿತವೂ, ರತ್ನಖಚಿತವಾದ ಶಿಖರಗಳಿಂದಲಂಕೃತವೂ, ಪರ್ವತೋತ್ತಮವೂ ಆದ ಮೇರುಪರ್ವತವು ಹೇಗೆ ಹೊಳೆಯುತ್ತಿದೆಯೋ ಹಾಗೆಯೇ ಸುವರ್ಣಮಯವೂ, ನಾನಾವಿಧವೂ ಆದ ಧ್ವಜಪತಾಕೆಗಳಿಂದಲೂ, ರತ್ನಖಚಿತಸ್ಫಟಿಕಮಯವೂ ಆದ ಭೂಮಿಯಿಂದಲೂ, ಆ ನಗರಿಯು ಮತ್ತು ಅರಮನೆಯು ಹೊಳೆಯುತ್ತವೆ.

ವಸಂತಪ್ರತಿಮಾ ತತ್ರ ತ್ರ್ಯಂಬಕಸ್ಯ ನಿವೇಶನೇ ।
ಲಕ್ಷ್ಮೀಃ ಶ್ರೀಶ್ಚ ವಪುರ್ಮಾಯಾ ಕೀರ್ತಿಃ ಶೋಭಾ ಸರಸ್ವತೀ ॥ ೨೫೫ ॥

ದೇವ್ಯಾ ವೈ ಸಹಿತಾ ಹ್ಯೇತಾ ರೂಪಗಂಧಸಮನ್ವಿತಾಃ ।
ನಿತ್ಯಾ ಹ್ಯಪರಿಸಂಖ್ಯಾತಾಃ ಪರಸ್ಪರಗುಣಾಶ್ರಯಾಃ ॥
ಭೂಷಣಂ ಸರ್ವರತ್ನಾನಾಂ ಯೋನ್ಯಃ ಕಾಂತಿವಿಲಾಸಯೋಃ ॥ ೨೫೬ ॥

ಕೋಟೀಶತಂ ಮಹಾಭಾಗಾ ವಿಭಜ್ಯಾತ್ಮಾನಮಾತ್ಮನಾ ।
ಭಗವಂತಂ ಮಹಾತ್ಮಾನಂ ಪ್ರತಿಮೋದಂತ್ಯತಂದ್ರಿತಾಃ ॥ ೨೫೭ ॥

ತಾಸಾಂ ಸಹಸ್ರಶಶ್ಚಾನ್ಯಾಃ ಪೃಷ್ಠತಃ ಪರಿಚಾರಿಕಾಃ ।
ರೂಪಿಣ್ಯಶ್ಚ ಶ್ರಿಯಾ ಯುಕ್ತಾಃ ಸರ್ವಾಃ ಕಮಲಲೋಚನಾಃ ॥ ೨೫೮ ॥

೨೫೫–೨೫೬. ಆ ಈಶ್ವರನ ಅರಮನೆಯಲ್ಲಿ ರತೀದೇವಿಗೆ ಸಮಾನರೂ, ನಾನಾರೂಪಗಳು, ಗಂಧಗಳು ಇವುಗಳಿಂದಲಂಕೃತರೂ, ಅಸಂಖ್ಯಾತರೂ, ಪರಸ್ಪರ ಗುಣಗಳಿಗೆ ಆಶ್ರಯರೂ, ಸರ್ವರತ್ನಮಯಗಳಾದ ಸರ್ವಾಭರಣಗಳಿಂದ ಭೂಷಿತರೂ, ಕಾಂತಿವಿಲಾಸಗಳಿಗೆ ಆಶ್ರಯರೂ ಆದ ಲಕ್ಷ್ಮೀ, ಶ್ರೀದೇವಿ, ವಪು, ಮಾಯಾ, ಕೀರ್ತಿ, ಶೋಭಾ, ಸರಸ್ವತೀ ಇವರೇಮೊದಲಾದ ದೇವಿಯರೊಡನೇ ಪಾರ್ವತೀದೇವಿಯು ನಿತ್ಯವೂ, ವಿಹರಿಸುತ್ತಿರುವಳು.

೨೫೭. ಶತಕೋಟಿಸಂಖ್ಯಾತಕರೂ, ಮಹಾಭಾಗ್ಯಶಾಲಿಗಳೂ ಆದ ಸ್ತ್ರೀಯರು ಜಾಗರೂಕತೆಯಿಂದಲೂ, ಸರದಿಯ ಪ್ರಕಾರವಾಗಿಯೂ, ಮಹಾನುಭಾವನೂ, ಭಾಗ್ಯಶಾಲಿಯೂ ಆದ ಈಶ್ವರನನ್ನು ಸೇವಮಾಡುವರು.

೨೫೮. ಅವರಲ್ಲಿ ಸಾವಿರಾರು ಸ್ತ್ರೀಯರು ಪರಮೇಶ್ವರನ ಪರಿಚಾರಕರಾಗಿರುವರು. ಅವರು ಸುರೂಪಿಯರೂ, ಕಾಂತಿಯುತರೂ, ಕಮಲಾಕ್ಷಿಯರೂ ಆಗಿರುವರು.

ಲೀಲಾವಿಲಾಸಸಂಯುಕ್ತೈರ್ಭಾವ್ಯೈ ರತಿಮನೋಹರೈಃ ।
ಗಣೈಸ್ತಾಃ ಸಹ ಮೋದಂತೇ ಶೈಲಾಭೈಃ ಪಾವಕೋಪಮೈಃ ॥ ೨೫೯ ॥

ಕುಬ್ಜಾ ಕಾಮಿನಿಕಾಮೈಶ್ಚ ವರಗಾತ್ರಾ ಹಯಾನನಾಃ ।
ಪುಂಡ್ರಾಶ್ಚ ವಿಕಟಾಶ್ಚೈವ ಕರಾಲಾಶ್ಚಿ ಪಿಟಾನನಾಃ ॥ ೨೬೦ ॥

ಲಂಬೋದರಾ ಗ್ರಸ್ವಭುಜಾ ವಿನೇತ್ರಾ ಹ್ರಸ್ವಪಾದಿಕಾಃ ।
ಮೃಗೇಂದ್ರವದನಾಶ್ಚಾನ್ಯಾ ಗಜವಕ್ತ್ರೋದರಾಸ್ತಥಾ ॥ ೨೬೧ ॥

ಗಜಾನನಾಸ್ತಥೈವಾನ್ಯಾಃ ಸಿಂಹವ್ಯಾಘ್ರಾನನಾಸ್ತಥಾ ।
ಲೋಹಿತಾಕ್ಷ್ಯಾ ಮಹಾಸ್ತನ್ಯಃ ಸುಭಗಾಶ್ಚಾರುಲೋಚನಾಃ ॥ ೨೬೨ ॥

ಹ್ರಸ್ವಕುಂಚಿತಕೇಶಾಶ್ಚ ಸುಂದರ್ಯಶ್ಚಾರುಲೋಚನಾಃ ।
ಅನ್ಯಾಶ್ಚ ಕಾಮರೂಪಿಣ್ಯೋ ನಾನಾವೇಷಧರಾಃ ಸ್ತ್ರಿಯಃ ॥ ೨೬೩ ॥

---

೨೫೯. ಆ ಪುರವರದಲ್ಲಿ ಪರಮೇಶ್ವರನು ಲೀಲಾವಿಲಾಸಯುಕ್ತರೂ ಭಾವಪೂರ್ಣರೂ, ಅತಿಸುಂದರಿಯರೂ, ಅಗ್ನಿಸದೃಶರೂ, ಪರ್ವತೋಪಮರೂ ಆದ ಸ್ತ್ರೀಯರ ಗಣಗಳಿಂದ ನಿರಂತರವೂ ಸೇವಿಸಲ್ಪಡುತ್ತಾ ಸಂತೋಷಿಸುವನು.

೨೬೦–೨೬೨. ಅವರಲ್ಲಿ ಕೆಲವು ಸ್ತ್ರೀಯರು ಕುಬ್ಜರೂ, ಕಾಮರೂಪಿಯರೂ, ಸುಂದರಗಾತ್ರಿಯರೂ, ಅಶ್ವಮುಖಿಯರೂ, ಚಿತ್ರಾಂಗಿಯರೂ, ವಕ್ರರೂಪಿಯರೂ, ಭಯಂಕರರೂ, ಹ್ರಸ್ವವಾದ ಭುಜವುಳ್ಳವರೂ, ಸಿಂಹಮುಖಿಯರೂ, ಗಜಾನನೆಯರೂ, ಲಂಬೋದರಿಯರೂ, ಸಿಂಹಮುಖಿಗಳೂ, ವ್ಯಾಘ್ರಮುಖಿಯರೂ, ಲೋಹಿತಾಕ್ಷಿಯರೂ, ಕುಂಭಸ್ತನ್ಯರೂ, ಸುಂದರಿಯರೂ, ಚಾರುಲೋಚನೆಯರೂ, ಆಗಿರುವರು.

೨೬೩. ಮತ್ತು ಕೆಲವು ಸ್ತ್ರೀಯರು ಮೋಟು ಮತ್ತು ವಕ್ರವು ಆದ ಮುಂಗುರುಳುಗಳುಳ್ಳವರೂ, ಸುಂದರಿಯರೂ, ಮನೋಹರವಾದ ನೇತ್ರೆಯರೂ, ಕಾಮರೂಪಿಯರೂ, ನಾನಾವೇಷಧಾರಿಯರೂ ಆಗಿರುವರು.

ಅಭ್ಯಂತರಪರಿಸ್ಕಂಧಾ ದೇವಾವಾಸಗೃಹೋಚಿತಾಃ ।
ರರಾಮ ಭಗವಾಂಸ್ತತ್ರ ದಶಬಾಹುರ್ಮಹೇಶ್ವರಃ ॥ ೨೬೪ ॥

ನಂದಿನಾ ಚ ಗಣೈಃ ಸಾರ್ದ್ಧಂ ವಿಶ್ವರೂಪೈರ್ಮಹಾತ್ಮಭಿಃ ।
ತಥಾ ರುದ್ರಗಣೈಶ್ಚಾಪಿ ತುಲ್ಯೌದಾರ್ಯಪರಾಕ್ರಮೈಃ ॥ ೨೬೫ ॥

ಪಾವಕಾತ್ಮಜಸಂಕಾಶೈರ್ಯೂಪದಂಷ್ಟ್ರೋತ್ಕಟಾನನೈಃ ।
ವಂದ್ಯಮಾನೋ ವಿಮಾನಶ್ಚ ಪೂಜ್ಯಮಾನಶ್ಚ ತತ್ಪರೈಃ ॥ ೨೬೬ ॥

ಸರ್ವರ್ತುಕುಸುಮಾಂ ಮಾಲಾಂ ಜಿಘ್ರಮಾಣೋರಸಿ ಸ್ಥಿತಾಂ ।
ನೀಲೋತ್ಪಲದಲಶ್ಯಾಮಂ ಪೃಥುತಾಮ್ರಾಯತೇಕ್ಷಣಂ ॥ ೨೬೭ ॥

---

೨೬೪. ಪರಮೇಶ್ವರನ ಅರಮನೆಯಲ್ಲಿ ವಾಸಮಾಡಲರ್ಹರೂ, ರಾಣೀವಾಸದಲ್ಲಿ ಸಂಚಾರಮಾಡಲು ಯೋಗ್ಯರೂ ಆದ ಜನರಿಂದ ಆ ರಾಜಭವನವು ಮಂಡಿತವಾಗಿರುವುದು. ಇಂತಹ ದಿವ್ಯಮಂದಿರದಲ್ಲಿ ದಶಭುಜಗಳುಳ್ಳವನೂ, ಭಗವಂತನೂ ಆದ ಪರಶಿವನು ರಂಜಿಸುತ್ತಿದ್ದನು.

೨೬೫. ಪರಮೇಶ್ವರನು ಆ ದಿವ್ಯಭವನದಲ್ಲಿ ವಿಶ್ವರೂಪಧರರೂ, ಮಹಾತ್ಮರೂ ಸಮಾನವಾದ ಪರಾಕ್ರಮ ಮತ್ತು ಔದಾರ್ಯ ಇವುಗಳುಳ್ಳವರೂ ಆದ ರುದ್ರ ಗಣಗಳಿಂದಲೂ, ಭೂತಾದಿಗಳಿಂದಲೂ, ನಂದೀಶ್ವರನಿಂದಲೂ ಕೂಡಿ ಹೊಳೆಯುತ್ತಿರುವನು.

೨೬೬. ಅಗ್ನಿಕುಮಾರರಿಗೆ ಸಮರೂ, ಯೂಪಸ್ತಂಭದಂತೆ ಭಯಂಕರವಾದ ಹಲ್ಲುಗಳಿಂದ ಕೂಡಿದ ಮುಖವುಳ್ಳವರೂ, ಭಯಂಕರರೂ ಆದ ಭೂತಗಣಗಳಿಂದ ವಂದ್ಯಮಾನನೂ, ಮರ್ಯಾದಿಸಲ್ಪಟ್ಟವನೂ, ಪೂಜ್ಯನೂ ಆದ ಪರಮೇಶ್ವರನು ಹೊಳೆಯುತ್ತಿದ್ದನು.

೨೬೭–೨೬೮. ಇಂತಹ ಪರಮೇಶ್ವರನು ಹೃದಯಗತವೂ, ಸರ್ವ ಋತುಗಳಲ್ಲಿಯೂ ಉಂಟಾಗುವ ಪುಷ್ಪಗಳಿಂದ ರಚಿತವೂ, ಆದ ಮಾಲೆಯನ್ನು ಆಘ್ರಾಣಿಸುತ್ತಿರುವನು. ಕರಿನೈದಲೆಯ ಪುಷ್ಪದ ದಳಗಳಂತೆ ಕಪ್ಪಗಿರುವನೂ, ವಿಶಾಲವೂ,

**ಈಷತ್ಕರಾಲಲಂಬೋಷ್ಠಂ ತೀಕ್ಷ್ಣದಂಷ್ಟ್ರಾಗಣಾಂಚಿತಂ ।**
**ಷಡೂರ್ಧ್ವನೇತ್ರಂ ದುಷ್ಪ್ರೇಕ್ಷ್ಯಂ ರುಚಿರಂ ಚೀರವಾಸಸಂ ॥ ೨೬೮ ॥**

**ಆಹವೇಷ್ವಪರಿಕ್ಲಿಷ್ಟಂ ದೇವಾನಾಮರಿನಾಶನಂ ।**
**ಬಾಹುನಾ ಬಾಹುಮಾವೇಶ್ಯ ಪಾರ್ಶ್ವೇ ಸವ್ಯೇಂತರೇ ಸ್ಥಿತಂ ॥ ೨೬೯ ॥**

**ರರಾಜಾಪದಿಶಂತಸ್ಯ ವಾಮಾಗ್ರಕರಗೋಚರಂ ।**
**ಮಹಾಭೈರವನಿರ್ಘೋಷಂ ಬಲೇನಾಪ್ರತಿಮೌಜಸಂ ॥**
**ದಶವರ್ಣಧನುಶ್ಚೈವ ವಿಚಿತ್ರಂ ಶೋಭತೇಽಧಿಕಂ ॥ ೨೭೦ ॥**

**ತ್ರಿಶೂಲಂ ವಿದ್ಯುತಾಭಾಸಮಮೋಘಂ ಶತ್ರುನಾಶನಂ ।**
**ಜಾಜ್ವಲ್ಯಮಾನಂ ವಪುಷಾ ಪರಮಂ ತತ್ತ್ವಿಷಾಯುತಂ ॥ ೨೭೧ ॥**

---

ಕೆಂಪಗೂ, ಅಗಲವೂ ಆದ ನೇತ್ರಗಳಿಂದ ಸಹಿತನೂ, ಸ್ವಲ್ಪ ಭಯಂಕರವಾದ ನೇತಾಡುವ ತುಟಿಯುಳ್ಳವನೂ, ಹರಿತವಾದ ಕೋರೆಹಲ್ಲುಗಳ ಸಾಲಿನಿಂದ ಅಲಂಕೃತನೂ, ನೋಡಲಶಕ್ಯನೂ, ಸುಂದರನೂ, ಚೀರವಸ್ತ್ರಧಾರಿಯೂ, ಯುದ್ಧಗಳಲ್ಲಿ ಕ್ಲೇಶವಿಲ್ಲದವನೂ, ದೇವತೆಗಳಿಗೆ ಅರಿಯಾದ ದೈತ್ಯರನ್ನು ಸಂಹರಿಸಿದವನೂ, ಭುಜದಮೇಲೆ ಕೈಗಳನ್ನು ಹಾಕಿಕೊಂಡು ಎಡಭಾಗದಲ್ಲಿ ನಿಂತಿರುವವನೂ ಆದ ಷಣ್ಮುಖನಿಂದ ಪ್ರಕಾಶಿಸುತ್ತಿದ್ದನು.

೨೭೦. ಅಂತಹ ಪರಮೇಶ್ವರನ ಎಡಗೈಯಲ್ಲಿ ಮಹಾಭಯಂಕರವಾದ ಧ್ವನಿಯುಳ್ಳದ್ದೂ, ಬಲ (ಶಕ್ತಿ) ದಲ್ಲಿ ಅಸಮಾನವೂ, ವಿಚಿತ್ರವೂ, ದಶವರ್ಣಯುಕ್ತವೂ ಆದ ಪಿನಾಕವೆಂಬ ಧನಸ್ಸು ಪ್ರಕಾಶಿಸುವುದು.

೨೭೧. ಮಿಂಚಿನಂತೆ ಕಾಂತಿಯುತವೂ, ಅಮೋಘವೂ, ಶತ್ರುನಾಶಕವೂ ಜಾಜ್ವಲ್ಯಮಾನವೂ, ಪರಮಕಾಂತಿಯುತವೂ ಆದ ತ್ರಿಶೂಲವೂ ಸಹ ಪರಮೇಶ್ವರನ ಕೈಯಲ್ಲಿ ಪ್ರಕಾಶಿಸುವುದು.

ಅಸಿಶ್ಚೈವೌಜಸಾಂ ಶ್ರೇಷ್ಠಃ ಶೀತರಶ್ಮಿಃ ಶಶೀ ತಥಾ ।
ತೇಜಸಾ ವಪುಷಾ ಕಾಂತ್ಯಾ ದೇವೇಶಸ್ಯ ಮಹಾತ್ಮನಃ ॥
ಶುಶುಭೇಽಭ್ಯಧಿಕಂ ತತ್ರ ವೇದ್ಯಾಮಗ್ನಿಶಿಖಾ ಇವ ॥ ೨೭೨ ॥

ಸ್ಥಿತಃ ಪುರಸ್ತಾದ್ದೇವಸ್ಯ ಶಾತಕೌಂಭಮಯೋ ಮಹಾನ್ ।
ಶುಶುಭೇ ರುಚಿರಃ ಶ್ರೀಮಾನ್ಸೋದಕಃ ಸಕಮಂಡಲುಃ ॥ ೨೭೩ ॥

ಅಸಿಮಾವೇಶ್ಯ ಚಾಂಗೇಷು ಪಾಂಡುರಾಂಬರಧಾರಿಣೀ ।
ಉರಶ್ಚ್ಛೇದನೇ ಮಹತಾ ಮೌಕ್ತಿಕೇನ ವಿರಾಜಿತಾ ॥
ಚತುರ್ಭುಜಾ ಮಹಾಭಾಗಾ ವಿಜಯಾ ಲೋಕಸಮ್ಮತಾ ॥ ೨೭೪ ॥

ದೇವ್ಯಾ ಆದ್ಯಃ ಪ್ರತೀಹಾರೀ ಶ್ರೀರಿವಾಪ್ರತಿಮಾ ಪರಾ ।
ವಿಭ್ರಾಜತೀ ಸ್ಥಿತಾ ಚೈವ ಕೃತ್ವಾ ದೇವಸ್ಯ ಚಾಂಜಲಿಂ ॥ ೨೭೫ ॥

---

೨೭೨. ಅಧಿಕವಾದ ಕಾಂತಿಯುತವೂ, ಶೀತಕಿರಣನಾದ ಚಂದ್ರನಂತೆ ಪ್ರಕಾಶಕವೂ, ದೇವೇಶನೂ, ಮಹಾತ್ಮನಾದ ಪರಮೇಶ್ವರನ ದೇಹಕಾಂತಿಗೆ ಸಮಾನವಾದ ಕಾಂತಿಯುಳ್ಳದ್ದೂ, ಆದ ಪರಮೇಶ್ವರನ ಖಡ್ಗವು ಯಜ್ಞವೇದಿಯಲ್ಲಿ ಅಗ್ನಿಜ್ವಾಲೆಯಂತೆ ಅತ್ಯಧಿಕವಾಗಿ ಹೊಳೆಯುತ್ತಿರುವುದು.

೨೭೩. ದೇವೇಶನಾದ ಪರಮೇಶ್ವರನ ಮುಂಭಾಗದಲ್ಲಿ ಸುವರ್ಣಮಯವೂ, ಅತಿಮಹತ್ತೂ, ಸುಂದರವೂ, ಕಾಂತಿಯುತವೂ, ಜಲಭರಿತವೂ ಕಮಂಡಲುಯುತವೂ.ಆದ ದಿವ್ಯ ಕುಂಭವು ಪ್ರಕಾಶಿಸುತ್ತಿರುವುದು.

೨೭೪–೨೭೫ ಖಡ್ಗಧಾರಿಯೂ, ಶುಭ್ರವಸ್ತ್ರಾಲಂಕೃತಳೂ, ಮುಕ್ತಾಹಾರಗಳಿಂದ ಅಲಂಕೃತವಾದ ಕಂಠವುಳ್ಳವಳೂ, ಚತುರ್ಭುಜಳೂ, ಮಹಾಭಾಗ್ಯಶಾಲಿಯೂ, ಲೋಕಸಮ್ಮತಳೂ, ಲಕ್ಷ್ಮಿಗೆ ಸಮಾನಳೂ, ವಿಜಯನಾಮಕಳೂ, ಮುಖ್ಯಳೂ ಆದ ಪ್ರತೀಹಾರಿಯು (ದ್ವಾರಪಾಲಿಕೆಯು) ಮಹಾದೇವಿಯ ಅಪ್ಪಣೆಯನ್ನು ಪಡೆಯುವಂತೆ ಈಶ್ವರನ ಮುಂಭಾಗದಲ್ಲಿ ಅಂಜಲಿಬದ್ಧಳಾಗಿ ಪ್ರಕಾಶಿಸುತ್ತಿರುವಳು.

ತಸ್ಯಾಃ ಪೃಷ್ಠಾನುಗಾಶ್ಚಾನ್ಯಾಃ ಸ್ತ್ರಿಯೋಽಪ್ಸರೋಗಣಾನ್ವಿತಾಃ ।
ತಾಃ ಖಲ್ವಭಿನವೈಃ ಕಾಂತ್ಯೈರುಪತಿಷ್ಠಂತಿ ಶಂಕರಂ ॥ ೨೭೬ ॥

ಸರ್ವಲಕ್ಷಣಸಂಪನ್ನಾ ವಾದಿತ್ರೈರುಪಬೃಂಹಿತಾಃ ।
ಉಪಗಾಯಂತಿ ದೇವೇಶಂ ಗಣಾ ಗಂಧರ್ವಯೋನಯಃ ॥ ೨೭೭ ॥

ಅಭ್ಯುನ್ನತೋ ಮಹೋರಸ್ಕಃ ಶರನ್ಮೇಘಸಮದ್ಯುತಿಃ ।
ಶೋಭತೇ ನಂದನಾನಶ್ಚ ಗೋಪತಿಸ್ತಸ್ಯ ವೇಶ್ಮನಿ ॥ ೨೭೮ ॥

ಸ್ಕಂದಶ್ಚ ಸಪರೀವಾರಃ ಪುತ್ರೋಽಸ್ಯಾಮಿತವೀರ್ಯವಾನ್ ।
ರಕ್ತಾಂಬರಧರಃ ಶ್ರೀಮಾನ್ಪರಾಂಬುಜದಲೇಕ್ಷಣಃ ॥ ೨೭೯ ॥

---

೨೭೬. ಆ ಪ್ರತೀಹಾರಿಯ ಹಿಂಭಾಗದಲ್ಲಿ ಅಪ್ಸರಸ್ತ್ರೀಯರ ಗಣಗಳು ಅವಳನ್ನು ಅನುಸರಿಸಿಕೊಂಡಿದ್ದುವು. ಅವರೆಲ್ಲರೂ ನೂತನ ಕಾಂತಿಯುತರೂ, ಪರಮ ಭಕ್ತಿಯುಳ್ಳವರೂ ಆಗಿ ಈಶ್ವರನ ಕೈಂಕರ್ಯಕ್ಕಾಗಿ ಸಿದ್ಧರಾಗಿದ್ದರು.

೨೭೭. ಸರ್ವಲಕ್ಷಣಸಂಪನ್ನರೂ, ಮೃದಂಗಾದಿವಾದ್ಯಗಳಿಂದ ಸಹಿತರೂ, ಸುಂದರರೂ, ಆದ ಗಂಧರ್ವರಗಣಗಳು ಪ್ರಮಥೇಶನಾದ ಪರಶಿವನನ್ನು ಹೊಗಳುತ್ತಿದ್ದುವು.

೨೭೮. ಆ ಪರಮೇಶ್ವರನ ಗೃಹದಲ್ಲಿ ಅತ್ಯುನ್ನತನೂ, ವಿಶಾಲಹೃದಯನೂ, ಶರತ್ಕಾಲದ ಮೇಘದಂತೆ ಕಾಂತಿಯುತನೂ, ಹರ್ಷಚಿತ್ತನೂ, ಗೋಪತಿಯೂ ಆದ ನಂದೀಶ್ವರನು ಪ್ರಕಾಶಿಸುತ್ತಿದ್ದನು.

೨೭೯. ಅತಿವೀರ್ಯವಂತನೂ, ರಕ್ತಾಂಬರಧಾರಿಯೂ, ಶ್ರೀಮಂತನೂ, ಕಮಲದಂತೆ ಕಣ್ಣುಗಳುಳ್ಳವನೂ, ಪರಿವಾರಸಮೇತನೂ, ಪುತ್ರನೂ ಆದ ಷಣ್ಮುಖನು ತನ್ನ ಸೇವಕ ಗಣಗಳೊಡನೆ ಪ್ರಕಾಶಿಸುತ್ತಿದ್ದನು.

ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಚಾಷ್ಟವಾನ್ ।
ವ್ಯಪೇತವ್ಯಸನಾಕ್ರೂರಾಃ ಪ್ರಜಾನಾಂ ಪಾಲನೇ ರತಾಃ ॥ ೨೮೦ ॥

ತೈಃ ಸಾರ್ದ್ಧಂ ಸ ಮಹಾವೀರ್ಯಃ ಶೋಭತೇ ಶಿಖಿವಾಹನಃ ।
ವ್ಯಾಲಕ್ರೀಡನಕೈಸ್ತತ್ರ ಕ್ರೀಡತೇ ವಿಶ್ವತೋಮುಖಃ ॥ ೨೮೧ ॥

ಯೇ ನೃಪಾ ವಿಬುಧೇಂದ್ರಾಣಾಂ ಕಾಂಚನಸ್ಯ ಪ್ರದಾಯಿನಃ ।
ಯೇ ಚ ಸ್ವಾಯತನಾ ವಿಪ್ರಾ ಗೃಹಸ್ಥಾ ಬ್ರಹ್ಮವಾದಿನಃ ॥ ೨೮೨ ॥

ಗೂಢಸ್ವಾಧ್ಯಾಯತಪಸಸ್ತಥಾ ಚೈವೋಂಛವೃತ್ತಯಃ ।
ಏತೇ ಸಭಾಸದಸ್ತಸ್ಯ ದೇವೇಶಸ್ಯ ಚ ಸಮ್ಮತಾಃ ॥ ೨೮೩ ॥

ಮನ್ವಂತರಾಣ್ಯನೇಕಾನಿ ವ್ಯವರ್ತಂತ ಪುನಃ ಪುನಃ ।
ಶ್ರೂಯತಾಂ ದೇವದೇವಸ್ಯ ಭವಿಷ್ಯಾಶ್ಚರ್ಯಮುತ್ತಮಂ ॥ ೨೮೪ ॥

---

೨೮೦–೨೮೧. ಶಿಖಿವಾಹನನೂ, ಷಣ್ಮುಖನೂ, ಆದ ಕುಮಾರಸ್ವಾಮಿಯು, ಪ್ರಜಾಪಾಲಕರೂ, ವ್ಯಸನರಹಿತರೂ, ಮೃದುಸ್ವಭಾವವುಳ್ಳವರೂ, ಆದ ಶಾಖ, ವಿಶಾಖ, ನೈಗಮೇಯ, ಅಷ್ಟವಂತ, ಇವರೇ ಮೊದಲಾದವರಿಂದ ಕೂಡಿ ಮಹಾ ಶೂರನಾಗಿ ಹೊಳೆಯುತ್ತಿದ್ದನು. ಮತ್ತು ಮಹಾಪರಾಕ್ರಮಿಯಾಗಿ ನಿತ್ಯವೂ ವ್ಯಾಘ್ರಾದಿಗಳೊಡನೆ ವಿಹರಿಸುತ್ತಿದ್ದನು.

೨೮೨–೨೮೩. ಜ್ಞಾನಿಗಳಿಗೆ ಸುವರ್ಣದಾನವನ್ನು ಮಾಡುವ ರಾಜರೂ, ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರೂ, ಬ್ರಹ್ಮಜ್ಞಾನಿಗಳಾದ ಗೃಹಸ್ಥರೂ, ರಹಸ್ಯವಾಗಿ ಅಧ್ಯಯನ ಮತ್ತು ಜಪತಪಗಳನ್ನು ಮಾಡುವ ಮುನಿವರ್ಯರೂ, ಉಂಛವೃತ್ತಿಯುಳ್ಳ ಸತ್ಪುರುಷರೂ, ಇವರು ದೇವೋತ್ತಮನಾದ ಪರಮೇಶ್ವರನಿಗೆ ಪ್ರಿಯರೂ, ಸಭಾಸದರೂ, ಆಗಿರುವರು.

೨೮೪. ಈ ರೀತಿಯಾಗಿ ಅನೇಕ ಮನ್ವಂತರಗಳು ಸಂಭವಿಸುತ್ತವೆ. ಆಯಾ ಸಮಯಗಳಲ್ಲಿ ನಡೆಯುವದೂ, ಪರಮಾಶ್ಚರ್ಯಕರವೂ, ಉತ್ತಮವೂ, ಆದ ದೇವೇಶನ ಚರಿತ್ರೆಯನ್ನು ತಿಳಿಸುವೆನು ಕೇಳಿರೆಂದನು.

ವ್ಯಾಘ್ರಾಶ್ಚೈವಾನುಗಾಸ್ತತ್ರ ಕಾಂಚನಾಭಾಸ್ತರಸ್ವಿನಃ ।
ಸ್ವಚ್ಛಂದಚಾರಿಣಃ ಸರ್ವೇ ಸ್ವಯಂ ದೇವೇನ ನಿರ್ಮಿತಾಃ ॥ ೨೮೫ ॥

ಮೃತ್ಯೋರ್ಮೃತ್ಯುಸಮಾಸ್ತೇ ತು ಯಮದರ್ಪಾಪಹಾರಿಣಃ ।
ವಿಭೂತಿಮಪ್ಯಸಂಖ್ಯೇಯಾಂ ಕೋ ನ ಖಲ್ವಭಿಧಾಸ್ಯತೇ ॥ ೨೮೬ ॥

ಅತಃ ಪರಮಿದಂ ಭೂಯೋ ಭವೇನಾದ್ಭುತಮುತ್ತಮಂ ।
ಭೂತಾನಾಮನುಕಂಪಾರ್ಥಂ ಯತ್ಕೃತಂ ತನ್ನಿಬೋಧತ ॥ ೨೮೭ ॥

ಮಂದರಾದ್ರಿಪ್ರಕಾಶಾನಾಂ ಬಲೇನಾಪ್ರತಿಮೌಜಸಾಂ ।
ಹಾರಕುಂದೇಂದುವರ್ಣಾನಾಂ ವಿದ್ಯುದ್ಘನನಿನಾದಿನಾಂ ॥ ೨೮೮ ॥

ಚೂಡಾಮಣಿಧರಾಣಾಂ ವೈ ಮೇಘಸನ್ನಿಭವಾಸಸಾಂ ।
ಶ್ರೀವತ್ಸಾಂಕಿತವಜ್ರಾಣಾಮಂಗುಲೀ ಶೂಲಪಾಣಿನಾಂ ॥ ೨೮೯ ॥

---

೨೮೫. ಆ ಶಿವಪುರಿಯಲ್ಲಿ ಸುವರ್ಣಮಯವೂ, ಅತಿವೇಗಶಾಲಿಯೂ, ಸ್ವೇಚ್ಛಾಚಾರಿಯೂ, ಈಶ್ವರಾನುಯಾಯಿಯೂ, ಆದ ಆ ಹುಲಿಗಳೆಲ್ಲವೂ, ಪರಮೇಶನಿಂದಲೇ ನಿರ್ಮಿತಗಳಾಗಿವೆ.

೨೮೬. ಆ ವ್ಯಾಘ್ರಗಳು, ಮರಣದಾಯಕಗಳೂ, ಮೃತ್ಯುವಿಗೆ ಸಮಾನಗಳೂ ಯಮನ ದರ್ಪಾಪಹಾರಿಗಳೂ, ಮಹಾಪರಾಕ್ರಮಿಗಳೂ, ಆಗಿರುತ್ತವೆ. ಆದುದರಿಂದ ಅವುಗಳ ಶೌರ್ಯವನ್ನು ವರ್ಣಿಸಲು ಯಾರಿಗೆ ತಾನೆ ಸಾಧ್ಯವು.

೨೮೭. ಎಲೈ ವಿಪ್ರೋತ್ತಮರೇ, ಈಗ ಪರಮೇಶ್ವರನು ಪ್ರಾಣಿಗಳಲ್ಲಿರುವ ಕೃಪೆಯಿಂದ ಯಾವ ಯಾವ ಅದ್ಭುತ ಕಾರ್ಯಗಳನ್ನು ಮಾಡಿರುವನೋ ಅವನ್ನು ನಿಮಗಾಗಿ ನಿರೂಪಿಸುವೆನು. ಕೇಳಿರೆಂದು ವಾಯುದೇವನು ಹೇಳಿದನು.

೨೮೮–೨೮೯. ಮಂದರಗಿರಿಯಂತೆ ಪ್ರಕಾಶಕರೂ, ಬಲದಿಂದಲೂ, ಕಾಂತಿಯಿಂದಲೂ, ಅಸದೃಶರೂ, ಮುಕ್ತಾಹಾರ, ಕುಂದಪುಷ್ಪ, ಚಂದ್ರ, ಇವುಗಳಂತೆ ಕಾಂತಿವಂತರೂ, ಮಿಂಚುಗಳಿಂದ ಕೂಡಿದ ಮೇಘದಂತೆ ಗಂಭೀರ ಧ್ವನಿಯುಳ್ಳವರೂ, ಕಿರೀಟಧಾರಿಗಳೂ, ಶುಭ್ರವಸ್ತ್ರಧಾರಿಗಳೂ, ಶ್ರೀವತ್ಸಾಂಕಿತರೂ, ವಜ್ರಾಯುಧಧಾರಿಗಳೂ, ಶೂಲಪಾಣಿಗಳೂ, ರೂಪದಿಂದಲೂ, ಸ್ವಭಾವದಿಂದಲೂ, ಉತ್ತಮರೂ ಆದ ದೇವತೆಗಳ ಬೃಂದದಲ್ಲಿ ಈಶ್ವರನು ಪ್ರಕಾಶಿಸಿದನು.

**ಏವಂ ದಿಶಾನಾಂ ದೇವಾನಾಂ ರೂಪೇಣೋತ್ತಮಶಾಲಿನಾಂ ।**
**ತಸ್ಯ ಪ್ರಾಸಾದಮುಖ್ಯಸ್ಯ ಸ್ತಂಭೇಷೂತ್ತಮಶೋಭಿಷು ॥ ೨೯೦ ॥**

**ಸಂಯುತಾಗ್ನಿಮಯೀಭಿಸ್ತು ಶೃಂಖಲಾಭಿಃ ಪೃಥಕ್ ಪೃಥಕ್ ।**
**ಮಾಯಾಸಹಸ್ರಸಿಂಹಾನಾಂ ಸುಖಂ ತತ್ರ ನಿವಾಸಿನಾಂ ॥ ೨೯೧ ॥**

**ಸ್ತಂಭೇಷ್ವಪಾಸ್ಯತಾಷಷ್ಟಂ ತ್ರ್ಯಂಬಕಸ್ಯ ನಿವೇಶನೇ ।**
**ಅಥ ತತ್ಪ್ರತಿಸಂಪೂಜ್ಯ ವಾಯೋರ್ವಾಕ್ಯಂ ಸುವಿಸ್ಮಿತಾಃ ॥**
**ಋಷಯಃ ಪ್ರತ್ಯಭಾಷಂತ ನೈಮಿಷೇಯಾಸ್ತಪಸ್ವಿನಃ ॥ ೨೯೨ ॥**

**ಭಗವನ್ಸರ್ವಭೂತಾನಾಂ ಪ್ರಾಣ ಸರ್ವತ್ರಗ ಪ್ರಭೋ ।**
**ಕೇ ತೇ ಸಿಂಹಮಹಾಭೂತಾಃ ಕ್ವ ತೇ ಜಾತಾಃ ಕಿಮಾತ್ಮಕಾಃ ॥ ೨೯೩ ॥**

**ಸಿಂಹಾಃ ಕೇನಾಪರಾಧೇನ ಭೂತಾನಾಂ ಪ್ರಭವಿಷ್ಣುನಾ ।**
**ವೈಶ್ವಾನರಮಯೈಃ ಪಾಶೈಃ ಸಂರುದ್ಧಾಸ್ತು ಪೃಥಕ್ ಪೃಥಕ್ ॥ ೨೯೪ ॥**

---

೨೯೦–೨೯೧. ಇಂತಹ ಪರಮೇಶ್ವರನ ಅರಮನೆಯಲ್ಲಿರುವ ಸುವರ್ಣಮಯವಾದ ಕಂಬಳಿಗಳಿಗೆ ಅಗ್ನಿರೂಪಗಳಾದ, ಸರಪಣಿಗಳಿಂದ, ಬೇರೆ ಬೇರೆಯಾಗಿ ಮಾಯಾನಿರ್ಮಿತಗಳಾದ ಸಾವಿರಾರು ಸಿಂಹಗಳು ಕಟ್ಟಲ್ಪಟ್ಟು ಸುಖವಾಗಿ ವಾಸಿಸುತ್ತಿವೆ.

೨೯೨. ಈ ರೀತಿಯಾಗಿ ಈಶ್ವರನ ಅರಮನೆಯ ಕಂಬಗಳಿಗೆ ಕಟ್ಟಿಹಾಕಿರುವ ಸಿಂಹಗಳು (ಅಲುಗದೇ) ಚಲಿಸದೇ ಇದ್ದುವೆಂಬ ಮಾತುಗಳನ್ನು ಕೇಳಿದ ತರುವಾಯ ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳು ವಾಯುದೇವನ ವಾಕ್ಯಗಳನ್ನು ಕೇಳಿ ಆಶ್ಚರ್ಯಗೊಂಡು ಮಾತನಾಡಿದರು.

೨೯೩–೨೯೪. ಸರ್ವಭೂತಗಳ ಪ್ರಾಣಧಾರಕನೂ, ಸರ್ವತ್ರಸಂಚಾರಿಯೂ, ಪೂಜ್ಯನೂ, ಸ್ವಾಮಿಯೂ, ಆದ ವಾಯುದೇವನೇ, ಸಿಂಹಗಳಾಗಿರುವ ಆ ಮಹಾಭೂತಗಳು ಯಾವುವು ? ಅವು ಯಾವ ಅರಣ್ಯದಲ್ಲಿ ಹುಟ್ಟಿದವು ? ಅವುಗಳ ಸ್ವಭಾವವು ಯಾವುದು ? ಆ ಸಿಂಹಗಳು ಯಾವ ಅಪರಾಧಗಳನ್ನು ಮಾಡಿದವು ? ಭೂತಪತಿಯಾದ ಪರಮೇಶ್ವರನು ಯಾವ ಅಪರಾಧದಿಂದ ಅವುಗಳನ್ನು ಅಗ್ನಿರೂಪಗಳಾದ ಹುರಿಗಳಿಂದ ಬೇರೆ ಬೇರೆಯಾಗಿ ಕಂಬಗಳಿಗೆ ಕಟ್ಟಿಹಾಕಿರುವನು ? ಇದನ್ನು ತಿಳಿಸಬೇಕೆಂದು ಕೇಳಿದರು.

ತೇಷಾಂ ತದ್ವಚನಂ ಶ್ರುತ್ವಾ ವಾಯುರ್ವಾಕ್ಯಂ ಜಗಾದ ಹ ।
ಯದ್ವೈ ಸಹಸ್ರಂ ಸಿಂಹಾನಾಂ ಈಶ್ವರೇಣ ಮಹಾತ್ಮನಾ ॥
ಸೃಷ್ಟಾನೀಯ ಸ್ವಕಾದ್ದೇಹಾತ್ ಕ್ರೋಧಾಸ್ತೇ ಸಿಂಹವಿಗ್ರಹಾಃ ॥ ೨೯೫ ॥

ಭೂತಾನಾಮಭಯಂ ದತ್ವಾ ಪುರಾ ಬದ್ಧಾಗ್ನಿಬಂಧನೇ ।
ಯಜ್ಞಭಾಗನಿಮಿತ್ತಂ ಚ ಈಶ್ವರಸ್ಯಾಜ್ಞಯಾ ತದಾ ॥ ೨೯೬ ॥

ತೇಷಾಂ ವಿಧಾನಮುಕ್ತೇನ ಸಿಂಹೇನೈಕೇನ ಲೀಲಯಾ ।
ದೇವ್ಯಾ ಮನ್ಯುಂ ಕೃತಂ ಜ್ಞಾತ್ವಾ ಹತೋ ದಕ್ಷಸ್ಯ ಸ ಕ್ರತುಃ ॥ ೨೯೭ ॥

ನಿಃಸೃತಾ ಚ ಮಹಾದೇವ್ಯಾ ಮಹಾಕಾಲೀ ಮಹೇಶ್ವರೀ ।
ಆತ್ಮನಃ ಕರ್ಮಸಾಕ್ಷಿಣ್ಯಾ ಭೂತೈಃ ಸಾರ್ಧಂ ತದಾನುಗೈಃ ॥ ೨೯೮ ॥

ಸ ಏಷ ಭಗವಾನ್ ಕ್ರೋಧೋ ರುದ್ರಾವಾಸಕೃತಾಲಯಃ ।
ವೀರಭದ್ರೋಽಪ್ರಮೇಯಾತ್ಮಾ ದೇವ್ಯಾ ಮನ್ಯುಪ್ರಮಾರ್ಜನಃ ॥ ೨೯೯ ॥

---

೨೯೫–೨೯೬. ಆ ಮಹರ್ಷಿಗಳ ವಾಕ್ಯವನ್ನು ಕೇಳಿದ ವಾಯುದೇವನು ಹೇಳಿದ್ದೇನೆಂದರೆ ಎಲೈ ಮುನಿವರ್ಯರೇ, ಮಹಾತ್ಮನಾದ ಪರಮೇಶ್ವರನು ಕ್ರೋಧರೂಪಗಳಾದ ಆ ಸಹಸ್ರಾರು ಸಿಂಹಗಳನ್ನು ತನ್ನ ದೇಹದಿಂದಲೇ ಸೃಷ್ಟಿಸಿ ಸರ್ವಭೂತಗಳಿಗೂ ಅಭಯದಾನವನ್ನು ಮಾಡಿ, ಅವುಗಳನ್ನು ಅಗ್ನಿಮಯವಾದ ಪಾಶಗಳಿಂದ ಬಂಧಿಸಿರುವನು ಇದರಿಂದ ಯಜ್ಞಭಾಗಗಳೆಲ್ಲವೂ ಸುಖವಾಗಿ ಆಯಾ ದೇವತೆಗಳಿಗೆ ಸೇರುವುದು.

೨೯೭. ಆ ಈಶ್ವರನ ಆಜ್ಞೆಯಿಂದಲೇ ಪೂರ್ವದಲ್ಲಿ ಆ ಸಿಂಹಗಳಲ್ಲಿ ಒಂದು ಸಿಂಹವು ದಕ್ಷಬ್ರಹ್ಮನು ಸತೀದೇವಿಗೆ ಮಾಡಿದ ಅಪರಾಧವನ್ನರಿತು ಅವನ ಯಾಗವನ್ನು ಧ್ವಂಸಮಾಡಿತು.

೨೯೮. ಆ ಸಮಯದಲ್ಲಿ ಮಹಾದೇವಿಯೂ, ಮಹಾಕಾಳಿಯೂ, ಮಹೇಶ್ವರಿಯೂ, ಕರ್ಮಸಾಕ್ಷಿಯೂ ಆದ ಸತೀದೇವಿಯು ಅದನ್ನು ನೋಡಲು ಅನೇಕ ಭೂತಗಳೊಡನೆ ಹೊರಟಳು.

೨೯೯. ರುದ್ರದೇವನ ಗೃಹದಲ್ಲಿ ವಾಸಿಸುವನೂ, ಪೂಜ್ಯನೂ ಕ್ರೋಧ ರೂಪಿಯೂ ಅಪ್ರಮೇಯ ಸ್ವರೂಪನೂ, ಸತೀದೇವಿಯ ಕೋಪಪರಿಹಾರಕನೂ ಆದ ಆ ವೀರಭದ್ರನೇ ದಕ್ಷ ಪ್ರಜಾಪತಿಯ ಯಾಗವನ್ನು ನಾಶಮಾಡಿರುವನು.

ತಸ್ಯ ವೇಶ್ಮ ಸುರೇಂದ್ರಸ್ಯ ಸರ್ವಗುಹ್ಯತಮಸ್ಯ ವೈ ।
ಸನ್ನಿವೇಶಸ್ತ್ವನೌಪಮ್ಯೋ ಮಯಾ ವಃ ಪರಿಕೀರ್ತಿತಃ ॥ ೩೦೦ ॥

ಅತಃ ಪರಂ ಪ್ರವಕ್ಷ್ಯಾಮಿ ಯೇ ತತ್ರ ಪ್ರತಿವಾಸಿನಃ ।
ರಮ್ಯೇ ಪುರವರಶ್ರೇಷ್ಠೇ ತಸ್ಮಿನ್ನ್ವಿಹಾರಭೂಮಿಷು ॥ ೩೦೧ ॥

ನಾನಾರತ್ನವಿಚಿತ್ರೇಷು ಪತಾಕಾಬಹುಲೇಷು ಚ ।
ಸರ್ವಕಾಮಸಮೃದ್ಧೇಷು ವನೋಪವನಶೋಭಿಷು ॥ ೩೦೨ ॥

ರಾಜತೇಷು ಮಹಾಂತೇಷು ಶಾತಕೌಂಭಮಯೇಷು ಚ ।
ಸಂಧ್ಯಾಭ್ರಸನ್ನಿಕಾಶೇಷು ಕೈಲಾಸಪ್ರತಿಮೇಷು ಚ ॥ ೩೦೩ ॥

ಇಷ್ಟೈಃ ಶಬ್ದಾದಿಭಿರ್ಭಾಗೈರ್ಯೇ ಭವಸ್ಯಾನುಸಾರಿಣಃ ।
ಪ್ರಾಸಾದ ವರಪುಷ್ಪೇಷು ತೇಷು ಮೋದಂತಿ ಸುವ್ರತಾಃ ॥ ೩೦೪ ॥

---

೩೦೦. ಸಮಸ್ತರಾದ ಗುಹ್ಯಕರಿಗೆ ಉತ್ತಮನೂ ಸುರೇಂದ್ರನೂ ಆದ ಪರಮೇಶ್ವರನ ಅಸದೃಶವಾದ ಗೃಹದ ಸನ್ನಿವೇಶವನ್ನು ಮಹರ್ಷಿಗಳಿಂದ ತಿಳಿದ ವಿಷಯಗಳನ್ನು ತಮಗೆ ತಿಳಿಸಿರುತ್ತೇನೆಂದು ವಾಯುದೇವನು ಹೇಳಿದನು.

೩೦೧. ಇನ್ನು ಮುಂದೆ ರಮ್ಯವಾದ ಆ ಪುರವರದಲ್ಲಿರುವ ಈಶ್ವರಾಲಯದ ಸಮೀಪದ ವಿಹಾರ ಭೂಮಿಯಲ್ಲಿರುವ ಮಹಾತ್ಮರನ್ನು ತಿಳಿಸುವೆನು ಕೇಳಿರೆಂದನು.

೩೦೨–೩೦೪. ನಾನಾ ರತ್ನಗಳಿಂದ ವಿಚಿತ್ರವೂ, ಅನೇಕ ಧ್ವಜಗಳಿಂದಲಂಕೃತವೂ, ಸರ್ವಕಾಮಗಳಿಂದ ಸಹಿತವೂ, ವನೋಪವನಗಳಿಂದ ರಂಜಿತಗಳೂ, ಅತ್ಯುನ್ನತಗಳೂ, ರಜತಮಯವೂ, ಸುವರ್ಣಮಯವೂ, ಸಾಯಂಕಾಲದ ಮೇಘದಂತೆ ಪ್ರಕಾಶಕಗಳೂ ಕೈಲಾಸಗಿರಿಗೆ ಸಮಾನಗಳೂ, ಶಬ್ದಾದಿ ಸಕಲ ವಿಷಯಭೋಗಗಳಿಂದ ಯುಕ್ತಗಳೂ ವಿವಿಧ ಪುಷ್ಪಗಳಿಂದಲಂಕೃತಗಳೂ ಆದ ಅನೇಕ ಉಪ್ಪರಿಗೆಗಳಲ್ಲಿ ಈಶ್ವರನನ್ನು ಅನುಕರಣಮಾಡತಕ್ಕ ಸುವ್ರತಿಗಳಾದ ಮಹಾತ್ಮರು ಸಂತೋಷದಿಂದ ವಾಸಮಾಡುತ್ತಿರುವರು.

ಬ್ರಹ್ಮಘೋಷೈರವಿರತಾಃ ಕಥಾಶ್ಚ ವಿವಿಧಾಃ ಶುಭಾಃ ।
ಗೀತವಾದಿತ್ರಘೋಷಾಶ್ಚ ಸಂಸ್ತವಾಶ್ಚ ಸಮಂತತಃ ॥ ೩೦೫ ॥

ಸಂಹತಾಶ್ಚೈವಮತುಲಾ ನಾನಾಶ್ರಯಕೃತಾಸ್ತಥಾ ।
ಏವಮಾದೀನಿ ವರ್ತಂತೇ ತೇಷಾಂ ಪ್ರಾಸಾದಮೂರ್ಧನಿ ॥ ೩೦೬ ॥

ಸಹಸ್ರಪಾದಃ ಪ್ರಾಸಾದಸ್ತಪನೀಯಮಯಃ ಶುಭಃ ।
ಅನೌಪಮ್ಯೈರ್ವರ್ರೈ ರತ್ನೈಃ ಸರ್ವತಃ ಪರಿಭೂಷಿತಃ ॥ ೩೦೭ ॥

ಸ್ಫಟಿಕೈಶ್ಚಂದ್ರಸಂಕಾಶೈರ್ವೈಡೂರ್ಯಮಣಿಸಂಪ್ರಭೈಃ ।
ಬಾಲಸೂರ್ಯಮಯೈಶ್ಚಾಪಿ ಸೌವರ್ಣೈಶ್ಚಾಗ್ನಿಸಂಪ್ರಭೈಃ ॥ ೩೦೮ ॥

---

೩೦೫. ಆ ಪುರವರದಲ್ಲಿ ಎಲ್ಲಿ ನೋಡಿದರೂ ನಿರಂತರವಾದ ವೇದಘೋಷಗಳೂ ಮಂಗಳವಾದ ವಿವಿಧವಾದ್ಯಗಳೂ, ನಾನಾವಿಧ ಕಥಾವಿನೋದನಗಳೂ. ವೀಣಾವೇಣು ಮೃದಂಗಾದಿ ಧ್ವನಿಗಳೂ, ಸ್ತೋತ್ರಪಾಠಗಳೂ, ಕೂಡ ವಿಶೇಷವಾಗಿ ನಡೆಯುತ್ತಿದ್ದವು.

೩೦೬. ದೇವತೆಗಳು ಹೀಗೆ ವಿವಿಧ ಪ್ರಾಸಾದಗಳಲ್ಲಿ ಒಟ್ಟುಗೂಡಿಯೂ, ಪ್ರತ್ಯೇಕ ಪ್ರತ್ಯೇಕವಾಗಿಯೂ, ವಾಸಮಾಡುತ್ತಾ ನಾನಾವಿಧ ಸುಖಗಳನ್ನು ಅನುಭವಿಸುವರು.

೩೦೭. ಆ ದೇವಪ್ರಸಾದಗಳು, ಸಾವಿರಾರು ಮೆಟ್ಟಿಲುಗಳಿಂದ ಸಹಿತವೂ, ಸುವರ್ಣಮಯವೂ, ಮಂಗಳಸ್ವರೂಪವೂ, ಅಸದೃಶವೂ ವಿವಿಧ ರತ್ನಗಳಿಂದ ಲಂಕೃತವೂ, ಆಗಿದ್ದವು.

೩೦೮. ಆ ದೇವಪ್ರಸಾದಗಳು ಚಂದ್ರಸಮಾನವಾದ ಸ್ಫಟಿಕಮಣಿಗಳಿಂದಲೂ, ರತ್ನಗಳಿಂದಲೂ, ವೈಡೂರ್ಯಮಣಿಗಳಿಂದಲೂ, ಬಾಲಸೂರ್ಯನಂತೆ ಹೊಳೆಯುವ ಸುವರ್ಣಕಾಂತಿಯಿಂದಲೂ, ಅಗ್ನಿಯಂತೆ ಹೊಳೆಯುವ ರತ್ನಗಳಿಂದಲೂ, ಅಲಂಕೃತವಾಗಿ ಹೊಳೆಯುತ್ತಿವೆಯೆಂದು ಹೇಳಿದನು.

ಚುಕ್ರುಶುರ್ಋಷಯಃ ಶ್ರುತ್ವಾ ನೈಮಿಷೇಯಾಸ್ತಪಸ್ವಿನಃ ।
ಆಪನ್ನಸಂಶಯಾಶ್ಚೇಮಂ ವಾಕ್ಯಮೂಚುಃ ಸಮೀರಣಂ ॥ ೩೦೯ ॥

॥ ಋಷಯ ಊಚುಃ ॥

ಕೇ ತು ತತ್ರ ಮಹಾತ್ಮಾನೋ ಯೇ ಭವಸ್ಯಾನುಸಾರಿಣಃ ।
ಅನುಗ್ರಾಹ್ಯತಮಾಃ ಸಮ್ಯಕ್ಪ್ರಮೋದಂತೇ ಪುರೋತ್ತಮೇ ॥
ಋಷೀಣಾಂ ವಚನಂ ಶ್ರುತ್ವಾ ವಾಯುರ್ವಾಕ್ಯಮಥಾಬ್ರವೀತ್ ॥ ೩೧೦ ॥

॥ ವಾಯುರುವಾಚ ॥

ಶ್ರೂಯತಾಂ ದೇವದೇವಸ್ಯ ಭಕ್ತೈರ್ಯೈರನುಕಲ್ಪಿತಾ ।
ಹ್ರೀಮಂತಃ ಸೂರ್ಜಿತಾ ದಾಂತಾಃ ಶೌರ್ಯಯುಕ್ತಾ ಹ್ಯಲೋಲುಪಾಃ ॥

ಮಧ್ಯಾಹಾರಾಶ್ಚ ಮಾತ್ರಾಶ್ಚ ಹ್ಯಾತ್ಮಾರಾಮಾ ಜಿತೇಂದ್ರಿಯಾಃ ।
ಜಿತದ್ವಂದ್ವಾ ಮಹೋತ್ಸಾಹಾಃ ಸೌಮ್ಯಾ ವಿಗತಮತ್ಸರಾಃ ॥ ೩೧೨ ॥

---

೩೦೯. ಈ ಮಾತುಗಳನ್ನು ಕೇಳಿದ ನೈಮಿಷಾರಣ್ಯವಾಸಿಗಳೂ, ತಪಸ್ವಿಗಳೂ ಆದ ಮುನಿಗಳು ಸಂತೋಷದಿಂದ ಕೂಗುತ್ತಾ ಸಂಶಯವನ್ನು ಹೊಂದಿ ವಾಯು ದೇವನಿಗೆ ಇಂತೆಂದರು.

೩೧೦. ಋಷಿಗಳು ಹೇಳಿದರು :- ಎಲೈ ವಾಯುದೇವನೇ, ಯಾರು ಭಕ್ತಿ ಯಿಂದ ಈಶ್ವರನನ್ನು ಅನುಸರಿಸಿ ಸೇವಿಸುತ್ತಿದ್ದಾರೆಯೋ ಆ ಮಹಾತ್ಮರು ಯಾರು? ಆ ಮಹಾತ್ಮರು ಈಶ್ವರನ ಅನುಗ್ರಹಕ್ಕೆ ವಿಷಯರಾಗಿ ಆ ನಗರಿಯಲ್ಲಿ ಸಂತೋಷದಿಂದ ಹೇಗೆ ವಾಸಮಾಡುತ್ತಾರೆ. ಎಂದು ಹೇಳಿದ ಮುನಿಗಳ ಮಾತನ್ನು ಕೇಳಿ ವಾಯು ದೇವನು ಹೀಗೆ ಹೇಳಿದನು.

೩೧೧-೩೧೩. ವಾಯುದೇವನು ಹೇಳಿದನು :—ಎಲೈ ಮುನಿವರ್ಯರೇ, ದೇವ ದೇವನಾದ ಪರಮೇಶ್ವರನು ಯಾರ ಭಕ್ತಿಗೆ ಮೆಚ್ಚಿ ದಯೆಯನ್ನು ತೋರಿಸಿದನೋ ಅಂತಹ ಮಹಾತ್ಮರ ಮಹಿಮೆಯನ್ನು ತಿಳಿಸುವೆನು ಕೇಳಿರಿ. ಆ ಮಹಾತ್ಮರು ಲಜ್ಜಾವಂತರೂ, ಊರ್ಜಿತರೂ, ದಾನಿಗಳೂ, ಶೌರ್ಯವಂತರೂ, ಆಶಾರಹಿತರೂ, ಮಧ್ಯಮಾಹಾರಿಗಳೂ, ಆತ್ಮಾರಾಮರೂ, ಜಿತೇಂದ್ರಿಯರೂ, ಸುಖದುಃಖಾತೀತರೂ, ಮಹೋತ್ಸಾಹಿಗಳೂ, ಸೌಮ್ಯರೂ, ದ್ವೇಷರಹಿತರೂ, ಭಾವಜ್ಞರೂ, ಸರ್ವಭೂತ

**ಭಾವಸ್ಥಾಃ ಸರ್ವಭೂತಾನಾಮವ್ಯಾಪಾರಾ ಅನಾಕುಲಾಃ |**
**ಕರ್ಮಣಾ ಮನಸಾ ವಾಚಾ ವಿಶುದ್ಧೇನಾಂತರಾತ್ಮನಾ ||**
**ಅನನ್ಯಮನಸೋ ಭೂತ್ವಾ ಪ್ರಪನ್ನಾ ಯೇ ಮಾಹೇಶ್ವರಂ || ೩೧೩ ||**

**ತೈರ್ಲಬ್ಧಂ ರುದ್ರಸಾಲೋಕ್ಯಂ ಶಾಶ್ವತಂ ಪದಮವ್ಯಯಂ |**
**ಭವಸ್ಯ ರೂಪಸಾದೃಶ್ಯಂ ನೀತಾಶ್ಚೈವ ಹ್ಯನುತ್ತಮಂ || ೩೧೪ ||**

**ವೈಶ್ವಾನರಮುಖಾಃ ಸರ್ವೇ ವಿಶ್ವರೂಪಾಃ ಕಪರ್ದಿನಃ |**
**ನೀಲಕಂಠಾಃ ಸಿತಗ್ರೀವಾಸ್ತೀಕ್ಷ್ಣದಂಷ್ಟ್ರಾಸ್ತ್ರಿಲೋಚನಾಃ || ೩೧೫ ||**

**ಅರ್ಧಚಂದ್ರಕೃತೋಷ್ಣೀಷ ಜಟಾಮುಕುಟಧಾರಿಣಃ |**
**ಸರ್ವೇ ದಶಭುಜಾ ವೀರಾಃ ಪದ್ಮಾಂತರಸುಗಂಧಿನಃ || ೩೧೬ ||**

**ತರುಣಾದಿತ್ಯಸಂಕಾಶಾಃ ಸರ್ವೇ ತೇ ಪೀತವಾಸಸಃ |**
**ಪಿನಾಕಪಾಣಯಃ ಸರ್ವೇ ಶ್ವೇತಗೋವೃಷವಾಹನಾಃ || ೩೧೭ ||**

---

ಗಳಲ್ಲಿರುವ ಭಾವವನ್ನರಿತವರೂ, ನಿರರ್ಥಕ ವ್ಯಾಪಾರವನ್ನು ಮಾಡದವರೂ, ವ್ಯಾಕುಲರಹಿತರೂ ಮನಸ್ಸು, ವಾಕ್ಕು, ಕರ್ಮ ಅಂತರಾತ್ಮ ಇವುಗಳಿಂದ ಪರಿಶುದ್ಧರೂ, ಅನನ್ಯಮನಸ್ಕರೂ ಆಗಿ ಪರಮೇಶ್ವರನನ್ನು ಭಜಿಸುತ್ತಿರುವರು.

೩೧೪. ಅಂತಹ ಮಹಾತ್ಮರು ರುದ್ರದೇವನ ಸಾಲೋಕ್ಯರೂಪವೂ, ಶಾಶ್ವತವೂ, ನಾಶರಹಿತವೂ ಆದ ದಿವ್ಯಪದವಿಯನ್ನು ಹೊಂದಿರುವರು. ಇತರರಾದ ಭಕ್ತರು ಅತ್ಯುತ್ತಮವಾದ ಸಾರೂಪ್ಯ ಮೋಕ್ಷವನ್ನು ಪಡೆದಿರುವರು.

೩೧೫–೩೧೯. ಅವರೆಲ್ಲರೂ ಅಗ್ನಿ ಮುಖರೂ, ವಿಶ್ವರೂಪಿಗಳೂ, ಜಟಾಧಾರಿಗಳೂ, ನೀಲಕಂಠರೂ, ಶುಭ್ರಕಂಠರೂ, ತೀಕ್ಷ್ಣದಂಷ್ಟ್ರಿಗಳೂ, ಮುಕ್ಕಣ್ಣರೂ, ಚಂದ್ರ ಚೂಡರೂ, ಜಟಾಮುಕುಟಧಾರಿಗಳೂ, ಹತ್ತು ಭುಜಗಳಿಂದಲಂಕೃತರೂ, ವೀರರೂ, ಕಮಲದಂತೆ ಸುವಾಸನೆಯುಳ್ಳವರೂ, ಬಾಲಸೂರ್ಯನಂತೆ ಕಾಂತಿಯುತರೂ, ಪೀತಾಂಬರಧಾರಿಗಳೂ, ಪಿನಾಕಪಾಣಿಗಳೂ, ಶುಭ್ರವಾದ ವೃಷಭವಾಹನವುಳ್ಳವರೂ,

ಶ್ರಿಯಾನ್ವಿತಾಃ ಕುಂಡಲಿನೋ ಮುಕ್ತಾಹಾರವಿಭೂಷಿತಾಃ ।
ತೇಜಸೋಭ್ಯಧಿಕಾ ದೇವ್ಯೈಃ ಸರ್ವಜ್ಞಾಃ ಸರ್ವದರ್ಶಿನಃ ॥ ೩೧೮ ॥

ವಿಭಜ್ಯ ಬಹುಧಾತ್ಮಾನಂ ಜರಾಮೃತ್ಯುವಿವರ್ಜಿತಾಃ ।
ಕ್ರೀಡಂತೇ ವಿವಿಧೈರ್ಭಾವೈರ್ಭೋಗಾನ್ ಪ್ರಾಪ್ಯ ಸುದುರ್ಲಭಾನ್ ॥ ೩೧೯ ॥

ಸ್ವಚ್ಛಂದಗಾತಯಃ ಸಿದ್ಧಾಃ ಸಿದ್ಧೈಃಶ್ಚಾನ್ಯೈರ್ವಿಬೋಧಿತಾಃ ।
ಏಕಾದಶಾನಾಂ ರುದ್ರಾಣಾಂ ಕೋಟ್ಯೋಽನೇಕಮಹಾತ್ಮನಾಂ ॥ ೩೨೦ ॥

ಏಭಿಃ ಸಹ ಮಹಾತ್ಮಾ ಹಿ ದೇವದೇವೋ ಮಹೇಶ್ವರಃ ।
ಭಕ್ತಾನುಕಂಪೀ ಭಗವಾನ್ ಮೋದತೇ ಪಾರ್ವತೀಪ್ರಿಯಃ ॥ ೩೨೧ ॥

ನಾಹಂ ತೇಷಾಂ ತು ರುದ್ರಾಣಾಂ ಭವಸ್ಯ ಚ ಮಹಾತ್ಮನಃ ।
ನಾನಾತ್ವಮನುಪಶ್ಯಾಮಿ ಸತ್ಯಮೇತದ್ಬ್ರವೀಮಿ ವಃ ॥ ೩೨೨ ॥

---

ಸಂಪದ್ಯುಕ್ತರೂ, ಕುಂಡಲಿಗಳೂ, ಮುಕ್ತಾಹಾರಾಲಂಕೃತರೂ, ಅಧಿಕತೇಜೋವಂತರೂ, ಸರ್ವಜ್ಞರೂ, ಸರ್ವಶಾಸ್ತ್ರಗಳನ್ನೂ ತಿಳಿದಿರುವರೂ, ಬಹುರೂಪಿಗಳೂ, ಜರಾಮರಣರಹಿತರೂ ಆಗಿ ಮಹಾಭೋಗಗಳನ್ನು ಪಡೆದು, ವಿವಿಧವಾದ ರೀತಿಯಲ್ಲಿ ಕ್ರೀಡಿಸುತ್ತಿರುವರು.

೩೨೦. ಅವರು ಸ್ವಚ್ಛಂದಚಾರಿಗಳೂ, ಸಿದ್ಧರೂಪಿಗಳೂ, ಸಿದ್ಧ ಪುರುಷರಿಂದ ಸ್ತುತ್ಯರೂ, ಮಹಾತ್ಮರೂ, ಹನ್ನೊಂದುಕೋಟಿ ಸಂಖ್ಯಾಕರೂ ಆದ ರುದ್ರರೂಪಿಗಳಾಗಿರುವರು.

೩೨೧. ಮಹಾತ್ಮನೂ, ದೇವದೇವನೂ, ಭಕ್ತಾನುಗ್ರಹವುಳ್ಳವನೂ, ಭಗವಂತನೂ, ಪಾರ್ವತೀಪ್ರಿಯನೂ ಆದ ಪರಮೇಶ್ವರನು ಆ ಏಕಾದಶಕೋಟಿ ಸಂಖ್ಯಾಕರಾದ ರುದ್ರಗಣಗಳೊಡನೆ ನಲಿದಾಡುತ್ತಿರುವನು.

೩೨೨. ಆ ಏಕಾದಶಕೋಟಿ ರುದ್ರರಿಗೂ, ಮಹಾತ್ಮನೂ, ಪಾರ್ವತೀಪ್ರಿಯನೂ ಆದ ಪರಮೇಶ್ವರನಿಗೂ ಭೇದವು ಬೇರೆಯೆಂಬ ಭಾವನೆಯು ಸುತರಾಂ ಇಲ್ಲವೆಂಬುದಾಗಿ ನಂಬುತ್ತೇನೆ. ನೀವೂ ಕೂಡ ಇದನ್ನು ಸತ್ಯವೆಂದು ತಿಳಿಯಿರೆಂದು ಹೇಳಿದನು.

ಮಾತರಿಶ್ವಾಬ್ರವೀತ್ಪುಣ್ಯಾಮಿತ್ಯೇತಾಮಿಶ್ವರೋಪ್ಯೃತ ।
ಅಥ ತೇ ಋಷಯಃ ಸರ್ವೇ ದಿವಾಕರಸಮಪ್ರಭಾಃ ॥
ಶ್ರುತ್ವೇಮಾಂ ಪರಮಾಂ ಪುಣ್ಯಾಂ ಕಥಾಂ ತ್ರ್ಯಯಂಬಕೀಂ ತತಃ ॥ ೩೨೩ ॥

ಭೃಶಂ ಚಾನುಗ್ರಹಂ ಪ್ರಾಪ್ಯ ಹರ್ಷಂ ಚೈವಾಪ್ಯನುತ್ತಮಂ ।
ಸಂಭಾವಯಿತ್ವಾ ಚಾಪ್ಯೇನಾಂ ವಾಯುಮೂಚುರ್ಮಹಾಬಲಂ ॥ ೩೨೪ ॥

॥ ಋಷಯ ಊಚುಃ ॥

ಸಮೀರಣ ಮಹಾಭಾಗ ಹ್ಯಸ್ಮಾಕಂ ಚ ತ್ವಯಾ ವಿಭೋ ।
ಈಶ್ವರಸ್ಯೋತ್ತಮಂ ಪುಣ್ಯಮುಷ್ಟಮಂ ತ್ವೌಪಸರ್ಗಿಕಂ ॥ ೩೨೫ ॥

ತಸ್ಯ ಸ್ಥಾನಂ ಪ್ರಮಾಣಂ ಚ ಯಥಾವತ್ಪರಿಕೀರ್ತಿತಂ ।
ಯೋ ಗಂಧೇನ ಸಮೃದ್ಧಂ ವೈ ಪರಮಂ ಪರಮಾತ್ಮನಃ ॥ ೩೨೬ ॥

---

೩೨೩–೩೨೪. ಸ್ವಾಮಿಯಾದ ವಾಯುದೇವನು ಹೀಗೆ ಪುಣ್ಯಕರವೂ, ಪವಿತ್ರವೂ ಆದ ಈಶ್ವರನ ವಿಷಯಕವಾದ ಈ ಕಥೆಯನ್ನು ಹೇಳಿದನು. ತರುವಾಯ ಸೂರ್ಯನಿಗೆ ಸಮಾನರೂ, ತೇಜಸ್ವಿಗಳೂ ಆದ ಆ ಮಹರ್ಷಿಗಳೆಲ್ಲರೂ ಉತ್ತಮವೂ, ಪುಣ್ಯಕರವೂ, ಈಶ್ವರ ವಿಷಯಕವೂ, ಆದ ಕಥೆಯನ್ನು ಕೇಳಿ ಬಹಳವಾಗಿ ಸಂತೋಷ ವನ್ನೂ, ಮಹಾಪ್ರಸಾದವನ್ನೂ ಹೊಂದಿ ಮಹಾಬಲಶಾಲಿಯೂ, ಮಹಾನುಭಾವನೂ ಆದ ವಾಯುದೇವನಿಗೆ ಇಂತೆಂದರು.

೩೨೫–೩೨೬. ಋಷಿಗಳು ಹೇಳಿದರು :—ಎಲೈ ಸ್ವಾಮಿಯೂ, ಮಹಾನು ಭಾವನೂ, ಆದ ವಾಯುದೇವನೇ, ನೀನು ನಮಗೆ ಅತ್ಯುತ್ತಮವೂ, ಪುಣ್ಯಕರವೂ, ನೈಮಿತ್ತಿಕವೂ ಆದ ಈಶ್ವರನ ಅಷ್ಟಸ್ಥಾನಗಳನ್ನು ಅವುಗಳ ವಿಶಾಲತೆಯೇ ಮೊದಲಾದ ಪ್ರಮಾಣಗಳನ್ನೂ ಯಥಾಸ್ಥಿತವಾಗಿ ಹೇಳಿರುತ್ತೀಯೆ. ಯಾವ ಪರಮೇಶ್ವರನ ಸ್ಥಾನವು ದಿವ್ಯಗಂಧಸಮೃದ್ಧವಾಗಿಯೂ, ಪರಮೋತ್ತಮವಾಗಿಯೂ, ಇರುತ್ತದೆಯೋ ಅಂತಹ ಮಹಾದೇವನ ಮಹಿಮೆಯು ದೇವತೆಗಳಿಂದಲೂ ತಿಳಿಯಲಶಕ್ಯವಾಗಿದೆ.

ಮಹಾದೇವಸ್ಯ ಮಾಹಾತ್ಮ್ಯಂ ದುರ್ವಿಜ್ಞೇಯಂ ಸುರೈರಪಿ ।
ಸ್ವೇನ ಮಾಹಾತ್ಮ್ಯಯೋಗೇನ ಸಹಸ್ರಸ್ಯಾಮಿತೌಜಸಃ ॥ ೩೨೭ ॥

ಯಸ್ಯ ಭಕ್ತೇಷ್ವಸಂಮೋಹೋ ಹ್ಯನುಕಂಪಾರ್ಥಮೇವ ಚ ।
ಬ್ರಾಹ್ಮಲಕ್ಷ್ಮ್ಯ ಸ್ವಯಂ ಜುಷ್ಟಾ ಯಾ ಸಾಪ್ರತಿಮಶಾಲಿನೀ ॥ ೩೨೮ ॥

ಜ್ಯೋತ್ಸ್ನಯಾ ವ್ಯಾಪ್ಯ ಖಂ ಚಂದ್ರಂ ವಿನ್ಯಸ್ತಾ ವಿಶ್ವರೂಪಧೃಕ್ ।
ವಿಭೂತಿಭ್ರಾಜತೇಽತ್ಯರ್ಥಂ ದೇವದೇವಸ್ಯ ವೇಶ್ಮನಿ ॥ ೩೨೯ ॥

ಮಹಾದೇವಸ್ಯ ತುಲ್ಯಾನಾಂ ರುದ್ರಾಣಾಂ ತು ಮಹಾತ್ಮನಾಂ ।
ತತ್ಸರ್ವಂ ನಿಖಿಲೇನೇದಂ ವಕ್ತ್ರಾದಮೃತನಿಸ್ರವಂ ॥ ೩೩೦ ॥

---

೩೨೭. ಅಪರಿಮಿತವಾದ ತೇಜಸ್ಸುಳ್ಳ ಪರಮೇಶ್ವರನ ಮಹಿಮೆಯು ದೇವತೆಗಳಿಂದಲೂ ತಿಳಿಯಲಶಕ್ಯವಾಗಿದೆ. ತನ್ನ ಮಾಹಾತ್ಮ್ಯಗಳಿಂದಲೇ ಅವನು ವಿಶೇಷವಾಗಿ ಪ್ರಕಾಶಿಸುವನು.

೩೨೮. ಅಂತಹ ಪರಮೇಶ್ವರನು ಸ್ವಭಕ್ತರ ಅನುಗ್ರಹಕ್ಕಾಗಿ ಸಂಪೂರ್ಣವಾದ ದಯೆಯನ್ನು ತೋರ್ಪಡಿಸುವನು. ಈಶ್ವರನ ದಿವ್ಯಕಾಂತಿಯು ಅಸದೃಶವಾಗಿಯೂ, ಬ್ರಹ್ಮಸಂಪತ್ಸಮನ್ವಿತವಾಗಿಯೂ ಪ್ರಕಾಶಿಸುವುದು.

೩೨೯. ದೇವದೇವನಾದ ಪರಮೇಶ್ವರನ ದಿವ್ಯಕಾಂತಿಯು ಆಕಾಶದಲ್ಲಿ ಹೊಳೆಯುವ ಚಂದ್ರನಕಾಂತಿಯನ್ನು ಮೀರಿ ಸರ್ವಗ್ರಹಗಳನ್ನೂ ವ್ಯಾಪಿಸಿಕೊಂಡಿದೆ. ಮತ್ತು ತನ್ನ ಮಂದಿರದಲ್ಲಿಯೂ ಬಹಳವಾಗಿ ಪ್ರಕಾಶಿಸುವುದು.

೩೩೦. ಇಂತಹ ಪರಮೇಶ್ವರನ ಮತ್ತು ಆ ಮುನಿಗೆ ಸಮಾನಮಹಿಮೆಯುಳ್ಳವರೂ, ಅಸಂಖ್ಯಾತರೂ ಆದ ರುದ್ರರ ಮಹಿಮೆಗಳನ್ನೂ ಅಮೃತಮಯವಾದ ನಿನ್ನ ಮುಖಜನ್ಯವಾದ ವಾಣಿಯನ್ನೂ ಕೇಳಿ ತೃಪ್ತರಾಗಿರುತ್ತೇವೆಂದು ಮುನಿಗಳು ವಾಯುದೇವನಿಗೆ ಹೇಳಿದರು.

ಅಪೀತ್ವಾ ಖಲು ಸರ್ವಸ್ಯ ಭಕ್ತ್ಯಾಸ್ಮಾಭಿಸ್ತು ಸುವ್ರತಾಃ |
ನಾಸ್ತಿ ಕಿಂಚಿದವಿಜ್ಞೇಯಮನ್ಯಚ್ಚೈವಾನುಗಾಮಿನಃ ||
ಪ್ರಶ್ನಂ ದೇವವರ ಪ್ರಾಣ ಯಥಾವದ್ವಕ್ತುಮರ್ಹಸಿ || ೩೩೧ ||

|| ಸೂತ ಉವಾಚ ||

ಸ ಖಲೂವಾಚ ಭಗವಾನ್ ಕಿಂ ಭೂಯೋ ವರ್ತಯಾಮ್ಯಹಂ |
ಕಿಂ ಮಯಾ ಚೈವ ವಕ್ತವ್ಯಂ ತದ್ವದಿಷ್ಯಾಮಿ ಸುವ್ರತಾಃ || ೩೩೨ ||

|| ಋಷಯ ಊಚುಃ ||

ಆದಿತ್ಯಾಃ ಪಾರಿಪಾರ್ಶ್ವೇಯಾಃ ಸಿಂಹಾ ವೈ ಕ್ರೋಧವಿಕ್ರಮಾಃ |
ವೈಶ್ವಾನರಾ ಭೂತಗಣಾ ವ್ಯಾಘ್ರಾಶ್ಚೈವಾನಾಗಾಮಿನಃ || ೩೩೩ ||

---

೩೩೧. ಆದರೂ ಆ ಪರಮೇಶ್ವರನಲ್ಲಿರುವ ಭಕ್ತ್ಯಾತಿಶಯಗಳಿಂದ ಸರ್ವ ವಿಷಯಗಳನ್ನೂ ತಿಳಿಯಲು ಸಾಧ್ಯವಾಗಿದೆ. ಈ ವಿಷಯಗಳನ್ನು ಮತ್ತಾರಿಂದಲೂ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಆದುದರಿಂದ ದೇವೋತ್ತಮನೂ, ಪ್ರಾಣ ನಾಥನೂ ಆದ ನೀನು ಈ ವಿಷಯಗಳನ್ನು ಹೇಳಲು ಅರ್ಹನಾಗಿರುತ್ತೀಯೆಂದು ಹೇಳಿದರು.

೩೩೨. ಸೂತಮುನಿಯು ಹೇಳಿದನು:-ಎಲೈ ಮುನಿವರ್ಯರೇ, ಪೂಜ್ಯನೂ, ಸ್ವಾಮಿಯೂ ಆದ ವಾಯುದೇವನು ಹೇಳಿದ ಇನ್ನೂ ಯಾವ ವಿಷಯಗಳನ್ನು ನಾನು ನಿಮಗೆ ತಿಳಿಸಲಿ. ಆ ವಿಷಯಗಳನ್ನು ಹೇಳಿರೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

೩೩೩–೩೩೪. ಮಹರ್ಷಿಗಳು ಹೇಳಿದರು :—ಅನುಯಾಯಿಗಳಾದ ದ್ವಾದ ಶಾದಿತ್ಯರೂ, ಕ್ರೋಧ ಮತ್ತು ವಿಕ್ರಮ ಇವುಗಳೇ ಸ್ವರೂಪಿಗಳಾಗಿಯುಳ್ಳ ಸಿಂಹ ಗಳೂ, ಅಗ್ನಿರೂಪಿಗಳಾದ ಭೂತಗಣಗಳೂ ಅನುಸರಿಸಿಕೊಂಡಿರುವ ವ್ಯಾಘ್ರಗಳೂ ಇವುಗಳೂ, ಸರ್ವಪ್ರಾಣಿಗಳಿಗೆ ನಾಶಕವೂ, ಘೋರವೂ, ಅತಿಭಯಂಕರವೂ

ಆಭೂತಸಂಪ್ಲವೇ ಘೋರೇ ಸರ್ವಪ್ರಾಣಭೃತಾಂ ಕ್ಷಯೇ ।
ಕಿಮವಸ್ಥಾ ಭವಂತ್ಯೇತೇ ತನ್ನೋ ಬ್ರೂಹಿ ಯಥಾರ್ಥವತ್ ॥ ೩೩೪ ॥

ಏತೇ ಯೇ ವೈ ತ್ವಯಾ ಪ್ರೋಕ್ತಾಃ ಸಿಂಹವ್ಯಾಘ್ರಗಣೈಃ ಸಹ
ಯೇ ಚಾನ್ಯೇ ಸಿದ್ಧಿಸಂಪ್ರಾಪ್ತಾ ಮಾತರಿಶ್ವಾ ಜಗಾದ ಹ ॥ ೩೩೫ ॥

ಇದಂಚ ಪರಮಂ ತತ್ವಂ ಸಮಾಖ್ಯಾಸ್ಯಾಮಿ ಶೃಣ್ವತಾಂ ।
ವಿಜ್ಞಾತೇಶ್ವರಸದ್ಭಾವಮವ್ಯಕ್ತಂ ಪ್ರಭವಂ ತಥಾ ॥ ೩೩೬ ॥

ತತ್ರ ಪರ್ವಗತಾಸ್ತೇಷು ಕುಮಾರಾ ಬ್ರಹ್ಮಣಃ ಸುತಾಃ ।
ಸನಕಶ್ಚ ಸನಂದಶ್ಚ ತೃತೀಯಶ್ಚ ಸನಾತನಃ ॥ ೩೩೭ ॥

ವೋಢುಶ್ಚ ಕಪಿಲಸ್ತೇಷಾ ಮಾಸುರಿಶ್ಚ ಮಹಾಯಶಾಃ ।
ಮುನಿಃ ಪಂಚಶಿಖಶ್ಚೈವ ಯೇ ಚಾನ್ಯೇಽಪ್ಯೇವಮಾದಯಃ ॥ ೩೩೮ ॥

---

ಆಭೂತಸಂಪ್ಲವಸಂಜ್ಞಿಕವೂ ಆದ ಪ್ರಲಯಕಾಲದಲ್ಲಿ ಯಾವ ಅವಸ್ಥೆಯನ್ನು ಹೊಂದುವುವು ? ಈ ವಿಷಯಗಳನ್ನು ನೀನು ನಮಗೆ ಯಥಾರ್ಥವಾಗಿ ತಿಳಿಸಬೇಕೆಂದು ಬೇಡಿದರು.

೩೩೫. ಸಿಂಹವ್ಯಾಘ್ರಾದಿಗಳೂ ಮತ್ತು ಮಹಾತ್ಮರೂ ಕೂಡ ಗಣಗಳೊಡನೆ ಯಾವ ಸಿದ್ಧಿಯನ್ನು ಹೊಂದಿದರೆಂಬುದಾಗಿ ವಾಯುದೇವನು ಹೇಳಿದನೋ ಅದನ್ನು ತಿಳಿಸುವೆನು ಕೇಳಿರೆಂದನು.

೩೩೬. ಎಲೈ ಮುನಿವರ್ಯರೇ, ಈ ಪರಮರಹಸ್ಯವಾದ ವಿಷಯಗಳನ್ನು ಶ್ರದ್ಧೆಯಿಂದ ಕೇಳುವ ನಿಮಗೆ ಈ ಪರಮತತ್ತ್ವಗಳನ್ನು ತಿಳಿಸುವೆನು. ಈ ತತ್ವಗಳು ಈಶ್ವರನ ಸ್ಥಿತಿಯನ್ನು ವ್ಯಕ್ತಗೊಳಿಸುವುದಲ್ಲದೇ ಅವ್ಯಕ್ತತತ್ವವನ್ನು, ಸ್ಥಿತಿಗತಿಗಳನ್ನು ತಿಳಿಸುತ್ತವೆ.

೩೩೭–೩೩೮. ಅತ್ಯಂತ ಪುರಾತನರೂ, ಬ್ರಹ್ಮದೇವನಮಾನಸಪುತ್ರರೂ ಆದ ಸನಕ, ಸನಂದನ, ಸನಾತನ, ವೋಢು, ಕಪಿಲ, ಆಸುರಿ, ಮುನಿ, ಪಂಚಶಿಖ ಇವರೇ ಮೊದಲಾದ ಮಹಾತ್ಮರು ಜನನಮರಣಪ್ರವಾಹವನ್ನು ದಾಟಿ ಮುಕ್ತರಾಗುವರು.

ತತಃ ಕಾಲೇ ವ್ಯತಿಕ್ರಾಂತೇ ಕಲ್ಪಾನಾಂ ಪರ್ಯಯೇ ಗತೇ ।
ಮಹಾಭೂತವಿನಾಶಾಂತೇ ಪ್ರಲಯೇ ಪ್ರತ್ಯುಪಸ್ಥಿತೇ ॥ ೩೩೯ ॥

ಅನೇಕರುದ್ರಕೋಟ್ಯಸ್ತು ಯಾ ಪ್ರಸನ್ನಾ ಮಹೇಶ್ವರೀ ।
ಶಬ್ದಾದೀನ್ವಿಷಯಾನ್ ಭೋಗಾನ್ ಸತ್ಯಸ್ಯಾಷ್ಟವಿಧಸ್ಯಯಾತ್ ॥ ೩೪೦ ॥

ಪ್ರವಿಶ್ಯ ಸರ್ವಭೂತಾನಿ ಜ್ಞಾನಯುಕ್ತೇನ ತೇಜಸಾ ।
ವೈಹಾಯಪದಮವ್ಯಗ್ರಂ ಭೂತಾನಾಮನುಕಂಪಯಾ ॥ ೩೪೧ ॥

ತತ್ರ ಯಾಂತಿ ಮಹಾತ್ಮಾನಃ ಪರಮಾಣುಂ ಮಹೇಶ್ವರಂ ।
ತರಂತಿ ಸುಮಹಾವರ್ತಾಂ ಜನ್ಮಮೃತ್ಯೂದಕಾಂ ನದೀಂ ॥ ೩೪೨ ॥

---

೩೩೯. ತರುವಾಯ ಕಾಲವು ಕಳೆದು ಪರ್ಯಾಯವಾಗಿ ಆಯಾ ಮನುಕಲ್ಪಗಳು ಸಂಭವಿಸಿ ಅದೂ ಕಳೆಯಲು ಅನೇಕ ಭೂತಗಳು ನಷ್ಟವಾಗಿ ಮಹಾಪ್ರಲಯವು ಸಂಭವಿಸುವುದು.

೩೪೦. ಆಗ ಅಸಂಖ್ಯಾತಗಳಾದ ರುದ್ರಗಣಗಳೂ, ಪ್ರಸನ್ನಳಾದ ಮಾಹೇಶ್ವರೀದೇವಿಯೂ ಕೂಡ ಶಬ್ದಾದಿ ಸಕಲ ವಿಷಯಗಳನ್ನೂ ಅಷ್ಟವಿಧವಾದ ಭೋಗಗಳನ್ನೂ ಪಡೆದು ತರುವಾಯ ಪರಮಪದವಿಯನ್ನು ಹೊಂದುವರು.

೩೪೧. ತರುವಾಯ ಮಹಾತ್ಮರು ಜ್ಞಾನಯುಕ್ತವಾದ ದಿವ್ಯತೇಜಸ್ಸಿನಿಂದ ಸರ್ವಭೂತಗಳಲ್ಲಿಯೂ ಪ್ರವೇಶಿಸಿ ಇವು ಭೂತದಯೆ ಅನುಗ್ರಹಗಳಿಂದ ಕೂಡಿ ವಿಹಾಯಸಮಾರ್ಗದಿಂದ ಅವ್ಯಗ್ರವಾದ ಪರಮಪದವಿಯನ್ನು ಹೊಂದುವರು.

೩೪೨. ಯಾವ ಸ್ಥಳದಲ್ಲಿ ಜನನಮರಣರೂಪವಾದ ಉದಕಗಳು ಮಹತ್ತಾದ ಸುಳಿಗಳು ಇರುವುವೋ ಅಂತಹ ಮಹಾನದಿಯನ್ನು ಜ್ಞಾನಿಗಳು ದಾಟಿ ಪರಮಾಣು ರೂಪನಾದ ಮಹೇಶ್ವರನನ್ನು ಹೊಂದುವರು. ಅಲ್ಲಿಗೆ ಈ ರುದ್ರಗಣಾದಿಗಳು ಹೋಗುವುವು.

ತತಃ ಪಶ್ಯಂತಿ ಶರ್ವಾಣಂ ಪರಂ ಬ್ರಹ್ಮಾಣಮೇವ ಚ ।
ದೇವ್ಯಾ ವೈ ಸಹಿತಾಃ ಸಪ್ತ ಯಾ ದೇವ್ಯಃ ಪರಿಕೀರ್ತಿತಾಃ ॥ ೩೪೩ ॥

ಯತ್ರ ತ್ವಸಹಸ್ರಂ ಸಿಂಹಾನಾಮಾದಿತ್ಯಾನಾಂ ತಥೈವ ಚ ।
ವೈಶ್ವಾನರಭೂತಭವ್ಯವ್ಯಾಘ್ರಾಶ್ಚೈವಾನುಗಾಮಿನಃ ॥ ೩೪೪ ॥

ಆವೇಶ್ಯಾತ್ಮನಿ ತಾನ್ ಸರ್ವಾನ್ ಸಂಖ್ಯಾಯೋಪದ್ರವಾಂಸ್ತಥಾ ।
ಲೋಕಾನ್ ಸಪ್ತ ಇಮಾನ್ ಸರ್ವಾನ್ ಮಹಾಭೂತಾನಿ ಪಂಚ ಚ ॥ ೩೪೫ ॥

ವಿಷ್ಣುನಾ ಸಹ ಸಂಯುಕ್ತಂ ಕರೋತಿ ವಿಕರೋತಿ ಚ ।
ಸ ರುದ್ರೋ ಯಃ ಸಾಮಮಯಸ್ತಥೈವ ಚ ಯಜುರ್ಮಯಃ ॥ ೩೪೬ ॥

ಸ ಏಷ ಓತಃ ಪ್ರೋತಶ್ಚ ಬಹಿರಂತಶ್ಚ ನಿಶ್ಚಯಾತ್ ।
ಏಕೋ ಹಿ ಭಗವಾನ್ನಾಥ ಅಭಾವೀಶಾಂತಕೃದ್ದ್ವಿಜಾಃ ॥ ೩೪೭ ॥

೩೪೩. ಅನಂತರ ಮಹಾತ್ಮರು ಲೋಕವಿಖ್ಯಾತರಾದ ಸಪ್ತದೇವಿಯಿಂದ ಸಹಿತನಾದ ಪರಮೇಶ್ವರನನ್ನೂ, ಪೂರ್ಣತ್ವಪುಷ್ಟನಾದ ಬ್ರಹ್ಮದೇವನನ್ನೂ ಪ್ರತ್ಯಕ್ಷವಾಗಿಯೇ ನೋಡುವರು. ಪರಮಾನಂದವನ್ನು ಪಡೆಯುವರು.

೩೪೪–೩೪೫. ಯಾವ ಸಹಸ್ರಸಂಖ್ಯಾಕಗಳಾದ ಸಿಂಹಗಳೂ, ಆದಿತ್ಯರೂ ಅನುಸರಿಸುವ ಅಗ್ನಿಗಳೂ, ವ್ಯಾಘ್ರಗಳೂ ಇವುಗಳಿರುತ್ತವೆಯೋ, ಅಸಂಖ್ಯಾತಗಳಾದ ಅವುಗಳೆಲ್ಲವನ್ನೂ, ಸಪ್ತಲೋಕಗಳನ್ನೂ ಈ ಸರ್ವಪ್ರಾಣಿಗಳನ್ನೂ, ಪಂಚಮಹಾಭೂತಗಳನ್ನೂ ಪರಮೇಶ್ವರನು ಮೊದಲು ತನ್ನುದರದಲ್ಲಿ ಧರಿಸುವನು.

೩೪೬. ಅನಂತರ ಮಹಾದೇವನು ಸಮಸ್ತಲೋಕಗಳನ್ನೂ, ಸರ್ವಪ್ರಾಣಿಗಳನ್ನೂ ವಿಷ್ಣುವಿನ ಉದರದಲ್ಲಿರುಸುವನು. ತರುವಾಯ ವಿಭಾಗಿಸುವನು. ಅಂತಹ ಮಹಾದೇವನು ಸಾಮಗಾನಪ್ರಿಯನೂ, ಯಜುರ್ವೇದಪ್ರತಿಪಾದ್ಯನೂ ಆಗಿರುವನು.

೩೪೭. ಎಲೈ ವಿಪ್ರವರ್ಯರೇ, ಅಂತಹ ಭಗವಂತನು ಸರ್ವಪ್ರಾಣಿಗಳಲ್ಲಿಯೂ, ಓತಪ್ರೋತನೂ, ಅಖಂಡನೂ, ಖಂಡನೂ, ಅಂತರ್ಬಹಿರ್ಗತನೂ, ಏಕರೂಪನೂ, ಸ್ವಾಮಿಯೂ, ನಾಥನೂ, ತ್ರಿಕಾಲಜ್ಞನೂ, ಶಾಂತಿದಾಯಕನೂ ಆಗಿ ಪ್ರಕಾಶಿಸುವನು.

**ತತಸ್ತೇ ಋಷಯಃ ಸರ್ವೇ ದಿವಾಕರಸಮಪ್ರಭಾಃ ।**
**ಸ್ವಂಸ್ವಮಾಶ್ರಮಸಂವಾಸಮಾರೋಪ್ಯಾಗ್ನಿಂ ತಥಾತ್ಮನಿ ॥ ೩೪೮ ॥**

**ಕರ್ಮಣಾ ಮನಸಾ ವಾಚಾ ವಿಶುದ್ಧೇನಾಂತರಾತ್ಮನಾ ।**
**ಅನನ್ಯಮನಸೋ ಭೂತ್ವಾ ಪ್ರಪದ್ಯಂತೇ ಮಹೇಶ್ವರಂ ॥ ೩೪೯ ॥**

**ವ್ರತೋಪವಾಸನಿರತಾಃ ಸರ್ವಭೂತದಯಾಪರಾಃ ।**
**ಯೋಗ್ಯಂ ಹ್ಯನುಪಮಂ ದಿವ್ಯಂ ಪ್ರಾಪ್ತುಂ ತೈಶ್ಛಿನ್ನಸಂಶಯೈಃ ॥ ೩೫೦ ॥**

**ಪ್ರಪದ್ಯ ಪರಯಾ ಭಕ್ತ್ಯಾ ಜ್ಞಾನಯುಕ್ತೇನ ಚೇತಸಾ ।**
**ತೈರ್ಲಬ್ಧಂ ರುದ್ರಸಾಲೋಕ್ಯಂ ಶಾಶ್ವತಂ ಪದಮವ್ಯಯಂ ॥ ೩೫೧ ॥**

**ಯಃ ಪಠೇತ್ತಪಸಾ ಯುಕ್ತೋ ವಾಯುಪ್ರೋಕ್ತಾಮಿಮಾಂ ಸ್ತುತಿಂ ।**
**ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯೋ ವಾ ಸ್ವಕ್ರಿಯಾಪರಃ ॥ ೩೫೨ ॥**

---

೩೪೮–೩೪೯. ಅನಂತರಸಮಸ್ತರಾದ ಮಹರ್ಷಿಗಳೂ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವರಾಗಿ ತಮ್ಮ ತಮ್ಮ ಆಶ್ರಮಗಳಿಗೆ ಸಾಗ್ನಿಕರಾಗಿ ಹೋಗಿ ಅಗ್ನಿಯನ್ನು ಪ್ರಜ್ವಲಿಸಿ ಮನೋವಾಕ್ಕಾಯಕರ್ಮಗಳಿಂದಲೂ, ಪರಿಶುದ್ಧವಾದ ಅಂತರಾತ್ಮನಿಂದಲೂ ಕೂಡಿ ಅನನ್ಯಮನಸ್ಕರಾಗಿ ಪರಮೇಶ್ವರನನ್ನು ಹೊಂದುವರು.

೩೫೦. ಆ ಸಮಸ್ತ ಜನರೂ ವ್ರತೋಪವಾಸನಿರತರೂ, ಸರ್ವಭೂತದಯಾಪರರೂ, ಸಂಶಯರಹಿತರೂ ಆಗಿ ದಿವ್ಯವೂ, ಅತ್ಯಂತ ಶ್ರೇಷ್ಠವೂ ಆದ ಯೋಗಾಭ್ಯಾಸನಿರತರಾಗಿ ದಿವ್ಯಪದವಿಯನ್ನು ಹೊಂದಿ ನಿತ್ಯಸುಖಿಯಾಗುವರು.

೩೫೧. ಆ ಮಹರ್ಷಿಗಳು ಪರಮಭಕ್ತಿಯಿಂದಲೂ, ಜ್ಞಾನಯುಕ್ತವಾದ ಮನಸ್ಸಿನಿಂದಲೂ, ಆ ಪರಶಿವನನ್ನು ಧ್ಯಾನಿಸಿ, ಅವನ ಪರಮಾನುಗ್ರಹದಿಂದ ಜ್ಞಾನಗಮ್ಯವೂ, ಶಾಶ್ವತವೂ, ನಾಶರಹಿತವೂ ಆದ ರುದ್ರದೇವನ ಸಾಲೋಕ್ಯ ಮೋಕ್ಷವನ್ನು ಪಡೆಯುವರು.

೩೫೨. ಯಾವ ಪುರುಷನು ವಾಯುಪ್ರೋಕ್ತವಾದ ಈ ಪರಮೇಶ್ವರನ ಸ್ತುತಿಯನ್ನು ಧ್ಯಾನಾಸಕ್ತನಾಗಿ ಏಕಮನಸ್ಕತೆಯಿಂದ ಧ್ಯಾನಿಸುವನೋ ಅಂತಹ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು, ಸ್ವೋಚಿತವಾದ ಕರ್ಮಗಳಿಂದ ಭಕ್ತಿಯುತರೂ, ಶೋಕರಹಿತರೂ ಆಗಿ ಪರಮಪದವಿಯಾದ ರುದ್ರದೇವನ ಸಾಲೋಕ್ಯವನ್ನು ಹೊಂದುವರು.

**ಲಭತೇ ರುದ್ರಸಾಲೋಕ್ಯಂ ಭಕ್ತಿಮಾನ್ ವಿಗತಜ್ವರಃ ॥ ೩೫೩ ॥**

**ಅಭೂತಸಂಪ್ಲವಸ್ಥಾಯೀ ಹ್ಯಪ್ರತೀಘಾತಲಕ್ಷಣಃ ।**
**ಗಾಣಪತ್ಯಂ ಸ ಲಭತೇ ಸ್ಥಾನಂ ವಾ ಸರ್ವಕಾಮಿಕಂ ॥ ೩೫೪ ॥**

**ಮದ್ಯಪೋ ಮದ್ಯಪೈಃ ಸಾರ್ದ್ಧಂ ಭೂತಸಂಘೈಶ್ಚ ಮೋದತೇ ।**
**ಸೋಽರ್ಚ್ಯಮಾನೋ ಮಹೀಪೃಷ್ಠೇ ಮರ್ತ್ಯಾನಾಂ ವರದೋ ಭವೇತ್ ॥**
**ಇತಿ ಹೋವಾಚ ಭಗವಾನ್ ವಾಯುರ್ವಾಕ್ಯಮಿದಂ ವರಃ ॥ ೩೫೫ ॥**

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ ಅನುಷಂಗಪಾದೇ**
**"ಶಿವಪುರವರ್ಣನಂ" ನಾಮೈಕೋನಚತ್ವಾರಿಂಶೋಽಧ್ಯಾಯಃ**

---

೫೩. ಶೂದ್ರನು ಆಪದ್ಗತನಾದರೂ ಭಕ್ತಿಯುತನೂ, ಜಿತೇಂದ್ರನೂ ಆದರೆ ಸಾಲೋಕ್ಯರೂಪವಾದ ಪರಮಪದವಿಯನ್ನು ಹೊಂದುವನು.

೩೫೪. ಅಂತಹ ಮಹಾತ್ಮರು ಪ್ರಲಯಕಾಲದವರೆಗೂ ಸ್ಥಿರವಾಗಿಯೂ, ಪ್ರತಿಬಂಧಕವಿಲ್ಲದವರಾಗಿಯೂ, ಇದ್ದುಕೊಂಡು ಭೂತಗಣಗಳ ಆಧಿಪತ್ಯವನ್ನಾಗಲಿ, ಸಾಲೋಕ್ಯರೂಪವಾದ ಪರಮಪದವಿಯನ್ನಾಗಲಿ ಹೊಂದಿ, ಸರ್ವಕಾಮಗಳನ್ನೂ ಪಡೆಯುವರು.

೩೫೫. ಇಂತಹ ಪುರುಷನು ಮದ್ಯಪಾಯಿಯಾಗಿದ್ದರೆ ಮದ್ಯಪಾಯಿಗಳೊಡನೆಯೂ, ಭೂತಗಳು ಭೂತಗಳೊಡನೆಯೂ ಸೇರಿ ನಿತ್ಯಸುಖವನ್ನು ಪಡೆಯುವರು. ಹೀಗೆ ಭಕ್ತರಿಂದ ಪೂಜಿತನಾದ ಪರಮೇಶ್ವರನು ಪೂಜಿತನಾದರೆ ಭೂಮಂಡಲದಲ್ಲಿ ಸಕಲವಾದ ವರಗಳನ್ನೂ ಕೊಡುವನು. ಅದರಿಂದ ಸಕಲವಾದ ಇಷ್ಟಾರ್ಥಗಳನ್ನೂ ಹೊಂದುವರೆಂದು ಪೂಜ್ಯನಾದ ವಾಯುದೇವನು ವರರೂಪವಾದ ಈ ವಿಷಯಗಳನ್ನು ಮುನಿಗಳಿಗೆ ನಿರೂಪಿಸಿರುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಆನುಷಂಗಿಕಪಾದದಲ್ಲಿ" ಶಿವಪುರ ವರ್ಣನೆಯೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



## ಮೂವತ್ತೊಂಬತ್ತನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಸ್ವರ್ಗಾದಿ ಊರ್ಧ್ವಲೋಕಗಳೂ, ನರಕಲೋಕಗಳೂ, ಶಿವಪುರಿಯೂ ವರ್ಣಿತವಾಗಿವೆ. ಅವುಗಳಲ್ಲಿ ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕವೆಂಬ ಸಪ್ತಲೋಕಗಳು ಮೇಲ್ಭಾಗದಲ್ಲಿವೆ. ಇವುಗಳಲ್ಲಿ ಮುಕ್ತಿಗೆ ಯೋಗ್ಯರಾದ ದೇವಋಷ್ಯಾದಿಗಳು ವಾಸಮಾಡುವರು. ಮೊದಲನೆಯ ನಾಲ್ಕು ಲೋಕಗಳು ಮನುಪ್ರಳಯದಲ್ಲಿ ನಷ್ಟವಾದರೆ ಅಲ್ಲಿರುವ ದೇವಾದಿಗಳು ಕ್ರಮವಾಗಿ ಜನಲೋಕಾದಿಗಳಿಗೆ ಹೋಗುವರು. ಭೂಮಿಗೆ ಕೆಳಭಾಗದಲ್ಲಿ ನರಕಾದಿಗಳು ಇರುವುವು. ಅವು ಯಾವುವೆಂದರೆ ರೌರವ, ರೋಧ, ಸೂಕರ, ಕಾಲ, ತಪ್ತಕುಂಭ, ಮಹಾಜ್ವಾಲ, ಶಬಲ, ವಿಮೋಚನ, ಕೃಮಿ, ಕೃಮಿಭಕ್ಷ, ಲಾಲಾಭಕ್ಷ, ಪಿಶಂಸನ, ಅಸಿಪತ್ರವನ ಇವೇ ಮೊದಲಾದವು ಅನೇಕ ನರಕಗಳಿವೆ. ಪ್ರಾಣಿಗಳು ತಮ್ಮ ತಮ್ಮ ಅಧರ್ಮಾನುಗುಣವಾಗಿ ಆಯಾ ನರಕಗಳಲ್ಲಿ ದುಃಖವನ್ನು ಅನುಭವಿಸುವರು. ಶಿವಪುರಿಯು ಅನೇಕ ಯೋಜನ ವಿಸ್ತಾರವಾಗಿಯೂ, ಸುವರ್ಣಮಯವಾದ ಗೋಪುರಾದಿಗಳಿಂದ ಅಲಂಕೃತವಾಗಿಯೂ, ಅನೇಕ ಶಿಖರಗಳಿಂದ ರಂಜಿತವಾಗಿಯೂ, ನಾನಾವಿಧೋಪವನಗಳಿಂದ ಅಲಂಕೃತವಾಗಿಯೂ, ಜನನಮರಣಾದಿ ದೋಷರಹಿತವಾಗಿಯೂ, ಅನೇಕವಾದ ಉಪ್ಪರಿಗೆಗಳಿಂದ ಮಂಡಿತವಾಗಿಯೂ, ಮನೋಹರವಾಗಿಯೂ ಇರುವುದು. ಆ ಶಿವನಗರಿಯಲ್ಲಿ ಅನೇಕ ದಿವ್ಯನದಿಗಳು ಹರಿಯುತ್ತವೆ. ಆ ಪುರದಲ್ಲಿ ಸಾಕ್ಷಾತ್ ಈಶ್ವರನು ಅನೇಕ ವಿಧವಾದ ತನ್ನ ವಿಭೂತಿರೂಪಗಳಿಂದಲೂ, ಪಾರ್ವತ್ಯಾದಿ ಅನೇಕ ಮಹರ್ಷಿಗಳಿಂದಲೂ ಕೂಡಿ ನಿತ್ಯತೃಪ್ತನಾಗಿರುವನು. ಅಲ್ಲಿ ಅಸಂಖ್ಯಾತವಾದ ರುದ್ರಗಣಗಳಿವೆ. ಭಗವಂತನಾದ ಪರಮಶಿವನ ಅನುಗ್ರಹದಿಂದ ಅಸಂಖ್ಯಾತರಾದ ದೇವರ್ಷಿಷ್ಯಾದಿಗಳು ಶಾಶ್ವತವೂ, ದೋಷರಹಿತವೂ, ಸಾಲೋಕ್ಯರೂಪವೂ ಆದ ಪರಮಪದವಿಯನ್ನು ಹೊಂದುವರು. ಎಂಬ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.



—|| ಹರಿಃ ಓಂ ||—

—|| ಶ್ರೀ ವೇದವ್ಯಾಸಾಯ ನಮಃ ||—

# ಶ್ರೀಮದ್ವಾಯುಮಹಾಪುರಾಣಂ

## ಚತ್ವಾರಿಂಶೋಽಧ್ಯಾಯಃ

**|| ಸೂತ ಉವಾಚ ||**

**ಪ್ರತ್ಯಾಹಾರಂ ಪ್ರವಕ್ಷ್ಯಾಮಿ ಪರಸ್ಯಾಂತೇ ಸ್ವಯಂಭುವಃ |**
**ಬ್ರಹ್ಮಣಃ ಸ್ಥಿತಿಕಾಲೇ ತು ಕ್ಷೀಣೇ ತಸ್ಮಿಂಸ್ತದಾ ಪ್ರಭೋಃ || ೧ ||**

**ಯಥೇದಂ ಕುರುತೇಧ್ಯಾತ್ಮಂ ಸುಸೂಕ್ಷ್ಮಂ ವಿಶ್ವಮೀಶ್ವರಃ |**
**ಅವ್ಯಕ್ತಂ ಗ್ರಸತೇ ವ್ಯಕ್ತಂ ಪ್ರತ್ಯಾಹಾರೇ ಚ ಕೃತ್ಸ್ನಶಃ || ೨ ||**

**ಪರಂ ತದನುಕಲ್ಪಾನಾಮಪೂರ್ಣೇ ಕಲ್ಪಸಂಕ್ಷಯೇ |**
**ಉಪಸ್ಥಿತೇ ಮಹಾಘೋರೇ ಹ್ಯಪ್ರತ್ಯಕ್ಷೇ ತು ಕಸ್ಯಚಿತ್ || ೩ ||**

## ನಲವತ್ತನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :— ಪರಮಪುರುಷನೂ, ಪ್ರಭುವೂ, ಸ್ವಯಂಭುವನೂ, ಆದ ಬ್ರಹ್ಮದೇವನ ಸ್ಥಿತಿಕಾಲವಾದ ಹಗಲು ಮುಗಿದು, ನಿದ್ರಾಕಾಲವಾದ ಲಯವು ಬರಲಾಗಿ ಸಂಹಾರವನ್ನು ವರ್ಣಿಸುವೆನು ಕೇಳಿರೆಂದನು.

೨. ಸ್ವಾಮಿಯಾದ ಭಗವಂತನು ಸೃಷ್ಟಿಕಾಲದಲ್ಲಿ ಹೇಗೆ ಆತ್ಮಸಂಬಂಧವೂ, ಸೂಕ್ಷ್ಮವೂ, ಆದ ಈ ಜಗತ್ತನ್ನು ಸೃಷ್ಟಿಮಾಡುತ್ತಾನೆಯೋ, ಹಾಗೆಯೇ ಪ್ರಲಯಕಾಲದಲ್ಲಿ ಅವ್ಯಕ್ತವಾದ ಪ್ರಕೃತಿಯಿಂದ ವ್ಯಕ್ತವಾದ ಜಗತ್ತನ್ನು ಸಂಹರಿಸುವನು. ಜಗತ್ತೆಲ್ಲವೂ, ಕ್ರಮವಾಗಿ ಅವ್ಯಕ್ತತತ್ವದಲ್ಲಿ ಲಯವಾಗುವುದು.

೩. ಅನಂತರ ಕಲ್ಪಗಳು ಸಂಪೂರ್ಣವಾಗದೆ ಯಾರಿಗೂ ಗೋಚರವಾಗದ ಘೋರವಾದ ಪ್ರಲಯಕಾಲವು ಬರಲಾಗಿ ಸಂಹಾರವನ್ನು ತಿಳಿಸುವೆನು ಕೇಳಿರೆಂದನು.

ಅಂತೇ ದ್ರುಮಸ್ಯ ಸಂಪ್ರಾಪ್ತೇ ಪಶ್ಚಿಮಸ್ಯ ಮನೋಸ್ತದಾ ।
ಅಂತೇ ಕಲಿಯುಗೇ ತಸ್ಮಿನ್ ಕ್ಷೀಣೇ ಸಂಹಾರ ಉಚ್ಯತೇ ॥ ೪ ॥

ಸಂಪ್ರಕ್ಷಾಲೇ ತದಾ ವೃತ್ತೇ ಪ್ರತ್ಯಾಹಾರೇ ಹ್ಯುಪಸ್ಥಿತೇ ।
ಪ್ರತ್ಯಾಹಾರೇ ತದಾ ತಸ್ಮಿನ್ ಭೂತತನ್ಮಾತ್ರಸಂಕ್ಷಯೇ ॥ ೫ ॥

ಮಹದಾದೇರ್ವಿಕಾರಸ್ಯ ವಿಶೇಷಾಂತಸ್ಯ ಸಂಕ್ಷಯೇ ।
ಸ್ವಭಾವಕಾರಿತೇ ತಸ್ಮಿನ್ ಪ್ರವೃತ್ತೇ ಪ್ರತಿಸಂಚರೇ ॥ ೬ ॥

ಆಪೋ ಗ್ರಸಂತಿ ವೈ ಪೂರ್ವಂ ಭೂಮೇರ್ಗಂಧಾತ್ಮಕಂ ಗುಣಂ ।
ಆತ್ತಗಂಧಾ ತತೋ ಭೂಮಿಃ ಪ್ರಲಯತ್ವಾಯ ಕಲ್ಪತೇ ॥
ಪ್ರವಿಷ್ಟೇ ಗಂಧತನ್ಮಾತ್ರೇ ತೋಯಾವಸ್ಥಾ ಧರಾ ಭವೇತ್ ॥ ೭ ॥

---

೪. ಆಗ ದ್ರುಮನಾಮಕನಾದ ಅಂತಿಮಮನುವಿನ ಆಡಳಿತ ಕಾಲವು ಮುಗಿದರೆ ಕಲಿಯುಗವು ಸಂಭವಿಸುವುದು. ಆ ಕಲಿಯುಗವೂ ಕೂಡ ಕಳೆದ ಮೇಲೆ ಸಂಹಾರದ ವಿಷಯಗಳನ್ನು ವರ್ಣಿಸುವೆನೆಂದನು.

೫. ಸಂಹಾರಕಾಲವು ಒದಗಿ ಪ್ರಲಯಕಾಲವು ಪ್ರಾರಂಭವಾಗಲು ಚರಾಚರಾತ್ಮಕವಾದ ಜಗತ್ತೆಲ್ಲವೂ ಪಂಚಭೂತಗಳಲ್ಲಿ ಲಯವಾಗುವುದು. ಆ ಭೂತಗಳು ತನ್ಮಾತ್ರೆಗಳಲ್ಲಿ ಲಯವಾಗುವುವು.

೬. ಆ ತನ್ಮಾತ್ರೆಗಳು ಮಹತ್ತತ್ವದಲ್ಲಿಯೂ, ಅದೂ ಸಹ ಪ್ರಕೃತಿಯಲ್ಲಿಯೂ ಲೀನವಾಗುವುವು. ಹೀಗೆ ಮಹದಾದಿಯಾಗಿ ವಿಶೇಷಪರ್ಯಂತವಾಗಿ ಲಯವು ಸಂಭವಿಸಲು ಕ್ರಮವಾಗಿಯೂ, ಸ್ವಾಭಾವಿಕವಾಗಿಯೂ ಆಯಾ ತತ್ವಗಳು ತಮ್ಮ ತಮ್ಮ ಕಾರಣಗಳಲ್ಲಿ ಲೀನವಾಗುವುವು.

೭. ಅದು ಹೇಗೆಂದರೆ ಪ್ರಲಯಕಾಲದಲ್ಲಿ ಮೊದಲು ಜಲವು ಪೃಥಿವೀಗತವಾದ ಗಂಧರೂಪವಾದ ಗುಣವನ್ನು ಗ್ರಾಸಮಾಡುವುದು. ಗಂಧಗುಣದಿಂದ ರಹಿತವಾದ ಭೂಮಿಯು ಪ್ರಲಯಕ್ಕೆ ಸಿದ್ಧವಾಗುವುದು. ಹೀಗೆ ಭೂಮಿಯು ಲಯವಾಗಿ ಗಂಧತನ್ಮಾತ್ರೆಯು ಜಲವನ್ನು ಪ್ರವೇಶಿಸಲು (ಜಗತ್ತೆಲ್ಲವೂ) ಭೂಮಿಯು ಜಲಮಯವಾಗುವುದು.

ಆಪಸ್ತದಾ ಪ್ರನಷ್ಟಾ ವೈ ವೇಗವತ್ಯೋ ಮಹಾಸ್ವನಾಃ ।
ಸರ್ವಮಾಪೂರಯಿತ್ವೇದಂ ತಿಷ್ಠಂತಿ ವಿಚರಂತಿ ಚ ॥ ೮ ॥

ಅಪಾಮಪಿ ಗುಣೋ ಯಸ್ತು ಜ್ಯೋತಿಷೇ ಲೀಯತೇ ರಸಃ ।
ನಶ್ಯಂತ್ಯಾಪಸ್ತದಾಂತೇ ಚ ರಸತನ್ಮಾತ್ರ ಸಂಕ್ಷಯಾತ್ ॥ ೯ ॥

ತೇಜಸಾ ಸಂಹೃತರಸಾ ಜ್ಯೋತಿಷ್ಟ್ವಂ ಪ್ರಾಪ್ನುವಂತ್ಯುತ ।
ಗ್ರಸ್ತೇ ಚ ಸಲಿಲೇ ತೇಜಃ ಸರ್ವತೋಮುಖಮಿಕ್ಷ್ಯತೇ ॥ ೧೦ ॥

ಅಥಾಗ್ನಿಃ ಸರ್ವತೋ ವ್ಯಾಪ್ತ ಆದತ್ತೇ ತಜ್ಜಲಂ ತದಾ ।
ಸರ್ವಮಾಪೂರ್ಯತೇಽರ್ಚಿರ್ಭಿಸ್ತದಾ ಜಗದಿದಂ ಶನೈಃ ॥ ೧೧ ॥

೮. ಹೀಗೆ ಭೂಮಿಯು ಲಯವಾಗಲು ಜಲವು ಅತಿವೇಗವಾಗಿ ಹರಿದು ಪೃಥಿವಿಯೆಲ್ಲಾ ಜಲಮಯವಾಗುವುದು. ಆ ಜಲವು ತುಂಬಿ ತುಳಿಕಿ ಎಲ್ಲೆಲ್ಲಿಯೂ ಅತಿ ವೇಗವಾಗಿ ಹರಿಯುವುದು.

೯. ಅಂತಹ ಜಲದಲ್ಲಿರುವ ರಸಾತ್ಮಕವಾದ ಗುಣವು ತೇಜೋಮಯವಾದ ಅಗ್ನಿಯಲ್ಲಿ ಲಯವಾಗುವುದು. ಆ ರಸತನ್ಮಾತ್ರೆಯು ಲಯವಾಗಲು ಆ ಜಲವು ಅಗ್ನಿಯಲ್ಲಿ ನಷ್ಟವಾಗುವುದು.

೧೦. ಹೀಗೆ ಅಗ್ನಿಯು, ಜಲತನ್ಮಾತ್ರೆಯನ್ನೂ ಗುಣವಾದ ರಸವನ್ನೂ ದಹಿಸಲಾಗಿ ಎಲ್ಲವೂ ನಷ್ಟವಾಗಿ ರಸವೂ ಕೂಡ ಅಗ್ನಿಯಲ್ಲ ಲಯವಾಗುವುದು. ತರುವಾಯ ಘೋರರೂಪವಾದ ಪ್ರಲಯಕಾಲದ ಅಗ್ನಿಯು ಜಾಜ್ವಲ್ಯಮಾನವಾಗಿ ಜಗತ್ತನ್ನೆಲ್ಲಾ ವ್ಯಾಪಿಸುವುದು.

೧೧. ತರುವಾಯ ಅಗ್ನಿಜ್ವಾಲೆಯು ವಿಶ್ವವನ್ನೇ ವ್ಯಾಪಿಸಲಾಗಿ ಜಲವೆಲ್ಲವೂ ಶೋಷ್ಯವಾಗುವುದು. ಹೀಗೆ ಅಗ್ನಿಯು ಜಲವೆಲ್ಲವನ್ನೂ ಪಾನಮಾಡಲು ಅಗ್ನಿ ಜ್ವಾಲೆಗಳು ಭೂಮಂಡಲವನ್ನೇ ವ್ಯಾಪಿಸಿ ಪ್ರಕಾಶಿಸುವುದು.

ಅರ್ಚಿಭಿಃ ಸಂತತೇ ತಸ್ಮಿಂ ಸ್ತಿರ್ಯಗೂರ್ಧ್ವಮಧಸ್ತತಃ ।
ಜ್ಯೋತಿಷೋಽಪಿ ಗುಣಂ ರೂಪಂ ವಾಯುರಂತಿ ಪ್ರಕಾಶಕಂ ॥
ಪ್ರಲೀಯತೇ ತದಾ ತಸ್ಮಿನ್ ದೀಪಾರ್ಚಿರಿವ ಮಾರುತೇ ॥ ೧೨ ॥

ಪ್ರನಷ್ಟೇ ರೂಪತನ್ಮಾತ್ರೇ ಹೃತರೂಪೋ ವಿಭಾವಸುಃ ।
ಉಪಶಾಮ್ಯತಿ ತೇಜೋ ಹಿ ವಾಯುನಾ ಧೂಯತೇ ಮಹತ್ ॥ ೧೩ ॥

ನಿರಾಲೋಕೇ ತದಾ ಲೋಕೇ ವಾಯುಭೂತೇ ಚ ತೇಜಸಿ ।
ತತಸ್ತು ಮೂಲಮಾಸಾದ್ಯ ವಾಯುಃ ಸಂಭವಮಾತ್ಮನಃ ॥ ೧೪ ॥

ಊರ್ಧ್ವಂ ಚಾಧಶ್ಚ ತಿರ್ಯಕ್ಚ ದೋಧವೀತಿ ದಿಶೋ ದಶ ।
ವಾಯೋರಪಿ ಗುಣಂ ಸ್ಪರ್ಶಮಾಕಾಶಂ ಗ್ರಸತೇ ಚ ತತ್ ॥ ೧೫ ॥

೧೨. ತರುವಾಯ ಅಗ್ನಿ ಜ್ವಾಲೆಗಳು ಸರ್ವತ್ರ ವ್ಯಾಪ್ತವಾಗಿರಲು ಇಂತಹ ತೇಜಸ್ಸಿನ ಗುಣವಾದ ರೂಪವನ್ನು ವಾಯುವು ಅಪಹರಿಸುವುದು. ಬಿರುಗಾಳಿಯಿಂದ ದೀಪವು ಆರಿಹೋಗುವಂತೆ ಪ್ರಲಯಾಗ್ನಿಯ ಜ್ವಾಲೆಗಳು ಪ್ರಲಯವಾಯುವಿನಿಂದ ಶಾಂತವಾಗುವುದು.

೧೩. ಹೀಗೆ ರೂಪತನ್ಮಾತ್ರೆಯು ನಾಶವಾಗಲು ರೂಪರಹಿತವಾದ ಅಗ್ನಿಯು ಶಾಂತವಾಗುವುದು. ಅಗ್ನಿಯು ಈ ರೀತಿಯಾಗಿ ಶಾಂತವಾಗಲು ಪ್ರಲಯ ವಾಯುವಿನಿಂದ ಜಗತ್ತೇ ಕಂಪಿತವಾಗುವುದು.

೧೪. ಹೀಗೆ ಅಗ್ನಿಯು ನಷ್ಟವಾಗಲು ತದ್ಗತವಾದ ರೂಪವು ನಷ್ಟವಾಗಿ ಲೋಕವೆಲ್ಲವೂ ನಿರಾಲೋಕವಾಗಿ ವಾಯುವಿನಿಂದ ವ್ಯಾಪ್ತವಾಗುವುದು. ಹೀಗೆ ಕಾರ್ಯಗಳು ತಮ್ಮ ತಮ್ಮ ಮೂಲಕಾರಣಗಳಲ್ಲಿ ಲಯವಾಗುವುದು ಸಹಜವಾಗಿಯೇ ಇರುತ್ತದೆಯಲ್ಲವೆ?

೧೫. ಅಂತಹ ವಾಯುಗುಣವು, ಮೇಗೂ ಕೆಳಗೂ ಸುತ್ತಲೂ ಇರುವ ದಶ ದಿಕ್ಕುಗಳನ್ನೂ ವ್ಯಾಪಿಸಿಕೊಳ್ಳುವುದು. ಇಂತಹ ವ್ಯಾಪ್ತವಾದ ಸ್ಪರ್ಶಗುಣವನ್ನು ಆಕಾಶವು ಗ್ರಾಸಮಾಡುವುದು. ಹೀಗೆ ಸ್ಪರ್ಶತನ್ಮಾತ್ರೆಯು ಲಯವಾಗಲು ವಾಯುವು ನಾಮಾವಶೇಷವಾಗುವುದು.

ಪ್ರಶಾಮ್ಯತಿ ತದಾ ವಾಯುಃ ಖಂ ತು ತಿಷ್ಠತ್ಯನಾವೃತಂ ।
ಅರೂಪಮರಸಸ್ಪರ್ಶಮಗಂಧಂ ನ ಚ ಮೂರ್ತಿಮತ್ ॥ ೧೬ ॥

ಸರ್ವಮಾಪೂರಯನ್ನಾದ್ಯೈಃ ಸುಮಹತ್ತತ್ಪ್ರಕಾಶತೇ ।
ಪರಿಮಂಡಲಂ ತತ್ಸುಷಿರಮಾಕಾಶಂ ಶಬ್ದಲಕ್ಷಣಂ ॥ ೧೭ ॥

ಶಬ್ದಮಾತ್ರಂ ತದಾಕಾಶಂ ಸರ್ವಮಾವೃತ್ಯ ತಿಷ್ಠತಿ ।
ತಂತು ಶಬ್ದಗುಣಂ ತಸ್ಯ ಭೂತಾದಿಂ ಗ್ರಸತೇ ಪುನಃ ॥ ೧೮ ॥

ಭೂತೇಂದ್ರಿಯೇಷು ಯುಗಪದ್ಭೂತಾದೌ ಸಂಸ್ಥಿತೇಷು ವೈ ।
ಅಭಿಮಾನಾತ್ಮಕೋ ಹ್ಯೇಷ ಭೂತಾದಿಸ್ತಾಮಸಃ ಸ್ಮೃತಃ ॥ ೧೯ ॥

ಭೂತಾದಿಂ ಗ್ರಸತೇ ಚಾಪಿ ಮಹಾನ್ವೈ ಬುದ್ಧಿಲಕ್ಷಣಃ ।
ಮಹಾತ್ಮನಾ ತು ವಿಜ್ಞೇಯಃ ಸಂಕಲ್ಪೋ ವ್ಯವಸಾಯಕಃ ॥ ೨೦ ॥

---

೧೬. ಹೀಗೆ ವಾಯುವು ಶಾಂತವಾಗಲು ಆಕಾಶವು ಅನಾವೃತವಾಗಿ ಸರ್ವತ್ರ ನಿಲ್ಲುವುದು. ಆ ವಾಯುಗುಣವು, ರೂಪರಹಿತವೂ, ಸ್ಪರ್ಶಶೂನ್ಯವೂ, ಗಂಧವರ್ಜಿತವೂ ಮೂರ್ತಿಯಿಲ್ಲದದೂ, ನಾದಮಾತ್ರವಿಶಿಷ್ಟವೂ, ಆಗುವುದು.

೧೭. ಇಂತಹ ಆಕಾಶವು ಸ್ವಗುಣವಾದ ಶಬ್ದಮಾತ್ರದಿಂದ ಲೋಕವನ್ನೇ ಆವರಿಸಿ ಕೇವಲ ಸುಷಿರರೂಪವೂ, ಮಂಡಲಾಕಾರವೂ, ಶಬ್ದಲಕ್ಷಣವೂ, ಆಗುವುದು ಅಂತಹ ಆಕಾಶಮಾತ್ರವೇ ಈ ಜಗತ್ತಿನಲ್ಲಿ ಉಳಿಯುವುದು.

೧೮. ಶಬ್ದವೇ ಗುಣವಾಗಿವುಳ್ಳ ಆಕಾಶವು ಭೂಮಂಡಲವನ್ನೇ ಆಕ್ರಮಿಸಿಕೊಂಡು ಇರುತ್ತದೆ. ಅಂತಹ ಶಬ್ದಗುಣವುಳ್ಳ ಆಕಾಶವನ್ನು ಭೂತಾದಿಗಳು ನುಂಗುವುವು. ಭೂತಾದಿಗಳು ತನ್ಮಾತ್ರಗಳಲ್ಲಿ ಲಯವಾಗುವುವು.

೧೯. ಅಂತಹ ಪಂಚಭೂತಾದಿಗಳನ್ನು ಮನಸ್ತತ್ವವು ಗ್ರಾಸಮಾಡುವುದು. ಅಂತಹ ಭೂತಾದಿಗ್ರಾಸಕವಾದ ತತ್ವವು ತಾಮಸಾಹಂಕಾರತತ್ವವಾಗಿರುವುದು.

೨೦. ಅಂತಹ ಭೂತಾದಿಗ್ರಾಸಕವಾದ ತಾಮಸಾಹಂಕಾರತತ್ವವು ಬುದ್ಧಿಲಕ್ಷಣವಾದ ಮಹತ್ತತ್ವದಲ್ಲಿ ಲಯವಾಗುವುದು. ಆ ಮಹತ್ತತ್ವವು ಸಂಕಲ್ಪಾತ್ಮಕವೂ, ವ್ಯವಸಾಯಾತ್ಮಕವೂ ಆಗಿರುತ್ತದೆ

**ಬುದ್ಧಿರ್ಮನಶ್ಚ ಲಿಂಗಶ್ಚ ಮಹಾನಕ್ಷರ ಏವ ಚ ।**
**ಪರ್ಯಾಯವಾಚಕೈಃ ಶಬ್ದೈಸ್ತಮಾಹುಸ್ತತ್ತ್ವಚಿಂತಕಾಃ ॥ ೨೧ ॥**

**ಸಂಪ್ರಲೀನೇಷು ಭೂತೇಷು ಗುಣಸಾಮ್ಯೇ ತಲೋಮಯೇ ।**
**ಸ್ವಾತ್ಮನ್ಯೇವ ಸ್ಥಿತೇ ಚೈವ ಕಾರಣೇ ಲೋಕಕಾರಣೇ ॥ ೨೨ ॥**

**ವಿನಿವೃತ್ತೇ ತದಾ ಸರ್ಗೇ ಪ್ರಕೃತ್ಯಾವಸ್ಥಿತೇನ ವೈ ।**
**ತದಾದ್ಯಂತಪರೋಕ್ಷತ್ವಾದದೃಷ್ಟತ್ವಾಚ್ಚ ಕಸ್ಯಚಿತ್ ॥ ೨೩ ॥**

**ಅನಾಖ್ಯಾನಾದಬೋಧತ್ವಾದಜ್ಞಾನಾಜ್ಞಾನಿನಾಮಪಿ ।**
**ಆಗತಾಗತಿಕತ್ವಾಚ್ಚ ಗ್ರಹಣಂ ತನ್ನ ವಿದ್ಯತೇ ॥ ೨೪ ॥**

---

೨೧. ತತ್ವಜ್ಞಾನಿಗಳಾದ ಮಹಾತ್ಮರು ಈ ಮಹತತ್ವವನ್ನು ಬುದ್ಧಿ, ಮನಸ್ಸು, ಲಿಂಗ, ಮಹಾನ್, ಅಕ್ಷರ, ಇವೇ ಮೊದಲಾದ ಪರ್ಯಾಯವಾದ ನಾಮಗಳಿಂದ ವ್ಯವಹಾರ ಮಾಡುತ್ತಾರೆ.

೨೨. ಹೀಗೆ ಭೂತಾದಿಗಳು ತಮೋಮಯವಾದ ಅಹಂಕಾರ ತತ್ವದಲ್ಲಿಯೂ ಆ ಅಹಂಕಾರತತ್ವವು ಮಹತ್ತತ್ವದಲ್ಲಿಯೂ, ಲೀನವಾಗಿರುವುದು. ಅಂತಹ ಮಹತ್ತತ್ವವು, ಲೋಕಕಾರಣವೂ, ಗುಣತ್ರಯ ಸ್ವರೂಪವೂ ಆದ ಪ್ರಕೃತಿಯಲ್ಲಿ ಲಯವಾಗುವುದೆಂದು ಜ್ಞಾನಿಗಳು ಹೇಳುವರು.

೨೩. ತರುವಾಯ ಸೃಷ್ಟಿಕ್ರಮವು ನಿಂತುಹೋಗಿ ಕೇವಲ ಪ್ರಕೃತಿ ಮಾತ್ರವೇ ಉಳಿಯುವುದು. ಅದು ಅನಾದ್ಯಂತವಾಗಿಯೂ, ಪರೋಕ್ಷವಾಗಿಯೂ, ಯಾರ ದೃಷ್ಟಿಗೂ ಅಗೋಚರವಾಗಿಯೂ, ಇರುವುದು.

೨೪. ಅದು ನಾಮರಹಿತವಾಗಿಯೂ, ಮನಸ್ಸಿಗೆ ಅಗೋಚರವಾಗಿಯೂ, ಮಹಾತ್ಮರ ಜ್ಞಾನಕ್ಕೆ ಅವಿಷಯವಾಗಿಯೂ, ಗಮನಾಗಮನರಹಿತವಾಗಿಯೂ, ಇರುತ್ತದೆ. ಆದುದರಿಂದ ಯಾರಿಂದಲೂ ತಿಳಿಯಲಶಕ್ಯವಾಗಿದೆ.

ಭಾವಗ್ರಾಹ್ಯಾನುಮಾನಾಚ್ಚ ಚಿಂತಯಿತ್ವೇದಮುಚ್ಯತೇ ।
ಸ್ಥಿತೇ ತು ಕಾರಣೇ ತಸ್ಮಿನ್ ನಿತ್ಯೇ ಸದಸದಾತ್ಮಿಕೇ ॥ ೨೫ ॥

ಅನಿರ್ದೇಶ್ಯಾ ಪ್ರವೃತ್ತಿರ್ವೈ ಸ್ವಾತ್ಮಿಕಾ ಕಾರಣೇನ ತು ।
ಏವಂ ಸಪ್ತಾದಯೋಭ್ಯಸ್ತಾತ್ಕ್ರಮಾತ್ಪ್ರಕೃತಯಸ್ತು ವೈ ॥ ೨೬ ॥

ಪ್ರತ್ಯಾಹಾರೇ ತದಾ ಸರ್ಗೇ ಪ್ರವಿಶ್ಯಂತಿ ಪರಸ್ಪರಂ ।
ಯೇನೇದಮಾವೃತಂ ಸರ್ವಂ ಮಂಡಲಂ ತು ಪ್ರಲೀಯತೇ ॥ ೨೭ ॥

ಸಪ್ತದ್ವೀಪಸಮುದ್ರಾಂ ತು ಸಪ್ತಲೋಕಂ ಸಪರ್ವತಂ ।
ಉದಕಾವರಣಂ ಯಚ್ಚ ಜ್ಯೋತಿಷಾಂ ಲೀಯತೇ ತು ತತ್ ॥ ೨೮ ॥

ಯತ್ತೈಜಸಂ ಚಾವರಣಮಾಕಾಶಂ ಗ್ರಸತೇ ತು ತತ್ ।
ಯದ್ವಾಯವ್ಯಂ ಚಾವರಣಮಾಕಾಶಂ ಗ್ರಸತೇ ತು ತತ್ ॥ ೨೯ ॥

---

೨೫. ಅದು ಕೇವಲ ಮನನಕ್ಕೂ, ಊಹೆಗೂ ವಿಷಯವಾಗಿರುವುದರಿಂದ ಯೋಚಿಸಿ, ಇಷ್ಟನ್ನು ಮಾತ್ರ ಹೇಳಬಹುದು. ಅದೇನೆಂದರೆ, ಆ ಪ್ರಕೃತಿಯು, ಜಗತ್ಕಾರಣವೂ, ನಿತ್ಯವೂ, ಸದಸದ್ರೂಪವೂ ಆಗಿರುವುದು.

೨೬. ಆದುದರಿಂದ ಅನಿರ್ದೇಶ್ಯವಾಗಿಯೂ, ಸ್ವರೂಪಭೂತವಾಗಿಯೂ, ಸ್ವತಂತ್ರವಾಗಿಯೂ, ಇರುವ ಕಾರಣದಿಂದಲೂ, ಪ್ರವೃತ್ತಿಯುಂಟಾಗುವುದು. ಹೀಗೆ ಮೇಲೆ ಹೇಳಿದ ಪಂಚಭೂತಗಳೂ, ಮಹತ್ತತ್ವಾಹಂಕಾರತತ್ವಗಳೂ ಎಂಬ ಈ ಏಳೂ ಪ್ರಕೃತಿಯಲ್ಲಿ ಲಯವಾಗುವುದು. ಅದೂ ಸಹ ಭಗವಂತನಲ್ಲಿ ಲಯವಾಗುವುದು.

೨೭. ಹೀಗೆ ಈ ಏಳು ತತ್ವಗಳೂ ಸೃಷ್ಟಿಕಾಲದಲ್ಲಿಯೂ, ಲಯಕಾಲದಲ್ಲಿಯೂ, ಪರಸ್ಪರಾಶ್ರಿತವಾಗಿಯೂ, ಅವ್ಯಕ್ತವಾಗಿಯೂ, ಇರುತ್ತವೆ. ಈ ತತ್ವಮಂಡಲವೂ ಸಹ ಶ್ರೀಭಗವಂತನಲ್ಲಿ ಲಯವಾಗುವುದು.

೨೮. ಸಪ್ತದ್ವೀಪಗಳೂ, ಸಪ್ತಸಮುದ್ರಗಳೂ, ಸಪ್ತಲೋಕಗಳೂ ಮತ್ತು ಪರ್ವತಗಳೂ ಇವುಗಳಿಂದ ಕೂಡಿದ ಭೂಮಂಡಲವೆಲ್ಲವೂ, ಉದಕಾವೃತವಾಗುವುದು. ಅಂತಹ ಜಲವು ತೇಜೋಮಂಡಲದಲ್ಲಿ ಲಯವಾಗುವುದು.

೨೯. ಆವರಣ ಸಹಿತವಾದ ಆ ತೇಜಸ್ಸನ್ನು ಆಕಾಶವು ಗ್ರಾಸಮಾಡುವುದು ಇಂತಹ ಆವರಣಸಹಿತವಾದ ಆಕಾಶವನ್ನು ವಾಯ್ವಾವರಣವು ಗ್ರಾಸಮಾಡುವುದು.

ಆಕಾಶಾವರಣಂ ಯಚ್ಚ ಭೂತಾದಿಗ್ರಸತೇ ತು ತತ್ ।
ಭೂತಾದಿಂ ಗ್ರಸತೇ ಚಾಪಿ ಮಹಾನ್ವೈ ಬುದ್ಧಿಲಕ್ಷಣಃ ॥ ೩೦ ॥

ಮಹಾಂತಂ ಗ್ರಸತೇಽವ್ಯಕ್ತಂ ಗುಣಸಾಮ್ಯಂ ತತಃ ಪರಂ ।
ಏತೌ ಸಂಹಾರವಿಸ್ತಾರೌ ಬ್ರಹ್ಮಾವ್ಯಕ್ತೌ ತತಃ ಪುನಃ ॥ ೩೧ ॥

ಸೃಜತೇ ಗ್ರಸತೇ ಚೈವ ವಿಕಾರಾರ್ಥ ಸರ್ಗಸಂಯಮೋ ।
ಸಂಹಾರಕಾರ್ಯಕರಣಾಃ ಸಂಸಿದ್ಧಾ ಜ್ಞಾನಿನಸ್ತು ಯೇ ॥ ೩೨ ॥

ಗತ್ವಾ ಜವಂ ಜವೀಭಾವೇ ಸ್ಥಾನೇಷ್ವೇಷು ಪ್ರಸಂಯಮಾನ್ ।
ಪ್ರತ್ಯಾಹಾರೇ ವಿಯುಜ್ಯಂತೇ ಕ್ಷೇತ್ರಜ್ಞಾಃ ಕರಣೈಃ ಪುನಃ ॥ ೩೩ ॥

---

೩೦. ಆವರಣದಿಂದ ಸಹಿತವಾದ ಆಕಾಶವನ್ನು ಭೂತಾದಿಗಳು ನುಂಗುವುವು. ಅಂತಹ ಭೂತಾದಿಗಳನ್ನು ಬುದ್ಧ್ಯಭಿಮಾನಿಯಾದ, ( ಬುದ್ಧಿಲಕ್ಷಣವಾದ ) ಮಹತ್ತತ್ವವು ಗ್ರಾಸಮಾಡುವುದು.

೩೧. ಅಂತಹ ಮಹತ್ತತ್ವವು, ಸತ್ವರಜಸ್ತಮೋಗುಣಗಳು ಸಾಮ್ಯವಿರುವ ಅವ್ಯಕ್ತತತ್ವವಾದ ಪ್ರಕೃತಿಯಲ್ಲಿ ಲಯವಾಗುವುದು. ಇದೇ ಸಂಹಾರಕ್ರಮವಾಗಿರುತ್ತದೆ. ಹೀಗೆ ಸೃಷ್ಟಿಸಂಹಾರಗಳು ಬ್ರಹ್ಮನಲ್ಲಿ ಸಂಕೋಚವಿಸ್ತಾರಗಳಿಂದ ಪುನಃ ಪುನಃ ನಿರೂಪಿತವಾಗಿರುತ್ತವೆ.

೩೨. ಬ್ರಹ್ಮದೇವನು ಸೃಷ್ಟಿಸಂಹಾರ ಕಾಲಗಳಲ್ಲಿ ಭೂತಾದಿಸೃಷ್ಟಿಯನ್ನೂ, ಸಂಹಾರವನ್ನೂ ಮಾಡುವನು. ಈ ಸರ್ಗಸಂಹಾರಗಳ ಕಾರ್ಯಕಾರಣಗಳು ಜ್ಞಾನಿಗಳಿಗೆ ಮಾತ್ರ ಸಂಪೂರ್ಣವಾಗಿ ವ್ಯಕ್ತವಾಗಿರುತ್ತವೆ.

೩೩. ಕ್ಷೇತ್ರಜ್ಞರಾದ ಮಹಾತ್ಮರು ಹೀಗೆ ಕಾರ್ಯಕಾರಣಗಳನ್ನೂ ತಮ್ಮ ಯೋಗದೃಷ್ಟಿಯಿಂದ ತಿಳಿದು ಆಯಾ ಸಂದರ್ಭಾನುಗುಣವಾಗಿ ಯೋಗ್ಯವಾದ ಸ್ಥಾನಗಳಲ್ಲಿ ಇದ್ದು ಸೃಷ್ಟಿಸಂಹಾರಗಳಿಗೆ ವಿಷಯರಾಗುವರು.

ಅವ್ಯಕ್ತಂ ಕ್ಷೇತ್ರಮಿತ್ಯಾಹುರ್ಬ್ರಹ್ಮ ಕ್ಷೇತ್ರಜ್ಞ ಉಚ್ಯತೇ ।
ಸಾಧರ್ಮ್ಯವೈಧರ್ಮ್ಯಕೃತಸಂಯೋಗೋನಾದಿಮಾಂಸ್ತಯೋಃ ॥ ೩೪ ॥

ಏವಂ ಸರ್ಗೇಷು ವಿಜ್ಞೇಯಂ ಕ್ಷೇತ್ರಜ್ಞೇಷ್ವಿಹ ಬ್ರಾಹ್ಮಣಾಃ ।
ಬ್ರಹ್ಮವಿಚ್ಛೈವ ವಿಜ್ಞೇಯಃ ಕ್ಷೇತ್ರಜ್ಞಾನಾತ್ಪೃಥಕ್ ಪೃಥಕ್ ॥ ೩೫ ॥

ವಿಷಯಾವಿಷಯತ್ವಂ ಚ ಕ್ಷೇತ್ರಕ್ಷೇತ್ರಜ್ಞಯೋಃ ಸ್ಮೃತಂ ।
ಬ್ರಹ್ಮಾ ತು ವಿಷಯೋ ಜ್ಞೇಯೋಽವಿಷಯಃ ಕ್ಷೇತ್ರಮುಚ್ಯತೇ ॥ ೩೬ ॥

ಕ್ಷೇತ್ರಜ್ಞಾಧಿಷ್ಠಿತಂ ಕ್ಷೇತ್ರಂ ಕ್ಷೇತ್ರಜ್ಞಾರ್ಥಂ ಪ್ರಚಕ್ಷತೇ ।
ಬಹುತ್ವಾಚ್ಚ ಶರೀರಾಣಾಂ ಶರೀರೀ ಬಹುಧಾ ಸ್ಮೃತಃ ॥ ೩೭ ॥

---

೩೪. ಜ್ಞಾನಿಗಳು ಅವ್ಯಕ್ತತತ್ವವನ್ನು ಕ್ಷೇತ್ರವೆಂದು ಹೇಳುವರು. ತತ್ಪ್ರೇರಕನಾದ ಬ್ರಹ್ಮನನ್ನು ಕ್ಷೇತ್ರಜ್ಞನೆಂದು ನಿರೂಪಿಸುವರು. ಅಂತಹ ಕ್ಷೇತ್ರಕ್ಷೇತ್ರಜ್ಞರಿಗೆ ಅನಾದಿಯಿಂದಲೂ ಸಾಧರ್ಮ್ಯವೈಧರ್ಮ್ಯಕೃತವಾದ ಸಂಯೋಗವು ಸಹಜವಾಗಿಯೇ ಇರುತ್ತದೆ.

೩೫. ಮಹಾತ್ಮರು ಈ ರೀತಿಯಾಗಿ ಸೃಷ್ಟಿಕ್ರಮಗಳಲ್ಲಿ ಕ್ಷೇತ್ರಕ್ಷೇತ್ರಜ್ಞರನ್ನು ತಿಳಿಯುವರು. ಹೀಗೆ ಮಹಾತ್ಮರು ಪ್ರತಿಯೊಂದು ವ್ಯಕ್ತಿಯಲ್ಲಿಯೂ ಕ್ಷೇತ್ರಜ್ಞನಾದ ಪರಮಪುರುಷನು ಅಂತರ್ಯಾಮಿಯಾಗಿರುವನೆಂದು ತಿಳಿಯುವುದರಿಂದ ಬ್ರಹ್ಮಜ್ಞಾನಿಗಳಾಗುವರು.

೩೬. ಹೀಗೆ ಕ್ಷೇತ್ರಕ್ಷೇತ್ರಜ್ಞರಿಗೆ ವಿಷಯಾವಿಷಯಗಳು ಅನಾದಿಯಿಂದಲೂ ಸಿದ್ಧವಾಗಿವೆ. ಬ್ರಹ್ಮನು ಜ್ಞಾನಗಮ್ಯನಾಗಿರುವನು. ಕ್ಷೇತ್ರವು ಅವಿಷಯವಾಗಿರುವುದು.

೩೭. ಹೀಗೆ ಬ್ರಹ್ಮನಿಯಾಮಕವಾದ (ಕ್ಷೇತ್ರವು) ಶರೀರವು ಜೀವನಿಗೋಸ್ಕರವಾಗಿದೆಯೆಂದು ಮಹಾತ್ಮರು ಹೇಳುವರು. ಶರೀರಗಳು ಅನಂತವಾಗಿರುವುದರಿಂದ ಜೀವರೂ ಅನಂತವಾಗಿರುವರು. ನಿಯಾಮಕನಾದ ಬ್ರಹ್ಮನು ಏಕನಾದರೂ ಪ್ರತಿ ವ್ಯಕ್ತಿಯಲ್ಲಿಯೂ ಸ್ವಮಹಿಮೆಯಿಂದ ಪ್ರೇರಕನಾಗಿರುವನು.

ಅವ್ಯೂಹಶಂಕರಾಚ್ಚೈವ ಜ್ಯೋತಿರ್ವಚ್ಚ ವ್ಯವಸ್ಥಿತಃ ।
ಯಸ್ಮಾತ್ಪ್ರತಿಶರೀರಂ ಹಿ ಸುಖದುಃಖೋಪಲಬ್ಧಿತಾ ॥
ತಸ್ಮಾತ್ಪುರುಷನಾನಾತ್ವಂ ವಿಜ್ಞೇಯಂ ತು ವಿಜಾನತಾ ॥ ೩೮ ॥

ಯದಾ ಪ್ರವರ್ತತೇ ಚೈಷಾಂ ಭೇದಾನಾಂ ಚೈವ ಸಂಯುಮಾಃ ।
ಸ್ವಭಾವಕಾರಿತಾಃ ಸರ್ವೇ ಕಾಲೇನ ಮಹತಾ ತದಾ ॥ ೩೯ ॥

ನಿವರ್ತತೇ ತದಾ ತಸ್ಯ ಸ್ಥಿತಿರಾಗಃ ಸ್ವಯಂಭುವಃ ।
ಸಹಸಾ ಯೋಜ್ಯಕೈಃ ಸರ್ವೈ ಬ್ರಹ್ಮಲೋಕನಿವಾಸಿಭಿಃ ॥ ೪೦ ॥

ವಿನಿವೃತ್ತೇ ತದಾ ರಾಗೇ ಸ್ಥಿತಾವಾತ್ಮನಿವಾಸಿನಾಂ ।
ತತ್ಕಾಲವಾಸಿನಾಂ ತೇಷಾಂ ತದಾ ತದ್ದೋಷದರ್ಶಿನಾಂ ॥ ೪೧ ॥

---

೩೮. ಜೀವರು ಪ್ರತಿ ಶರೀರಗಳಲ್ಲಿಯೂ ಪ್ರತ್ಯೇಕಪ್ರತ್ಯೇಕವಾಗಿ ಸಾಂಕರ್ಯವಿಲ್ಲದೆ ಸೂರ್ಯಕಿರಣಗಳಂತೆ ಬೇರೆ ಬೇರೆಯಾಗಿ ವ್ಯವಸ್ಥಿತವಾಗಿರುವರು. ಹೀಗೆ ಪ್ರತಿ ಶರೀರದಲ್ಲಿಯೂ ಭಿನ್ನ ಭಿನ್ನರಾದ ಜೀವರು ಇರುವುದರಿಂದ ವಿರುದ್ಧವಾದ ಸುಖದುಃಖೋತ್ಪತ್ತಿಗಳೂ ಸಂಗತವಾಗಿರುವುವು. ಆದುದರಿಂದಲೇ ಪುರುಷರಲ್ಲಿ ನಾನಾತ್ವವು ಸಿದ್ಧವಾಗುವುದೆಂದು ಜ್ಞಾನಿಗಳು ಹೇಳುವರು.

೩೯. ಯಾವಾಗ ಈ ಜಗತ್ತಿನ ಸೃಷ್ಟಿಕ್ರಮಗಳು ನಡೆಯುತ್ತವೆಯೋ ಆಗಲೇ ಕಾಲಾನುಗುಣವಾಗಿಯೂ, ಸ್ವಭಾವಾನುಸಾರವಾಗಿಯೂ, ಪರಸ್ಪರ ವೈಲಕ್ಷಣ್ಯಗಳು ಯೋಗ್ಯತಾನುಸಾರವಾಗಿಯೂ ಸಿದ್ಧವಾಗುವುವು.

೪೦–೪೧. ಆಗ ಬ್ರಹ್ಮದೇವನಿಗೆ ಪ್ರಜೆಗಳಲ್ಲಿ ವೈಷಮ್ಯಬುದ್ಧಿಯು ಇರುವುದಿಲ್ಲ. ಜೀವನು ಕರ್ಮಾನುಗುಣವಾಗಿ ಸೃಷ್ಟಿಯನ್ನು ಮಾಡಿರುವನು. ಈ ರೀತಿಯಾಗಿ ಬ್ರಹ್ಮನ ಸತ್ಯಲೋಕವಾಸಿಗಳಾದ ಯೋಗಿಗಳೆಲ್ಲರೂ ಬ್ರಹ್ಮನನ್ನು ತಿಳಿದು ಅಂತರ್ಯಾಮಿಯಾದ ಈಶ್ವರನ ವಿಷಯದಲ್ಲಿ ದ್ವೇಷಾಸೂಯಾದಿಗಳನ್ನು ಬಿಡುವರು. ಸೃಷ್ಟಿಯಲ್ಲಿರುವ ಪ್ರಜೆಗಳು ದೋಷಗಳಿಂದ ಜನನಮರಣಗಳನ್ನು, ವೈರಾಗ್ಯದಿಂದಲೂ, ಜ್ಞಾನದಿಂದಲೂ, ಮುಕ್ತಿಯನ್ನೂ ಪಡೆಯುವರು.

ಉತ್ಪದ್ಯತೇಽಥ ವೈರಾಗ್ಯಮಾತ್ಮವಾದಪ್ರಕಾಶನಂ ।
ಭೋಜ್ಯಭೋಕ್ತೃತ್ವನಾನಾತ್ವೇ ತೇಷಾಂ ತದ್ಭವದರ್ಶಿನಾಂ ॥ ೪೨ ॥

ಪೃಥಕ್ ಜ್ಞಾನೇನ ಕ್ಷೇತ್ರಜ್ಞಾಸ್ತತಸ್ತೇ ಬ್ರಹ್ಮಲೌಕಿಕಾಃ ।
ಪ್ರಕೃತೌ ಕರಣಾಃ ನೀತಾಃ ಸರ್ವೇ ನಾನಾಪ್ರದರ್ಶಿನಃ ॥ ೪೩ ॥

ಸ್ವಾತ್ಮನ್ಯೇವಾವತಿಷ್ಠಂತೇ ಪ್ರಶಾಂತಾ ದರ್ಶನಾತ್ಮಕಾಃ ।
ಶುದ್ಧಾ ನಿರಂಜನಾಃ ಸರ್ವೇ ಚೇತನಾಚೇತನಾಸ್ತಥಾ ॥ ೪೪ ॥

ತತ್ರೈವ ಪರಿನಿರ್ವಾಣಾಃ ಸ್ಮೃತಾ ನಾಗಾಮಿನಸ್ತು ತೇ ।
ನಿರ್ಗುಣತ್ವಾನ್ನಿರಾತ್ಮಾನಃ ಪ್ರಕೃತ್ಯಂತೇ ವ್ಯತಿಕ್ರಮಾತ್ ॥ ೪೫ ॥

---

೪೨. ಹೀಗೆ ಜ್ಞಾನಿಗಳಿಗೆ ನಾನು ತಾನೆಂಬ ಅಹಂಭಾವವು ತೊಲಗಿ ಜ್ಞಾನದಿಂದ ವೈರಾಗ್ಯವು ಸಂಭವಿಸುವುದು. ಮತ್ತು ಇದು ಭೋಜ್ಯವು, ಇವನು ಭೋಕ್ತೃವು ಎಂಬ ನಾನಾತ್ವಜ್ಞಾನದಿಂದ ಸಂಸಾರಿಗಳಿಗೆ ಭವಬಂಧವಿಮೋಚನೆಯು ಉಂಟಾಗುವುದು.

೪೩. ಅನಂತರ ಜ್ಞಾನಿಗಳು ಪೂರ್ವೋಕ್ತವಾದ ಪ್ರಕೃತಿಪುರುಷರ ಭೇದ ಜ್ಞಾನದಿಂದ ಬ್ರಹ್ಮನನ್ನೂ ಲೌಕಿಕವಾದ ನಾನಾ ವಿಷಯಗಳನ್ನರಿತು ಮುಕ್ತರಾಗುವರು.

೪೪. ಚೇತನಾಚೇತನಾತ್ಮಕರೂ, (ನಿರಂಜರೂ) ದೋಷವಿದೂರರೂ, ಶುದ್ಧರೂ ಪ್ರಶಾಂತರೂ ಆದ ಜ್ಞಾನಿಗಳೆಲ್ಲರೂ ಪರಮಾತ್ಮಗತವಾದ ಮನಸ್ಸುಳವರಾಗಿ ನಿತ್ಯಮುಕ್ತರಾಗುವರು.

೪೫. ವಿರಕ್ತರೂ ಜಿತೇಂದ್ರಿಯರೂ ಆದ ಬ್ರಹ್ಮಜ್ಞಾನಿಗಳು ಆ ಪರಮ ಪುರುಷನಲ್ಲಿಯೇ, ಆಸಕ್ತರಾಗುವರು. ಸೃಷ್ಟಿಗೆ ವಿಷಯರಾದ ಜೀವರು ಹಾಗೆ ಜ್ಞಾನಿಗಳಾಗುವುದಿಲ್ಲ. ಅವರು ಪರಮಾತ್ಮನನ್ನು ತಿಳಿಯದೇ ಪ್ರಪಂಚದ ನಾನಾ ವಿಷಯಕ ಜ್ಞಾನದಿಂದ ಪ್ರಕೃತಿ ವಶರಾಗಿ ಜನನ ಮರಣ ಪ್ರವಾಹಕ್ಕೆ ಸಿಕ್ಕುವರು.

ಇತ್ಯೇವಂ ಪ್ರಾಕೃತಃ ಪ್ರೋಕ್ತಃ ಪ್ರತಿಸರ್ಗಃ ಸ್ವಯಂಭುವಃ ।
ಭಿದ್ಯಂತೇ ಸರ್ವಭೂತಾನಾಂ ಕರಣಾನಿ ಪ್ರಸಂಯಮೇ ॥ ೪೬ ॥

ಇತ್ಯೇಷ ಸಂಯಮಶ್ಚೈವ ತತ್ತ್ವಾನಾಂ ಕರಣೈಃ ಸಹ ।
ತತ್ತ್ವಪ್ರಸಂಯಮೋ ಹ್ಯೇಷ ಸ್ಮೃತೋ ಹ್ಯಾವರ್ತಕೋ ದ್ವಿಜಾಃ ॥ ೪೭ ॥

॥ ಸೂತ ಉವಾಚ ॥

ಧರ್ಮಾಧರ್ಮೌ ತಪೋ ಜ್ಞಾನಂ ಶುಭೇ ಸತ್ಯಾನೃತೇ ತಥಾ ।
ಊರ್ಧ್ವಭಾವೋ ಹ್ಯಧೋಭಾವೋ ಸುಖದುಃಖೇ ಪ್ರಿಯಾಪ್ರಿಯೇ ॥೪೮॥

ಸರ್ವಮೇತತ್ತ್ರಯಾತಸ್ಯ ಗುಣಮಾತ್ರಾತ್ಮಕಂ ಸ್ಮೃತಂ ।
ನಿರೀಂದ್ರಿಯಾಣಾಂ ಚ ತದಾ ಜ್ಞಾನಿನಾಂ ಯಚ್ಛುಭಾಶುಭಂ ॥ ೪೯ ॥

---

೪೬. ಮೇಲೆ ನಿರೂಪಿಸಿರುವ ರೀತಿಯಾಗಿ ಸ್ವಯಂಭುವನಾದ ಬ್ರಹ್ಮನ ಪ್ರಾಕೃತಿಕವಾದ ಪ್ರಲಯವು ನಿರೂಪಿತವಾಗಿದೆ. ಸಂಹಾರಕಾಲದಲ್ಲಿ ಪ್ರತಿಭೂತಗಳಿಗೂ ಕಾರಣಗಳು ಬೇರೆಬೇರೆಯಾಗಿವೆ.

೪೭. ಈ ರೀತಿಯಾಗಿ ಪ್ರಾಣಿಗಳು ತಮ್ಮತಮ್ಮ ಕಾರಣ ಸಂಗಡ ಪ್ರಳಯ ಕಾಲಗಳಲ್ಲಿ ಲೀನವಾಗುತ್ತವೆ. ಹೀಗಾಗುವುದೇ ಸಹಜವಾಗಿದೆ. ಎಲೈ ವಿಪ್ರವರ್ಯರೇ, ಹೀಗೆ ಕಾರಣಗತವಾದ ಲಯವನ್ನೂ, ಜ್ಞಾನಿಗಳು ತತ್ವಪ್ರಸಂಯಮವೆಂಬ ಸಂಜ್ಞೆಯನ್ನು ಕೊಟ್ಟು ವ್ಯವಹರಿಸುವರು.

೪೮–೫೦. ಸೂತಮುನಿಯು ನಿರೂಪಿಸಿದನು :— ಧರ್ಮಾಧರ್ಮಗಳೂ, ತಪಸ್ಸು, ಜ್ಞಾನ, ಶುಭಾಶುಭಗಳಾದ ಸತ್ಯಾನೃತಗಳೂ, ಊರ್ಧ್ವಲೋಕ, ಅಧೋಲೋಕಗಳೂ, ಸುಖದುಃಖಗಳೂ, ಪ್ರಿಯಾಪ್ರಿಯಗಳೂ ಎಂಬ ಪ್ರಾಣಿಗತವಾದ ಇವೆಲ್ಲವೂ ಕೇವಲ ಸತ್ವಾದಿಗುಣಗಳ ಸಂಬಂಧದಿಂದ ಉಂಟಾಗಿವೆಯೆಂಬುದು ಮಹಾತ್ಮರಿಗೆ ಸಮ್ಮತವಾದ ವಿಷಯವಾಗಿವೆ. ಜಿತೇಂದ್ರಿಯರಾದ ಜ್ಞಾನಿಗಳ

ಪ್ರಕೃತ್ಯಾಂ ಚೈವ ತತ್ಸರ್ವಂ ಪುಣ್ಯಂ ಪಾಪಂ ಪ್ರತಿಷ್ಠಿತಿ ।
ಯೋಽಸ್ಯವಸ್ಥಾ ಸ್ವಭಾವೇ ಚ ದೇಹಿನಾಂ ತು ನಿಷಿಚ್ಯತೇ ॥ ೫೦ ॥

ಜಂತೂನಾಂ ಪಾಪಪುಣ್ಯಂ ತು ಪ್ರಕೃತೌ ಯತ್ಪ್ರತಿಷ್ಠಿತಂ ।
ಅವ್ಯಕ್ತಸ್ಥಾನಿ ತಾನ್ಯೇವ ಪುಣ್ಯಪಾಪಾನಿ ಜಂತವಃ ॥
ಯೇ ಜಯಂತಿ ಪುನರ್ದೇಹೇ ದೇಹಾನ್ಯತ್ವೇ ತಥೈವ ಚ ॥ ೫೧ ॥

ಧರ್ಮಾಧರ್ಮೌ ತು ಜಂತೂನಾಂ ಗುಣಮಾತ್ರಾತ್ಮಕಾವುಭೌ ।
ಕರಣೈಃ ಸ್ವೈಃ ಪ್ರಚೀಯೇತೇ ಕಾಯತ್ವೇನೇಹ ಜಂತುಭಿಃ ॥ ೫೨ ॥

ಸುಚೇತನಾಃ ಪ್ರಲೀಯಂತೇ ಕ್ಷೇತ್ರಜ್ಞಾಧಿಷ್ಠಿತಾ ಗುಣಾಃ ।
ಸರ್ಗೇ ಚ ಪ್ರತಿಸರ್ಗೇ ಚ ಸಂಸಾರೇ ಚೈವ ಜಂತವಃ ॥
ಸಂಯುಜ್ಯಂತೇ ವಿಯುಜ್ಯಂತೇ ಕರಣೈಃ ಸಂಚರಂತಿ ಚ ॥ ೫೩ ॥

---

ಶುಭಾಶುಭರೂಪವಾದ ಪುಣ್ಯಪಾಪಾದಿಕರ್ಮಗಳು ಪ್ರಕೃತಿಯಿಂದಲೇ ಉಂಟಾಗುವುವು. ಅವು ಪ್ರಕೃತಿಗತವೇ ಆಗಿವೆ. ಯೋನಿಗತವಾದ ಗುಣಗಳು ಆಯಾ ಪ್ರಾಣಿಗಳಿಗೆ ಉಂಟಾಗುವುದು ಸ್ವಾಭಾವಿಕವಾದ ವಿಷಯವೇ ಆಗಿದೆ.

೫೧. ಪ್ರಾಣಿಗಳಲ್ಲಿರುವ ಪುಣ್ಯಪಾಪಾದಿಗಳು ಪ್ರಲಯಕಾಲದಲ್ಲಿ ಪ್ರಕೃತಿಯಲ್ಲಿಯೇ ಇರುವುವು. ಅವು ಅವ್ಯಕ್ತವಾಗಿಯೂ, ಸೂಕ್ಷ್ಮವಾಗಿಯೂ ಇರುವುವು. ಪುನಃ ಸೃಷ್ಟಿಗೆ ಬಂದಾಗ ಸೂಕ್ಷ್ಮವಾದ ಪಾಪಪುಣ್ಯಗಳು ವ್ಯಕ್ತವಾಗಿಯೂ, ಸ್ಥೂಲರೂಪವಾಗಿಯೂ ಅನುಭವಕ್ಕೆ ಬರುತ್ತವೆ. ಮತ್ತು ಬೇರೇ ಶರೀರ ಬಂದಾಗಲೂ ಈ ರೀತಿಯಲ್ಲಿಯೇ ಆಗುವುವು.

೫೨. ಪ್ರಾಣಿಗಳಲ್ಲಿರುವ ಧರ್ಮಾಧರ್ಮಾದಿಗಳೆರಡೂ ಸತ್ವಾದಿಗುಣಗಳಿಂದ ಜನ್ಯವಾಗಿವೆ. ಆ ಧರ್ಮಾಧರ್ಮಾದಿಗಳು ತಮ್ಮ ತಮ್ಮ ಕಾರಣಗಳಿಂದ ವೃದ್ಧಿಯಾಗುತ್ತವೆ. ಇಲ್ಲದಿದ್ದರೆ ಕ್ಷಯಿಸುತ್ತವೆ.

೫೩. ಕ್ಷೇತ್ರಜ್ಞರೂ, ಸುಚೇತನರೂ ಆದ ಮಹಾತ್ಮರಲ್ಲಿರುವ ಸತ್ವಾದಿಗುಣಗಳು ಲಯಕಾಲದಲ್ಲಿ ಸೂಕ್ಷ್ಮವಾಗಿಯೂ, ಸೃಷ್ಟಿಕಾಲದಲ್ಲಿ ಉಪಚಯವಾಗಿಯೂ ಆಗುತ್ತವೆ. ಮತ್ತು ಕಾರಣಾನುಗುಣವಾಗಿ ಸಂಯೋಗವಿಯೋಗಗಳನ್ನೂ ಪಡೆಯುತ್ತವೆ.

ರಾಜಸೀ ತಾಮಸೀ ಚೈವ ಸಾತ್ವಿಕೀ ಚೈವ ವೃತ್ತಯಃ ।
ಗುಣಮಾತ್ರಾಃ ಪ್ರವರ್ತಂತೇ ಪುರುಷಾಧಿಷ್ಠಿತಾಸ್ತ್ರಿಧಾ ॥ ೫೪ ॥

ಊರ್ಧ್ವಂ ದೇವಾತ್ಮಕಂ ಸತ್ವಮಧೋಭಾಗಾತ್ಮಕಂ ತಮಃ ।
ತಯೋಃ ಪ್ರವರ್ತಕಂ ಮಧ್ಯೇ ಇತ್ಯೇವಾವರ್ತಕಂ ರಜಃ ॥ ೫೫ ॥

ಇತ್ಯೇವಂ ಪರಿವರ್ತಂತೇ ತ್ರಯಃ ಸ್ರೋತು ಗುಣಾತ್ಮಕಾಃ ।
ಲೋಕೇಷು ಸರ್ವಭೂತಾನಾಂ ತನ್ನ ಕಾರ್ಯಂ ವಿಜಾನತ ॥ ೫೬ ॥

ಅವಿದ್ಯಾಪ್ರತ್ಯಯಾರಂಭಾ ಆರಭ್ಯಂತೇ ಹಿ ಮಾನವೈಃ ।
ಏತಾಸ್ತು ಗತಯಸ್ತಿಸ್ರಃ ಶುಭಾಃ ಪಾಪಾತ್ಮಿಕಾಃ ಸ್ಮೃತಾಃ ॥ ೫೭ ॥

ತಮಸಾಭಿಭವಾಜ್ಜಂತುರ್ಯಥಾತಥ್ಯಂ ನ ವಿಂದತಿ ।
ಅತತ್ತ್ವದರ್ಶನಾತ್ಸೋಥ ತ್ರಿವಿಧಂ ಬಧ್ಯತೇ ತತಃ ॥ ೫೮ ॥

---

೫೪. ರಾಜಸೀ, ತಾಮಸೀ, ಸಾತ್ವಿಕೀ ಎಂಬುದಾಗಿ ಮೂರು ವೃತ್ತಿಗಳು ಪುರುಷರಲ್ಲಿರುತ್ತವೆ. ಪುರುಷಗತವಾದ ಸತ್ವರಜಸ್ತಮೋಗುಣಗಳು ಮೂರು ಮೂರು ಪ್ರಕಾರವಾಗಿ ಪ್ರವರ್ತಿಸುತ್ತವೆ.

೫೫. ದೇಹದ ಊರ್ಧ್ವಭಾಗದಲ್ಲಿ ಸತ್ವಗುಣವೂ, ಕೆಳಭಾಗದಲ್ಲಿ ತಮೋಗುಣವೂ, ಮಧ್ಯಭಾಗದಲ್ಲಿ ರಜೋಗುಣವೂ ಇರುತ್ತವೆ. ಅಂದರೆ ಸತ್ವಗುಣದಿಂದ ಸ್ವರ್ಗಾದಿಲೋಕಗಳೂ, ತಮೋಗುಣದಿಂದ ನರಕಾದಿಲೋಕಗಳೂ, ರಜೋಗುಣದಿಂದ ಮಧ್ಯಗತವಾದ ಭೂಲೋಕವೂ ಪ್ರಾಣಿಗಳಿಗೆ ಉಂಟಾಗುವುವು.

೫೬. ಸತ್ವರಜಸ್ತಮಸ್ಸುಗಳೆಂಬ ಈ ಗುಣಗಳೂ, ಜಲದಂತೆ ಹರಿಯುತ್ತಾ ಲೋಕದಲ್ಲಿರುವ ಸರ್ವರಿಗೂ, ಬಂಧ ಮೋಕ್ಷಗಳಿಗೆ ಕಾರಣವಾಗುತ್ತವೆ. ಮನುಜರು ಈ ಮೂರು ಗುಣಗಳನ್ನು, ಚೆನ್ನಾಗಿ ತಿಳಿದರೆ ಮುಕ್ತರಾಗುವರು.

೫೭. ಮನುಷ್ಯರು ಅಜ್ಞಾನ ಮೂಲಕವಾದ ಕಾರ್ಯಗಳನ್ನು ಆರಂಭಿಸುವರು. ತಾಮಸೀ, ರಾಜಸೀ, ಸಾತ್ವಿಕೀ ರೂಪವಾದ ತ್ರಿವಿಧ ವೃತ್ತಿಗಳು, ಶುಭಫಲದಾಯಕವಾಗಿಯೂ, ಪಾಪರೂಪಿಯಾದ ಅಶುಭಫಲಪ್ರದವಾಗಿಯೂ ಇರುತ್ತವೆ.

೫೮. ಪುರುಷರು ತಮೋಗುಣ ಪಾಚುರ್ಯದಿಂದ ಯಥಾರ್ಥವನ್ನು ತಿಳಿಯದೆ ಅಜ್ಞರಾಗುವರು. ಯಥಾರ್ಥಜ್ಞಾನವಿಲ್ಲದಯೇ ಪುರುಷರು ತ್ರಿವಿಧವಾದ ಬಂಧನಕ್ಕೆ ವಿಷಯರಾಗುವರು.

ಪ್ರಾಕೃತೇನ ಚ ಬಂಧೇನ ತಥಾ ವೈಕಾರಿಕೇನ ಚ ।
ದಕ್ಷಿಣಾಭಿಸ್ತೃತೀಯೇನ ಬದ್ಧೋಽತ್ಯಂತಂ ವಿವರ್ತತೇ ॥ ೫೯ ॥

ಇತ್ಯೇತೇ ವೈ ತ್ರಯಃ ಪ್ರೋಕ್ತಾ ಬಂಧಾ ಹ್ಯಜ್ಞಾನಹೇತುಕಾಃ ।
ಅನಿತ್ಯೇ ನಿತ್ಯಸಂಜ್ಞಾ ಚ ದುಃಖೇ ಚ ಸುಖದರ್ಶನಂ ॥ ೬೦ ॥

ಅಸ್ವೇ ಸ್ವಮಿತಿ ಚ ಜ್ಞಾನಮಶುಚೌ ಶುಚಿನಿಶ್ಚಯಃ ।
ಯೇಷಾಮೇತೇ ಮನೋದೋಷಾ ಜ್ಞಾನದೋಷಾ ವಿಪರ್ಯಯಾತ್ ॥

ರಾಗದ್ವೇಷನಿವೃತ್ತಿಶ್ಚ ತತ್ ಜ್ಞಾನಂ ಸಮುದಾಹೃತಂ ।
ಅಜ್ಞಾನಂ ತಮಸೋ ಮೂಲಂ ಕರ್ಮದ್ವಯಫಲಂ ರಜಃ ॥
ಕರ್ಮಜಸ್ತು ಪುನರ್ದೇಹೋ ಮಹಾದುಃಖಂ ಪ್ರವರ್ತತೇ ॥ ೬೨ ॥

---

೫೯. ಪುರುಷರು ಇಂತಹ ಅಜ್ಞಾನದಿಂದ ಪ್ರಾಕೃತ, ವೈಕಾರಿಕ, ದಕ್ಷಿಣಾ ರೂಪವಾದ ಮೂರುವಿಧ ಬಂಧನಕ್ಕೆ ಒಳಗಾಗಿ ದುಃಖಿಗಳಾಗುವರು.

೬೦. ಹೀಗೆ ಪುರುಷರಿಗೆ ಅಜ್ಞಾನ ಕಾರಣಗಳಿಂದ ತ್ರಿವಿಧ ಬಂಧನಗಳು, ಉಂಟಾಗುವುವು. ಇಂತಹ ಅಜ್ಞಾನದಿಂದ ಅನಿತ್ಯವಾದ ಪ್ರಾಪಂಚಿಕ ಸುಖದಲ್ಲಿ ನಿತ್ಯತ್ವಜ್ಞಾನವೂ, ಸಾಂಸಾರಿಕ ದುಃಖದಲ್ಲಿ ಸುಖಿತ್ವಜ್ಞಾನವೂ ಉಂಟಾಗುವುವು.

೬೧. ಯಾರಿಗೆ ಪರರ ವಸ್ತುವಿನಲ್ಲಿ ತನ್ನದೆಂಬ ಜ್ಞಾನವೂ ಅಶುಚಿಯಾದ ಪದಾರ್ಥದಲ್ಲಿ ಶುಚಿತ್ವಜ್ಞಾನವೂ ಉಂಟಾಗುವುವೋ, ಅವರಿಗೆ ಮನೋದೋಷಗಳೂ ಜ್ಞಾನದೋಷಗಳೂ ಇರುವುದರಿಂದ ಭ್ರಾಂತಿಯುಂಟಾಗುವುದು.

೬೨. ರಾಗದ್ವೇಷ ಶೂನ್ಯವಾದ ಜ್ಞಾನವೇ ಸಮೀಚೀನವಾದ ಜ್ಞಾನವೆಂದು, (ಉತ್ತಮಜ್ಞಾನವೆಂದು) ಉಕ್ತವಾಗಿದೆ. ಅಜ್ಞಾನವು ತಮೋಮೂಲಕವಾಗಿದೆ. ರಜೋಗುಣದಿಂದ ಸಂಶಯಾತ್ಮಕವಾದ ಕಾರ್ಯದ್ವಯಗಳ ಫಲವು ಉಂಟಾಗುವುವು. ಇಂತಹ ಕರ್ಮದಿಂದ ದೇಹಾಂತರ ಪ್ರಾಪ್ತಿಯು ಅದರಿಂದ ದುಃಖವೂ ಉಂಟಾಗುವುವು.

ಶ್ರೋತ್ರಜಾ ನೇತ್ರಜಾ ಚೈವ ತ್ವಗ್ಜಿಹ್ವಾಘ್ರಾಣಜಾಸ್ತಥಾ ।
ಪುನರ್ಭವಕರೀ ದುಃಖಕರ್ಮಣಾಂ ಜಾಯತೇ ತು ಸಾ ॥ ೬೩ ॥

ಸ ತೃಷ್ಣೋಽಭಿಹಿತೋ ಬಾಲಃ ಸ್ವಕೃತೈಃ ಕರ್ಮಣಃ ಫಲೈಃ ।
ತೈಲಪಾಲೀಕವಜ್ಜೀವಸ್ತತ್ರೈವ ಪರಿವರ್ತತೇ ॥ ೬೪ ॥

ತಸ್ಮಾತ್ ಸ್ಥೂಲಮನರ್ಥಾನಾಮಜ್ಞಾನಮುಪದಿಶ್ಯತೇ ।
ತಂ ಶಕ್ತಮವಧಾರ್ಯೈಕಂ ಜ್ಞಾನೇ ಯತ್ನಂ ಸಮಾಚರೇತ್ ॥ ೬೫ ॥

ಜ್ಞಾನಾದ್ವಿಜಯತೇ ಸರ್ವಂ ತ್ಯಾಗಾದ್ಬುದ್ಧಿರ್ವಿರಜ್ಯತೇ ।
ವೈರಾಗ್ಯಾಚ್ಛುಧ್ಯತೇ ಚಾಪಿ ಶುದ್ಧಃ ಸತ್ತ್ವೇನ ಮುಚ್ಯತೇ ॥ ೬೬ ॥

---

೬೩. ಶ್ರೋತ್ರ, ನೇತ್ರ, ನಾಸಿಕ, ರಸನಾ ಮತ್ತು ಚರ್ಮ ಈ ಪಂಚೇಂದ್ರಿಯುಗಳಿಂದ ಕರ್ಮಗಳೂ, ಅವುಗಳಿಂದ ಪುನರ್ಜನ್ಮವೂ, ಅದರಿಂದ ಮಹಾದುಃಖಗಳೂ ಉಂಟಾಗುವುವು.

೬೪. ಬಾಲಕನು ತಿಳಿವಳಿಕೆಯಿಲ್ಲದೇ ತಾನು ಸ್ವೇಚ್ಛೆಯಿಂದ ಮಾಡಿದ ದುಷ್ಕಾರ್ಯಗಳ ಫಲವನ್ನು ಪ್ರತ್ಯಕ್ಷವಾಗಿ ಹೇಗೆ ಅನುಭವಿಸುತ್ತಾನೆಯೋ ಮತ್ತು ತೈಲಕಾರಿಯಾದ ಗಾಣಿಗನು ಹೇಗೆ ಗಾಣವನ್ನೇ ಪುನಃ ಪುನಃ ಸುತ್ತುತ್ತಾನೋ ಹಾಗೆ ಜೀವನು ಸಂಸಾರದಲ್ಲಿ ಜನನ ಮರಣರೂಪವಾದ ಭ್ರಮಣವನ್ನು ಹೊಂದುವನು.

೬೫. ಆದುದರಿಂದ ಅನರ್ಥಗಳಿಗೆ ಅಜ್ಞಾನವೇ ಮುಖ್ಯಕಾರಣವೆಂದು ಜ್ಞಾನಿಗಳು ತಿಳಿಸುವರು. ಬ್ರಹ್ಮ ಜ್ಞಾನವೇ ಸುಖಕ್ಕೆ ಕಾರಣವೆಂದು ತಿಳಿದು ಜ್ಞಾನ ಸಂಪಾದನೆಯಲ್ಲಿ ಪ್ರಯತ್ನವನ್ನು ಮಾಡಬೇಕು.

೬೬. ಜ್ಞಾನದಿಂದ ಸಕಲೇಷ್ಟಾರ್ಥಗಳೂ ಸಂಭವಿಸುವುದು. ಬುದ್ಧಿಯು ತ್ಯಾಗದಿಂದ ವೈರಾಗ್ಯವನ್ನು ಪಡೆಯುವುದು. ಅಂತಹ ವೈರಾಗ್ಯದಿಂದ ಮನಸ್ಸು ಶುದ್ಧವಾಗುವುದು. ಹೀಗೆ ಶುದ್ಧವಾದ ಮನಸ್ಸು ಇತರಗುಣಗಳಿಂದ ರಹಿತವಾಗಿ ಕೇವಲ ಸತ್ವರೂಪವಾಗುವುದು.

ಅತ ಊರ್ಧ್ವಂ ಪ್ರವಕ್ಷ್ಯಾಮಿ ರಾಗಂ ಭೂತಾಪಹಾರಿಣಂ ।
ಅಭಿಷಂಗಾಯ ಯೋ ಯಸ್ಮಾದ್ವಿಷಯೋಷ್ಯವಶಾತ್ಮನಃ ॥ ೬೭ ॥

ಅನಿಷ್ಟಮಭಿಷಂಗಂ ಹಿ ಪ್ರೀತಿತಾಪವಿಷಾದನಂ ।
ದುಃಖಲಾಭೇ ನ ತಾಪಂ ಚ ಸುಖಾನುಸ್ಮರಣಂ ತಥಾ ॥ ೬೮ ॥

ಇತ್ಯೇಷ ವೈಷಯೋ ರಾಗಃ ಸಂಭೂತ್ಯಾಃ ಕಾರಣಂ ಸ್ಮೃತಂ ।
ಬ್ರಹ್ಮಾದೌ ಸ್ಥಾವರಾಂತೇ ವೈ ಸಂಸಾರೇ ಹ್ಯಾಧಿಭೌತಿಕೇ ॥
ಅಜ್ಞಾನಪೂರ್ವಕಂ ತಸ್ಮಾದಜ್ಞಾನಂ ತು ವಿವರ್ಜಯೇತ್ ॥ ೬೯ ॥

ಯಸ್ಯ ಚಾರ್ಷಂ ನ ಪ್ರಮಾಣಂ ಶಿಷ್ಟಾಚಾರಂ ತಥೈವ ಚ ।
ವರ್ಣಾಶ್ರಮವಿರೋಧೀ ಯಃ ಶಿಷ್ಟಶಾಸ್ತ್ರವಿರೋಧಕಃ ॥ ೭೦ ॥

---

೬೭. ಈಗ ಸಕಲಭೂತಗಳನ್ನೂ ವಶಪಡಿಸುವಂತಹ ರಾಗದ ವಿಷಯವನ್ನು ತಿಳಿಸುವೆನು ಕೇಳಿರಿ. ರಾಗದಿಂದ ಸಕಲವಾದ ವಿಷಯಾಸಕ್ತಿಯೂ, ಅದರಿಂದ ಅತ್ಯಾಶೆಯೂ ಉಂಟಾಗುವುವು.

೬೮. ಈ ವಿಷಯಾಭಿಲಾಷೆಯು ಪ್ರೀತಿ, ತಾಪ, ದುಃಖ ಇವುಗಳ ಮೂಲಕ ಅನಿಷ್ಟವನ್ನುಂಟುಮಾಡುವುದು. ಅಂಥ ದುಃಖದಿಂದ ಮನಸ್ಸಿಗೆ ತಾಪವೂ, ಸುಖ ಸ್ಮರಣೆಯೂ, ಉಂಟಾಗುವುವು.

೬೯. ಈ ವಿಷಯುಕವಾದ ರಾಗವು ಜನ್ಮಾಂತರಕ್ಕೆ ಕಾರಣವಾಗುವುದೆಂದು ಮಹಾತ್ಮರು ಹೇಳುವರು. ಬ್ರಹ್ಮಾದಿಯೂ, ಸ್ಥಾವರಾಂತವೂ, ಆದಿಭೌತಿಕವೂ, ಆದ ಈ ಜನನ ಮರಣ ರೂಪವಾದ ಸಂಸಾರವು ಅಜ್ಞಾನಮೂಲಕವಾಗಿ ಸಂಭವಿಸುತ್ತದೆ. ಆದುದರಿಂದ ಇಂತಹ ಅಜ್ಞಾನಮೂಲಕ ಸರ್ವಾನರ್ಥಗಳೂ ಉಂಟಾಗುವುದರಿಂದ ಮೊದಲು ಅಜ್ಞಾನವನ್ನು ಬಿಡಬೇಕು.

೭೦–೭೧. ಯಾವನು ಆರ್ಷೇಯವಾದ ಧರ್ಮಶಾಸ್ತ್ರಗಳನ್ನೂ ಶಿಷ್ಟಾಚಾರಗಳನ್ನೂ ನಂಬುವುದಿಲ್ಲವೋ ಮತ್ತು ವರ್ಣಾಶ್ರಮಧರ್ಮಗಳಿಗೂ ಜ್ಞಾನಿಗಳ ಶಾಸ್ತ್ರಗಳಿಗೂ ವಿರೋಧಿಯಾಗಿರುವನೋ ಅಂತಹ ಪುರುಷನ ಮಾರ್ಗವೇ ನರಕಕ್ಕೂ ಜನನ ಮರಣರೂಪವಾದ ಸಂಸಾರಕ್ಕೂ ತಿರ್ಯಗ್ಜಂತುಗಳಾಗಿ ಜನಿಸಲೂ ಕಾರಣವಾಗಿದೆ.

ಏಷ ಮಾರ್ಗೋ ಹಿ ನಿರಧಿತಿರ್ಯಗ್ಯೋನೌ ಚ ಕಾರಣಂ ।
ತಿರ್ಯಗ್ಯೋನಿಗತಂ ಚೈವ ಕಾರಣಂ ಸ ನಿರುಚ್ಯತೇ ॥ ೭೧ ॥

ವಿವಿಧಾ ಯಾತನಾ ಸ್ಥಾನೇ ತಿರ್ಯಗ್ಯೋನೌ ಚ ಷಡ್ವಿಧೇ ।
ಕಾರಣೇ ವಿಷಯೇ ಚೈವ ಪ್ರತಿಘಾತಸ್ತು ಸರ್ವಶಃ ॥ ೭೨ ॥

ಅನೈಶ್ವರ್ಯಂ ತು ತತ್ಸರ್ವಂ ಪ್ರತಿಘಾತಾತ್ಮಕಂ ಸ್ಮೃತಂ ।
ಇತ್ಯೇಷಾ ತಾಮಸೀ ವೃತ್ತಿರ್ಭೂತಾದೀನಾಂ ಚತುರ್ವಿಧಾ ॥ ೭೩ ॥

ಸತ್ವಸ್ಥಮಾತ್ರಕಂ ಚಿತ್ತಂ ತಥಾ ಸತ್ವಪ್ರದರ್ಶನಾತ್ ।
ತತ್ವಾನಾಂ ಚ ತಥಾ ತತ್ವಂ ದೃಷ್ಟ್ವಾ ವೈ ತತ್ವದರ್ಶನಾತ್ ॥ ೭೪ ॥

ಸತ್ವಕ್ಷೇತ್ರಜ್ಞನಾನಾತ್ವಮೇತತ್ ಜ್ಞಾನಾರ್ಥದರ್ಶನಂ ।
ನಾನಾತ್ವದರ್ಶನಂ ಜ್ಞಾನಂ ಜ್ಞಾನಾದ್ಯೈ ಯೋಗಮುಚ್ಯತೇ ॥ ೭೫ ॥

---

ತಿರ್ಯಕ್ಪ್ರಾಣಿಯಾಗಿ ಹುಟ್ಟಲು ಮೇಲೆಹೇಳಿದ ದೋಷಗಳೇ ಮುಖ್ಯಕಾರಣವಾಗಿವೆ ಯೆಂದು ಮಹಾತ್ಮರು ಹೇಳುವರು.

೭೨. ವರ್ಣಾಶ್ರಮಧರ್ಮವಿರೋಧವಾದಕಾರಣದಿಂದಲೇ ನರಕಾದಿಗಳಲ್ಲಿ ವಿವಿಧ ಯಾತನಾದಿ ಅನರ್ಥಗಳೂ, ಆರುವಿಧವಾದ ತಿರ್ಯಗ್ಯೋನಿಗಳಲ್ಲಿ ಜನನವೂ ಉಂಟಾಗುವುವೆಂದು ಮಹಾತ್ಮರ ಮತವು.

೭೩. ಪ್ರತಿಬಂಧರೂಪವಾದ ಆ ದುಃಖಗಳೆಲ್ಲವೂ ಅನೈಶ್ವರ್ಯರೂಪವಾದ ಅಜ್ಞಾನಜನ್ಯವೆಂದೇ ತಿಳಿಯಬೇಕು. ಈ ರೀತಿಯಾಗಿ ಪ್ರಾಣಿಗಳಿಗೆ ತಮೋಗುಣ ದಿಂದ ನಾಲ್ಕುವಿಧವಾದ ವೃತ್ತಿಗಳು ಉಂಟಾಗುವುವು.

೭೪. ಹೀಗೆ ಮನಸ್ಸು ಸತ್ವಗುಣಪ್ರಾಚುರ್ಯದಿಂದ ಕೇವಲ ಸತ್ವಗುಣ ದಲ್ಲಿಯೇ ಸ್ಥಿರವಾಗಿದ್ದರೆ ಅಸ್ಥಿರವಾದ ತತ್ವಜ್ಞಾನದಿಂದ ದಿವ್ಯ ಜ್ಞಾನವನ್ನು ಹೊಂದುವರು.

೭೫. ಶುದ್ಧಸತ್ವರೂಪನೂ, ಕ್ಷೇತ್ರಜ್ಞನೂ, ಆದ ಶ್ರೀಭಗವಂತನ ನಾನಾತ್ವವು ಅವರವರ ಯೋಗ್ಯತಾನುಸಾರವಾಗಿ ಮೂರ್ತಿವಿಶೇಷಗಳಿಂದ ಬೇರೆಬೇರೆಯಾಗಿ ತೋರುವದೆಂಬ ಜ್ಞಾನವೇ ಸಕಲ ದರ್ಶನಜನ್ಯವಾಗಿದೆ. ಈ ರೀತಿಯಾಗಿ ಅಂತ ರ್ಯಾಮಿ ನಾನಾತ್ವಜ್ಞಾನವು ಅಥವಾ ಜೀವರಲ್ಲಿ ನಾನಾತ್ವಬುದ್ಧಿಯೂ, ಬ್ರಹ್ಮಜ್ಞಾನ ಸಾಧಕವಾಗಿದೆ. ಅಂತಹ ಬ್ರಹ್ಮಜ್ಞಾನಿಗೆ ವೈರಾಗ್ಯವುಂಟಾಗುವುದು.

**ತೇನ ಬದ್ಧಸ್ಯ ವೈ ಬಂಧೋ ಮೋಕ್ಷೋ ಮುಕ್ತಸ್ಯ ತೇನ ಚ ।**
**ಸಂಸಾರೇ ವಿನಿವೃತ್ತೇ ತು ಮುಕ್ತೋ ಲಿಂಗೇನ ಮುಚ್ಯತೇ ॥ ೭೬ ॥**

**ನಿಃಸಂಬಂಧೋ ಹ್ಯಚೇತನ್ಯಃ ಸ್ವಾತ್ಮನ್ಯೇವಾವತಿಷ್ಠತೇ ।**
**ಸ್ವಾತ್ಮವ್ಯವಸ್ಥಿತಶ್ಚಾಪಿ ವಿರೂಪಾಖ್ಯೇನ ಲಿಖ್ಯತೇ ॥ ೭೭ ॥**

**ಇತ್ಯೇತಲ್ಲಕ್ಷಣಂ ಪ್ರೋಕ್ತಂ ಸಮಾಸಾತ್ ಜ್ಞಾನಮೋಕ್ಷಯೋಃ ।**
**ಸ ಚಾಪಿ ತ್ರಿವಿಧಃ ಪ್ರೋಕ್ತೋ ಮೋಕ್ಷೋ ವೈ ತತ್ವದರ್ಶಿಭಿಃ ॥ ೭೮ ॥**

**ಪೂರ್ವಂ ವಿಯೋಗೋ ಜ್ಞಾನೇನ ದ್ವಿತೀಯೋ ರಾಗಸಂಕ್ಷಯಾತ್ ।**
**ಲಿಂಗಾಭಾವಾತ್ತು ಕೈವಲ್ಯಂ ಕೈವಲ್ಯಾತ್ತು ನಿರಂಜನಂ ॥ ೭೯ ॥**

**ನಿರಂಜನತ್ವಾಚ್ಛುದ್ಧಸ್ತು ತತೋ ನೇತಾ ನ ವಿದ್ಯತೇ ।**
**ತೃಷ್ಣಾಕ್ಷಯಾತ್ತೃತೀಯಸ್ತು ವ್ಯಾಖ್ಯಾತಂ ಮೋಕ್ಷಕಾರಣಂ ॥ ೮೦ ॥**

---

೭೬. ಆದರಿಂದ ಬಂಧಕ್ಕೆ ಅರ್ಹನಾದ ಜೀವನಿಗೆ ಸಂಸಾರಬಂಧನವೂ, ಮುಕ್ತಿ ಯೋಗ್ಯನಾದ ಜ್ಞಾನಿಗೆ ಮೋಕ್ಷವೂ, ದೊರೆಯುವುವು. ಜೀವನಿಗೆ ಸಂಸಾರ ಬಂಧವು ನಿವೃತ್ತವಾದರೆ ಮುಕ್ತಿಯನ್ನು ಹೊಂದಲು ಲಿಂಗದೇಹದಿಂದ ಮುಕ್ತನಾಗುವನು. ಅಂದರೆ ಲಿಂಗದೇಹವು ಹೋಗಿ ಸ್ವರೂಪಯೋಗ್ಯವಾದ ದೇಹವುಂಟಾಗುವುದು.

೭೭. ಸಂಬಂಧರಹಿತನೂ, ಮನೋವಿಕಾರಶೂನ್ಯನೂ, ಆದ ಯೋಗಿಯು ಪರಮಾತ್ಮನಲ್ಲಿಯೇ ಆಶ್ರಯಿಸಿಕೊಂಡಿರುವನು. ಪರಮಾತ್ಮನನ್ನೇ ಆಶ್ರಯಿಸಿದ ಯೋಗಿಯು ವಿರೂಪನೆಂದೂ, ಪ್ರಾಕೃತರೂಪನೆಂದೂ ಹೊಗಳಲ್ಪಡುತ್ತಾನೆ.

೭೮. ಹೀಗೆ ಜ್ಞಾನ, ಮೋಕ್ಷಗಳ ಲಕ್ಷಣಗಳನ್ನು ಸಂಕ್ಷೇಪವಾಗಿ ವರ್ಣಿಸಿರುವೆನು. ಇಂತಹ ಮೋಕ್ಷವನ್ನು ತತ್ವಜ್ಞಾನಿಗಳು ಮೂರುವಿಧವೆಂಬುದಾಗಿ ಹೇಳುತ್ತಾರೆ.

೭೯. ಮೊದಲು ಬ್ರಹ್ಮಜ್ಞಾನದಿಂದ ಸಂಸಾರವಿಮೋಚನೆಯೂ, ರಾಗನಾಶದಿಂದ ವೈರಾಗ್ಯವೂ, ಕಾರಣವಿಲ್ಲದಿರುವುದರಿಂದ ಮೋಕ್ಷವೂ ಉಂಟಾಗುವುವು.

೮೦. ಅಂತಹ ಮೋಕ್ಷದಿಂದ ದುಃಖಲೇಪರಹಿತನೂ, ಅದರಿಂದ ಶುದ್ಧನೂ ಆಗುವನು. ನೇತೃತ್ವಾಭಾವವೂ ಸಿದ್ಧವಾಗುವುದು. ತೃಷ್ಣಾಕ್ಷಯುವೇ ಮೂರನೆಯ ಮೋಕ್ಷಕ್ಕೆ ಮುಖ್ಯಕಾರಣವಾಗಿರುತ್ತದೆಯೆಂದು ಮತವು.

ನಿಮಿತ್ತಮಪ್ರತಿಘಾತೇ ಇಷ್ಟಶಬ್ದಾದಿಲಕ್ಷಣೇ ।
ಅಷ್ಟಾವೇತಾನಿ ರೂಪಾಣಿ ಪ್ರಾಕೃತಾನಿ ಯಥಾಕ್ರಮಂ ॥ ೮೧ ॥

ಕ್ಷೇತ್ರಜ್ಞೇಷ್ವವಸಜ್ಯಂತೇ ಗುಣಮಾತ್ರಾತ್ಮಕಾನಿ ತು ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ವೈರಾಗ್ಯಂ ದೋಷದರ್ಶನಾತ್ ॥ ೮೨ ॥

ದಿವ್ಯೇ ಚ ಮಾನುಷೇ ಚೈವ ವಿಷಯೇ ಪಂಚಲಕ್ಷಣೇ ।
ಅಪ್ರದ್ವೇಷೋಽನಭಿಷ್ವಂಗಃ ಕರ್ತವ್ಯೋ ದೋಷದರ್ಶನಾತ್ ॥ ೮೩ ॥

ತಾಪಪ್ರೀತಿವಿಷಾದಾನಾಂ ಕಾರ್ಯಾಣಾಂ ತು ಪರಿವರ್ಜನಂ ।
ಏವಂ ವೈರಾಗ್ಯಮಾಸ್ಥಾಯ ಶರೀರೀ ನಿರ್ಮಮೋ ಭವೇತ್ ॥ ೮೪ ॥

ಅನಿತ್ಯಮಶಿವಂ ದುಃಖಮಿತಿ ಬುದ್ಧ್ಯಾನುಚಿಂತ್ಯ ಚ ।
ವಿಶುದ್ಧಂ ಕಾರ್ಯಕರಣಂ ಸತ್ಯಾಭ್ಯೇತಿ ತರಾಂತುಯಃ ॥ ೮೫ ॥

---

೮೧. ಪ್ರತಿಬಂಧಕರಹಿತವೂ, ಇಷ್ಟವೂ ಆದ ಶಬ್ದಾದಿವಿಷಯಗಳಲ್ಲಿ ನಿಮಿತ್ತವು ಮೋಕ್ಷಸಾಧಕವಾಗಿದೆ. ಪೂರ್ವೋಕ್ತವಾದ ಈ ಎಂಟು ರೂಪಗಳೂ ಕ್ರಮವಾಗಿ ಪ್ರಾಕೃತವಾಗಿವೆಯೆಂದು ಮಹಾತ್ಮರು ಹೇಳುವರು.

೮೨. ಕೇವಲ ಸತ್ವರಜಸ್ತಮೋಗುಣಸ್ವರೂಪಗಳಾದ ಈ ಎಂಟು ರೂಪಗಳೂ ಮಹಾತ್ಮರಾದ ಆತ್ಮಜ್ಞಾನಿಗಳಲ್ಲಿ ಇರುತ್ತವೆ. ಈಗ ವೈರಾಗ್ಯಸ್ವರೂಪವನ್ನು ತಿಳಿಸುವೆನು ಕೇಳಿರಿ. ಈ ಸಂಸಾರವಿಷಯಕವಾದ ರಾಗದಲ್ಲಿ ಅನೇಕ ದೋಷಗಳಿರುತ್ತವೆ.

೮೩. ದಿವ್ಯವೂ, ಮನುಷ್ಯಯೋಗ್ಯವೂ, ರೂಪರಸಗಂಧ ಶಬ್ದಸ್ವರೂಪಗಳೂ ಆದ ಪಂಚವಿಷಯಗಳಲ್ಲಿ ದೋಷವಿರುವುದರಿಂದ ಕೇವಲದ್ವೇಷವನ್ನೂ, ಪ್ರೀತಿಯನ್ನೂ, ಮಾಡಬಾರದೆಂದು ಮಹಾತ್ಮರು ಹೇಳುವರು.

೮೪. ಶರೀರತಾಪ, ಪ್ರೀತಿ, ದುಃಖ, ಇವುಗಳನ್ನುಂಟುಮಾಡುವ ಕಾರ್ಯಗಳನ್ನು ಬಿಡಬೇಕು. ಈ ರೀತಿಯಾಗಿ ವೈರಾಗ್ಯವನ್ನು ಪಡೆದ ಪುರುಷನು ಅಹಂಕಾರ ವರ್ಜಿತನಾಗಿರುವನು.

೮೫. ಯಾವ ಪುರುಷನು ವಿಷಯಸುಖವು ಅನಿತ್ಯವಾಗಿರುವುದು. ದುಃಖವೂ, ಅಸಹ್ಯವೂ, ಅಮಂಗಳವೂ ಆಗಿರುವುದೆಂದು ಬುದ್ಧಿಯಿಂದ ವಿಮರ್ಶಿಸಿ, ಪರಿಶುದ್ಧವೂ ಯೋಗ್ಯವೂ ಆದ ಕರ್ಮಗಳನ್ನಾಚರಿಸುವನೋ ಅವನು ಪರಮಪದವಿಯನ್ನು ಹೊಂದುವನು.

ಪರಿಪಕ್ವಕಷಾಯೋ ಹಿ ಕೃತ್ಸ್ನಾನ್ ದೋಷಾನ್ ಪ್ರಪಶ್ಯತಿ ।
ತತಃ ಪ್ರಯಾಣಕಾಲೇ ಹಿ ದೋಷೈರ್ನೈಮಿತ್ತಿಕೈಸ್ತಥಾ ॥ ೮೬ ॥

ಉಷ್ಮಾ ಪ್ರಕುಪಿತಃ ಕಾಯೇ ತೀವ್ರವಾಯುಸಮೀರಿತಃ ।
ಸ ಶರೀರಮುಪಾಶ್ರಿತ್ಯ ಕೃತ್ಸ್ನಾನ್ ದೋಷಾನ್ ರುಣದ್ಧಿ ವೈ ॥ ೮೭ ॥

ಪ್ರಾಣಸ್ಥಾನಾನಿ ಭಿಂದನ್ ಹಿ ಛಿಂದನ್ಮರ್ಮಾಣ್ಯತೀತ್ಯ ಚ ।
ಶೈತ್ಯಾತ್ಪ್ರಕುಪಿತೋ ವಾಯುರೂರ್ಧ್ವಂತು ಕ್ರಮತೇ ತತಃ ॥ ೮೮ ॥

ಸ ಚಾಯಂ ಸರ್ವಭೂತಾನಾಂ ಪ್ರಾಣಸ್ಥಾನೇಷ್ವವಸ್ಥಿತಃ ।
ಸಮಾಸಾತ್ಸಂವೃತೇ ಜ್ಞಾನೇ ಸಂವೃತ್ತೇಷು ಚ ಕರ್ಮಸು ॥ ೮೯ ॥

ಸ ಜೀವೋಽನಭ್ಯಧಿಷ್ಠಾನಃ ಕರ್ಮಭಿಃ ಸ್ವೈಃ ಪುರಾಕೃತೈಃ ।
ಅಷ್ಟಾಂಗಪ್ರಾಣವೃತ್ತಿರ್ವೈ ಸ ವಿಚ್ಯಾವಯತೇ ಪುನಃ ॥ ೯೦ ॥

---

೮೬–೮೭. ಪರಿಪಕ್ವವಾದ ಜ್ಞಾನವುಳ್ಳ ಮುಮುಕ್ಷುಪುರುಷನು ಸಮಸ್ತವಾದ ದೋಷಗಳನ್ನರಿತು ಅವನ್ನು ತ್ಯಜಿಸುವನು. ತರುವಾಯ ಪ್ರಯಾಣಕಾಲದಲ್ಲಿ ಸಮಸ್ತದೋಷಗಳಿಂದಲೂ ಶರೀರದಲ್ಲಿ ಅಗ್ನಿಯು ಉದ್ಭವಿಸಿ ತೀವ್ರವಾದ ವಾಯುವಿನಿಂದ ಪ್ರಜ್ವಲಿತವಾಗಿ ಈ ಶರೀರಗತವಾದ ಸರ್ವದೋಷಗಳನ್ನೂ ದಹಿಸುವುದು.

೮೮. ತರುವಾಯ ಅಂತ್ಯಕಾಲದಲ್ಲಿ ಪ್ರಾಣವಾಯುವು ಪ್ರಾಣಸ್ಥಾನಗಳನ್ನು ಭೇದಿಸಿ, ಮರ್ಮಸ್ಥಾನಗಳನ್ನು ಭೇದಿಸಿ, ಮುಂದಕ್ಕೆ ಹೋಗಿ, ಶೈತ್ಯದಿಂದ ಪ್ರವೃದ್ಧವಾಗಿ ಊರ್ಧ್ವಗಾಮಿಯಾಗುವುದು.

೮೯. ಆ ಪ್ರಾಣವಾಯುವೇ ಸರ್ವಭೂತಗಳಲ್ಲಿಯೂ ಜೀವನಿಯಾಮಕವಾಗಿ ಪ್ರಾಣಸ್ಥಾನಗಳಲ್ಲಿರುವುದು. ಅಂತಹ ಜೀವನು ಸಂಸಾರವೆಸೆಯಲ್ಲಿ ಜ್ಞಾನದಿಂದಲೂ, ಕರ್ಮದಿಂದಲೂ ಆವೃತನಾಗಿರುವನು.

೯೦. ಅಂತಹ ಜೀವನು ಅಂತ್ಯಕಾಲದಲ್ಲಿ ಆಶ್ರಯರಹಿತನಾಗಿ ಪೂರ್ವಾರ್ಜಿತವಾದ ಸ್ವಕರ್ಮಗಳಿಂದ ಆವೃತನಾಗಿ ಅಷ್ಟಾಂಗಪ್ರಾಣಾಯಾಮ ಯೋಗಸಿದ್ಧಿಯನ್ನು ಪಡೆದು ಮುಕ್ತನಾಗುವನು.

ಶರೀರಂ ಪ್ರಜಹಂಸೋ ವೈ ನಿರುಚ್ಛ್ವಾಸಸ್ತತೋ ಭವೇತ್ ।
ಏವಂ ಪ್ರಾಣೈಃ ಪರಿತ್ಯಕ್ತೋ ಮೃತ ಇತ್ಯಭಿಧೀಯತೇ ॥ ೯೧ ॥

ಯಥೇಹ ಲೋಕೇ ಖದ್ಯೋತಂ ನೀಯಮಾನವಿತಸ್ತತಃ ।
ರಂಜನಂ ತದ್ವಥೇ ಯತ್ತು ನೇತಾ ನೇತಾ ನ ವಿದ್ಯತೇ ॥ ೯೨ ॥

ತೃಷ್ಣಾಕ್ಷಯಸ್ತೃತೀಯಸ್ತು ವ್ಯಾಖ್ಯಾತಂ ಮೋಕ್ಷಲಕ್ಷಣಂ ।
ಶಬ್ದಾದ್ಯೇ ವಿಷಯೇ ದೋಷವಿಷಯೇ ಪಂಚಲಕ್ಷಣೇ ॥ ೯೩ ॥

ಅಪ್ರದ್ವೇಷೋಽನಭಿಷ್ವಂಗಃ ಪ್ರೀತಿತಾಪವಿವರ್ಜನಂ ।
ವೈರಾಗ್ಯಕಾರಣಂ ಹ್ಯೇತೇ ಪ್ರಕೃತೀನಾಂ ಲಯಸ್ಯ ಚ ॥ ೯೪ ॥

ಅಷ್ಟೌ ಪ್ರಕೃತಯೋ ಜ್ಞೇಯಾ ಪೂರ್ವೋಕ್ತಾ ವೈ ಯಥಾಕ್ರಮಂ ।
ಅವ್ಯಕ್ತಾದ್ಯಾಸ್ತು ವಿಜ್ಞೇಯಾ ಭೂತಾಂತಾಃ ಪ್ರಕೃತೇರ್ಲಯಾಃ ॥ ೯೫ ॥

---

೯೧. ಯೋಗಿಯಾದ ಪುರುಷನು ಶರೀರವನ್ನು ಬಿಡಲಿಚ್ಛಿಸುವಾಗ ಅವನ ದೇಹದಲ್ಲಿ ಉಚ್ಛ್ವಾಸ ನಿಶ್ವಾಸಗಳು ನಿಂತುಹೋಗುತ್ತವೆ. ಹೇಗೆ ಪ್ರಾಣವಾಯುವಿನ ಸಂಚಾರವಿಲ್ಲದೆ ಅದು ಶರೀರವನ್ನು ಬಿಟ್ಟು ಹೊರಟು ಹೋದರೆ ಮೃತನೆಂದು ಪ್ರಸಿದ್ಧನಾಗುವನು.

೯೨. ಈ ಲೋಕದಲ್ಲಿ ಒಬ್ಬ ಪುರುಷನು ಒಂದು ಮಿಂಚಿನ ಹುಳವನ್ನು ಅಲ್ಲಿಂದಿಲ್ಲಿಗೆ ತೆಗೆದುಕೊಂಡು ಹೋಗುವಾಗ ಅದರ ಕಾಂತಿಯು ಚಲಿಸುವಂತೆ ಪ್ರಾಣ ದೇವನು ಜೀವನನ್ನು ಕರೆದೊಯ್ಯುವನು. ಅವರು ಹೋಗುವಾಗ ಪ್ರಾಣದೇವನೂ ಜೀವನೂ ದೃಷ್ಟಿಗೆ ಗೋಚರರಾಗುವುದಿಲ್ಲ.

೯೩–೯೪. ಆಶಾಪರಿತ್ಯಾಗವೇ ಮೋಕ್ಷಕ್ಕೆ ಮೂರನೆಯಕಾರಣವಾಗಿದೆಯೆಂದು ಮೊದಲೇ ನಿರೂಪಿಸಿರುವೆನು. ಶಬ್ದಸ್ಪರ್ಶರೂಪರಸಗಂಧರೂಪಗಳೂ, ದೋಷವಿಶಿಷ್ಟ ಗಳೂ ಆದ ಪಂಚವಿಷಯಗಳಲ್ಲಿ ಅದ್ವೇಷ ಮತ್ತು ಅತ್ಯಾಸಕ್ತಿ, ಪ್ರೀತಿ, ತಾಪ ಇವು ಗಳ ತ್ಯಾಗ ಇವು ವೈರಾಗ್ಯಕ್ಕೂ, ಪ್ರಕೃತಿಗಳ ಲಯಕ್ಕೂ ಕಾರಣವಾಗಿವೆ.

೯೫. ಪೂರ್ವೋಕ್ತಗಳಾದ ಎಂಟು ವಿಧ ಪ್ರಕೃತಿಗಳನ್ನೂ ಯಥಾಕ್ರಮವಾಗಿ ತಿಳಿಯಬೇಕು. ಅವ್ಯಕ್ತತತ್ವಮೊದಲುಗೊಂಡು ಪಂಚಭೂತಗಳವರೆಗೂ ಇರುವ ಎಂಟು ಪ್ರಕೃತಿಗಳು ಕ್ರಮವಾಗಿ ಲಯವಾಗುವುವು.

ವರ್ಣಾಶ್ರಮಾಚಾರಯುಕ್ತಾಃ ಶಿಷ್ಟಾಃ ಶಾಸ್ತ್ರವಿರೋಧಿನಃ ।
ವರ್ಣಾಶ್ರಮಾಣಾಂ ಧರ್ಮೋऽಯಂ ದೇವಸ್ಥಾನೇಷು ಕಾರಣಂ ॥ ೯೬ ॥

ಬ್ರಹ್ಮಾದೀನೀ ಪಿಶಾಚಾಂತಾನ್ಯಷ್ಟೌ ಸ್ಥಾನಾನಿ ದೇವತಾಃ ।
ಐಶ್ವರ್ಯಮಣಿಮಾದ್ಯಂ ಹಿ ಕಾರಣಂ ಹ್ಯಷ್ಟಲಕ್ಷಣಂ ॥ ೯೭ ॥

ನಿಮಿತ್ತಮಪ್ರತೀಘಾತ ಇಷ್ಟೇ ಶಬ್ದಾದಿಲಕ್ಷಣೇ ।
ಅಷ್ಟಾವೇತಾನಿ ರೂಪಾಣಿ ಪ್ರಾಕೃತಾನಿ ಯಥಾಕ್ರಮಂ ॥ ೯೮ ॥

ಕ್ಷೇತ್ರಜ್ಞೇಷ್ವನುಸಜ್ಯಂತೇ ಗುಣಮಾತ್ರಾತ್ಮಕಾನಿ ತು ।
ಪ್ರಾವೃಟ್ಕಾಲೇ ಪೃಥಕ್ತ್ವೇನ ಪಶ್ಯಂತೀ ಹ ನ ಚಕ್ಷುಷಾ ॥ ೯೯ ॥

---

೯೬. ಬ್ರಾಹ್ಮಣಾದಿ ವರ್ಣಗಳೂ, ಬ್ರಹ್ಮಚರ್ಯಾದ್ಯಾಶ್ರಮಗಳೂ, ಆಚಾರಗಳೂ ಇವುಗಳಲ್ಲಿ ನಿಷ್ಠರೂ, ಶಾಸ್ತ್ರಗಳಿಗೆ ಅವಿರೋಧಗಳೂ ಅಂದರೆ ಶಾಸ್ತ್ರಾನುಯಾಯಿಗಳೂ ಆದ ಪುರುಷರೇ ಶಿಷ್ಟರಾಗಿರುವರು. ವರ್ಣಾಶ್ರಮಧರ್ಮಗಳೇ ದೇವಾದಿಗಳ ಸ್ವರ್ಗಾದಿಸ್ಥಾನಗಳಿಗೆ ಕಾರಣಗಳಾಗಿವೆ. ಅಂದರೆ ವರ್ಣಾಶ್ರಮಾಚಾರಧರ್ಮಗಳಿಂದ ಸ್ವರ್ಗಾದಿಲೋಕಗಳು ಉಂಟಾಗುವುವು.

೯೭. ಬ್ರಹ್ಮದೇವನ ಸತ್ಯಲೋಕವೇ ಮೊದಲಾದ ಪಿಶಾಚಗಳಿರುವ ಎಂಟು ಸ್ಥಾನಗಳೇ ದೇವತಾಸ್ಥಾನಗಳಾಗಿರುವುವು. ಅಣಿಮಾದ್ಯಷ್ಟೈಶ್ವರ್ಯಗಳೇ ದೇವತೆಗಳ ಅಷ್ಟಲಕ್ಷಣಗಳಾಗಿವೆ.

೯೮. ಇಷ್ಟವಾದ ಶಬ್ದಾದಿವಿಷಯಗಳಲ್ಲಿ ತಡೆಯಿಲ್ಲದೆ ಇರುವದು ನಿಮಿತ್ತವು. ಇವೇ ಮೊದಲಾದ ಅಷ್ಟರೂಪಗಳು ಕ್ರಮವಾಗಿ ಪ್ರಾಕೃತಗಳಾಗಿವೆ.

೯೯. ಗುಣಮಾತ್ರಸ್ವರೂಪಗಳಾದ ಈ ರೂಪಗಳು ಕ್ಷೇತ್ರಜ್ಞರಲ್ಲಿ ದೃಷ್ಟವಾಗಿವೆ. ಆ ರೂಪಗಳು ವರ್ಷಾಕಾಲದ ಮೇಘಗಳಂತೆ ಬೇರೆಬೇರೆಯಾಗಿ ದೃಷ್ಟಿಗೆ ಗೋಚರವಾಗುವುದಿಲ್ಲ.

ಪಶ್ಯಂತ್ಯೇವಂ ವಿಧಂ ಸಿದ್ಧಾ ಜೀವಂ ದಿವ್ಯೇನ ಚಕ್ಷುಷಾ ।
ಶ್ವಾವಿತಿ ಶ್ವಾನಪಾನಶ್ಚ ಯೋನೀಃ ಪ್ರವಿಶತಸ್ತಥಾ ॥ ೧೦೦ ॥

ತಿರ್ಯಗೂರ್ಧ್ವಮಧಸ್ತಾಚ್ಚ ಧಾವತೋಽಪಿ ಯಥಾಕ್ರಮಂ ।
ಜೀವಪ್ರಾಣಾಸ್ತಥಾಲಿಂಗಂ ಕಾರಣಂ ಚ ಚತುಷ್ಟಯಂ ॥ ೧೦೧ ॥

ಪರ್ಯಾಯವಾಚಕೈಃ ಶಬ್ದೈರೇಕಾರ್ಥೈಃ ಸೋಽಭಿಲಿಖ್ಯತೇ ।
ವ್ಯಕ್ತಾವ್ಯಕ್ತೇ ಪ್ರಮಾಣೋಽಯಂ ಸ ವೈ ರೂಪಂ ತು ಕೃತ್ಸ್ನಶಃ ॥ ೧೦೨ ॥

ಅವ್ಯಕ್ತಾಂತಗೃಹೀತಂ ಚ ಕ್ಷೇತ್ರಜ್ಞಾಧಿಷ್ಠಿತಂ ಚ ಯತ್ ।
ಏವಂ ಜ್ಞಾತ್ವಾ ಶುಚಿರ್ಭೂತ್ವಾ ಜ್ಞಾನಾದ್ವೈ ವಿಪ್ರಮುಚ್ಯತೇ ॥ ೧೦೩ ॥

---

೧೦೦. ಸಿದ್ಧಪುರುಷರು ತಮ್ಮ ದಿವ್ಯಜ್ಞಾನದಿಂದ ಜೀವರ ನಾನಾಯೋನಿಗಳಲ್ಲಿ ಪ್ರವೇಶವನ್ನು ತಿಳಿಯುತ್ತಾರೆ. ಜೀವನು ನಾಯಿ, ನರಿ ಮೊದಲಾದ ನಾನಾ ಯೋನಿಗಳಲ್ಲಿ ಜನಿಸಿ, ನಾಯಿ ನರಿ ಮೊದಲಾದ ರೂಪಗಳನ್ನು ಹೊಂದಿ, ಅವುಗಳ ಅಶನ ಪಾನಾದಿಕಾರ್ಯಗಳನ್ನು ತಿಳಿಯುವನು.

೧೦೧. ಜ್ಞಾನಿಗಳು ತಮ್ಮ ದಿವ್ಯಜ್ಞಾನದಿಂದ ಮೇಲೆ ಕೆಳಗೆ ಸುತ್ತಮುತ್ತಲು ಓಡಾಡುತ್ತಿರುವ ಜೀವ, ಶರೀರ, ಪ್ರಾಣ ಮತ್ತು ಅದರ ಕಾರಣ ಈ ನಾಲ್ಕನ್ನೂ ಕ್ರಮವಾಗಿ ತಿಳಿಯುವರು.

೧೦೨. ಪರ್ಯಾಯವಾಚಕಗಳೂ, ಏಕಾರ್ಥಗಳೂ ಆದ ಬ್ರಹ್ಮ, ವಿಷ್ಣು, ಮಹೇಶ್ವರಾದಿ ಶಬ್ದಗಳಿಂದ ಆ ಭಗವಂತನು ವಾಚ್ಯನಾಗಿರುವನು. ಆ ಭಗವಂತನೇ ರಾಮಕೃಷ್ಣಾದಿರೂಪಗಳಿಂದ ವ್ಯಕ್ತನೂ, ಮೂಲರೂಪದಿಂದ ಅವ್ಯಕ್ತನೂ ಆಗಿರುವನು. ಅವನ ಸಂಪೂರ್ಣವಾದ ರೂಪದಿಂದ ಸರ್ವಾಂತರ್ಯಾಮಿಯಾಗಿರುವನು.

೧೦೩. ಪರಮಾತ್ಮನು ಅವ್ಯಕ್ತತತ್ವಾಭಿಮಾನಿಯಾದ ಮಹಾಲಕ್ಷ್ಮೀದೇವಿಯಿಂದ ಸಮ್ಯಕ್‌ಜ್ಞಾತನೂ, ಕ್ಷೇತ್ರಜ್ಞನಾದ ಜೀವನಿಯಾಮಕನೂ ಆಗಿರುವನು. ಈ ರೀತಿಯಾಗಿ ಪುರುಷನು ಯಥಾರ್ಥಜ್ಞಾನದಿಂದ ಪರಮಾತ್ಮಸ್ವರೂಪವನ್ನು ತಿಳಿದು ಶುಚಿಯಾಗಿ ಮುಕ್ತನಾಗುವನು.

ನಷ್ಟಂ ಚೈವ ಯಥಾ ತತ್ತ್ವಂ ತತ್ತ್ವಾನಾಂ ತತ್ತ್ವದರ್ಶನಂ ।
ಯಥೇಷ್ಟಂ ಪರಿನಿರ್ಯಾತಿ ಭಿನ್ನೇ ದೇಹೇ ಸುನಿರ್ವೃತೇ ॥ ೧೦೪ ॥

ಭಿದ್ಯತೇ ಕರಣಂ ಚಾಪಿ ಹ್ಯವ್ಯಕ್ತಾಜ್ಞಾನಿನಸ್ತತಃ ।
ಮುಕ್ತೋ ಗುಣಶರೀರೇಣ ಪ್ರಾಣಾದ್ಯೇನ ತು ಸರ್ವಶಃ ॥ ೧೦೫ ॥

ನಾನ್ಯಚ್ಛರೀರಮಾದತ್ತೇ ದಗ್ಧೇ ಬೀಜೇ ಯಥಾಂಕುರಃ ।
ಜೀವಿತಃ ಸರ್ವಸಂಸಾರಾದ್ಬೀಜಶಾರೀರಮಾನಸಃ ॥ ೧೦೬ ॥

ಜ್ಞಾನಾಚ್ಚತುರ್ದಶಾಚ್ಛುದ್ಧಃ ಪ್ರಕೃತಿಂ ಸೋಽನುವರ್ತತೇ ।
ಪ್ರಕೃತಿಂ ಸತ್ಯ ಮಿತ್ಯಾಹುರ್ವಿಕಾರೋಽನೃತಮುಚ್ಯತೇ ॥ ೧೦೭ ॥

---

೧೦೪. ಜೀವಾವರಕವಾದ ಶರೀರವು ನಷ್ಟವಾದರೆ ಶರೀರಗತರಾದ ತತ್ತ್ವಾದಿಗಳೆಲ್ಲವೂ ತಮ್ಮ ತಮ್ಮ ಕಾರಣಗಳಲ್ಲಿ ಲಯವಾಗುವುವು. ತತ್ತ್ವಾಭಿಮಾನಿಗಳೂ ಸಹ ತಮ್ಮ ಕಾರಣಗಳಲ್ಲಿ ಲೀನರಾಗುವರು.

೧೦೫. ತರುವಾಯ ಅವ್ಯಕ್ತನೂ, ಅಜ್ಞನೂ ಆದ ಜೀವನ ಇಂದ್ರಿಯಗಳೆಲ್ಲವೂ ತಮ್ಮ ಕಾರಣಗಳಲ್ಲಿ ಲಯವಾಗುವುವು. ಜೀವನು ಮುಕ್ತನಾದರೆ ಪ್ರಾಕೃತಶರೀರದಿಂದಲೂ, ಭೌತಿಕವಾದ ಪ್ರಾಣಾದಿಗಳಿಂದಲೂ ಬಿಡಲ್ಪಡುವನು.

೧೦೬. ಬೀಜವು ಸುಡಲ್ಪಟ್ಟರೆ ಅದರಿಂದ ಅಂಕುರವು ಹೇಗೆ ಉಂಟಾಗುವುದಿಲ್ಲವೋ ಹಾಗೆ ಜೀವನು ಮುಕ್ತನಾದರೆ ಜನನ ಮರಣಗಳಿಗೆ ಸಾಧಕವಾದ ಬೇರೊಂದು ಶರೀರವನ್ನು ಹೊಂದುವುದಿಲ್ಲ. ಸಂಸಾರಕ್ಕೆ ಕಾರಣವೂ, ಮಾನಸಿಕ ರೂಪವೂ, ಬೀಜರೂಪವೂ ಆದ ವಾಸನಾರೂಪವಾದ ಸಂಸ್ಕಾರವು ನಷ್ಟವಾಗಿರುವುದರಿಂದ ಬೇರೊಂದು ಶರೀರವು ಬರಲು ಕಾರಣವೇ ಇಲ್ಲ.

೧೦೭. ಜೀವನು ಚತುರ್ದಶತತ್ತ್ವಜ್ಞಾನದಿಂದ ಶುದ್ಧನಾಗಿ ಪ್ರಕೃತಿಯನ್ನು ಅನುವರ್ತಿಸುವನು. ಪ್ರಕೃತಿಯನ್ನು ಸತ್ಯವೆಂದೂ ವಿಕೃತವಾದ ರಜ್ಜುಸರ್ಪಾದಿಗಳ ಅನೃತವೆಂದೂ ಜ್ಞಾನಿಗಳು ಹೇಳುವರು.

ತತ್ಸದ್ಭಾವೋಽನೃತಂ ಜ್ಞೇಯಂ ಸದ್ಭಾವಃ ಸತ್ಯಮುಚ್ಯತೇ ।
ಅನಾಮರೂಪಕ್ಷೇತ್ರಜ್ಞನಾಮರೂಪಂ ಪ್ರಚಕ್ಷತೇ । ॥ ೧೦೮ ॥

ಯಸ್ಮಾತ್ ಕ್ಷೇತ್ರಂ ವಿಜಾನಾತಿ ತಸ್ಮಾತ್ ಕ್ಷೇತ್ರಜ್ಞ ಉಚ್ಯತೇ ।
ಕ್ಷೇತ್ರಪ್ರತ್ಯಯತೋ ಯಸ್ಮಾತ್ ಕ್ಷೇತ್ರಜ್ಞಃ ಶುಭ ಉಚ್ಯತೇ ॥ ೧೦೯ ॥

ಕ್ಷೇತ್ರಜ್ಞ ಸ್ಮರ್ಯತೇ ತಸ್ಮಾತ್ ಕ್ಷೇತ್ರಂ ತೈರ್ಜ್ಞೈರ್ವಿಭಾಷ್ಯತೇ ।
ಕ್ಷೇತ್ರತ್ವಪ್ರತ್ಯಯಂ ದೃಷ್ಟಂ ಕ್ಷೇತ್ರಜ್ಞಃ ಪ್ರತ್ಯಯೀ ಸದಾ ॥ ೧೧೦ ॥

ಕ್ಷಯಣಾತ್ ಕರಣಾಚ್ಚೈವ ಕ್ಷತತ್ರಾಣಾತ್ತಥೈವ ಚ ।
ಭೋಜ್ಯತ್ವಾದ್ವಿಷಯತ್ವಾಚ್ಚ ಕ್ಷೇತ್ರಂ ಕ್ಷೇತ್ರವಿದೋ ವಿದುಃ ॥ ೧೧೧ ॥

---

೧೦೮. ಇಲ್ಲದ ವಸ್ತುವನ್ನು ಇದೆಯೆಂದು ತಿಳಿಯೋಣವೇ ಅನೃತವು (ಸುಳ್ಳಾಗುವುದು), ಇರುವ ವಸ್ತುವನ್ನು ಯಥಾರ್ಥವಾಗಿ ತಿಳಿಯುವುವೇ ಸತ್ಯವಾಗುವುದು. ಪ್ರಾಕೃತವಾದ ನಾಮರೂಪರಹಿತನಾದ ಭಗವಂತನನ್ನು ಅಪ್ರಾಕೃತವಾದ ನಾಮರೂಪಗಳುಳ್ಳವನೆಂದು ಮಹಾತ್ಮರು ಹೇಳುವರು.

೧೦೯. ಕ್ಷೇತ್ರವೆಂದರೆ ಶರೀರವೆಂದರ್ಥವು. ಇಂತಹ ಶರೀರವನ್ನು (ವಿಚಾರ) ವಿಮರ್ಶಾಪೂರ್ವಕವಾಗಿ ತಿಳಿಯುವುದರಿಂದ ಜೀವನು ಕ್ಷೇತ್ರಜ್ಞನಾಗುವನು. ಇಂತಹ ಶರೀರಜ್ಞಾನವು ಅಥವಾ ಜೀವಪರಮಾತ್ಮಜ್ಞಾನವು ಪರಮಮಂಗಳದಾಯಕವಾಗಿರುವುದು.

೧೧೦. ಕ್ಷೇತ್ರವೆಂದರೆ ಶರೀರವು. ಕ್ಷೇತ್ರಜ್ಞನೆಂದರೆ ಜೀವನೆಂದು ಸಿದ್ಧವಾಗಿದೆ. ಇಂತಹ ಕ್ಷೇತ್ರಜ್ಞನಾದ ಜೀವನು ಜ್ಞಾನರೂಪನಾಗಿರುವನು. ಅವನನ್ನು ತಿಳಿದಿರುವ ಪರಮಾತ್ಮರು ಜ್ಞಾನಿಯಾಗಿರುವರು.

೧೧೧. ಜೀವನ ಈ ಶರೀರವು ಕ್ಷಯಿಸುವುದರಿಂದಲೂ, ಜನನ ಮರಣಕ್ಕೆ ಕಾರಣವಾಮುದರಿಂದಲೂ, ಗಾಯಕ್ಕೆ ವಿಷಯವಾದ್ದರಿಂದಲೂ, ಭೋಗಾರ್ಹವಾದುರಿಂದಲೂ, ಜ್ಞಾನಕ್ಕೆ ವಿಷಯವಾದುದ್ದರಿಂದಲೂ, ಕ್ಷೇತ್ರಸಂಜ್ಞಿಕವಾಗಿದೆಯೆಂದು ಕ್ಷೇತ್ರಜ್ಞರಾದ ಜ್ಞಾನಿಗಳು ಹೇಳುವರು.

ಮಹದಾದ್ಯಂ ವಿಶೇಷಾಂತಂ ಸರ್ವ್ವೈರೂಪ್ಯಂ ವಿಲಕ್ಷಣಂ ।
ವಿಕಾರಲಕ್ಷಣಂ ತದ್ವೈ ಸಾಕ್ಷರಕ್ಷರಮೇವ ಚ ॥ ೧೧೨ ॥

ತಮೇವ ಚ ವಿಕಾರಂತು ಯಸ್ಮಾದ್ವೈ ಕ್ಷರತೇ ಪುನಃ ।
ತಸ್ಮಾಚ್ಚ ಕಾರಣಾಚ್ಚೈವ ಕ್ಷರಮಿತ್ಯಭಿಧೀಯತೇ ॥ ೧೧೩ ॥

ಸುಖದುಃಖಮೋಹಭಾವಾಭೋಜ್ಯಮಿತ್ಯಭಿಧೀಯತೇ ।
ಅಚೇತತ್ವಾದ್ಧಿ ವಿಷಯಸ್ತದ್ಧಿ ಧರ್ಮವಿಭುಃ ಸ್ಮೃತಃ ॥ ೧೧೪ ॥

ನ ಕ್ಷೀಯತೇ ನ ಕ್ಷರತಿ ವಿಕಾರಪ್ರಸತಂ ತು ತತ್ ।
ಅಕ್ಷರಂ ತೇನ ಚಾಪ್ಯುಕ್ತಮಕ್ಷೀಣತ್ವಾತ್ತಥೈವ ಚ ॥ ೧೧೫ ॥

---

೧೧೨. ಮಹದಾದಿಯಾಗಿ ವಿಶೇಷಾಂತಗಳಾದ ಸರ್ವವೂ ವಿರೂಪವಾಗಿಯೂ ವಿಲಕ್ಷಣವಾಗಿಯೂ ಇರುವುವು. ಕ್ಷರಾಕ್ಷರಗಳಾದ ಶರೀರಗಳಿಗೂ ಜೀವಾದಿಗಳಿಗೂ ಪರಮಾತ್ಮನಿಗೂ ವಿಕಾರದಭಾವಗಳೇ ಮುಖ್ಯಲಕ್ಷಣಗಳಾಗಿವೆ.

೧೧೩. ಅಂತಹ ವಿಕಾರವನ್ನು ಹೊಂದುವಕಾರಣದಿಂದಲೇ ಶರೀರಾದಿಗಳು ಕ್ಷರಸಂಜ್ಞಿಕವಾಗಿವೆ. ಕ್ಷರಣರೂಪವಾದ ವಿಕಾರವೇ ಕ್ಷರವೆಂಬ ನಾಮಕ್ಕೆ ಮುಖ್ಯ ಬೀಜವಾಗಿರುವುದು.

೧೧೪. ಸುಖ ದುಃಖ ಮೋಹಾದಿ ಭಾವಗಳು ಪುರುಷನು ಅನುಭವಿಸಲು ಭೋಗಿಸಲು ಅರ್ಹವಾಗಿರುವುದರಿಂದ ಭೋಜ್ಯವಾಗಿದೆಯೆಂದು ಹೇಳುವರು. ಅವು ಚೇತನವಾಗಿರುವುದರಿಂದ ವಿಷಯುವೆಂದು ಧರ್ಮಜ್ಞರು ಹೇಳುವರು.

೧೧೫. ಜೀವನು ಮತ್ತೊಬ್ಬರಿಂದ ಕ್ಷಯವಾಗದಿರುವುದರಿಂದಲೂ ಸ್ವತಃ ನಾಶವಾಗದಿರುವುದರಿಂದಲೂ ಅಕ್ಷರಶಬ್ದನಾಗಿರುವನು. ಮತ್ತು ಕ್ಷಯಿಸದೇ ಏಕರೂಪನಾಗಿರುವುದರಿಂದಲೂ ಅಕ್ಷರನಾಮಕನಾಗಿರುವನು.

ಯಸ್ಮಾತ್ಪುರ್ಯನುಶೇತೇ ಚ ತಸ್ಮಾತ್ಪುರುಷ ಉಚ್ಯತೇ ।
ಪುರಪ್ರತ್ಯಯಿಕೋ ಯಸ್ಮಾತ್ ಪುರುಷೇತ್ಯಭಿಧೀಯತೇ ॥ ೧೧೬ ॥

ಪುರುಷಂ ಕಥಯಸ್ವಾಥ ಕಥಂತತ್ ಜ್ಞೈರ್ವಿಭಾವ್ಯತೇ ।
ಶುದ್ಧೋ ನಿರಂಜನಾಭಾಸೋ ಜ್ಞಾನಾಜ್ಞಾನವಿವರ್ಜಿತಃ ॥ ೧೧೭ ॥

ಅಸ್ತಿ ನಾಸ್ತೀತಿ ಸೋಽನ್ಯೋ ವಾ ಬದ್ಧೋ ಮುಕ್ತೋ ಗತಃ ಸ್ಥಿತಃ ।
ನೈರ್ಹೇತುಕಾಂತಾನಿರ್ದೇಶ್ಯ ಸೂಕ್ತಸ್ತಸ್ಮಿನ್ನ ವಿದ್ಯತೇ ॥ ೧೧೮ ॥

ಶುದ್ಧತ್ವಾನ್ನ ತು ದೇಶ್ಯೋ ವೈ ಹೃಷ್ಟತ್ವಾತ್ಸಮದರ್ಶನಃ ।
ಆತ್ಮಪ್ರತ್ಯಯಕಾರೀ ಸಾರನೂನಂ ಚಾಪಿ ಹೇತುಕಂ ॥
ಭವಗ್ರಾಹ್ಯಮನುಮಾನ್ಯಂ ಚಿಂತಯನ್ನ ಪ್ರಮುಹ್ಯತೇ ॥ ೧೧೯ ॥

---

೧೧೬. ಜೀವನು ಪುರಿ ಅಂದರೆ ಶರೀರದಲ್ಲಿ ವಾಸಮಾಡುವುದರಿಂದಲೂ, ಪುರವೆಂಬ ಶಬ್ಧವು ಜ್ಞಾನವಾಚಕವಾಗಿರುವುದರಿಂದಲೂ ಪುರುಷಶಬ್ದವಾಚ್ಯನಾಗಿರುವನು.

೧೧೭. ಈಗ ಪುರುಷಲಕ್ಷಣವೆಂತಹದು. ಅವನನ್ನು ತಿಳಿದಿರುವವರು ಏನೆಂದು ಹೇಳುವರು. ಅಂತಹ ಆತ್ಮನು ಜ್ಞಾನಾಜ್ಞಾನರಹಿತನೂ, ಶುದ್ಧನೂ, ನಿರಂಜನಾಭಾಸನೂ ಆಗಿರುವನೆಂದು ಜ್ಞಾನಿಗಳು ಹೇಳುವರು.

೧೧೮. ಅಂತಹ ಜೀವನಿರುವನೆಂದು ಕೆಲವರು ಹೇಳುವರು. ಕೆಲವುವಾದಿಗಳು ದೇಹಾತಿರಿಕ್ತನಾದ ಆತ್ಮನು ಇಲ್ಲವೇ ಇಲ್ಲವೆಂದು ಹೇಳುವರು. ಜೀವನು ಅತಿರಿಕ್ತನು, ಬದ್ಧನು, ಮುಕ್ತನು, ಗಮನಾಗಮನ ಸ್ಥಿತಿಗಳುಳ್ಳವನುಎಂದು ಕೆಲವರು ಹೇಳುವರು. ಅಹೇತುಕನೂ ಏಕಾಂತ ನಿರ್ದೇಶ್ಯಕ್ಕೆ ಅವಿಷಯನೂ ಆಗಿರುವನೆನ್ನುವರು.

೧೧೯. ಅವನು ಶುದ್ಧನಾಗಿರುವುದರಿಂದ ಉದ್ದೇಶ್ಯನಲ್ಲ. ಸಂತುಷ್ಟನಾಗಿರುವುದರಿಂದ ಸಮಾನಜ್ಞಾನಿಯಾಗಿರುವನು. ಮತ್ತು ಆತ್ಮಪ್ರತ್ಯಯಕಾರಿಯು, ಅಂದರೆ ಪರಮಾತ್ಮನಿರುವನೆಂಬ ನಂಬಿಕೆಯುಳ್ಳವನೂ, ಸಕಾರಣನೂ, ಆಗಿರುವನು. ಮತ್ತು ಅವನು ಭಾವಗ್ರಾಹ್ಯನೂ, ಅನುಮಾನಕ್ಕೆ ವಿಷಯನೂ, ಆಗಿರುವನೆಂದು ಹೇಳುವವನು ಎಂದಿಗೂ ಭ್ರಾಂತನಾಗನು.

ಯದಾ ಪಶ್ಯತಿ ಜ್ಞಾತಾರಂ ಶಾಂತಾರ್ಥಂ ದರ್ಶನಾತ್ಮಕಂ ।
ದೃಶ್ಯಾದೃಶ್ಯೇಷು ನಿರ್ದೇಶ್ಯಂ ತದಾ ತದುದ್ಧರಂ ವರಂ ॥ ೧೨೦ ॥

ಏವಂ ಜ್ಞಾತ್ವಾ ಸ ವಿಜ್ಞಾತಾ ತತಃ ಶಾಂತಿಂ ನಿಯಚ್ಛತಿ ।
ಕಾರ್ಯೇ ಚ ಕಾರಣೇ ಚೈವ ಬುದ್ಧ್ಯಾದೌ ಭೌತಿಕೇ ತದಾ ॥ ೧೨೧ ॥

ಸಂಪ್ರಯುಕ್ತೋ ವಿಯುಕ್ತೋ ವಾ ಜೀವಿತೋ ವಾ ಮೃತಸ್ಯ ಚ ।
ವಿಜ್ಞಾತಾ ನ ಚ ದೃಶ್ಯೇತ ಪೃಥಕ್ತ್ವೇನೇಹ ಸರ್ವಶಃ ॥ ೧೨೨ ॥

ಸ್ವೇನಾತ್ಮಾನಂ ತಮಾತ್ಮಾನಂ ಕಾರಣಾತ್ಮಾ ನಿಯಚ್ಛತಿ ।
ಪ್ರಕೃತೌ ಕಾರಣೇ ಚೈವ ಸ್ವಾತ್ಮನ್ಯೇವೋಪತಿಷ್ಠತಿ ॥ ೧೨೩ ॥

---

೧೨೦. ಇಂತಹ ಜೀವನು ಯಾವಾಗ ಜ್ಞಾನವಿಷಯನೂ, ಜ್ಞಾತೃವೂ, ಶಾಂತರೂಪನೂ, ಜ್ಞಾನಸ್ವರೂಪನೂ, ದೃಶ್ಯಾದೃಶ್ಯವಸ್ತುಗಳಲ್ಲಿ ಮುಖ್ಯನೂ ಆಗಿರುವನೋ ಆಗ ಅವನು ಉದ್ಧೃತನೂ, ಉತ್ತಮನೂ ಆಗುವನು.

೧೨೧. ಅವನು ಹೀಗೆ ಜ್ಞಾನಿಯೂ, ವಿಶೇಷಜ್ಞಾನಿಯೂ ಆಗಿ ಶಾಂತಿಯನ್ನು ಹೊಂದುವನು. ಮತ್ತು ಭೌತಿಕವಾದ ಕಾರ್ಯಕಾರಣಭಾವದಲ್ಲಿ ಬುದ್ಧಿಶಕ್ತಿಯಿಂದ ವಿವೇಚನೆಯನ್ನು ಮಾಡಿ ಶಾಂತಿಯನ್ನು ಹೊಂದುವನು.

೧೨೨. ಜೀವನು ದೇಹದಲ್ಲಿರುವಾಗಲೂ, ವಿಯೋಗ ಹೊಂದಿರುವಾಗಲೂ, ಬದುಕಿರುವಾಗಲೂ, ಮೃತನಾದಾಗಲೂ ತಾನು ದೇಹಕ್ಕಿಂತಲೂ ಭಿನ್ನನೆಂಬುದಾಗಿ ತಿಳಿಯುವನು. ಅವನಿಗೆ ಈ ಲೋಕದಲ್ಲಿ ಎಂದಿಗೂ ಜ್ಞಾನವು ಉಂಟಾಗುವುದಿಲ್ಲ.

೧೨೩. ಕಾರಣನೂ ಕರ್ತೃವೂ ಆದ ಪರಮಾತ್ಮನು ತನ್ನಧೀನದಲ್ಲಿರುವ ಜೀವಾತ್ಮನನ್ನು ನಿಯಮಿಸಿ ಪ್ರೇರಿಸುವನು. ಪ್ರಕೃತಿಯಲ್ಲಿಯೂ, ಕಾರಣವಾದ ಭೂತಾದಿಗಳಲ್ಲಿಯೂ ಇದ್ದುಕೊಂಡು ಸ್ವಾತ್ಮಾರಾಮನಾಗುವನು.

**ಅಸ್ತಿ ನಾಸ್ತೀತಿ ಸೋಽನ್ಯೋ ವಾ ಇಹಾಮುತ್ರೇತಿ ವಾ ಪುನಃ ।**
**ಏಕತ್ವಂ ವಾ ಪೃಥಕ್ತ್ವಂ ವಾ ಕ್ಷೇತ್ರಜ್ಞಾ ಪುರುಷೇತಿ ವಾ ॥ ೧೨೪ ॥**

**ಆತ್ಮವಾನ್ ಸ ನಿರಾತ್ಮಾ ವಾ ಚೇತನೋಽಚೇತನೋಽಪಿ ವಾ ।**
**ಕರ್ತಾ ವಾ ಸೋಽಪ್ಯಕರ್ತಾ ವಾ ಭೋಕ್ತಾ ವಾ ಭೋಜ್ಯಮೇವ ವಾ ॥ ೧೨೫ ॥**

**ಯಜ್ಞಾತ್ವಾ ನ ನಿವರ್ತಂತೇ ಕ್ಷೇತ್ರಜ್ಞೇ ತು ನಿರಂಜನೇ ।**
**ಅವಾಚ್ಯಂ ತದನಾಖ್ಯಾನಾದಗ್ರಾಹ್ಯತ್ವಾದಹೇತುನಿ ॥ ೧೨೬ ॥**

**ಅಪ್ರತರ್ಕ್ಯಮಚಿಂತ್ಯತ್ವಾದವಾಪ್ಯತ್ವಾಚ್ಚ ಸರ್ವಶಃ ।**
**ನಾಭಿಲಿಂಪತಿ ತತ್ತತ್ವಂ ಸಂಪ್ರಾಪ್ಯ ಮನಸಾ ಸಹ ॥ ೧೨೭ ॥**

---

೧೨೪. ಕೆಲವರು ಇಹಪರಲೋಕಗಳಲ್ಲಿ ಪರಮಾತ್ಮನು ಇರುವನೆಂದೂ, ಇಲ್ಲವೆಂದೂ, ಏಕನೆಂದೂ, ಭಿನ್ನನೆಂದೂ, ಕ್ಷೇತ್ರಜ್ಞನೆಂದೂ, ಪುರುಷನೆಂದೂ ತಿಳಿಯುತ್ತಾರೆ.

೧೨೫. ಕೆಲಕೆಲವರು ಭಗವಂತನು ಆತ್ಮಜ್ಞಾನಿಯು, ಆತ್ಮರಹಿತನು ಎಂಬುದಾಗಿಯೂ, ಚೇತನಾಚೇತನನೆಂಬುದಾಗಿಯೂ, ಕರ್ತಾಕರ್ತನೆಂಬುದಾಗಿಯೂ, ಭೋಕ್ತೃಭೋಜ್ಯಸ್ವರೂಪನೆಂಬುದಾಗಿಯೂ ವರ್ಣಿಸುವರು.

೧೨೬. ಪುರುಷನು ಅಂತಹ ಕ್ಷೇತ್ರಜ್ಞನೂ, ನಿರಂಜನನೂ, ನಿರ್ದೋಷಿಯೂ, ವೇದಗಳಿಂದ ಸಾಕಲ್ಯೇನ ಅವಾಚ್ಯನೂ, ಪ್ರಾಕೃತನಾಮರಹಿತನೂ, ಇಂದ್ರಿಯಾಗ್ರಾಹ್ಯನೂ, ಸ್ವಯಂಕಾರಣರಹಿತನೂ ಆದ ಭಗವಜ್ಞಾನದಿಂದ ಮುಕ್ತನಾಗಿ, ಪುನರ್ಜನನಮರಣಗಳನ್ನು ಪಡೆಯದೇ ಮುಕ್ತನಾಗುವನು.

೧೨೭. ಅಂತಹ ಪರಮಪುರುಷನು ಅಚಿಂತ್ಯನೂ, ಅಪ್ರಾಪ್ಯನೂ ಆಗಿರುವುದರಿಂದ ಊಹಿಸಲೂ ಅಶಕ್ಯನಾಗಿರುವನು. ಇಂತಹ ಭಗವಂತನನ್ನು ಮನಸ್ಸಿನಿಂದ ಧ್ಯಾನಿಸಿದರೆ ಸಕಲವಾದ ಪಾಪಗಳಿಂದಲೂ ಮುಕ್ತನಾಗಿ ಪರಮಸುಖಿಯಾಗುವನು.

ಕ್ಷೇತ್ರಜ್ಞೇ ನಿರ್ಗುಣೇ ಶುದ್ಧೇ ಶಾಂತೇ ಕ್ಷೀಣೇ ನಿರಂಜನೇ ।
ವ್ಯಯೇ ತ ಸುಖದುಃಖೇ ಚ ನಿರುದ್ಧೇ ಶಾಂತಿಮಾಗತೇ ॥ ೧೨೮ ॥

ನಿರಾತ್ಮಕೇ ಪುನಸ್ತಸ್ಮಿನ್ನ್ಯಾಖ್ಯಾವಾಚ್ಯೋ ನ ವಿದ್ಯತೇ ।
ಏತೌ ಸಂಹಾರವಿಸ್ತಾರೌ ವ್ಯಕ್ತಾವ್ಯಕ್ತೌ ತತಃ ಪುನಃ ॥ ೧೨೯ ॥

ಸೃಜತೇ ಗ್ರಸತೇ ಚೈವ ಗ್ರಸ್ತಃ ಪರ್ಯವತಿಷ್ಠತೇ ।
ಕ್ಷೇತ್ರಜ್ಞಾಧಿಷ್ಠಿತಂ ಸರ್ವಂ ಪುನಃ ಸರ್ವಂ ಪ್ರವರ್ತತೇ ॥ ೧೩೦ ॥

ಅಧಿಷ್ಠಾನಪ್ರವರ್ತೇನ ತಸ್ಯ ತೇ ಬುದ್ಧಿಪೂರ್ವಕಂ ।
ಸಾಧರ್ಮ್ಯ ವೈಧರ್ಮ್ಯ ಕೃತಸಂಯೋಗೋ ವಿಧಿತಸ್ತಯೋಃ ॥
ಅನಾದಿಮಾನ್ ಸ ಸಂಯೋಗೋ ಮಹಾಪುರುಷಜಃ ಸ್ಮೃತಃ ॥ ೧೩೧ ॥

ಯಾವಚ್ಚ ಸರ್ಗಪ್ರತಿಸರ್ಗಕಾಲಸ್ತಾವಚ್ಚ ತಿಷ್ಠತಿ ಸುಸನ್ನಿರುಧ್ಯ ।
ಪೂರ್ವಂ ಹಿತವ್ಯೇ ತದಬುದ್ಧಿಪೂರ್ವಂ ಪ್ರವರ್ತತೇ ತತ್ಪುರುಷಾರ್ಥಮೇವ॥

---

೧೨೮-೧೨೯. ಕ್ಷೇತ್ರಜ್ಞನೂ, ಸತ್ವಾದಿಗುಣರಹಿತನೂ, ಶುದ್ಧನೂ, ಶಾಂತಾತ್ಮನೂ, ಸೂಕ್ಷ್ಮನೂ, ದೋಷವಿದೂರನೂ, ಸುಖದುಃಖವರ್ಜಿತನೂ, ಭಕ್ತಪರಾಧೀನನೂ, ಶಾಂತರೂಪಿಯೂ, ಸ್ವತಂತ್ರನೂ ಆದ ಭಗವಂತನು ವೇದಗಮ್ಯನೂ, ಸಂಪೂರ್ಣವಾಗಿ ಅಗಮ್ಯನೂ ಆಗಿರುವನು. ಅಂತಹ ಪರಮಾತ್ಮನಿಂದ ಸೃಷ್ಟಿ ಪ್ರಲಯಗಳು ಪುನಃ ಪುನಃ ಸಂಭವಿಸುತ್ತವೆ.

೧೩೦. ಅಂತಹ ಪರಮಾತ್ಮನು ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಪದೇ ಪದೇ ಮಾಡುವನು. ಈ ಸಮಸ್ತವಾದ ಜಗತ್ತೂ ಪರಮಾತ್ಮನಿಂದ ಆಶ್ರಿತವಾಗಿದೆ. ಪುನಃ ಅವನಿಂದಲೇ ಸೃಷ್ಟಿಸಲ್ಪಡುತ್ತದೆ.

೧೩೧. ಶ್ರೀ ಭಗವಂತನು ಬುದ್ಧಿಪೂರ್ವಕವಾಗಿಯೇ, ಜಗನ್ನಿಯಾಮಕನಾಗಿ ಆ ಜಗತ್ತನ್ನು ಸೃಷ್ಟಿಸುವನು. ಶ್ರೀ ಭಗವಂತನಿಗೂ ಜಗತ್ತಿಗೂ ಸಾಧರ್ಮ್ಯ ವೈಧರ್ಮ್ಯಗಳಿಂದ ಕೃತವಾದ ಸಂಯೋಗವು ವಿಧಿಪೂರ್ವಕವಾಗಿದೆ. ಮಹಾಪುರುಷನಾದ ಭಗವಂತನಿಗೂ, ಪ್ರಪಂಚಕ್ಕೂ, ಇರುವ ಸಂಯೋಗವು ಅನಾದಿಸಿದ್ಧವಾಗಿರುವುದು.

೧೩೨. ಎಲ್ಲಿಯವರೆಗೂ ಸೃಷ್ಟಿಸಂಹಾರಗಳಾಗುವುವೋ, ಅಲ್ಲಿಯವರೆಗೂ ಸರ್ವಜಗತ್ತನ್ನೂ ಸ್ವಾಧೀನಮಾಡಿಕೊಂಡಿರುವನು. ಮೊದಲು ಸ್ವೇಚ್ಛೆಯಾಗಿ ಪ್ರಯತ್ನಮಾಡಿ ತರುವಾಯ ಪುರುಷಾರ್ಥವನ್ನು ಕೊಡುವುದಕ್ಕಾಗಿ ಪ್ರಯತ್ನವನ್ನು ಮಾಡುವನು.

ಏಷಾ ನಿಸರ್ಗಪ್ರತಿಸರ್ಗಪೂರ್ವಂ ।
ಪ್ರಧಾನಿಕೀ ಚೇಶ್ವರಕಾರಿತಾ ಚ ॥
ಅನಾದ್ಯನಂತಾ ಹ್ಯಭಿಮಾನಪೂರ್ವಕಂ ।।
ವಿತ್ರಾಸಯಂತೀ ಜಗದಭ್ಯುಪೈತಿ ॥ ೧೩೩ ॥

ಇತ್ಯೇಷ ಪ್ರಾಕೃತಃ ಸರ್ಗಸ್ತೃತೀಯೋ ಹೇತುಲಕ್ಷಣಃ ।
ಉಕ್ತೋ ಹ್ಯಸ್ಮಿಂಸ್ತದಾತ್ಯಂತಂ ಕವಿಭಿಸ್ತತ್ರ ಮುಚ್ಯತೇ ॥ ೧೩೪ ॥

ಇತ್ಯೇಷ ಪ್ರತಿಸರ್ಗೋ ವಸ್ತ್ರಿವಿಧಃ ಕೀರ್ತಿತೋ ಮಯಾ ।
ವಿಸ್ತರೇಣಾನುಪೂರ್ವ್ಯಾ ಚ ಭೂಯಃ ಕಿಂ ವರ್ತಯಾಮ್ಯಹಂ ॥ ೧೩೫ ॥

ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ ಅನುಷಂಗಪಾದೋ ನಾಮ
ಚತ್ವಾರಿಂಶೋಽಧ್ಯಾಯಃ

---

೧೩೩. ಈ ರೀತಿಯಾಗಿ ಸೃಷ್ಟಿಸಂಹಾರರೂಪವಾದ ಕಾರ್ಯಗಳು ಈಶ್ವರನಿಂದ ಪ್ರೇರಿತವಾದ ಪ್ರಕೃತಿಜನ್ಯವಾಗಿದೆ. ಆ ಪ್ರಧಾನಪ್ರವೃತ್ತಿಯು ಅನಾದ್ಯನಂತವಾಗಿಯೂ, ಅಭಿಮಾನಪೂರ್ವಕವಾಗಿಯೂ, ಜಗದ್ಭಯಂಕರವಾಗಿಯೂ ಇರುವುದು.

೧೩೪. ಈ ರೀತಿಯಾದ ಪ್ರಾಕೃತಿಕಸೃಷ್ಟಿಯು ಮೂರನೆಯದಾಗಿಯೂ, ಸಕಾರಣವಾಗಿಯೂ, ಇರುವುದು. ಜ್ಞಾನಿಗಳು ಈ ಸೃಷ್ಟಿಕ್ರಮವನ್ನು ಸಕಾರಣವೆಂದು ತಿಳಿದು ಸಂಸಾರದಿಂದ ಮುಕ್ತರಾಗುವರು.

೧೩೫. ಈ ರೀತಿಯಾಗಿ ತ್ರಿವಿಧವಾದ ಪ್ರಲಯವನ್ನು ನಾನು ನಿಮಗೆ ವಿಸ್ತಾರವಾಗಿಯೂ, ಕ್ರಮವಾಗಿಯೂ, ನಿರೂಪಿಸಿರುತ್ತೇನೆ. ಇನ್ನು ಯಾವ ವಿಷಯಗಳನ್ನು ನಾನು ನಿಮಗೆ ಹೇಳಲೆಂದು ಸೂತಮುನಿಯು ಮಹರ್ಷಿಗಳಿಗೆ ಕೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಅನುಷಂಗಪಾದ"ವೆಂಬ
ನಲವತ್ತನೆಯ ಅಧ್ಯಾಯವು ಸಮಾಪ್ತವಾದುದು.



## ನಲವತ್ತನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಸಾಮಾನ್ಯವಾಗಿ ಸಂಹಾರವಿಷಯಗಳು ವರ್ಣಿಸಲ್ಪಟ್ಟಿವೆ. ಸೃಷ್ಟಿಕಾರ್ಯವು ಮುಗಿದು ಸಂಹಾರಕಾರ್ಯವು ಪ್ರಾರಂಭವಾದಾಗ ಮಹತ್ತತ್ವವೇ ಮೊದಲಾದ ಸರ್ವ ಭೂತಗಳೂ ಲಯವಾಗುವುವು. ಆಗ ಜಲವು ಪೃಥಿವಿಯನ್ನೂ, ಆ ಜಲವನ್ನು ತೇಜಸ್ಸೂ, ಅದನ್ನು ವಾಯುವೂ, ಅದನ್ನು ಆಕಾಶವೂ, ಗ್ರಾಸ ಮಾಡುವುವು. ಹೀಗೆ ಪಂಚಭೂತಗಳು ಅಹಂಕಾರತತ್ವದಲ್ಲಿಯೂ ಅದು ಮಹತ್ತತ್ವ ದಲ್ಲಿಯೂ ಲಯವಾಗಿ ಕೇವಲ ಪ್ರಕೃತಿ ಮಾತ್ರವೇ ಉಳಿಯುವುದು. ಅದೇ ಲಯ ಕಾಲವು.

ಮನುಷ್ಯರಿಗೆ ಸಾತ್ವಿಕ, ರಾಜಸ, ತಾಮಸವೆಂಬ ಮೂರು ವೃತ್ತಿಗಳು ಉಂಟಾಗುವುವು. ಸಾತ್ವಿಕ ವೃತ್ತಿಯಿಂದ ಸ್ವರ್ಗಾದ್ಯುತ್ತಮ ಲೋಕಗಳೂ, ರಾಜಸ ವೃತ್ತಿಯಿಂದ ಭೂಲೋಕಪ್ರಾಪ್ತಿಯೂ, ತಾಮಸ ವೃತ್ತಿಯಿಂದ ನರಕಾದ್ಯನರ್ಥಗಳೂ ಸಂಭವಿಸುತ್ತವೆ.

ವರ್ಣಾಶ್ರಮಧರ್ಮಾನುಷ್ಠಾನಗಳಿಂದ ಸ್ವರ್ಗಾದ್ಯುತ್ತಮ ಲೋಕಗಳಲ್ಲಿ ಮಹಾಭೋಗಗಳುಂಟಾಗಿ ಕೊನೆಗೆ ವೈರಾಗ್ಯಮೂಲಕವಾಗಿ ಪರಮಪದವಿಯು ಲಭಿಸುವುದು. ವರ್ಣಾಶ್ರಮ ಧರ್ಮ ತ್ಯಾಗದಿಂದ ನರಕಾದಿ ಲೋಕಪ್ರಾಪ್ತಿಯೂ, ಮಹಾದುಃಖಗಳೂ, ಸಂಭವಿಸುತ್ತವೆಯೆಂಬ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.



—|| ಹರಿಃ ಓಂ ||—

—|| ಶ್ರೀ ವೇದವ್ಯಾಸಾಯ ನಮಃ ||—

# ಶ್ರೀಮದ್ವಾಯುಮಹಾಪುರಾಣಂ

---

## ಏಕಚತ್ವಾರಿಂಶೋಽಧ್ಯಾಯಃ

|| ಋಷಯ ಊಚುಃ ||

**ಸೂತ ಸುಮಹದಾಖ್ಯಾನಂ ಭವತಾ ಪರಿಕೀರ್ತಿತಂ |**
**ಪ್ರಜಾನಾಂ ಮುನಿಭಿಃ ಸಾರ್ದ್ಧಂ ದೇವಾನಾಮೃಷಿಭಿಃ ಸಹ || ೧ ||**

**ಪಿತೃಗಂಧರ್ವಭೂತಾನಾಂ ಪಿಶಾಚೋರಗರಕ್ಷಸಾಂ |**
**ದೈತ್ಯಾನಾಂ ದಾನವಾನಾಂ ಚ ಯಕ್ಷಾಣಾಮೇವ ಪಕ್ಷಿಣಾಂ || ೨ ||**

**ಅತ್ಯದ್ಭುತಾನಿ ಕರ್ಮಾಣಿ ವಿಧಿರ್ಮಾ ಧರ್ಮನಿಶ್ಚಯಃ |**
**ವಿಚಿತ್ರಾಶ್ಚ ಕಥಾಯೋಗಾ ಜನ್ಮ ಚಾಗ್ರ್ಯಮನುತ್ತಮಂ || ೩ ||**

**ತತ್ಕಥ್ಯಮಾನಮಸ್ಮಾಕಂ ಭವತಾ ಶ್ಲಕ್ಷ್ಣಯಾ ಗಿರಾ |**
**ಮನಃ ಕರ್ಣಸುಖಂ ಸೌತೇ ಪ್ರೀಣಾತ್ಯಾಭೂತಸಂಭವಂ || ೪ ||**

---

## ನಲವತ್ತೊಂದನೆಯ ಅಧ್ಯಾಯವು

೧–೪. ಎಲೈ ಸೂತಪುರಾಣಿಕನೇ, ಮಹಾನುಭಾವನಾದ ನೀನು ನಮಗಾಗಿ ಅತ್ಯಂತ ಮಹತ್ತಾಗಿಯೂ, ಅದ್ಭುತವಾಗಿಯೂ, ಇರುವ ಆಖ್ಯಾನವನ್ನು ಹೇಳಿರುತ್ತೀಯೆ, ಅದರಲ್ಲಿ ಪ್ರಜೆಗಳು, ಮುನಿಗಳು, ದೇವತೆಗಳು, ಋಷಿಗಳು, ಪಿತೃಗಳು, ಗಂಧರ್ವರು, ಪಿಶಾಚಗಳು, ಭೂತಗಳು, ಸರ್ಪಗಳು, ರಾಕ್ಷಸರು, ದೈತ್ಯದಾನವರು, ಯಕ್ಷರು, ಪಕ್ಷಿಗಳು ಇವುಗಳ ಅದ್ಭುತವಾದ ಕರ್ಮಗಳನ್ನೂ ಧರ್ಮನಿಶ್ಚಯ ವಿಚಿತ್ರವೂ, ಅತ್ಯುತ್ತಮವೂ, ಶ್ರೇಷ್ಠವೂ ಆದ ಜನ್ಮವೃತ್ತಾಂತ ಕಥಾಯೋಗ ಇವುಗಳನ್ನೂ ಹೇಳಿರುತ್ತೀಯೆ. ಅವುಗಳನ್ನು ಕೇಳಿ, ನಮ್ಮ ಮನಸ್ಸಿಗೂ, ಕರ್ಣಗಳಿಗೂ ಪರಮಾನಂದವಾಗಿದೆ. ಪ್ರಲಯ ವೃತ್ತಾಂತಗಳೂ ಸಹ ಬಹಳಾನಂದಕರವಾಗಿದೆ ಯೆಂದು ಮುನಿಗಳು ಸೂತಮುನಿಗೆ ಹೇಳಿದರು.

ಏವಮಾರಾಧ್ಯ ತೇ ಸೂತಂ ಸತ್ಕೃತ್ಯ ಚ ಮಹರ್ಷಯಃ ।
ಪಪ್ರಚ್ಛುಃ ಸತ್ರಿಣಃ ಸರ್ವೇ ಪುನಃ ಸರ್ಗಪ್ರವರ್ತನಂ ॥ ೫ ॥
ಕಥಂ ಸೂತ ಮಹಾಪ್ರಾಜ್ಞ ಪುನಃ ಸರ್ಗಃ ಪ್ರಪತ್ಸ್ಯತೇ ।

ಬಂಧೇಷು ಸಂಪ್ರಲೀನೇಷು ಗುಣಸಾಮ್ಯೇ ತಮೋಮಯೇ ॥ ೬ ॥
ವಿಕಾರೇಷ್ವವಿಸ್ಪಷ್ಟೇಷು ಹ್ಯವ್ಯಕ್ತೇ ಚಾತ್ಮನಿ ಸ್ಥಿತೇ ।

ಅಪ್ರವೃತ್ತೌ ಬ್ರಹ್ಮಣಸ್ತು ಮಹಾಸಾಯುಜ್ಯಗೈಸ್ತದಾ ॥
ಕಥಂ ಪ್ರಪತ್ಸ್ಯತೇ ಸರ್ಗಸ್ತನ್ನಃ ಪ್ರಬ್ರೂಹಿ ಪೃಚ್ಛತಾಂ ॥ ೭ ॥

ಏವಮುಕ್ತಸ್ತತಃ ಸೂತಸ್ತದಾಸೌ ಲೋಮಹರ್ಷಣಃ ।
ವ್ಯಾಖ್ಯಾತುಮುಪಚಕ್ರಾಮ ಪುನಃ ಸರ್ಗಪ್ರವರ್ತನಂ ॥ ೮ ॥

---

೫. ಹೀಗೆ ಸತ್ರಯಾಗದಲ್ಲಿ ನಿರತರಾದ ಮಹರ್ಷಿಗಳೆಲ್ಲರೂ. ಸೂತಮುನಿಯನ್ನು ಬಹಳವಾಗಿ ಸ್ತುತಿಸಿ, ಮತ್ತು ಗೌರವವನ್ನು ಮಾಡಿ ಎಲ್ಲರೂ ಒಮ್ಮನಸ್ಕರಾಗಿ ಪುನಃ ಸೃಷ್ಟಿ ವಿಷಯಗಳನ್ನು ಕೇಳಿದರು.

೬–೭. ಎಲೈ ಸೂತಮುನಿಯೇ, ಪುನಃ ಸೃಷ್ಟಿಯುಂಟಾಗಲು ಕಾರಣಗಳಾವುವು ? ಬಂಧಕವಾದ ಗುಣಕರ್ಮಗಳಲ್ಲವೂ ನಷ್ಟವಾಗಿ ಗುಣಗಳು ಸಾಮ್ಯಾವಸ್ಥೆಯಲ್ಲಿರಲು ತಮೋಮಯವೂ, ವಿಕಾರರೂಪವೂ ಆದ ಅವ್ಯಕ್ತತತ್ವವು ಅಂದರೆ ಪ್ರಕೃತಿಯೂ ಕೂಡ ಬ್ರಹ್ಮನಲ್ಲಿ ಲೀನವಾಗಿ ವ್ಯಾಪಾರವೇ ನಿಂತುಹೋಗುವುದು. ಆಗ ಬ್ರಹ್ಮದೇವನೂ ಸಹ ಮಹಾಸಾಯುಜ್ಯವನ್ನು ಹೊಂದಿರುವ ದೇವತೆಗಳೊಂದಿಗೆ ನಿರ್ವ್ಯಾಪಾರನಾಗಿರಲು ಸೃಷ್ಟಿಯು ಹೇಗೆ ಉಂಟಾಗುವುದು ಇದನ್ನು ದಯವಿಟ್ಟು ತಿಳಿಸಬೇಕೆಂದು ಕೇಳಿದರು.

೮. ಈ ರೀತಿಯಾಗಿ ಮಹರ್ಷಿಗಳು ಸೂತಪುರಾಣಿಕನನ್ನು ಕೇಳಲಾಗಿ ಆನಂದಪೂರ್ಣನಾದ ಸೂತಮುನಿಯು ಪುನಃ ಸೃಷ್ಟಿಕ್ರಮವನ್ನು ಯಥಾಸ್ಥಿತವಾಗಿ ಹೇಳಲುಪಕ್ರಮಿಸಿದನು.

ಅಹಂ ವೋ ವರ್ತಯಿಷ್ಯಾಮಿ ಯಥಾ ಸರ್ಗಃ ಪ್ರಪತ್ಸ್ಯತೇ ।
ಪೂರ್ವವತ್ಸ ತು ವಿಜ್ಞೇಯಃ ಸಮಾಸಾತ್ತಂ ನಿಬೋಧತ ॥ ೯ ॥

ದೃಷ್ಟಂ ಚೈವಾನುಮೇಯಂ ಚ ತರ್ಕಂ ವಕ್ಷ್ಯಾಮಿ ಯುಕ್ತಿತಃ ।
ತಸ್ಮಾದ್ವಾಚೋ ನಿವರ್ತಂತೇ ಹ್ಯಪ್ರಾಪ್ಯ ಮನಸಾ ಸಹ ॥ ೧೦ ॥

ಅವ್ಯಕ್ತವತ್ ಪರೋಕ್ಷತ್ವಾದ್ಗ್ರಹಣಂ ತದ್ದುರಾಸದಂ ।
ವಿಕಾರೈಃ ಪ್ರತಿಸಂದೃಷ್ಟೇ ಗುಣಸಾಮ್ಯೇ ನಿವರ್ತತೇ ॥ ೧೧ ॥

ಪ್ರಧಾನಂ ಪುರುಷಾಣಾಂ ಚ ಸಾಧರ್ಮ್ಯೇಣೈವ ತಿಷ್ಠತಿ ।
ಧರ್ಮಾಧರ್ಮೌ ಪ್ರಲೀಯೇತೇ ಅವ್ಯಕ್ತೌ ಪ್ರಾಣಿನಾಂ ಸದಾ ॥ ೧೨ ॥

---

೯. ಎಲೈ ಮುನಿವರ್ಯರೇ, ನಾನು ನಿಮಗಾಗಿ ಸೃಷ್ಟಿಯು ಹೇಗಾಗುವುದೆಂಬ ವಿಷಯವನ್ನು ತಿಳಿಸುವೆನು. ಆ ಸೃಷ್ಟಿಯು ಪೂರ್ವದಂತೆಯೇ ಉಂಟಾಗುವುದೆಂದು ಸಂಕ್ಷೇಪವಾಗಿ ವರ್ಣಿಸುವೆನು ಕೇಳಿರೆಂದನು.

೧೦. ಎಲೈ ವಿಪ್ರೋತ್ತಮರೇ, ನಾನು ಪ್ರತ್ಯಕ್ಷವಾಗಿ ತಿಳಿಯಲಶಕ್ಯವಾದ ವಿಷಯಗಳನ್ನು ಊಹಿಸಿ ಯುಕ್ತಿಯಿಂದ ಹೇಳುವೆನು. ಯಾವ ವಿಷಯಗಳನ್ನು ವಾಕ್ಕು, ಮನಸ್ಸೂ ಕೂಡ ಸಂಪೂರ್ಣವಾಗಿ ವರ್ಣಿಸಲು ಮತ್ತು ತಿಳಿಯಲು ಸಾಧ್ಯವಿಲ್ಲವೋ ಅಂತಹ ಸೃಷ್ಟಿಯನ್ನು ನಿಮಗಾಗಿ ತಿಳಿಸುವೆನೆಂದನು.

೧೧. ಅವ್ಯಕ್ತತತ್ವದಂತೆ ಸೃಷ್ಟಿಕ್ರಮವೂ ಕೂಡ ದೃಷ್ಟಿಗೆ ವಿಷಯವಾಗದ ಕಾರಣ ಅದನ್ನು ತಿಳಿಸಲು ಅಸಾಧ್ಯವಾಗಿದೆ. ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥೆಯು ಪ್ರಲಯವಾಗಿರುವುದು. ಆ ಗುಣಗಳ ವಿಕಾರಾವಸ್ಥೆಯೇ ಸೃಷ್ಟಿಯಾಗಿರುವುದು.

೧೨. ಆಗ ಪ್ರಧಾನತತ್ವವು ಪುರುಷರ ಸಾಮ್ಯಾವಸ್ಥೆಯಲ್ಲಿರುವುದು. ಆಗ ಪ್ರಾಣಿಗಳ ಧರ್ಮಾಧರ್ಮಗಳು ಅವ್ಯಕ್ತತತ್ವದಲ್ಲಿ ಲೀನವಾಗಿ ಸಾಮ್ಯಾವಸ್ಥೆಯಲ್ಲಿಯೇ ಇರುವುವು.

ಸತ್ತ್ವಮಾತ್ರಾತ್ಮಕೋ ಧರ್ಮೋ ಗುಣಸತ್ತ್ವೇ ಪ್ರತಿಷ್ಠಿತಃ ।
ತಮೋಮಾತ್ರಾತ್ಮಕೋಽಧರ್ಮೋ ಗುಣೇ ತಮಸಿ ತಿಷ್ಠತಿ ॥ ೧೩ ॥

ಅವಿಭಾಗವತಾವೇತೌ ಗುಣಸಾಮ್ಯಸ್ಥಿತಾವುಭೌ ।
ಸರ್ವಕಾರ್ಯೇ ಬುದ್ಧಿಪೂರ್ವಂ ಪ್ರಧಾನಸ್ಯ ಪ್ರಪತ್ಸ್ಯತೇ ॥ ೧೪ ॥

ಅಬುದ್ಧಿಪೂರ್ವಂ ಕ್ಷೇತ್ರಜ್ಞ ಅಧಿಷ್ಠಾಸ್ಯತಿ ತಾನ್ ಗುಣಾನ್ ।
ಏವಂ ತಾನಭಿಮಾನೇನ ಪ್ರಪತ್ಸ್ಯೇತ ಪುರಸ್ತದಾ ॥ ೧೫ ॥

ಯದಾ ಪ್ರವರ್ತಿತವ್ಯಂ ತು ಕ್ಷೇತ್ರಕ್ಷೇತ್ರಜ್ಞಯೋರ್ದ್ವಯೋಃ ।
ಭೋಜ್ಯಭೋಕ್ತೃತ್ವಸಂಬಂಧಂ ಪ್ರಪತ್ಸ್ಯೇತೇ ಯುತಾವುಭೌ ॥ ೧೬ ॥

---

೧೩. ಸತ್ವಗುಣವು ಪ್ರಚುರವಾಗಿದ್ದರೆ ಕೇವಲ ಧರ್ಮಸ್ವರೂಪವಾದ ಕಾರ್ಯಗಳೇ ಸಂಭವಿಸುತ್ತವೆ. ಆಗ ಧರ್ಮಕಾರ್ಯಗಳೇ ಉಂಟಾಗುವುವು. ರಜೋಗುಣದಿಂದ ದಾಂಭಿಕ ಕಾರ್ಯಗಳು ಸಂಭವಿಸುತ್ತವೆ. ತಮೋಗುಣದಲ್ಲಿ ಅಧರ್ಮಾತ್ಮಕವಾದ ಕಾರ್ಯಗಳಡಗಿರುವುವು. ಅಂದರೆ ರಜೋಗುಣದಿಂದ ಅಧರ್ಮಗಳುಂಟಾಗುವುವು.

೧೪. ಪ್ರಲಯಕಾಲದಲ್ಲಿ ಸತ್ವಗುಣ, ತಮೋಗುಣಗಳು ವಿಭಾಗವಿಲ್ಲದೇ ಸಾಮ್ಯಾವಸ್ಥೆಯಲ್ಲಿಯೇ ಇರುತ್ತವೆ. ಸೃಷ್ಟಿಕಾಲದಲ್ಲಿ ಪ್ರಧಾನವಾದ ಪ್ರಕೃತಿಯು ಬುದ್ಧಿಪೂರ್ವಕವಾಗಿ ಸ್ವಕಾರ್ಯದಲ್ಲಿ ಪ್ರವರ್ತಿಸುತ್ತದೆ.

೧೫. ಕ್ಷೇತ್ರಜ್ಞನಾದ ಪುರುಷನು ಸ್ವಾಭಾವಿಕವಾಗಿಯೇ ಆ ಗುಣಗಳನ್ನು ಆಶ್ರಯಿಸಿಕೊಂಡಿರುವನು. ಹೀಗೆ ಪ್ರಧಾನವಾದ ಆ ಗುಣಗಳಿಗೆ ಕ್ಷೇತ್ರಜ್ಞನಾದ ಪರಮಪುರುಷನೇ ಅಭಿಮಾನಿಯಾಗಿರುವನು. ಯಜಮಾನನಾಗಿ ಸ್ವಕಾರ್ಯ ಪ್ರವರ್ತಕನಾಗುವನು.

೧೬. ಯಾವಾಗ ಪುರುಷನು ಸೃಷ್ಟಿಯನ್ನು ಮಾಡಲಿಚ್ಛಿಸುವನೋ ಕ್ಷೇತ್ರ ಕ್ಷೇತ್ರಜ್ಞರಾದ ಪ್ರಕೃತಿ ಪುರುಷರಿಬ್ಬರಲ್ಲಿಯೂ ಕ್ರಿಯೆಗಳುಂಟಾಗುತ್ತವೆ. ಆಗ ಅವರಿಬ್ಬರೂ ಕ್ರಮವಾಗಿ ಭೋಜ್ಯಭೋಕ್ತೃತ್ವವನ್ನು ಹೊಂದುವರು.

ತಸ್ಮಾಚ್ಚರಣಮವ್ಯಕ್ತಂ ಸಾಮ್ಯೇ ಸ್ಥಿತ್ವಾ ಗುಣಾತ್ಮಕಾನ್ ।
ಕ್ಷೇತ್ರಜ್ಞಾಧಿಷ್ಠಿತಂ ತಚ್ಚ ವೈಷಮ್ಯಂ ಭಜತೇ ತು ತತ್ ॥ ೧೭ ॥

ತತಃ ಪ್ರಸತ್ಸ್ಯತೇ ವ್ಯಕ್ತಂ ಕ್ಷೇತ್ರಕ್ಷೇತ್ರಜ್ಞಯೋರ್ದ್ವಯೋಃ ।
ಕ್ಷೇತ್ರಜ್ಞಾಧಿಷ್ಠಿತಂ ಸತ್ವಂ ವಿಕಾರಂ ಜನಯಿಷ್ಯತಿ ॥ ೧೮ ॥

ಮಹದಾದ್ಯಂ ವಿಶೇಷಾಂತಂ ಚತುರ್ವಿಂಶಗುಣಾತ್ಮಕಂ ।
ಕ್ಷೇತ್ರಜ್ಞಸ್ಯ ಪ್ರಧಾನಸ್ಯ ಪುರುಷಸ್ಯ ಪ್ರಸತ್ಸ್ಯತೇ ॥ ೧೯ ॥

ಬ್ರಹ್ಮಾಂಡೇ ಪ್ರಥಮಃ ಸೋಽಥ ಭವಿತಾ ಚೇಶ್ವರಃ ಪುನಃ ।
ತತೋ ಜ್ಞೇಯಸ್ಯ ಕೃತ್ಸ್ನಸ್ಯ ಸರ್ವಭೂತಪತಿಃ ಶಿವಃ ॥ ೨೦ ॥

---

೧೭. ಗುಣಸ್ವರೂಪವಾದ ಅವ್ಯಕ್ತತತ್ವವೇ ಸಾಮ್ಯಾವಸ್ಥೆಯಲ್ಲಿಯೇ ಸರ್ವಕ್ಕೂ ಆಶ್ರಯವಾಗಿರುತ್ತದೆ. ಸೃಷ್ಟಿಯು ಪ್ರಾರಂಭವಾಗಲು ಪುರುಷಾಧಿಷ್ಠಿತವಾದ ಪ್ರಕೃತಿಯಲ್ಲಿ ವೈಷಮ್ಯವುಂಟಾಗುವುದು ಅಂದರೆ ಬ್ರಹ್ಮದೇವನ ಪ್ರಕೃತಿ ಮೂಲಕವಾಗಿ ಗುಣವೈಷಮ್ಯದಿಂದ ಸೃಷ್ಟಿಯನ್ನುಪಕ್ರಮಿಸುವನು.

೧೮. ಕ್ಷೇತ್ರರೂಪವಾದ ಪ್ರಕೃತಿ ಕ್ಷೇತ್ರಜ್ಞನಾದ ಪುರುಷ, ಇವರ ಇಚ್ಛೆಯಿಂದ ಅವ್ಯಕ್ತವಾದ ಜಗತ್ತು ವ್ಯಕ್ತವಾಗುವುದು. ಕ್ಷೇತ್ರಜ್ಞನಾದ ಪುರುಷಾಧಿಷ್ಠಿತವಾದ ಸತ್ವಗುಣವು ವೈಷಮ್ಯವಾಗಿ ಸೃಷ್ಟಿಯನ್ನು ಮಾಡುವುದು.

೧೯. ಪ್ರಧಾನನೂ, ಕ್ಷೇತ್ರಜ್ಞನೂ ಆದ ಪುರುಷನಿಂದ ಮಹಾದಾದಿ ವಿಶೇಷಾಂತವಾದ ಇಪ್ಪತ್ತುನಾಲ್ಕು ತತ್ವಗಳೂ ಉಂಟಾಗಿ ಕಾರ್ಯೋನ್ಮುಖವಾಗುವುವು.

೨೦. ತರುವಾಯು ಬ್ರಹ್ಮಾಂಡದಲ್ಲಿ ಮೊದಲು ಈಶ್ವರನು ವ್ಯಕ್ತನಾಗುವನು. ಸೃಷ್ಟಿಸಲುಪಕ್ರಮಿಸುವನು. ಅನಂತರ ಭೂತಪತಿಯಾದ ಭಗವಂತನಿಂದ ಜ್ಞೇಯವಾದ ಸಮಸ್ತ ಜಗತ್ತು ವ್ಯಕ್ತವಾಗುವುದು. ಅಂದರೆ ಈಶ್ವರನು ಈ ಜಗತ್ತನ್ನು ಸೃಷ್ಟಿಸುವನು.

ಈಶ್ವರಃ ಸರ್ವಮುಕ್ತಾನಾಂ ಬ್ರಹ್ಮಾ ಬ್ರಹ್ಮಾಮಯೋ ಮಹಾನ್ ।
ಆದಿದೇವಃ ಪ್ರಧಾನಸ್ಯಾನುಗ್ರಹಾಯ ಪ್ರವಕ್ಷ್ಯತೇ ॥ ೨೧ ॥

ಅನಾದ್ಯೌ ಸ್ವಯಮುತ್ಪನ್ನಾವುಭೌ ಸೂಕ್ಷ್ಮೌ ತು ತೌ ಸ್ಮೃತೌ ।
ಅನಾದಿಸಂಯೋಗಯುತೌ ಸರ್ವಕ್ಷೇತ್ರಜ್ಞಮೇವ ಚ ॥ ೨೨ ॥

ಅಬುದ್ಧಿಪೂರ್ವಕಂ ಯುಕ್ತೌ ಮಶಕೌ ತು ವರೌ ತದಾ ।
ಅಪ್ರತ್ಯಯಮನಾದ್ಯಂ ಚ ಸ್ಥಿತಾವುದಕಮಪ್ಸ್ಯಶಃ ॥ ೨೩ ॥

ಪ್ರವೃತ್ತೇ ಪೂರ್ವತಃ ಪೂರ್ವಂ ಪುನಃ ಸರ್ಗೇ ಪ್ರಪತ್ಸ್ಯತೇ ।
ಆಜ್ಞಾಗುಣ್ಯೈಃ ಪ್ರವರ್ತಂತೇ ರಜಃ ಸತ್ವತಮಾತ್ಮಕಂ ॥ ೨೪ ॥

---

೨೧. ಸಮಸ್ತರಾದ ಮುಕ್ತರಿಗೆ ನಿಯಾಮಕನೂ, ಜ್ಞಾನಮಯನೂ, ಪೂರ್ಣನೂ, ಮಹಾತ್ಮನೂ, ಆದಿದೇವನೂ ಆದ ಪರಮೇಶ್ವರನು ಸೃಷ್ಟಿಕಾಲದಲ್ಲಿ ಪ್ರಧಾನತತ್ವವನ್ನಾಶ್ರಯಿಸಿ, ಲೋಕಕಲ್ಯಾಣಕ್ಕಾಗಿ ಪ್ರಯತ್ನಿಸುವನು.

೨೨. ಪ್ರಕೃತಿ ಪುರುಷರಿಬ್ಬರೂ, ಅನಾದಿಗಳೂ, ಸ್ವಯಮುದ್ಭೂತರೂ, ಸೂಕ್ಷ್ಮರೂಪಿಗಳೂ, ಅನಾದಿಸಂಯೋಗಯುತರೂ, ಸಮಸ್ತ ಕ್ಷೇತ್ರಜ್ಞರೂ ಆಗಿರುವರು.

೨೩. ಉತ್ತಮಗಳಾದ ಮಶಕಗಳು (ಸೊಳ್ಳೆಗಳು) ಸ್ವೇಚ್ಛೆಯಾಗಿ ಸೇರುವಂತೆ ಆಕಸ್ಮಿಕವಾಗಿಯೂ, ಅಬುದ್ಧಿಪೂರ್ವಕವಾಗಿಯೂ, ಯುಕ್ತರಾದ ಪ್ರಕೃತಿ ಪುರುಷರಿಬ್ಬರೂ ಜ್ಞಾನಾಗೋಚರರೂ, ಅನಾದಿಗಳೂ ಆಗಿ ಜಲಶಾಯಿಗಳಾಗುವರು.

೨೪. ಸೃಷ್ಟಿಯ ಆದಿಯಲ್ಲಿ ಪ್ರಕೃತಿ ಪುರುಷರಲ್ಲಿ ಸ್ವೇಚ್ಛೆಯಿಂದ ಪ್ರವೃತ್ತಿಯುಂಟಾಗುವುದು. ತರುವಾಯ ಈಶ್ವರಪ್ರೇರಣೆಯಿಂದ ಪ್ರಕೃತಿಗತವಾದ ಗುಣತ್ರಯಗಳಲ್ಲಿ ವೈಷಮ್ಯವುಂಟಾಗಿ ಸೃಷ್ಟಿಗುಪಕ್ರಮವಾಗುವುದು.

ಪ್ರವೃತ್ತಿಕಾಲೇ ರಜಸಾಭಿಪನ್ನ ।
ಮಹತ್ವಭೂತಾದಿ ವಿಶೇಷ್ಯತಾಂ
ವಿಶೇಷತಾಂ ಚೇಂದ್ರಿಯತಾಂ ಚ ಯಾಂತಿ ।
ಗುಣಾವಸಾನೇ ಪತಿಭಿರ್ಮನುಷ್ಯಾಃ ॥ ೨೫ ॥

ಸತ್ಯಾಭಿಧ್ಯಾಯಿನಸ್ತಸ್ಯ ಧ್ಯಾಯಿನಃ ಸನ್ನಿಮಿತ್ತಕಂ ।
ರಜಃ ಸತ್ವತಮಾ ವ್ಯಕ್ತಾ ವಿಧವರ್ಮಾಣಃ ಪರಸ್ಪರಂ ॥ ೨೬ ॥

ಆದ್ಯಂತೇ ಸಂಪ್ರಪತ್ಸ್ಯಂತೇ ಕ್ಷೇತ್ರಕ್ಷೇತ್ರಜ್ಞಾಸ್ತು ಸರ್ವಶಃ ।
ಸಂಸಿದ್ಧ ಕಾರ್ಯಕರಣಾ ಉತ್ಪದ್ಯಂತೇಽಭಿಮಾನಿನಃ ॥ ೨೭ ॥

ಸರ್ವೇ ಸತ್ವಾಃ ಪ್ರಪದ್ಯಂತೇ ಹ್ಯವ್ಯಕ್ತಾತ್ಪೂರ್ವಮೇವ ಚ ।
ಪ್ರಸೂತೇ ಯಾ ಚ ಸುವಹಾಃ ಸಾಧಿಕಾಶ್ಚಾಪ್ಯಸಾಧಿಕಾ ॥ ೨೮ ॥

---

೨೫. ಸೃಷ್ಟಿಕಾಲದಲ್ಲಿ ರಜೋಗುಣವು ಸತ್ವತಮೋಗುಣಗಳಿಗಿಂತಲೂ ಪ್ರಚುರವಾಗಿ ಮಹತ್ತತ್ವ ಪಂಚಭೂತಗಳು, ಇಂದ್ರಿಯ ತದಭಿಮಾನಗಳು, ದೇವತೆಗಳು, ಮನುಷ್ಯರು ಇವರ ಪರಿಣಾಮವನ್ನು ಹೊಂದಿ ಸೃಷ್ಟಿಯನ್ನು ಪಕ್ರಮಿಸುವುದು.

೨೬. ಸತ್ಯವಾಗಿ ಧ್ಯಾನಮಾಡುವ ಧ್ಯಾನಸ್ವರೂಪಿಯಾದ ಬ್ರಹ್ಮದೇವನು ಸತ್ವರಜಸ್ತಮೋಗುಣಗಳ ಪರಸ್ಪರ ವೈಧರ್ಮ್ಯಗಳಿಂದ ಅಂದರೆ ಗುಣಗಳ ವೈಷಮ್ಯದಿಂದ ಜಗತ್ಸೃಷ್ಟಿಯನ್ನು ಮಾಡುವನು.

೨೭. ಆದ್ಯಂತದಲ್ಲಿ ಕ್ಷೇತ್ರಕ್ಷೇತ್ರಜ್ಞರೆಲ್ಲರೂ, ಸಂಪೂರ್ಣವಾಗಿ ಸಂಭವಿಸುವರು. ಅದಕ್ಕನುಗುಣವಾಗಿ ಸಂಬಂಧವಾದ ಕಾರ್ಯಕಾರಣಗಳುಳ್ಳ ಅಭಿಮಾನ ದೇವತೆಗಳೂ ಸಹ ಗುಣವೈಷಮ್ಯದಿಂದಲೇ ಉದ್ಭವಿಸುವರು.

೨೮. ಸತ್ವಗುಣಪ್ರಚುರರಾದ ಅಭಿಮಾನಿದೇವತೆಗಳು ಮೊದಲೇ ಅವ್ಯಕ್ತ ತತ್ವದಿಂದ ಉತ್ಪನ್ನರಾಗುವರು. ಈ ಅಭಿಮಾನಿಗಳು ಅವ್ಯಕ್ತದಿಂದ ಉತ್ಪನ್ನವಾಗುವ ಕೆಲವು ಕಾರ್ಯಗಳಿಗೆ ಸಾಧಕರೂ, ಕೆಲವಕ್ಕೆ ಅಸಾಧಕರೂ ಆಗುವರು.

ಸಂಸರಂತಸ್ತು ತೇ ಸರ್ವೇ ಸ್ಥಾನಪ್ರಕರಣೈಃ ಸಹ ।
ಕಾರ್ಯಾಣಿ ಪ್ರತಿಪತ್ಸ್ಯಂತೇ ಉತ್ಪದ್ಯಂತೇ ಪುನಃ ಪುನಃ ॥ ೨೯ ॥

ಗುಣಮಾತ್ರಾತ್ಮಕಾಶ್ಚೈವ ಧರ್ಮಾಧರ್ಮೌ ಪರಸ್ಪರಂ ।
ಆರಪ್ಸ್ಯಂತೀಹ ಚಾನ್ಯೋನ್ಯಂ ವರೇಣಾನುಗ್ರಹೇಣ ಚ ॥ ೩೦ ॥

ಸರ್ವೇ ತುಲ್ಯಾಃ ಪ್ರಸ್ಪೃಷ್ಟಾರ್ಥಂ ಸರ್ಗಾದೌ ಯಾಂತಿ ವಿಕ್ರಿಯಾಂ ।
ಗುಣಸ್ತತ್ಪ್ರತಿ ಧಾವಂತೇ ತಸ್ಮಾತ್ತತ್ರಸ್ಯ ರೋಚತೇ ॥ ೩೧ ॥

ಗುಣಾಸ್ತೇ ಯಾನಿ ಸರ್ವಾಣಿ ಪ್ರಾಕ್ ದೃಷ್ಟೇಃ ಪ್ರತಿಪೇದಿರೇ ।
ತಾನ್ಯೇವ ಪ್ರತಿಪದ್ಯಂತೇ ಸೃಷ್ಟಮಾನಾಃ ಪುನಃ ಪುನಃ ॥ ೩೨ ॥

---

೨೯. ಆ ಅಭಿಮಾನದೇವತೆಗಳೆಲ್ಲರೂ ಸ್ಥಾನಕಾರಣಗಳೊಡನೇ ಸಹಕರಿಸಿ ಸಮಸ್ತಕಾರ್ಯಗಳನ್ನೂ ಸೃಷ್ಟಿಸುವರು. ತಾವೂ ಕೂಡ ಕಾಲಾನುಗುಣವಾಗಿ ಪುನಃ ಪುನಃ ಅವತರಿಸುವರು.

೩೦. ಸತ್ವಾದಿಗುಣಸ್ವರೂಪರಾದ ದೇವಾದಿಗಳೂ ಪುರುಷರಲ್ಲಿ ಸಹಜವಾದ ಧರ್ಮಾಧರ್ಮಗಳು ಕೂಡ ಪರಸ್ಪರ ಸಹಕಾರಿಯಾಗಿ ವರದಿಂದಲೂ, ಮಹಾತ್ಮರ ಅನುಗ್ರಹದಿಂದಲೂ, ಜಗತ್ಸೃಷ್ಟಿರೂಪವಾದ ಕಾರ್ಯಕ್ಕೆ ಸಾಧಕಗಳಾಗುತ್ತವೆ.

೩೧. ಸೃಷ್ಟಿಕಾಲದ ಆದಿಯಲ್ಲಿ ಸಮಸ್ತರಾದ ದೇವತೆಗಳೂ, ಏಕಮನಸ್ಕತೆಯಿಂದ ಕೂಡಿರುವರು. ಸತ್ವರಜಸ್ತಮಗಳೆಂಬ ಮೂರು ಗುಣಗಳೂ ವೈಷಮ್ಯದಿಂದ ವಿಕಾರವಾಗಿ ಆಯಾ ಅಭಿಮಾನದೇವತೆಗಳ ಸಂಗಡ ಸಹಕರಿಸುತ್ತವೆ. ಇದು ಭಗವಂತನ ಇಚ್ಛೆಯಂತೆ ಆಗುತ್ತದೆ.

೩೨. ಪೂರ್ವದ ಸೃಷ್ಟಿಯಲ್ಲಿ ಯಾವ ಯಾವ ವಸ್ತುಗಳು ಗುಣತ್ರಯಗಳಿಂದ ಹೇಗೆ ಸೃಷ್ಟವಾಗಿದ್ದುವೋ, ಅವು ಮುಂದಿನ ಸೃಷ್ಟಿಯಲ್ಲಿ ಅದೇ ಕ್ರಮವಾಗಿಯೇ ಪುನಃ ಪುನಃ ಸೃಷ್ಟವಾಗುವುವು.

ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮಾವೃತಾನೃತೇ ।
ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ॥ ೩೩ ॥

ಮಹಾಭೂತೇಷು ನಾನಾತ್ವಮಿಂದ್ರಿಯಾರ್ಥೇಷು ಮೂರ್ತಿಷು ।
ವಿಪ್ರಯೋಗಾಶ್ಚ ಭೂತಾನಾಂ ಗುಣೇಭ್ಯಃ ಸಂಪ್ರವರ್ತತೇ ॥ ೩೪ ॥

ಇತ್ಯೇಷ ವೋ ಮಯಾ ಖ್ಯಾತಃ ಪುನಃ ಸರ್ಗಃ ಸಮಾಸತಃ ।
ಸಮಾಸಾದೇವ ವಕ್ಷ್ಯಾಮಿ ಬ್ರಹ್ಮಣೋಽಥ ಸಮುದ್ಭವಂ ॥ ೩೫ ॥

ಅವ್ಯಕ್ತಾತ್ಕಾರಣಾತ್ತಸ್ಮಾನ್ನಿತ್ಯಾತ್ಸದ ಸದಾತ್ಮಕಾತ್ ।
ಪ್ರಧಾನಪುರುಷಾಭ್ಯಾಂ ತು ಜಾಯತೇ ಚ ಮಹೇಶ್ವರಃ ॥ ೩೬ ॥

---

೩೩. ಪೂರ್ವದ ಸೃಷ್ಟಿಯಲ್ಲಿ ಯಾವ ಯಾವ ಪ್ರಾಣಿಗಳು (ಅಥವಾ ಪುರುಷರು) ಹಿಂಸಾಹಿಂಸೆಗಳೂ, ಮೃದುಕ್ರೂರಗಳೂ, ಧರ್ಮಾಧರ್ಮಗಳೂ, ಸತ್ಯಾನೃತಗಳೂ, ಈ ಗುಣಗಳಿಂದ ಕೂಡಿ ಸೃಷ್ಟರಾಗುವರೋ ಅವರು ಆಯಾ ಸಂಸ್ಕಾರಗಳಿಂದ ಯುಕ್ತರಾಗಿಯೇ ಉದ್ಭವಿಸುವರು. ಮೇಲೆ ನಿರೂಪಿಸಿರುವ ಗುಣಗಳು ಅವರಿಗೆ ಸಹಜವಾಗಿರುವುದರಿಂದ ಇಷ್ಟವಾಗಿಯೇ ಇರುತ್ತವೆ.

೩೪. ಮಹಾಭೂತಗಳಲ್ಲಿಯೂ, ಇಂದ್ರಿಯ ವಿಷಯಗಳಲ್ಲಿಯೂ, ಆಕಾರಗಳಲ್ಲಿಯೂ, ವಿವಿಧರೂಪಗಳೂ, ಧರ್ಮಗಳೂ, ಇರುವುದಕ್ಕೆ ಗುಣವಿಕ್ರಿಯಗಳೇ ಕಾರಣಗಳಾಗಿರುತ್ತವೆ. ಭೂತಗಳ ಸಂಯೋಗವಿಯೋಗಗಳೂಕೂಡ ಗುಣಗಳಿಂದಲೇ ಉಂಟಾಗುವುವು.

೩೫. ಈ ರೀತಿಯಾಗಿ ಸೃಷ್ಟಿಕ್ರಮವನ್ನು ನಿಮಗಾಗಿ ಸಂಕ್ಷೇಪವಾಗಿಯೂ, ಯಥಾಸ್ಥಿತವಾಗಿಯೂ, ನಿರೂಪಿಸಿರುವೆನು. ಈಗ ಸಂಕ್ಷೇಪವಾಗಿ ಬ್ರಹ್ಮದೇವನ ಸೃಷ್ಟಿಕ್ರಮವನ್ನು ತಿಳಿಸುವೆನು ಕೇಳಿರೆಂದು ಮುನಿಯು ಹೇಳಿದನು.

೩೬. ಸದಸದ್ರೂಪವೂ, ನಿತ್ಯವೂ, ಕಾರಣವೂ ಆದ ಅವ್ಯಕ್ತತತ್ವದಿಂದಲೂ, ಪ್ರಕೃತಿ ಪುರುಷರಿಂದಲೂ, ಅಂದರೆ ಇವುಗಳನ್ನು ನಿಮಿತ್ತಮಾಡಿಕೊಂಡು ಪರಮೇಶ್ವರನು ಅವತರಿಸುವನು.

ಸ ಪೂಜಿತಃ ಸಂಭಾವಯಿತಾ ಜಾಯತೇ ಬ್ರಹ್ಮಸಂಜ್ಞಿತಃ ।
ಸೃಜತೇ ಸ ಪುನರ್ಲೋಕಾನಭಿಮಾನುಗುಣಾತ್ಮಕಾನ್ ॥ ೩೭ ॥

ಅಹಂಕಾರಸ್ತು ಮಹತಸ್ತಸ್ಮಾದ್ಭೂತಾನಿ ಚಾತ್ಮನಃ ।
ಯುಗಪತ್ ಸಂಪ್ರವರ್ತಂತೇ ಭೂತಾನ್ಯೇವೇಂದ್ರಿಯಾಣಿ ಚ ॥
ಭೂತಭೇದಾಶ್ಚ ಭೂತೇಭ್ಯ ಇತಿ ಸರ್ಗಃ ಪ್ರವರ್ತತೇ ॥ ೩೮ ॥

ವಿಸ್ತರಾವಯವಸ್ತೇಷಾಂ ಯಥಾಪ್ರಜ್ಞಂ ಯಥಾಶ್ರುತಂ ।
ಕೀರ್ತಿತಂ ವೋ ಯಥಾ ಪೂರ್ವಂ ತಥೈವಾಭ್ಯುಪದಾರ್ಯತಾಂ ॥ ೩೯ ॥

---

೩೭. ಅಂತಹ ಮಹೇಶ್ವರನು ಸರ್ವರನ್ನೂ ಗೌರವಿಸುತ್ತಾ ಬ್ರಹ್ಮನಾಮಕನಾಗಿ ಅವತರಿಸುವನು. ಮತ್ತು ಆ ಪರಮಪುರುಷನು ಈ ಲೋಕಗಳನ್ನೂ, ಅಭಿಮಾನಿಗಳೂ, ಗುಣಾತ್ಮರೂ, ಆದ ದೇವತೆಗಳನ್ನು ಸೃಷ್ಟಿಸುವನು.

೩೮. ತರವಾಯ ಭಗವದಿಚ್ಛಾನುಗುಣವಾಗಿ ಮಹತ್ತತ್ವದಿಂದ ಅಹಂಕಾರತತ್ವವೂ, ಅದರಿಂದ ಭೂತಗಳೂ ಅಂದರೆ ದೇವತೆಗಳನ್ನೂ, ಮನಸ್ಸನ್ನೂ, ಸೃಷ್ಟಿಸುವನು. ತರುವಾಯ ಏಕಕಾಲದಲ್ಲಿಯೇ ಭೂತಗಳೂ, ಇಂದ್ರಿಯಗಳೂ, ತದಭಿಮಾನಿಗಳೂ, ಆಕಾಶವೂ ಉತ್ಪನ್ನವಾಗುವುವು. ತರುವಾಯ ಪಂಚಭೂತಗಳೂ, ಅವುಗಳಿಂದ ಜಗತ್ಸೃಷ್ಟಿಯೂ, ಉಂಟಾಗುವುವು.

೩೯. ಆಭೂತಗಳು, ಇಂದ್ರಿಯಗಳು, ಇವುಗಳಿಂದ ಬ್ರಹ್ಮಾಂಡವು ಅದರಲ್ಲಿ ಹದಿನಾಲ್ಕು ಲೋಕಗಳು ಇವುಗಳ ಸೃಷ್ಟಿಕ್ರಮವನ್ನು ನನ್ನ ಜ್ಞಾನಾನುಗುಣವಾಗಿ ನಾನು ಕೇಳಿದ ಹಾಗೆಯೇ ನಿಮಗೆ ಪೂರ್ವದಲ್ಲಿ ಹೇಳಿರುವೆನು. ನಾನು ಯಾವ ರೀತಿಯಲ್ಲಿ ನಿಮಗೆ ಸೃಷ್ಟಿಕ್ರಮವನ್ನು ಹಿಂದೆ ತಿಳಿಸಿದ್ದೇನೋ ಅದರಂತೆಯೇ ತಿಳಿಯಿರೆಂದನು.

ಏತಚ್ಛ್ರುತ್ವಾ ನೈಮಿಷೇಯಾಸ್ತದಾನೀಂ ।
ಲೋಕೋತ್ಪತ್ತಿಂ ಸಂಸ್ಥಿತಿಂ ಚ ವ್ಯಯಂ ಚ ॥
ತಸ್ಮಿನ್ ಸತ್ರೇಽವಭೃತಂ ಪ್ರಾಪ್ಯ ಶುದ್ಧಾಃ ।
ಪುಣ್ಯಂ ಲೋಕಮೃಷಯಃ ಪ್ರಾಪ್ನುವಂತಿ ॥ ೪೦ ॥

ಯಥಾ ಯೂಯಂ ವಿಧಿವದ್ದೇವತಾ ।
ದೀನಿಷ್ಟ್ವಾ ಚೈವಾವಭೃತಂ ಪ್ರಾಪ್ಯ ಶುದ್ಧಾಃ ॥
ತ್ಯಕ್ತ್ವಾ ದೇಹಾನಾಯುಷೋಽಂತೇ ಕೃತಾರ್ಥಾಶ್ ।
ಪುಣ್ಯಾಲ್ಲೋಕಾನ್ ಪ್ರಾಪ್ಯ ಯಥೇಷ್ಟಂ ಚರಿಷ್ಯಥ ॥ ೪೧ ॥

ಏತೇ ತೇ ನೈಮಿಷೇಯಾ ವೈ ಇಷ್ಟ್ವಾ ಸೃಷ್ಟ್ವಾ ಚ ವೈ ।
ಜಗ್ಮುಃ ಶ್ಚಾವಭೃಥಸ್ನಾತಾಃ ಸ್ವರ್ಗಂ ಸರ್ವೇ ತು ಸತ್ರಿಣಃ ॥ ೪೨ ॥

---

೪೦. ನೈಮಿಷಾರಣ್ಯವಾಸಿಗಳೂ, ಮಹಾತ್ಮರೂ, ಜಿತೇಂದ್ರಿಯರೂ, ಆದ ಮಹರ್ಷಿಗಳು ಹೀಗೆ ಸೂತಮುನಿಯಿಂದ ಜಗತ್ತಿನ ಸೃಷ್ಟಿಸ್ಥಿತಿಲಯುಗಳನ್ನು ಕೇಳಿ ಸಂತೋಷಗೊಂಡು ಸತ್ರಯಾಗವು ಮುಗಿಯಲು ಅವಭೃತಸ್ನಾನವನ್ನು ಮಾಡಿ ನಿರ್ಮಲಮನಸ್ಕರೂ, ಶುದ್ಧರೂ, ಆಗಿ ಪುಣ್ಯಕರವೂ, ಶಾಶ್ವತವೂ, ಆದ ಪರಮ ಪದವಿಯನ್ನು ಹೊಂದಿದರು.

೪೧. ಎಲೈ ವಿಪ್ರೋತ್ತಮರೇ, ನೀವು ಹೀಗೆ ವಿಧ್ಯುಕ್ತಪ್ರಕಾರವಾಗಿ ಈ ಸತ್ರ ಯಾಗದಲ್ಲಿ ದೇವತೆಗಳಿಗೆ ಪೂಜೆಗಳನ್ನು ಮಾಡಿ ಅವಭೃತಸ್ನಾನದಿಂದ ಶುದ್ಧರಾಗಿ ಆಯುಷ್ಯಗಳನ್ನು ಮುಗಿಸಿಕೊಂಡು ದೇಹತ್ಯಾಗಮಾಡಿ ಕೃತಾರ್ಥರಾಗಿ ಪುರುಷಾರ್ಥ ರೂಪಗಳೂ, ಪುಣ್ಯಕರವೂ, ಆದ ಲೋಕಗಳನ್ನು ಹೊಂದಿ ಯಥೇಚ್ಛೆಯಾಗಿ ದಿವ್ಯ ಸೌಖ್ಯವನ್ನು ಪಡೆಯಿರೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

೪೨. ನೈಮಿಷಾರಣ್ಯವಾಸಿಗಳೂ, ಸತ್ರಯಾಗಾಸಕ್ತರೂ, ಆದ ಈ ಮಹರ್ಷಿ ಗಳೆಲ್ಲರೂ, ಕ್ರಮವಾಗಿ ದೇವತೆಗಳನ್ನು ಪೂಜಿಸಿ ಮಹತ್ಕಾರ್ಯಗಳನ್ನೂ, ಅವಭೃತ ಸ್ನಾನವನ್ನೂ ಮಾಡಿ, ಸ್ವರ್ಗಲೋಕನ್ನು ಹೊಂದಿದರು.

ವಿಪ್ರಾಸ್ತಥಾ ಯೂಯಮಪಿ ಚೇಷ್ಟ್ವಾ ಬಹುವಿಧೈರ್ಮಖೈಃ ।
ಆಯುಷೋಽಂತೇ ತತಃ ಸ್ವರ್ಗಂ ಗಂತಾರಃ ಸ್ಥ ದ್ವಿಜೋತ್ತಮಾಃ ॥ ೪೩ ॥

ಪ್ರಕ್ರಿಯಾ ಪ್ರಥಮೇ ಪಾದೇ ಕಥಾವಸ್ತು ಪರಿಗ್ರಹಃ ।
ಅನುಷಂಗ ಉಪೋದ್ಘಾತ ಉಪಸಂಹಾರ ಏವ ಚ ॥ ೪೪ ॥

ಏವಮೇತಚ್ಚತುಷ್ಪಾದಂ ಪುರಾಣಂ ಲೋಕಸಮ್ಮತಂ ।
ಉವಾಚ ಭಗವಾನ್ ಸಾಕ್ಷಾದ್ವಾಯುರ್ಲೋಕಹಿತೇ ರತಃ ॥ ೪೫ ॥

ನೈಮಿಷೇ ಸತ್ರಮಾಸಾದ್ಯ ಮುನಿಭ್ಯೋ ಮುನಿಸತ್ತಮಾಃ ।
ತತ್ಪ್ರಸಾದಾದಸಂದಿಗ್ಧಂ ಭೂತೋತ್ಪತ್ತಿಲಯಾನಿ ಚ ॥ ೪೬ ॥

---

೪೩. ಎಲೈ ವಿಪ್ರೋತ್ತಮರೇ, ನೀವೂ ಸಹ ಆ ಮಹರ್ಷಿಗಳಂತೆ ಅನೇಕವಿಧಗಳಾದ ಯಾಗಗಳಿಂದ ದೇವತೆಗಳನ್ನು ಪೂಜಿಸಿ. ಆಯುಷ್ಯವು ಮುಗಿದ ಕೂಡಲೇ ಸ್ವರ್ಗಲೋಕಕ್ಕೆ ಹೋಗುವಿರೆಂದು ಹೇಳಿದನು.

೪೪. ಈ ಶ್ರೀ ವಾಯುಮಹಾಪುರಾಣದ ಮೊದಲನೆಯದಾದ ಪ್ರಕ್ರಿಯಾ ಪಾದದಲ್ಲಿ ಕಥಾವಸ್ತು ನಿರೂಪಿತವಾಗಿದೆ. ತರುವಾಯ ಅನುಷಂಗಪಾದ, ಉಪೋದ್ಘಾತ ಪಾದ, ಉಪಸಂಹಾರಪಾದಗಳು ವರ್ಣಿತವಾಗಿವೆ.

೪೫. ಹೀಗೆ ವಾಯುಮಹಾಪುರಾಣದಲ್ಲಿ ನಾಲ್ಕು ಪಾದಗಳೂ, ಅನೇಕ ಇತಿಹಾಸಗಳೂ, ಇರುವುದರಿಂದ ಈ ಮಹಾಪುರಾಣವು ಲೋಕಮಾನ್ಯವಾಗಿದೆ. ಈ ಮಹಾಪುರಾಣವನ್ನು ಪೂಜ್ಯನಾದ ಸಾಕ್ಷಾದ್ವಾಯುದೇವನು ಲೋಕಕಲ್ಯಾಣಕ್ಕಾಗಿಯೂ, ಸಜ್ಜನೋದ್ಧಾರಕವಾಗಿಯೂ, ದಯಪಾಲಿಸಿ ಹೇಳಿರುವನೆಂದು ಸೂತಮುನಿಯು ನಿರೂಪಿಸಿದನು.

೪೬–೪೭. ನೈಮಿಷಾರಣ್ಯವಾಸಿಗಳಾದ ಮುನೀಶ್ವರರು ಹೀಗೆ ಮಹರ್ಷಿಗಳ ಮಹಾಸತ್ರಯಾಗದಲ್ಲಿ ಅವರ ಅನುಗ್ರಹದಿಂದ ಭೂತಗಳ ಸೃಷ್ಟಿ, ಸ್ಥಿತಿ, ಲಯಾದಿಗಳನ್ನೂ, ಶ್ರೀ ಭಗವಂತನು ಪ್ರಧಾನವಮೂಲಕವಾಗಿ ಮಾಡಿರುವ ಸೃಷ್ಟ್ಯಾದಿಗಳನ್ನೂ ಕೇಳಿ ಸಂದೇಹಶೂನ್ಯರಾಗಿ, ಸ್ಪಷ್ಟವಾಗಿ ಇದನ್ನು ಹೇಳಿದರು.

ಪ್ರಾಧಾನಿಕೀಮಿಮಾಂ ಸೃಷ್ಟಿಂ ತಥೈವೇಶ್ವರಕಾರಿತಾಂ ।
ಸಮ್ಯಗ್ವಿದಿತ್ವಾ ಮೇಧಾವೀ ನ ಮೋಹಮಧಿಗಚ್ಛತಿ ॥ ೪೭ ॥

ಇದಂ ಯೋ ಬ್ರಾಹ್ಮಣೋ ವಿದ್ವಾನಿತಿಹಾಸಂ ಪುರಾತನಂ ।
ಶೃಣುಯಾಚ್ಛ್ರಾವಯೇದ್ವಾಪಿ ತಥಾಧ್ಯಾಪಯತೇಽಪಿ ಚ ॥ ೪೮ ॥

ಸ್ಥಾನೇಷು ಸ ಮಹೇಂದ್ರಸ್ಯ ಮೋದತೇ ಶಾಶ್ವತೀಃ ಸಮಾಃ ।
ಬ್ರಹ್ಮಸಾಯುಜ್ಯಗೋ ಭೂತ್ವಾ ಬ್ರಹ್ಮಣಾ ಸಹ ಮೋಕ್ಷ್ಯತೇ ॥ ೪೯ ॥

ತೇಷಾಂ ಕೀರ್ತಿಮತಾಂ ಕೀರ್ತಿಂ ಪ್ರಜೇಶಾನಾಂ ಮಹಾತ್ಮನಾಂ ।
ಪ್ರಥಯನ್ ಪೃಥಿವೀಶಾನಾಂ ಬ್ರಹ್ಮ ಭೂಯಾಯ ಗಚ್ಛತಿ ॥ ೫೦ ॥

ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ವೇದೈಶ್ಚ ಸಮ್ಮಿತಂ ।
ಕೃಷ್ಣದ್ವೈಪಾಯನೇನೋಕ್ತಂ ಪುರಾಣಂ ಬ್ರಹ್ಮವಾದಿನಾ ॥ ೫೧ ॥

---

೪೭. ಇದನ್ನು ಕೇಳಿದ ಜ್ಞಾನಿಯಾದ ಪುರುಷನು ಮೋಹವನ್ನು ಹೊಂದದೇ ಜ್ಞಾನಿಯೂ, ಮುಕ್ತನೂ ಆಗುವನು.

೪೮–೪೯. ಆದುದರಿಂದ ಜ್ಞಾನಿಯಾದ ಯಾವ ಬ್ರಾಹ್ಮಣನು ಪುರಾತನವಾದ ಈ ಪುರಾಣವನ್ನು ವಿಶ್ವಾಸದಿಂದ ಕೇಳುವುದು, ಹೇಳುವುದು, ಪಠಿಸುವುದು ಇವುಗಳನ್ನು ಮಾಡುವನೋ ಅವನು ದೇವೇಂದ್ರನ ಲೋಕಗಳಲ್ಲಿ ಅನೇಕ ವರ್ಷಗಳವರೆಗೂ ಸುಖವಾಗಿ ವಾಸಿಸುವನು. ತರುವಾಯ ಬ್ರಹ್ಮಸಾಯುಜ್ಯವನ್ನೂ ಪಡೆದು ಬ್ರಹ್ಮನೊಡನೆ ಮುಕ್ತನಾಗುವನು.

೫೦. ಯಾವ ಪುರುಷನು ಈ ಪುರಾಣಪ್ರೋಕ್ತರೂ, ಕೀರ್ತಿವಂತರೂ, ಪ್ರಜಾಪತಿಗಳೂ, ಮಹಾತ್ಮರೂ ಆದ ಚಕ್ರವರ್ತಿಗಳ ಕೀರ್ತಿ ಮಾಹಾತ್ಮ್ಯಗಳನ್ನು ವರ್ಣಿಸುವರೋ, ಅವರೂ ಕೂಡ ಮುಕ್ತರಾಗುವರು.

೫೧. ಮಹಾಜ್ಞಾನಸ್ವರೂಪನೂ, ಸ್ವಾಮಿಯೂ ಆದ ವೇದವ್ಯಾಸದೇವರಿಂದ ಪ್ರೋಕ್ತವಾದ ಈ ಶ್ರೀಮದ್ವಾಯುಮಹಾಪುರಾಣವು ಅತ್ಯುತ್ತಮವೂ, ಕೀರ್ತಿದಾಯಕವೂ, ಆಯುಷ್ಯಜನಕವೂ, ಪುಣ್ಯಪ್ರದವೂ, ವೇದಗಳಿಗೆ ಸಮಾನವೂ, ಧನ್ಯವೂ ಆಗಿದೆ.

ಮನ್ವಂತರೇಶ್ವರಾಣಾಂ ಚ ಯಃ ಕೀರ್ತಿಂ ಪ್ರಥಯೇದಿಮಾಂ ।
ದೇವತಾನಾಮೃಷೀಣಾಂ ಚ ಭೂರಿದ್ರವಿಣತೇಜಸಾಂ ॥
ಸ ಸರ್ವೈರ್ಮುಚ್ಯತೇ ಪಾಪೈಃ ಪುಣ್ಯಂ ಚ ಮಹದಾಪ್ನುಯಾತ್ ॥ ೫೨ ॥

ಯಶ್ಚೇದಂ ಶ್ರಾವಯೇದ್ವಿದ್ವಾನ್ ಸದಾ ಪರ್ವಣಿ ಪರ್ವಣಿ ।
ಧೂತಪಾಪ್ಮಾ ಜಿತಸ್ವರ್ಗೋ ಬ್ರಹ್ಮಭೂಯಾಯ ಕಲ್ಪತೇ ॥ ೫೩ ॥

ಯಶ್ಚೇದಂ ಶ್ರಾವಯೇಚ್ಛ್ರಾದ್ಧೇ ಬ್ರಾಹ್ಮಣಾನ್ ಪಾದಮಂತತಃ ।
ಅಕ್ಷಯಂ ಸಾರ್ವಕಾಮಿಕಾಯಂ ಪಿತೃಂಸ್ತಚ್ಛೋಪತಿಷ್ಠತಿ ॥ ೫೪ ॥

ಯಸ್ಮಾತ್ಪುರಾ ಹ್ಯನಂತೀದಂ ಪುರಾಣಂ ತೇನ ಚೋಚ್ಯತೇ ।
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥ ೫೫ ॥

---

೫೨. ಯಾವ ಪುರುಷರು ಮನ್ವಂತರೇಶ್ವರರೂ, ಮಹದೈಶ್ವರ್ಯವಂತರೂ, ಮಹಾತೇಜಸ್ವಿಗಳೂ ಆದ ದೇವತೆಗಳು, ಋಷಿಗಳು ಇವರ ಕೀರ್ತಿಚರಿತ್ರೆಗಳನ್ನು ವರ್ಣಿಸುವರೋ ಅವರು ಸರ್ವಪಾಪಗಳಿಂದ ಮುಕ್ತರಾಗುವರಲ್ಲದೇ ಮಹಾಪುಣ್ಯವನ್ನು ಪಡೆಯುವರು.

೫೩. ಯಾವ ವಿದ್ವಾಂಸರು ಈ ದೇವರ್ಷ್ಯಾದಿಗಳ ಮಹಿಮೆಗಳನ್ನು ಪರ್ವಕಾಲಗಳಲ್ಲಿ ವರ್ಣಿಸುವನೋ ಆ ಪಂಡಿತನು ಪಾಪವಿಮುಕ್ತನೂ, ಸ್ವರ್ಗವನ್ನು ಜಯಿಸುವನೂ ಆಗಿ ಬ್ರಹ್ಮಸ್ವರೂಪವನ್ನು ಹೊಂದುವನು ಅಂದರೆ ಮುಕ್ತನಾಗುವನು.

೫೪. ಯಾವನು ಶ್ರಾದ್ಧಕಾಲದಲ್ಲಿ ಬ್ರಾಹ್ಮಣರ ಮೂಲಕವಾಗಿ ಒಂದು ಪಾದವನ್ನಾದರೂ ಕೇಳುವನೋ ಅವನು ಅಕ್ಷಯವೂ, ಸರ್ವಕಾಮಪ್ರದವೂ ಆದ ಪಿತೃಗಳ ದಿವ್ಯಲೋಕವನ್ನು ಹೊಂದುವನು.

೫೫. ಈ ಪುರಾಣವು ಅನಾದಿಕಾಲದಿಂದಲೂ ಮಹಾಫಲಪ್ರದವೆಂದು ಮಹಾತ್ಮರು ಹೇಳುವರು. ಆದುದರಿಂದ ಯಾವನು ಈ ಪುರಾಣದ ಅವಯವಾರ್ಥವನ್ನು ಭಕ್ತಿಯಿಂದ ಕೇಳುವನೋ ಅವನು ಸರ್ವಪಾಪಗಳಿಂದ ಮುಕ್ತನಾಗಿ ಸರ್ವಸುಖವನ್ನು ಪಡೆಯುವನು.

ತಥೈವ ತ್ರಿಷು ವರ್ಣೇಷು ಯೇ ಮನುಷ್ಯಾಃ ಪ್ರಧಾನತಃ ।
ಇತಿಹಾಸಮಿಮಂ ಶ್ರುತ್ವಾ ಧರ್ಮಾಯ ವಿದಧೇ ಮತಿಂ ॥ ೫೬ ॥

ಯಾವಂತ್ಯಸ್ಯ ಶರೀರೇಷು ರೋಮಕೂಪಾಣಿ ಸರ್ವಶಃ ।
ತಾವತ್ಕೋಟಿಸಹಸ್ರಾಣಿ ವರ್ಷಾಣಾಂ ದಿವಿ ಮೋದತೇ ॥
ಬ್ರಹ್ಮಸಾಯುಜ್ಯಗೋ ಭೂತ್ವಾ ದೈವತೈಃ ಸಹ ಮೋದತೇ ॥ ೫೭ ॥

ಸರ್ವಪಾಪಹರಂ ಪುಣ್ಯಂ ಪವಿತ್ರಂ ಚ ಯಶಸ್ವಿ ಚ ।
ಬ್ರಹ್ಮಾ ದದೌ ಶಾಸ್ತ್ರಮಿದಂ ಪುರಾಣಂ ಮಾತರಿಶ್ವನೇ ॥ ೫೮ ॥

ತಸ್ಮಾಚ್ಚೋಶನಸಾ ಪ್ರಾಪ್ತಂ ತಸ್ಮಾಚ್ಚಾಪಿ ಬೃಹಸ್ಪತಿಃ ।
ಬೃಹಸ್ಪತಿಸ್ತು ಪ್ರೋವಾಚ ಸವಿತ್ರೇ ತದನಂತರಂ ॥ ೫೯ ॥

ಸವಿತಾ ಮೃತ್ಯುವೇ ಪ್ರಾಹ ಮೃತ್ಯುಶ್ಚೇಂದ್ರಾಯ ವೈ ಪುನಃ ।
ಇಂದ್ರಶ್ಚಾಪಿ ವಸಿಷ್ಠಾಯ ಸೋಽಪಿ ಸಾರಸ್ವತಾಯ ಚ ॥ ೬೦ ॥

---

೫೬. ಅದರಂತೆಯೇ ಬ್ರಾಹ್ಮಣಾದಿ ಮೂರು ವರ್ಣಗಳಲ್ಲಿ ಯಾವ ಪುರುಷನು ಮುಖ್ಯವಾಗಿ ಈ ಪುರಾಣವನ್ನು ಕೇಳಿ ಧರ್ಮಗಲ್ಲಿ ಆಸಕ್ತನಾಗುವನೋ ಅವನು ದಿವ್ಯಪದವಿಯನ್ನು ಪಡೆಯುವನು.

೫೭. ಮತ್ತು ಈ ಶರೀರದಲ್ಲಿ ಎಷ್ಟು ರೋಮಕೂಪಗಳು ಸಂಪೂರ್ಣವಾಗಿ ಇರುತ್ತವೆಯೋ ಅಷ್ಟು ಕೋಟಿಸಹಸ್ರವರ್ಷಗಳು ಸ್ವರ್ಗಲೋಕದಲ್ಲಿ ದಿವ್ಯಸುಖವನ್ನು ಪಡೆಯುವನು. ತರುವಾಯ ದೇವತೆಗಳೊಡನೆ ಬ್ರಹ್ಮಸಾಯುಜ್ಯವನ್ನು ಪಡೆದು ನಿತ್ಯಸುಖಿಯಾಗುವನು.

೫೮. ಪೂರ್ವಕಾಲದಲ್ಲಿ ಬ್ರಹ್ಮದೇವನು ಸರ್ವ ಪಾಪಹರವೂ, ಪುಣ್ಯಕರವೂ, ಪವಿತ್ರವೂ, ಕೀರ್ತಿಯುತವೂ, ಶಾಸ್ತ್ರರೂಪವೂ ಆದ ಈ ಮಹಾಪುರಾಣವನ್ನು ವಾಯುದೇವನಿಗೆ ಉಪದೇಶಮಾಡಿದನು.

೫೯–೬೧. ಆ ವಾಯುದೇವನು ಈ ಮಹಾಪುರಾಣವನ್ನು ಮೊದಲು ಶುಕ್ರಾಚಾರ್ಯನಿಗೆ ಉಪದೇಶಿಸಿದನು. ಅವನು ಬೃಹಸ್ಪತಿಗೂ, ಆ ಬೃಹಸ್ಪತಿಯು ಸೂರ್ಯದೇವನಿಗೂ, ಅವನು ಯಮದೇವನಿಗೂ, ಅವನು ಇಂದ್ರನಿಗೂ, ಆ ಇಂದ್ರನು ವಸಿಷ್ಠಮುನಿಗೂ, ಅವನು ಸಾರಸ್ವತನಿಗೂ, ಅವನು ತ್ರಿಧಾಮನಿಗೂ,

ಸಾರಸ್ವತಸ್ತ್ರಿಧಾಮ್ನೇ ಚ ತ್ರಿಧಾಮಾ ಚ ಶರದ್ವತೇ ।
ಶರದ್ವತಸ್ತ್ರಿವಿಷ್ಟಾಯ ಸೋಂತರಿಕ್ಷಾಯ ದತ್ತವಾನ್ ॥ ೬೧ ॥

ವರ್ಷಿಣೇ ಚಾಂತರಿಕ್ಷೋ ವೈ ಸೋಪಿ ತ್ರ್ಯಯ್ಯಾರುಣಾಯ ಚ ।
ತ್ರ್ಯಯ್ಯಾರುಣೋ ಧನಂಜಯೇ ಸ ಚ ಪಾದಾತ್ಕೃತಂಜಯೇ ॥ ೬೨ ॥

ಕೃತಂಜಯಾತ್ತೃಣಂಜಯೋ ಭರದ್ವಾಜಾಯ ಸೋಽಪ್ಯಥ ।
ಗೌತಮಾಯ ಭರದ್ವಾಜಃ ಸೋಽಪಿ ನಿರ್ಯಂತರೇ ಪುನಃ ॥ ೬೩ ॥

ನಿರ್ಯಂತರಸ್ತು ಪ್ರೋವಾಚ ತಥಾ ವಾಜಶ್ರವಾಯ ಚ ।
ಸ ದದೌ ಸೋಮಶುಷ್ಮಾಯ ಸ ದದೌ ತೃಣಬಿಂದವೇ ॥ ೬೪ ॥

ತೃಣಬಿಂದುಸ್ತು ದಕ್ಷಾಯ ದಕ್ಷಃ ಪ್ರೋವಾಚ ಶಕ್ತಯೇ ।
ಶಕ್ತೇಃ ಪರಾಶರಶ್ಚಾಪಿ ಗರ್ಭಸ್ಥಃ ಶ್ರುತವಾನಿದಂ ॥ ೬೫ ॥

---

ಅವನು ಶಾರದ್ವತನಿಗೂ, ಅವನು ತ್ರಿವಿಷ್ಟನಿಗೂ, ಅವನು ಅಂತರಿಕ್ಷನಿಗೂ ಪರಂಪರ ವಾಗಿ ಉಪದೇಶಮಾಡಿದರು.

೬೨. ತರುವಾಯ ಆ ಅಂತರಿಕ್ಷನು ವರ್ಷಿಗೂ, ಅವನು ತ್ರೈಯ್ಯಾರುಣನಿಗೂ, ಅವನು ಧನಂಜಯನಿಗೂ ಅವನು ಕೃತಂಜಯನಿಗೂ ಈ ವಾಯುಮಹಾಪುರಾಣ ವನ್ನು ಉಪದೇಶಮಾಡಿದರ .

೬೩–೬೪. ಅನಂತರ ಕೃತಂಜಯನು ಈ ಮಹಾಪುರಾಣವನ್ನು ತೃಣಂಜಯ ನಿಗೂ, ಅವನು ಭರದ್ವಾಜನಿಗೂ, ಆ ಮುನಿಯು ಗೌತಮಮಹರ್ಷಿಗೂ, ಅವನು ನಿರ್ಯಂತನಿಗೂ, ಆ ನಿರ್ಯಂತನು ವಾಜಶ್ರವನಿಗೂ, ಅವನು ಸೋಮಶುಷ್ಮನಿಗೂ, ಅವನೂ ಸಹ ತೃಣಬಿಂದುವಿಗೂ ಉಪದೇಶಮಾಡಿದರು.

೬೫. ಅನಂತರ ಆ ತೃಣಬಿಂದು ಮಹಾಮುನಿಯು ದಕ್ಷೇಶ್ವರನಿಗೂ, ಆ ದಕ್ಷಪ್ರಜಾಪತಿಯು ಶಕ್ತಿಮುನಿಗೂ, ಅವನು ಪರಾಶರನಿಗೂ ಉಪದೇಶಮಾಡಿದರು. ಪರಾಶರಮುನಿಯು ಗರ್ಭದಲ್ಲಿರುವಾಗಲೇ ಈ ಮಹಾಪುರಾಣವನ್ನು ಕೇಳಿದನು.

ಪರಾಶರಾಜ್ಜಾತುಕರ್ಣಸ್ತಸ್ಮಾದ್ದ್ವೈಪಾಯನಃ ಪ್ರಭುಃ ।
ದ್ವೈಪಾಯನಾತ್ಪುನಶ್ಚಾಪಿ ಮಯಾ ಪ್ರಾಪ್ತಂ ದ್ವಿಜೋತ್ತಮಾಃ ॥ ೧೬ ॥

॥ ಶಾಂಶಪಾಯನ ಉವಾಚ ॥

ಮಯಾ ವೈ ತತ್ಪುನಃ ಪ್ರೋಕ್ತಂ ಪುತ್ರಾಯಾಮಿತಬುದ್ಧಯೇ ।
ಇತ್ಯೇವ ವಾಚಾ ಬ್ರಹ್ಮಾದಿಗುರುಣಾ ಸಮುದಾಹೃತಾ ॥ ೧೭ ॥

ನಮಸ್ಕಾರ್ಯಾಶ್ಚ ಗುರವಃ ಪ್ರಯತ್ನೇನ ಮನೀಷಿಭಿಃ ।
ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ಸರ್ವಾರ್ಥಸಾಧಕಂ ॥ ೧೮ ॥

ಪಾಪಘ್ನಂ ನಿಯಮೇನೇದಂ ಶ್ರೋತವ್ಯಂ ಬ್ರಾಹ್ಮಣೈಃ ಸದಾ ।
ನಾಶುಚೌ ನಾಪಿ ಪಾಪಾಯ ನಾಪ್ಯಸಂವತ್ಸರೋಷಿತೇ ॥ ೧೯ ॥

ನಾಶ್ರದ್ದಧಾನಾವಿದುಷೇ ನಾಪುತ್ರಾಯ ಕಥಂಚನ ।
ನಾಹಿತಾಯ ಪ್ರದಾತವ್ಯಂ ಪವಿತ್ರಮಿದಮುತ್ತಮಂ ॥ ೨೦ ॥

---

೧೬. ಆ ಪರಾಶರಮುನಿಯು ಜಾತುಕರ್ಣನಿಗೂ, ಅವನು ಸ್ವಾಮಿಯಾದ ವ್ಯಾಸಮಹರ್ಷಿಗೂ, ಆ ವ್ಯಾಸದೇವನು ನನಗೂ ಉಪದೇಶಮಾಡಿದರು. ಎಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

೧೭. ಶಾಂಶಪಾಯನಮುನಿಯು ಹೇಳಿದನು :—ನಾನು ಆ ಮಹಾಪುರಾಣ ವನ್ನು ಮಹಾಬುದ್ಧಿಶಾಲಿಯಾದ ನನ್ನ ಕುಮಾರನಿಗೆ ಉಪದೇಶಮಾಡಿದೆನು. ಎಂಬುದಾಗಿ ಆದಿಗುರುವಾದ ಬ್ರಹ್ಮದೇವನು ಸ್ಪಷ್ಟವಾಣಿಯಿಂದ ದೇವಾದಿಗಳಿಗೆ ಹೇಳಿದನು.

೧೮–೨೦. ಆದುದರಿಂದ ಜ್ಞಾನಿಗಳು ಮೊದಲು ಮನಃಪೂರ್ವಕವಾಗಿ ಆ ಗುರುಗಳಿಗೆ ನಮಸ್ಕರಿಸಿ ಮಂಗಳಕರವೂ, ಕೀರ್ತಿದಾಯಕವೂ, ಆಯುಷ್ಯಪ್ರದವೂ, ಪುಣ್ಯಕರವೂ, ಸರ್ವಾರ್ಥಸಾಧಕವೂ, ಪಾಪನಾಶಕವೂ ಆದ ಈ ಮಹಾಪುರಾಣವನ್ನು ಬ್ರಾಹ್ಮಣರೊಡನೆ ನಿಯಮದಿಂದ ಸರ್ವಕಾಲದಲ್ಲಿಯೂ ಶ್ರವಣಮನನಾದಿಗಳನ್ನು ಮಾಡಬೇಕು. ಮತ್ತು ಅತಿಪವಿತ್ರವೂ, ಅತ್ಯುತ್ತಮವೂ ಆದ ಈ ಪುರಾಣವನ್ನು ಅಶುಚಿಯಾದ ಪುರುಷನಿಗೂ, ಪಾಪಿಷ್ಠನಿಗೂ, ಕೋಪಿಷ್ಠನಿಗೂ, ವಿಶ್ವಾಸವಿಲ್ಲದ ವನಿಗೂ, ಮೂರ್ಖನಿಗೂ, ಅಯೋಗ್ಯನಿಗೂ, ಪುತ್ರರಹಿತನಿಗೂ, ದ್ವೇಷಿಗೂ ಉಪದೇಶಮಾಡಬಾರದು.

ಅವ್ಯಕ್ತಂ ವೈ ಯಸ್ಯ ಯೋನಿಂ ವದಂತಿ ।
ವ್ಯಕ್ತಂ ದೇಹಂ ಕಾಲಮಂತರ್ಗತಂ ಚ ॥
ವಹ್ನಿಂ ವಕ್ತ್ರಂ ಚಂದ್ರಸೂರ್ಯೌ ಚ ನೇತ್ರೇ ।
ಶ್ರೋತ್ರೇ ಘ್ರಾಣಮಾಹುಶ್ಚ ವಾಯುಂ ॥ ೭೧ ॥

ವಾಚೋ ವೇದಾಂಶ್ಚಾಂತರಿಕ್ಷಂ ಶರೀರಂ ।
ಕ್ಷಿತಿಂ ಪಾದೌ ತಾರಕಾ ರೋಮಕೂಪಾನ್ ॥
ಸರ್ವಾಣಿ ಚಾಂಗಾನಿ ತಥೈವ ತಾನಿ ।
ವಿದ್ಯಾಸ್ಸರ್ವಾ ಯಸ್ಯ ಪುಚ್ಛಂ ವದಂತಿ ॥ ೭೨ ॥

ತಂ ದೇವದೇವಂ ಜನನಂ ಜನಾನಾಂ ।
ಸರ್ವೇಷು ಲೋಕೇಷು ಪ್ರತಿಷ್ಠಿತಂ ಚ ॥
ವರಂ ವರಾಣಾಂ ವರದಂ ಮಹೇಶ್ವರಂ ।
ಬ್ರಹ್ಮಾಣಮಾದಿಂ ಪ್ರಯತೋ ನಮಸ್ಯೇ ॥ ೭೩ ॥

ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ ಅನುಷಂಗಪಾದೇ
"ಸೃಷ್ಟಿವರ್ಣನಂ" ನಾಮ ಏಕಚತ್ವಾರಿಂಶೋಽಧ್ಯಾಯಃ.

---

೭೧–೭೩. ಯಾವ ದೇವನಿಗೆ ಅವ್ಯಕ್ತತತ್ವವು ಕಾರಣವೆಂದೂ, ವ್ಯಕ್ತತತ್ವವು ಶರೀರವೆಂದೂ ಕಾಲವು ಅಂತರ್ಗತವೆಂದೂ, ಅಗ್ನಿಯೇ ಮುಖವೆಂದೂ, ಚಂದ್ರ ಸೂರ್ಯರೇ ನೇತ್ರಗಳೆಂದೂ, ದಿಕ್ಕುಗಳೇ ಶ್ರೋತ್ರಗಳೆಂದೂ, ವಾಯುವೇ ರಸನ ವೆಂದೂ, ವೇದಗಳೇ ವಾಕ್ಕೆಂದೂ, ಅಂತರಿಕ್ಷವೇ ಶರೀರವೆಂದೂ, ಭೂಮಿಯೇ ಪಾದಗಳೆಂದೂ, ನಕ್ಷತ್ರಗಳೇ ರೋಮಕೂಪಗಳೆಂದೂ, ಉಳಿದ ಅಂಗಗಳೆಲ್ಲವೂ, ಸಂಪೂರ್ಣವಾಗಿವೆಯೆಂದೂ ಸರ್ವವಿದ್ಯೆಗಳು ಪುಚ್ಛವೆಂದೂ, ಹೇಳುತ್ತಾರೋ ಅಂತಹ ದೇವದೇವನೂ, ಜನರಿಗೆ ಜನಕನೂ, ಸಮಸ್ತಲೋಕವಾಸಿಯೂ, ವರವನ್ನು ಬೇಡುವರಿಗೆ ವರಪ್ರದನೂ, ಮಹೇಶ್ವರನೂ, ಪರಿಪೂರ್ಣನೂ ಆದ ಪರಮಪುರುಷನಿಗೆ ನಿಯಮದಿಂದ ನಮಸ್ಕಾರವನ್ನು ಮಾಡುವೆನೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದ ಅನುಷಂಗಪಾದದಲ್ಲಿ
"ಸೃಷ್ಟಿಪ್ರಕರಣ" ವೆಂಬ ನಲವತ್ತೊಂದನೆಯ ಅಧ್ಯಾಯವು ಸಮಾಪ್ತವಾದುದು.



## ನಲವತ್ತೊಂದನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಸಾಮಾನ್ಯವಾದ ಸೃಷ್ಟಿಕ್ರಮ, ವಾಯುಮಹಾಪುರಾಣದ ಮಹಿಮೆ. ಪರಂಪರೋಪದೇಶ ಇವುಗಳು ವರ್ಣಿತವಾಗಿವೆ. ಪ್ರಲಯಕಾಲದಲ್ಲಿ ಸತ್ವರಜಸ್ತಮೋಗುಣಗಳು ಸಮವಾಗಿ ಪ್ರಕೃತಿಯಲ್ಲಿ ಅಡಗಿರುವುವು. ಅಂತಹ ಪ್ರಲಯಕಾಲದ ಕೊನೆಯಲ್ಲಿ ಶ್ರೀ ಭಗವಂತನಿಗೆ ಸೃಷ್ಟಿಸಬೇಕೆಂಬ ಇಚ್ಛೆಯುಂಟಾಗುವುದು. ತರುವಾಯ ಶ್ರೀ ಭಗವಂತನು ಪ್ರಕೃತಿಯನ್ನು ಪ್ರೇರಿಸುವನು. ಆದರಿಂದ ಗುಣತ್ರಯಗಳು ಮಹತ್ತತ್ವಾಹಂಕಾರ ತತ್ವಗಳು ಸಂಭವಿಸುವುವು. ಸಾತ್ವಿಕ, ರಾಜಸ, ತಾಮಸಾಂಕಾರತತ್ವದಿಂದ ಮನಸ್ಸು, ಇಂದ್ರಿಯ, ತನ್ಮಾತ್ರಗಳೂ, ಪಂಚಮಹಾಭೂತಗಳೂ, ಬ್ರಹ್ಮಾಂಡವು ಚತುರ್ದಶಲೋಕಗಳೂ, ದೇವತೆಗಳೂ, ಸನಕಾದಿ ಮುನಿಗಳೂ, ಉತ್ಪನ್ನರಾಗುವರು. ತರುವಾಯ ಕಶ್ಯಪರು, ದಿತಿ, ಅದಿತಿ, ಕದ್ರೂ ವಿನಿತಾದಿಗಳ ಮೂಲಕ ದೈತ್ಯ, ದಾನವ, ರಾಕ್ಷಸ, ಮೃಗಪಕ್ಷ್ಯಾದಿಗಳನ್ನು ಸೃಷ್ಟಿಯನ್ನು ಮಾಡುವರು.

ಈ ವಾಯುಮಹಾಪುರಾಣವು ಈಪ್ಸಿತವಾದ ಸಕಲೇಷ್ಟಾರ್ಥಗಳನ್ನೂ ದಾಯಕವಾಗಿದೆ. ಈ ವಾಯುಪುರಾಣವನ್ನು ಬ್ರಹ್ಮದೇವನು ಮೊದಲು ವಾಯುದೇವನಿಗೆ ಉಪದೇಶಿಸಿದನು. ತರುವಾಯ ವಾಯುದೇವನು ಬೃಹಸ್ಪತಿಗೂ, ಅವನು ಶುಕ್ರನಿಗೂ ಈ ಪರಂಪರೆಯಿಂದ ವೇದವ್ಯಾಸದೇವನು ನನಗೂ ಉಪದೇಶಮಾಡಿದರು. ಅಂತಹ ಪುರಾಣವನ್ನು ನಾನು ನಿಮಗೆ ಹೇಳಿರುವೆನೆಂದು ಸೂತಮುನಿಯು ಮಹರ್ಷಿಗಳಿಗೆ ತಿಳಿಸಿದನೆಂಬ ವಿಷಯಗಳು ವರ್ಣಿತವಾಗಿವೆ.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀ ಮ ದ್ವಾ ಯು ಮ ಹಾ ಪು ರಾ ಣ ಂ

---

## ದ್ವಿಚತ್ವಾರಿಂಶೋಽಧ್ಯಾಯಃ

॥ ಶೌನಕಾದಿ ಋಷಯ ಊಚುಃ ॥

**ಸೂತ ಸೂತ ಮಹಾಭಾಗ ತ್ವಯಾ ಭಗವತಾ ಸತಾ ।**
**ವ್ಯಾಸಪ್ರಸಾದಾಧಿಗತಶಾಸ್ತ್ರಸಂಬೋಧನೇನ ಚ ॥ ೧ ॥**

**ಅಷ್ಟಾದಶಪುರಾಣಾನಿ ಸೇತಿಹಾಸಾನಿ ಚಾನಘ ।**
**ಉಪಕ್ರಮೋಪಸಂಹಾರ ವಿಧಿನೋಕ್ತಾನಿ ಕೃತ್ಸ್ನಶಃ ॥ ೨ ॥**

**ಚತುರ್ದಶ ಸಹಸ್ರಂ ಚ ಮಾತ್ಸ್ಯಂ ಪ್ರೋಕ್ತಮತಿಸ್ಫುಟಂ ।**
**ತತ್ಸಂಖ್ಯಕಂ ಭವಿಷ್ಯಂ ಚ ಪ್ರೋಕ್ತಂ ಪಂಚಶತಾಧಿಕಂ ॥ ೩ ॥**

---

## ನಲವತ್ತೆರಡನೆಯ ಅಧ್ಯಾಯವು

೧–೨. ಶೌನಕಾದಿ ಮುನಿಗಳು ಹೇಳಿದರು:—ಮಹಾಭಾಗ್ಯಶಾಲಿಯೂ, ನಿರ್ದೋಷಿಯೂ, ಮಹಾಜ್ಞಾನಿಯೂ ಆದ ಸೂತಮಹಾಮುನಿಯೇ, ನೀನುಮಹಾನುಭಾವರೂ, ಪೂಜ್ಯರೂ ಆದ ವೇದವ್ಯಾಸದೇವರ ಪರಮಾನುಗ್ರಹದಿಂದ ಸಕಲ ಶಾಸ್ತ್ರಾರ್ಥಗಳನ್ನೂ ತಿಳಿದು ಇತಿಹಾಸಪುರಾಣಗಳನ್ನು ಉಪಕ್ರಮೋಪಸಂಹಾರ ಪೂರ್ವಕವಾಗಿಯೂ, ಸಂಪೂರ್ಣವಾಗಿಯೂ, ಹೇಳಿರುತ್ತೀಯೆಂದು ಮುನಿಗಳು ಹೇಳಿದರು.

೩. ಅಷ್ಟಾದಶ ಪುರಾಣಗಳಲ್ಲಿ ಮತ್ಸ್ಯಮಹಾಪುರಾಣವು ಹದಿನಾಲ್ಕುಸಾವಿರ ಗ್ರಂಥಗಳಿಂದ ಕೂಡಿದೆಯೆಂದು ಹೇಳಿರುತ್ತೀಯೆ. ಅದರಂತೆಯೇ ಭವಿಷ್ಯತ್ಪುರಾಣವೂ ಕೂಡ ಹದಿನಾಲ್ಕುಸಾವಿರದ ಐದುನೂರು ಗ್ರಂಥಗಳಿಂದ ಪ್ರಕಾಶಮಾನವಾಗಿರುತ್ತದೆ.

**ಮಾರ್ಕಂಡೇಯಂ ಮಹಾರಮ್ಯಂ ಪ್ರೋಕ್ತಂ ನವಸಹಸ್ರಕಂ ।**
**ಕಥಿತಂ ಬ್ರಹ್ಮವೈವರ್ತಮಷ್ಟಾದಶಸಹಸ್ರಕಂ ॥ ೪ ॥**

**ಶತೋತ್ತರಂ ಚ ಬ್ರಹ್ಮಾಂಡಂ ಸೂರ್ಯಸಂಖ್ಯಾಸಹಸ್ರಕಂ ।**
**ಅಥ ಭಾಗವತಂ ದಿವ್ಯಮಷ್ಟಾದಶ ಸಹಸ್ರಕಂ ॥ ೫ ॥**

**ಸಹಸ್ರಾಣಿ ದಶೈವೋಕ್ತಂ ಪುರಾಣಂ ಬ್ರಹ್ಮನಾಮಕಂ ।**
**ಅಯುತಶ್ಲೋಕಘಟಿತಂ ಪುರಾಣಂ ವಾಮನಾಭಿದಂ ॥ ೬ ॥**

**ತಥೈವಾಯುತಸಂಖ್ಯಾತಂ ಷಟ್‌ಶತಾಧಿಕಮಾದಿಕಂ ।**
**ತ್ರಯೋವಿಂಶತಿಸಾಹಸ್ರಮನಿಲಂ ತದ್ಗತಂ ಶುಭಂ ॥ ೭ ॥**

**ತ್ರಯೋವಿಂಶತಿಸಾಹಸ್ರಂ ನಾರದೀಯಮುದಾಹೃತಂ ।**
**ಏಕೋನವಿಂಶಸಾಹಸ್ರಂ ವೈನತೇಯಮುದಾಹೃತಂ ॥ ೮ ॥**

---

೪. ಮಾರ್ಕಂಡೇಯಪುರಾಣವು ಒಂಭತ್ತುಸಹಸ್ರ ಶ್ಲೋಕಗಳಿಂದ ಅತಿ ರಮ್ಯವಾಗಿರುತ್ತದೆ. ಬ್ರಹ್ಮವೈವರ್ತಪುರಾಣವು ಹದಿನೆಂಟುಸಾವಿರ ಪದ್ಯಗಳಿಂದ ಅತಿರಮ್ಯವಾಗಿದೆಯೆಂದು ನಿರೂಪಿತವಾಗಿದೆ.

೫. ಬ್ರಹ್ಮಾಂಡಪುರಾಣವು ಹನ್ನೆರಡುಸಾವಿರದ ನೂರು ಪದ್ಯಗಳಿಂದ ಅತಿ ಮನೋಹರವಾಗಿದೆ. ದಿವ್ಯವಾದ ಭಾಗವತವಾದರೋ ಹದಿನೆಂಟುಸಹಸ್ರ ಗ್ರಂಥ ಗಳಿಂದ ಅತಿಸುಂದರವಾಗಿದೆ.

೬. ಬ್ರಹ್ಮಪುರಾಣವು ಹತ್ತುಸಾವಿರ ಗ್ರಂಥಗಳಿಂದ ಸಹಿತವಾಗಿಯೂ, ವಾಮನ ಪುರಾಣವೂ ಕೂಡ ಹತ್ತುಸಾವಿರ ಶ್ಲೋಕಗಳಿಂದಲೇ ಅಲಂಕೃತವಾಗಿದೆ.

೭. ಆದಿಪುರಾಣವು ಹತ್ತುಸಾವಿರದ ಆರುನೂರ ಪದ್ಯಗಳಿಂದ ಮಂಡಿತ ವಾಗಿಯೂ, ವಾಯುಪುರಾಣವು ಹದಿಮೂರುಸಾವಿರ ಶ್ಲೋಕಗಳಿಂದ ಮಂಗಳ ದಾಯಕವಾಗಿಯೂ, ರಮ್ಯವಾಗಿಯೂ ಇರುತ್ತದೆ.

೮. ನಾರದೀಯ ಪುರಾಣವು ಹದಿಮೂರುಸಾವಿರ ಗ್ರಂಥಗಳಿಂದ ಯುಕ್ತ ವಾಗಿಯೂ, ಗರುಡಪುರಾಣವು ಹತ್ತೊಂಭತ್ತುಸಹಸ್ರ ಗ್ರಂಥಗಳಿಂದ ಅತಿವಿಸ್ತಾರ ವಾಗಿರುತ್ತದೆಯೆಂದು ತಿಳಿದುಬಂದಿದೆ.

**ಸಹಸ್ರಪಂಚಪಂಚಾಶತ್ ಪ್ರೋಕ್ತಂ ಪಾದ್ಮಂ ಸುವಿಸ್ತರಂ ।**
**ಸಪ್ತದಶಸಹಸ್ರಂ ತು ಕೂರ್ಮಂ ಪ್ರೋಕ್ತಂ ಮನೋಹರಂ ॥ ೯ ॥**

**ಚತುರ್ವಿಂಶತಿಸಾಹಸ್ರಂ ಸೌಕರಂ ಪರಮಾದ್ಭುತಂ ।**
**ಏಕಾಶೀತಿಸಹಸ್ರಾಣಿ ಸ್ಕಾಂದಮುಕ್ತಂ ಸುವಿಸ್ತೃತಂ ॥ ೧೦ ॥**

**ಏವಮಷ್ಟಾದಶೋಕ್ತಾನಿ ಪುರಾಣಾನಿ ಬೃಹಂತಿ ಚ ।**
**ಪುರಾಣೇಷ್ವೇಷು ಬಹವೋ ಧರ್ಮಾಸ್ತೇ ವಿನಿರೂಪಿತಾಃ ॥ ೧೧ ॥**

**ರಾಗಿಣಾಂ ಚ ವಿರಾಗಾಣಾಂ ಯತೀನಾಂ ಬ್ರಹ್ಮಚಾರಿಣಾಂ ।**
**ಗೃಹಸ್ಥಾನಾಂ ವನಸ್ಥಾನಾಂ ಸ್ತ್ರೀಶೂದ್ರಾಣಾಂ ವಿಶೇಷತಃ ॥ ೧೨ ॥**

**ಬ್ರಾಹ್ಮಣಕ್ಷತ್ರಿಯವಿಶಾಂ ಯೇ ಚ ಸಂಕರಜಾತಯಃ ।**
**ಗಂಗಾದ್ಯಾ ಯಾ ಮಹಾನದ್ಯೋ ಯಜ್ಞವ್ರತತಪಾಂಸಿ ಚ ॥ ೧೩ ॥**

---

೯. ಪದ್ಮಪುರಾಣವು ಐವತ್ತೈದುಸಹಸ್ರ ಗ್ರಂಥಗಳಿಂದ ಅತ್ಯಂತ ವಿಸ್ತಾರವಾಗಿಯೂ, ವಿಸ್ಮಯಜನಕವಾಗಿಯೂ ಇರುತ್ತವೆ. ಕೂರ್ಮಪುರಾಣವು ಹದಿನೇಳು ಸಾವಿರ ಪದ್ಯಗಳಿಂದಲಂಕೃತವಾಗಿದೆ.

೧೦. ವರಾಹಮಹಾಪುರಾಣವು ಇಪ್ಪತ್ತುನಾಲ್ಕುಸಾವಿರ ಗ್ರಂಥಗಳಿಂದ ಅತ್ಯದ್ಭುತವಾಗಿಯೂ, ವಿಸ್ತಾರವಾಗಿಯೂ ಇರುತ್ತದೆ. ಸ್ಕಂದಪುರಾಣವು ಎಂಭತ್ತೊಂದುಸಾವಿರ ಪದ್ಯಗಳಿಂದ ಅತ್ಯಂತ ವಿಸ್ತಾರವಾಗಿದೆ.

೧೧. ಈ ರೀತಿಯಾಗಿ ಅತಿಮಹತ್ತಾದ ಹದಿನೆಂಟು ಮಹಾಪುರಾಣಗಳನ್ನೂ ನಿಮಗಾಗಿ ನಿರೂಪಿತವಾಗಿವೆ ಈ ಪುರಾಣಗಳಲ್ಲಿ ಅನೇಕ ಧರ್ಮಗಳೂ, ನೀತಿಗಳೂ, ವರ್ಣಾಶ್ರಮಾಚಾರಗಳೂ, ವಿಶದವಾಗಿ ತಿಳಿಸಿವೆ.

೧೨. ಮತ್ತು ಈ ಪುರಾಣಗಳಲ್ಲಿ ವಿಷಯಾಸಕ್ತರಾದವರಿಗೂ, ಜಿತೇಂದ್ರಿಯರಿಗೂ, ಯತಿಗಳಿಗೂ, ಬ್ರಹ್ಮಚಾರಿಗಳಿಗೂ, ಗ್ರಹಸ್ಥರಿಗೂ, ವಾನಪ್ರಸ್ಥರಿಗೂ, ಸ್ತ್ರೀಶೂದ್ರನಿಗೂ, ವಿಹಿತವೂ, ಯೋಗ್ಯವೂ ಆದ ಧರ್ಮಗಳು ವರ್ಣಿತವಾಗಿವೆ.

೧೩-೧೭. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಸಂಕರ ಜಾತಿಗಳು, ಗಂಗಾದಿ ಮಹಾನದಿಗಳು, ಯಜ್ಞಯಾಗಾದಿ ಧರ್ಮಗಳು, ವ್ರತ ತಪಸ್ಸುಗಳು,

**ಅನೇಕವಿಧದಾನಾನಿ ಯಮಾಶ್ಚ ನಿಯಮೈಃ ಸಹ ।**
**ಯೋಗಧರ್ಮಾ ಬಹುವಿಧಾಃ ಸಾಂಖ್ಯಾ ಭಾಗವತಾಸ್ತಥಾ ॥ ೧೪ ॥**

**ಭಕ್ತಿಮಾರ್ಗಾ ಜ್ಞಾನಮಾರ್ಗಾ ವೈರಾಗ್ಯಾನಿಲ ನೀರಜಾಃ ।**
**ಉಪಾಸನವಿಧಿಶ್ಪ್ರೋಕ್ತಃ ಕರ್ಮಸಂಶುದ್ಧಿಚೇತಸಾಂ ॥ ೧೫ ॥**

**ಬ್ರಾಹ್ಮಂ ಶೈವಂ ವೈಷ್ಣವಂ ಚ ಸೌರಂ ಶಾಕ್ತಂ ತಥಾರ್ಹತಂ ।**
**ಷಡ್‌ದರ್ಶನಾನಿ ಚೋಕ್ತಾನಿ ಸ್ವಭಾವನಿಯತಾನಿ ಚ ॥ ೧೬ ॥**

**ಏತದನ್ಯಶ್ಚ ವಿವಿಧಂ ಪುರಾಣೇಷು ನಿರೂಪಿತಂ ।**
**ಅತಃ ಪರಂ ಕಿಮಪ್ಯಸ್ತಿ ನ ವಾ ಬೋದ್ಧವ್ಯಮುತ್ತಮಂ ॥ ೧೭ ॥**

**ನ ಜ್ಞಾಯತೇ ಯದಿ ವ್ಯಾಸೋ ಗೋಪಯೇದಥ ವಾ ಭವಾನ್ ।**
**ಅತ್ರ ನಃ ಸಂಶಯಂ ಛಿಂಧಿ ಪೂರ್ಣಃ ಪೌರಾಣಿಕೋ ಯತಃ ॥ ೧೮ ॥**

---

ನಾನಾವಿಧ ದಾನಗಳು, ಯಮನಿಯಮಾದಿ ಯೋಗಧರ್ಮಗಳು, ಬಹುವಿಧಗಳಾದ ಸಾಂಖ್ಯತತ್ವಗಳು, ಭಾಗವತಧರ್ಮಗಳು, ಭಕ್ತಿ, ಜ್ಞಾನ, ವೈರಾಗ್ಯ ಮಾರ್ಗಗಳು, ಪರಹಿಂಸಾದಿ ಅಧರ್ಮಸ್ವರೂಪಗಳು, ಉಪಾಸನಾಕ್ರಮಗಳು, ಮನಸ್ಸಿಗೆ ಕರ್ಮದಿಂದುಂಟಾಗುವ ಶುದ್ಧಿಕ್ರಮಗಳು ಬ್ರಾಹ್ಮ, ಶೈವ, ವೈಷ್ಣವ, ಸೌರ, ಶಾಕ್ತೇಯ ಆರ್ಹತವೆಂಬ ಸ್ವಭಾವಸಿದ್ಧಗಳಾದ ಆರು ದರ್ಶಗಳೂ, ಇವುಗಳೂ ಮತ್ತು ಇತರ ವಿವಿಧವಿಷಯಗಳೂ ಈ ಅಷ್ಟಾದಶಪುರಾಣಗಳಲ್ಲಿ ನಿರೂಪಿತವಾದ ಮುಖ್ಯ ವಿಷಯಗಳಾಗಿವೆ. ಇವುಗಳಿಗಿಂತಲೂ ಬೇರೆಯೂ, ಉತ್ತಮವೂ ಆದ ಬೇರೆ ಯಾವ ಪುರಾಣಗಳೂ ಇಲ್ಲವು.

೧೮. ವ್ಯಾಸಮಹರ್ಷಿಗಳು ಇವುಗಳಿಗಿಂತಲೂ ಬೇರೆಯಾಗಿರುವ ಪುರಾಣಗಳನ್ನು ತಿಳಿದಿರುವುದಿಲ್ಲವೇ ? ಅಥವಾ ತಿಳಿದಿದ್ದರೂ ನೀನು ಅವುಗಳನ್ನು ನಮಗೆ ತಿಳಿಸದೆ ವಂಚಿಸುತ್ತೀಯೆ ? ಈ ವಿಷಯದಲ್ಲಿ ನಮಗೆ ಸಂಶಯವುಂಟಾಗಿದೆ. ಪೌರಾಣಿಕೋತ್ತಮನಾದ ಎಲೈ ಸೂತನೇ, ನೀನು ಈ ವಿಷಯವನ್ನು ತಿಳಿಸಲು ಸಮರ್ಥನಾಗಿರುವುದರಿಂದ ನಮ್ಮ ಸಂದೇಹವನ್ನು ಪರಿಹರಿಸೆಂದರು.

|| ಸೂತ ಉವಾಚ ||

ಶೃಣು ಶೌನಕ ವಕ್ಷ್ಯಾಮಿ ಪ್ರಶ್ನಮೇತಂ ಸುದುರ್ಲಭಂ ।
ಅತಿಗೋಪ್ಯತರಂ ದಿವ್ಯಮನಾಖ್ಯೇಯಂ ಪ್ರಚಕ್ಷತೇ || ೧೯ ||

ಪರಾಶರಸುತೋ ವ್ಯಾಸಃ ಕೃತ್ವಾ ಪೌರಾಣಿಕೀಂ ಕಥಾಂ ।
ಸರ್ವವೇದಾರ್ಥಘಟಿತಾಂ ಚಿಂತಯಾಮಾಸ ಚೇತಸಿ || ೨೦ ||

ವರ್ಣಾಶ್ರಮವತಾಂ ಧರ್ಮಾ ಮಯಾ ಸಮ್ಯಗುದಾಹೃತಃ ।
ಮುಕ್ತಿಮಾರ್ಗಾ ಬಹುವಿಧಾ ಉಕ್ತಾ ವೇದಾವಿರೋಧತಃ || ೨೧ ||

ಜೀವೇಶ್ವರಬ್ರಹ್ಮಭೇದೋ ನಿರಸ್ತಃ ಸೂತ್ರನಿರ್ಣಯೇ ।
ನಿರೂಪಿತಂ ಪರಂ ಬ್ರಹ್ಮ ಶ್ರುತಿಯುಕ್ತವಿಚಾರತಃ || ೨೨ ||

---

೧೯. ಸೂತಮುನಿಯು ಹೇಳಿದನು :–ಹೇ ಶೌನಕನೇ, ಅತ್ಯಂತ ದುರ್ಲಭವೂ, ಸೂಕ್ಷ್ಮವೂ ಆದ ಈ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ ಕೇಳು. ಈ ವಿಷಯವು ದಿವ್ಯವೂ ಅತಿಗೋಪ್ಯವೂ ಹೇಳಲನರ್ಹವೂ ಆಗಿದ್ದರೂ ನಿನಗಾಗಿ ನಿರೂಪಿಸುವೆನು.

೨೦. ಪರಾಶರ ಕುಮಾರರೂ, ಸಕಲ ತತ್ವಜ್ಞರೂ ಆದ ವೇದವ್ಯಾಸದೇವರು ಸರ್ವವೇದಾರ್ಥ ನಿರ್ಣಾಯಕವಾದ ಹದಿನೆಂಟು ಪುರಾಣಗಳನ್ನು ರಚಿಸಿ, ಅನಂತರ ತಮ್ಮ ಮನಸ್ಸಿನಲ್ಲಿ ಆಲೋಚಿಸಿದರು.

೨೧. ನಾನು ಈ ಅಷ್ಟಾದಶ ಪುರಾಣಗಳಲ್ಲಿ ವರ್ಣಾಶ್ರಮಾಚಾರ ಧರ್ಮಗಳನ್ನೂ, ಬಹುವಿಧವಾದ ಮುಕ್ತಿಮಾರ್ಗಗಳನ್ನೂ ವೇದಗಳಿಗೆ ಅವಿರೋಧವಾಗಿಯೂ, ಸರಿಯಾಗಿಯೂ ನಿಮಗೆ ನಿರೂಪಿಸಿರುವೆನು.

೨೨. ಜೀವೇಶ್ವರಾಭೇದವೂ, ಈಶ್ವರ ಬ್ರಹ್ಮಾಭೇದವೂ, ಬ್ರಹ್ಮಸೂತ್ರಾದಿಗಳಲ್ಲಿ ನಿರಾಕರಿಸಲ್ಪಟ್ಟಿವೆ. ಪರಮೋತ್ತಮನಾದ ಬ್ರಹ್ಮನು ಶ್ರುತಿಯುಕ್ತಿ ವಿಚಾರಗಳಿಂದ ಬೇರೆಯಾಗಿರುತ್ತಾನೆಂದು ಬ್ರಹ್ಮಸೂತ್ರಾದಿಗಳಲ್ಲಿ ನಿರೂಪಿಸಲ್ಪಟ್ಟಿವೆ.

ಅಕ್ಷರಂ ಪರಮಂ ಬ್ರಹ್ಮ ಪರಮಾತ್ಮಾ ಪರಂ ಪದಂ ।
ಯದರ್ಥಂ ಬ್ರಹ್ಮಚರ್ಯಾದಿವಾನಪ್ರಸ್ಥಯತಿವ್ರತಂ ॥ ೨೩ ॥

ಆಚರಂತಿ ಮಹಾಪ್ರಾಜ್ಞಾ ಧಾರಣಾಂ ಚ ಪೃಥಗ್ವಿಧಾಂ ।
ಆಸನಂ ಪ್ರಾಣರೋಧಶ್ಚ ಪ್ರತ್ಯಾಹಾರಶ್ಚ ಧಾರಣಾ ॥ ೨೪ ॥

ಧ್ಯಾನಂ ಸಮಾಧಿರೇತಾನಿ ಯಮೈಶ್ಚ ನಿಯಮೈಃ ಸಹ ।
ಅಷ್ಟಾಂಗಾನಿ ಯದರ್ಥಂ ಚ ಚರಂತಿ ಮುನಿಪುಂಗವಾಃ ॥ ೨೫ ॥

ಯದರ್ಥಂ ಕರ್ಮ ಕುರ್ವಂತಿ ವೇದಾಜ್ಞಾಮಾತ್ರತತ್ಪರಾಃ ।
ಪರಾರ್ಪಣಧಿಯಾ ಸಮ್ಯಗ್ನಿಷ್ಕಾಮಾಃ ಕಲಿಲೋಜ್ಝಿತಾಃ ॥ ೨೬ ॥

ಯಜ್ಞಪ್ತಯೇ ನಿರಾಕರ್ತುಂ ಪಾಪಾಚರಣಮಾತ್ಮನಃ ।
ಗಂಗಾದಿತೀರ್ಥಚರ್ಯಾಣಿ ನಿಷೇವಂತೇ ಶುಚಿವ್ರತಾಃ । ॥ ೨೭ ॥

---

೨೩. ಆ ಪರಮಾತ್ಮನು ನಾಶರಹಿತನೂ, ಉತ್ತಮನೂ, ಪೂರ್ಣನೂ, ಪರಮಪದದಾಯಕನೂ ಆಗಿರುತ್ತಾನೆ. ಅಂತಹ ಬ್ರಹ್ಮಪದ ಪ್ರಾಪ್ತಿಗಾಗಿ ಮಹಾತ್ಮರಾದ ಮುನೀಶ್ವರರು ಬ್ರಹ್ಮಚರ್ಯ, ವಾನಪ್ರಸ್ಥ, ಯತಿ ಮೊದಲಾದವರ ನಾನಾ ವಿಧವಾದ ವ್ರತನಿಯಮಾದಿಗಳನ್ನು ನಿರೂಪಿಸಿರುವರು.

೨೪–೨೫. ಮಹಾತ್ಮರು ಅಂತಹ ಬ್ರಹ್ಮನನ್ನು ಪಡೆಯುವುದಕ್ಕಾಗಿ ನಾನಾವಿಧ ಧ್ಯಾನಗಳನ್ನೂ ಆಸನ, ಪ್ರಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ, ನಿಯಮಗಳನ್ನೂ ಯಮ ನಿಯಮಾದಿ ಅಷ್ಟಾಂಗಗಳನ್ನೂ ಆಚರಿಸುತ್ತಾರೆ.

೨೬. ಕಲಿದೋಷ ಶೂನ್ಯರೂ, ನಿಷ್ಕಾಮಿಗಳೂ, ವೇದವೇದಾಂತಗಳನ್ನು ತಿಳಿದವರೂ, ಆದ ಮಹಾತ್ಮರು ಅಂತಹ ಬ್ರಹ್ಮನನ್ನು ಪಡೆಯಲು ಕೃಷ್ಣಾರ್ಪಣ ಬುದ್ಧಿಯಿಂದ ರಾಗರಹಿತರಾಗಿ ವೇದೋಕ್ತವಾದ ಕರ್ಮಗಳನ್ನು ಆಚರಿಸುವರು.

೨೭. ಪರಿಶುದ್ಧವಾದ ವ್ರತಗಳುಳ್ಳ ಮಹಾತ್ಮರು ಆ ಪರಮಪುರುಷನನ್ನು ತಿಳಿಯುವುದಕ್ಕೋಸ್ಕರವೂ, ತಮ್ಮ ಪಾಪಗಳನ್ನು ಪರಿಹರಿಸಿಕೊಳ್ಳುವದಕ್ಕಾಗಿಯೂ, ಗಂಗಾದಿ ಸಕಲ ತೀರ್ಥ ಯಾತ್ರೆಗಳನ್ನು ಮಾಡುವರು.

ತದ್ಬ್ರಹ್ಮ ಪರಮಂ ಶುದ್ಧಮನಾದ್ಯಂತಮನಾಮಯಂ ।
ನಿತ್ಯಂ ಸರ್ವಗತಂ ಸ್ಥಾಣು ಕೂಟಸ್ಥಂ ಕೂಟವರ್ಜಿತಂ ॥ ೨೮ ॥

ಸರ್ವೇಂದ್ರಿಯಚರಾಭಾಸಂ ಪ್ರಾಕೃತೇಂದ್ರಿಯವರ್ಜಿತಂ ।
ದಿಕ್ಕಾಲಾದ್ಯನವಚ್ಛಿನ್ನಂ ನಿತ್ಯಂ ಚಿನ್ಮಾತ್ರಮವ್ಯಯಂ ॥ ೨೯ ॥

ಅಧ್ಯಸ್ತಂ ಸರ್ಪವದ್ಯತ್ರ ವಿಶ್ವಮೇತತ್ ಪ್ರಕಾಶತೇ ।
ವಿಶ್ವಸ್ಮಿನ್ನಪಿ ಚಾನ್ವೇತಿ ನಿರ್ವಿಕಾರಶ್ಚ ರಜ್ಜುವತ್ ॥ ೩೦ ॥

ಸಮ್ಯಗ್ವಿಚಾರಿತಂ ಯದ್ವತ್ಫೇನೋರ್ಮಿಬುದ್ಬುದೋದಕಂ ।
ತಥಾ ವಿಚಾರಿತಂ ಬ್ರಹ್ಮ ವಿಶ್ವಸ್ಮಾನ್ನ ಪೃಥಗ್ಭವೇತ ॥ ೩೧ ॥

---

೨೮–೨೯. ಅಂತಹ ಪರಬ್ರಹ್ಮನು. ಉತ್ತಮನೂ, ಶುದ್ಧನೂ, ಅದ್ಯಂತ ರಹಿತನೂ, ರೋಗಾದಿಶೂನ್ಯನೂ, ನಿತ್ಯನೂ, ಸರ್ವಗತನೂ, ನಿರ್ವಿಕಾರನೂ, ಅಚಲನೂ, ಕೂಟಾದಿ ವಿಕಾರರಹಿತನೂ, ಆಕಾಶಾದಿಗತನೂ, ಸಂಗರಹಿತನೂ, ಅಪ್ರಾಕೃತವಾದ ಸರ್ವೇಂದ್ರಿಯ ಆಚಾರವುಳ್ಳವನೂ, ಪ್ರಾಕೃತೇಂದ್ರಿಯರಹಿತನೂ, ದಿಕ್ಕಾಲಾದಿಗಳಿಂದ ಅಪರಿಮಿತನೂ, ನಿತ್ಯನೂ, ಜ್ಞಾನಸ್ವರೂಪನೂ, ನಾಶರಹಿತನೂ, ಆಗಿರುವನು.

೩೦. ರಜ್ಜುವಿನಲ್ಲಿ (ಹಗ್ಗದಲ್ಲಿ) ಸರ್ಪವು ಆರೋಪಿತವಾಗಿರುವಂತೆ ಯಾವ ಬ್ರಹ್ಮನಲ್ಲಿ ಈ ಸಮಸ್ತವಾದ ಜಗತ್ತೂ ಆರೋಪಿತವಾಗಿದೆಯೋ ಮತ್ತು ಸಮಸ್ತವಾದ ವಿಶ್ವದಲ್ಲಿಯೂ, ಯಾವ ಬ್ರಹ್ಮನು ಅಧ್ಯಸ್ತನಾಗಿರುವನೋ ಅಂತಹ ಪರಬ್ರಹ್ಮನು ಹಗ್ಗದಂತೆ ನಿರ್ವಿಕಾರನಾಗಿರುವನು.

೩೧. ಅಜ್ಞಾನದೆಶೆಯಲ್ಲಿ ಜಲ, ಅಲೆಗಳು, ನೊರೆ, ಗುಳ್ಳೆಗಳು ಇವು ಬೇರೆ ಬೇರೆಯಾಗಿ ಹೇಗೆ ತೋರುತ್ತವೆಯೋ, ಹಾಗೆಯೇ ಅಜ್ಞಾನಾವಸ್ಥೆಯಲ್ಲಿ ಬ್ರಹ್ಮನು ಜಗತ್ತು ಬೇರೆ ಬೇರೆಯಾಗಿ ತೋರುವುವು. ಜ್ಞಾನೋದಯವಾದರೆ ಅಲೆಗಳು ನೊರೆ ಗುಳ್ಳೆಗಳೆಲ್ಲವೂ, ಜಲಮಯವಾಗಿ ಹೇಗೆ ಆಗುತ್ತವೆಯೋ, ಹಾಗೆಯೇ ಬ್ರಹ್ಮಜಗದಾದಿಗಳು ಬ್ರಹ್ಮಮಯವಾಗುವುವು. ವಿಚಾರಮಾಡಿದರೆ ಬ್ರಹ್ಮನು ಜಗತ್ತಿಗಿಂತಲೂ ಬೇರೆಯಾಗಿ ತೋರುವುದಿಲ್ಲ.

ಸರ್ವಂ ಬ್ರಹ್ಮೈವ ನಾನಾತ್ವಂ ನಾಸ್ತೀತಿ ನಿಗಮಾ ಜಗುಃ ।
ಯಸ್ಮಾದ್ಭವಂತಿ ಬ್ರಹ್ಮಾಂಡಕೋಟಯೋ ನ ಭವಂತಿ ಚ ॥ ೩೨ ॥

ಯದುನ್ಮೇಷನಿಮೇಷಾಭ್ಯಾಂ ಜಗತಾಂ ಪ್ರಲಯೋದಯೌ ।
ಭವೇತಾಂ ಯಾ ಪರಾ ಶಕ್ತಿರ್ಯದಾಧಾರತಯಾ ಸ್ಥಿತಾ ॥ ೩೩ ॥

ಯಸ್ಮಾನ್ನಿದಂ ಯತಶ್ಚೇದಂ ಯೇನೇದಂ ಯದಿದಂ ಸ್ಮೃತಂ ।
ಯದಜ್ಞಾನಾಜ್ಜಗದ್ಭಾತಿ ಯಸ್ಮಿನ್ ಜ್ಞಾತೇ ಜಗನ್ನ ಹಿ ॥ ೩೪ ॥

ಅಸತ್ಯಂ ಯಜ್ಜಡಂ ದುಃಖಮುವಸ್ತ್ವಿತಿ ನಿರೂಪಿತಂ ।
ವಿಪರೀತಮತೋ ಯದ್ವೈ ಸಚ್ಚಿದಾನಂದಮೂರ್ತಿಕಂ ॥ ೩೫ ॥

---

೩೨. ಬ್ರಹ್ಮನು ಸರ್ವಗತನು, ಅವನಲ್ಲಿ ನಾನಾತ್ವವು (ಭಿನ್ನತೆಯು) ಇಲ್ಲವೆಂದು ವೇದಗಳು ಘೋಷಿಸುತ್ತವೆ. ಅಂತಹ ಬ್ರಹ್ಮನಿಂದ ಬ್ರಹ್ಮಾಂಡಕೋಟಿಗಳು ಉಂಟಾಗುತ್ತವೆ. ಮತ್ತು ನಶಿಸಿ ಹೋಗುತ್ತವೆ. ಅಂದರೆ ಅಂಥ ಬ್ರಹ್ಮನು ಅನೇಕ ಬ್ರಹ್ಮಾಂಡಗಳನ್ನು ಸೃಷ್ಟಿಸಿ ಸಂಹಾರಮಾಡುವವನು.

೩೩. ಯಾವ ಪರಬ್ರಹ್ಮನ ನಿಮೇಷೋನ್ಮೇಷಗಳಿಂದ ಅಂದರೆ ಬ್ರಹ್ಮೇಚ್ಛಾತದಭಾವಗಳಿಂದ ಈ ಜಗತ್ತಿನ ಸೃಷ್ಟಿಪ್ರಲಯಗಳು ಉಂಟಾಗುತ್ತವೆಯೋ. ಯಾವ ಜಗತ್ತಿನ ಉತ್ತಮವಾದ ಸ್ಥಿತಿಗತಿಗಳು ಯಾವನ ಆಧಾರದಿಂದ ನಡೆಯುತ್ತವೆಯೋ ಅಥವಾ ನಿಂತಿವೆಯೋ ಅಂತಹ ಪರಮಾತ್ಮನು ಸರ್ವೋತ್ತಮನಾಗಿರುವನು.

೩೪. ಈ ಜಗತ್ತು ಯಾರ ಆಶ್ರಯದಲ್ಲಿದೆಯೋ ಯಾರಿಂದ ಉಂಟಾಗಿರುತ್ತದೆಯೋ, ಯಾರಿಂದ ರಕ್ಷಿತವಾಗಿದೆಯೋ, ಯಾರ ಆಧಾರದಿಂದಿದೆಯೋ, ಯಾವನು ನಿಯಾಮಕನಾಗಿರುವನೋ, ಯಾವನ ಜ್ಞಾನವಿಲ್ಲದಿರುವಾಗ ಈ ಜಗತ್ತು ತೋರುತ್ತಿದೆಯೋ, ಯಾವನ ಜ್ಞಾನವು ಉಂಟಾದರೆ ಜಗತ್ತೇ ಇರುವುದಿಲ್ಲವೋ, ಅಂಥ ಬ್ರಹ್ಮನು ಪರಮೋತ್ತಮನಾಗಿರುವನು.

೩೫. ಈಗ ಪ್ರತ್ಯಕ್ಷಕ್ಕೆ ವಿಷಯವಾದ ಈ ಜಗತ್ತು ಅಸತ್ಯವಾಗಿಯೂ, ಜಡವಾಗಿಯೂ, ದುಃಖಮಯವಾಗಿಯೂ, ಇದೆಯೆಂದು ನಿರೂಪಿತವಾಗಿದೆ. ಬ್ರಹ್ಮನಾದರೋ ಇದಕ್ಕೆ ವಿಪರೀತನಾಗಿಯೂ, ಸಚ್ಚಿದಾನಂದಸ್ವರೂಪನಾಗಿಯೂ, ಇರುವನು.

ಜೀವೇ ಜಾಗ್ರತಿ ವಿಶ್ವಾಖ್ಯಂ ಸ್ವಪ್ನೇ ಯತ್ತೈಜಸಂ ಸ್ಮೃತಂ ।
ಸುಷುಪ್ತೌ ಪ್ರಾಜ್ಞಸಂಜ್ಞಂ ತತ್ಸರ್ವಾವಸ್ಥಾಸು ಸಂಸ್ಮೃತಂ ॥ ೩೬ ॥

ಯಚ್ಚಕ್ಷುಷಾಂ ಚಕ್ಷುರಥ ಶ್ರೋತ್ರಾಣಾಂ ಶ್ರೋತ್ರಮಸ್ತಿ ಚ ।
ತ್ವಕ್ ತ್ವಚಾಂ ರಸನಂ ತಸ್ಯ ಪ್ರಾಣಂ ಪ್ರಾಣಸ್ಯ ಯದ್ವಿದುಃ ॥ ೩೭ ॥

ಬುದ್ಧಿಜ್ಞಾನೇನ ಚ ಪ್ರಾಣಾಃ ಕ್ರಿಯಾಶಕ್ತ್ಯಾ ನಿರಂತರಂ ।
ಯನ್ನೇಶಿರೇ ಸಮುಚ್ಛೇತುಂ ಜ್ಞಾತುಂ ಚ ಪರಮಾರ್ಥತಃ ॥ ೩೮ ॥

ರಜ್ವಾವಹಿರ್ಮರೌ ವಾರಿ ನೀಲಿಮಾ ಗಗನೇ ಯಥಾ ।
ಅಸದ್ವಿಶ್ವಮಿದಂ ಭಾತಿ ಯಸ್ಮಿನ್ನಜ್ಞಾನಕಲ್ಪಿತಂ ॥ ೩೯ ॥

---

೩೬. ಜೀವನು ವಿಶ್ವನಾಮಕ ಪರಮಾತ್ಮನೊಡನೇ ಸೇರಿದಾಗ ಜಾಗ್ರದವಸ್ಥೆಯೂ, ತೈಜಸ ನಾಮಕಭಗವಂತನ ಸಂಗಡ ಸೇರಿದಾಗ ಸ್ವಪ್ನಾವಸ್ಥೆಯೂ, ಪ್ರಾಜ್ಞನಾಮಕ ಪರಮಾತ್ಮನೊಡನೆ ಕೂಡಿರುವಾಗ ನಿದ್ರಾವಸ್ಥೆಯೂ, ಉಂಟಾಗುವುವು. ಹೀಗೆ ಜಾಗ್ರತ್ಸ್ವಪ್ನಸುಷುಪ್ತಿಯೆಂಬ ಸರ್ವಾವಸ್ಥೆಗಳಲ್ಲಿಯೂ, ಜೀವನು ಶ್ರೀಪರಮಾತ್ಮನ ಸಂಗಡ ಕೂಡಿರುವನು.

೩೭. ಯಾವನು ನೇತ್ರಗಳಿಗೆ ನೋಡುವ ಶಕ್ತಿಯನ್ನೂ, ಕಿವಿಗಳಿಗೆ ಶ್ರವಣ ಸಾಮರ್ಥ್ಯವನ್ನೂ, ಚರ್ಮಕ್ಕೆ ಸ್ಪರ್ಶಶಕ್ತಿಯನ್ನೂ, ನಾಲಿಗೆಗೆ ರುಚಿನೋಡುವ ಶಕ್ತಿಯನ್ನೂ, ಪ್ರಾಣಗಳಿಗೆ ಚಲನಶಕ್ತಿಯನ್ನೂ, ಕೊಟ್ಟಿರುವನೋ ಅವನೇ ಪರಮಪುರುಷನಾದ ಬ್ರಹ್ಮನೆಂದು ತಿಳಿಯಬೇಕು.

೩೮. ಯಾವನ ಅನುಗ್ರಹವಿದ್ದರೆ (ಬುದ್ಧಿಗೆ) ಮನಸ್ಸಿಗೆ ತಿಳಿಯುವ ಸಾಮರ್ಥ್ಯವೂ, ಪ್ರಾಣಿಗಳಿಗೆ ನಿರಂತರವಾದ ಚಲನಾದಿ ಕ್ರಿಯಾಶಕ್ತಿಯೂ, ಸಂಭವಿಸುತ್ತವೆಯೋ, ಯಾವನ ಅನುಗ್ರಹವಿಲ್ಲದಿದ್ದರೆ ಚಲನವಲನಾದಿಗಳೂ, ಪಾರಮಾರ್ಥಿಕವಾದ ಜ್ಞಾನವೂ ಉಂಟಾಗವುದಿಲ್ಲವೋ, ಅವನೇ ಪರಮಾತ್ಮನಾಗಿರುವನು.

೩೯. ರಜ್ಜುವಿನಲ್ಲಿ ಸರ್ಪಜ್ಞಾನವೂ, ಮರುಭೂಮಿಯಲ್ಲಿ ಜಲಭ್ರಾಂತಿಯೂ, ಆಕಾಶದಲ್ಲಿ ನೀಲಿಮೆಯೂ ತೋರುವಂತೆ ಅಸತ್ತಾದ ಈ ವಿಶ್ವವು ಯಾವ ಭಗವಂತನಲ್ಲಿ ಅಜ್ಞಾನಕಲ್ಪಿತವಾಗಿದೆಯೋ ಅವನೇ ಬ್ರಹ್ಮನೆಂದು ಕೆಲವರು ಹೇಳುವರು.

ಘಟಾವಚ್ಛಿನ್ನ ಏವಾಯಂ ಮಹಾಕಾಶೋ ವಿಭಿದ್ಯತೇ ।
ಕಾರ್ಯೋಪಾಧಿಪರಿಚ್ಛಿನ್ನಂ ತದ್ವದ್ಯಜ್ಞೀವಸಂಜ್ಞಿಕಂ ॥ ೪೦ ॥

ಮಾಯಯಾ ಚಿತ್ರಕಾರಿಣ್ಯಾ ವಿಚಿತ್ರಗುಣಶೀಲಯಾ ।
ಬ್ರಹ್ಮಾಂಡಂ ಚಿತ್ರಮತುಲಂ ಯಸ್ಮಿನ್ ಭಿತ್ತಾವಿವಾರ್ಪಿತಂ ॥ ೪೧ ॥

ಧಾವತೋಽನ್ಯಾನತಿಕ್ರಾಂತಂ ವದತೋ ವಾಗಗೋಚರಂ ।
ವೇದವೇದಾಂತಸಿದ್ಧಾಂತೈರ್ವಿನಿರ್ಣೀತಂ ತದಕ್ಷರಂ ॥ ೪೨ ॥

ಅಕ್ಷರಾನ್ನ ಪರಂ ಕಿಂಚಿತ್ಸಾಕಾಷ್ಠಾ ಸಾ ಪರಾ ಗತಿಃ ।
ಇತ್ಯೇವಂ ಶ್ರೂಯತೇ ವೇದೇ ಬಹುಧಾಽಪಿ ವಿಚಾರಿತೇ ॥ ೪೩ ॥

---

೪೦. ಒಂದೇ ಮಹಾಕಾಶವು ಹೇಗೆ ಘಟಾಕಾಶ, ಮಠಾಕಾಶ, ರೂಪವಾಗಿ ಕಾಣುತ್ತಿದೆಯೋ ಹಾಗೆ ಒಬ್ಬನೇ ಬ್ರಹ್ಮನು ಕಾರ್ಯೋಪಾಧಿಯುತನಾಗಿ ದೇವದತ್ತ ಯಜ್ಞದತ್ತರೂಪಗಳಿಂದ ಕಾಣುವನೆಂದು ಹೇಳುತ್ತಾರೆ.

೪೧. ವಿಚಿತ್ರವಾದ ಗುಣಶೀಲಸ್ವಭಾವವುಳ್ಳ ಚಿತ್ರಲೇಖಕಳು ತನ್ನ ವಿಚಿತ್ರ ಶಕ್ತಿಯಿಂದ ಗೋಡೆಯ ಮೇಲೆ ವಿವಿಧ ಚಿತ್ರವನ್ನು ಬರೆಯುವಂತೆ ಮಾಯೆಯಿಂದ ಯಾವನಲ್ಲಿ ಬ್ರಹ್ಮಾಂಡಾದಿ ವಿವಿಧವಿಷಯಗಳು ತೋರುತ್ತವೆಯೆನ್ನುವರು.

೪೨. ಅಂತಹ ಅಕ್ಷರಶಬ್ದವಾಚ್ಯನಾದ ಶ್ರೀಪರಮಪುರುಷನು ಅತಿವೇಗವಾಗಿ ಓಡುವ ಪುರುಷರನ್ನು ಅತಿಕ್ರಮಿಸುವವನಾಗಿಯೂ, ವರ್ಣಿಸುವವನ ವಾಕ್ಯಗಳಿಗೆ ಅಗೋಚರನಾಗಿಯೂ, ವೇದವೇದಾಂತ ಸಿದ್ಧಾಂತಗಳಿಗೆ ವಿಷಯನಾಗಿಯೂ, ಇರುವನು.

೪೩. ವೇದ ವೇದಾಂತ ಪುರಾಣೇತಿಹಾಸಾದಿಗಳನ್ನು ಬಹಳವಾಗಿ ವಿಚಾರ ಮಾಡಿದರೂ ಕೂಡ ಅಂತರ ಅಕ್ಷರನಾಮಕನಾದ ಪರಬ್ರಹ್ಮನಿಗಿಂತಲೂ ಉತ್ತಮನೂ, ಮಹಿಮೋಪೇತನೂ, ಆದ ಬೇರೊಬ್ಬ ಪುರುಷನಿಲ್ಲವೆಂದೂ, ಅವನೇ ಕೊನೆಯವನು ಅವನೇ ಸರ್ವೋತ್ತಮನೆಂದು ವೇದವೇದಾಂಗಗಳು ಸಾರಿ ಹೇಳುತ್ತವೆ.

ಅಕ್ಷರಸ್ಯಾತ್ಮನಾಶ್ಚಾಪಿ ಸ್ವಾಪ್ನರೂಪತಯಾ ಸ್ಥಿತಂ ।
ಪರಮಾನಂದಸಂದೋಹ ರೂಪಮಾನಂದ ವಿಗ್ರಹಂ ॥ ೪೪ ॥

ಲೀಲಾವಿಲಾಸರಸಿಕಂ ಬಲ್ಲವೀಯೂಥಮಧ್ಯಗಂ ।
ಶಿಖಿಪಿಚ್ಛಕಿರೀಟೇನ ಭಾಸ್ವದ್ರತ್ನಚಿತೇನ ಚ ॥ ೪೫ ॥

ಉಲ್ಲಸದ್ವಿದ್ಯುದಾಟೋಪಕುಂಡಲಾಭ್ಯಾಂ ವಿರಾಜಿತಂ ।
ಕರ್ಣೋಪಾಂತಚರನ್ನೇತ್ರಖಂಜರೀಟಮನೋಹರಂ ॥ ೪೬ ॥

ಕುಂಜಕುಂಜಪ್ರಿಯಾವೃಂದವಿಲಾಸರತಿಲಂಪಟಂ ।
ಪೀತಾಂಬರಧರಂ ದಿವ್ಯಂ ಚಂದನಾಲೇಪಮಂಡಿತಂ ॥ ೪೭ ॥

ಅಧರಾಮೃತಸಂಸಿಕ್ತವೇಣುನಾದೇನ ಬಲ್ಲವೀಃ ।
ಮೋಹಯಂತಂ ಚಿದಾನಂದಮನಂಗಮದಭಂಜನಂ ॥ ೪೮ ॥

ಕೋಟಿಕಾಮಕಲಾಪೂರ್ಣಂ ಕೋಟಿಚಂದ್ರಾಂಶು ನಿರ್ಮಲಂ ।
ತ್ರಿರೇಖಕಂಠವಿಲಸದ್ರತ್ನಗುಂಜಾ ವ್ಯಗಾಕುಲಂ ॥ ೪೯ ॥

---

೪೪–೪೫. ಅಂತಹ ಅಕ್ಷರಶಬ್ದವಾಚ್ಯನಾದ ಶ್ರೀಭಗವಂತನು ಆತ್ಮಸ್ವರೂಪನೂ, ಜೀವಾಂತರ್ಯಾಮಿಯೂ, ಪರಮಾನಂದಸಂದೋಹರೂಪನೂ, ಸಚ್ಚಿದಾನಂದವಿಗ್ರಹನೂ, ಲೀಲಾವಿಲಾಸರಸಿಕನೂ, ಗೋಪಿಯರಗೋಷ್ಠಿಯಲ್ಲಿ ಆಸಕ್ತನೂ, ಪ್ರಕಾಶಿಸುವ ನವರತ್ನಖಚಿತವೂ, ಮಯೂರಪಿಂಛಗಳಿಂದಲಂಕೃತವೂ, ದಿವ್ಯವೂ ಆದ ಕಿರೀಟದಿಂದ ಮಂಡಿತನೂ ಆಗಿರುವನು.

೪೬–೪೭. ಮತ್ತು ಆ ಪರಮಾತ್ಮನು ಮಿಂಚಿನಂತೆ ಅತಿಪ್ರಕಾಶಕವೂ, ಆಟೋಪಯುತವೂ, ಆದ ಕುಂಡಲಗಳಿಂದ ವಿಭೂಷಿತನೂ, ಶ್ರೋತ್ರಗಳವರೆಗೂ ಅತಿವಿಶಾಲವೂ, ಗೀಜುಗಹಕ್ಕಿಗಳಂತೆ ಅತಿಮನೋಹರವೂ, ಆದ ನೇತ್ರಗಳಿಂದತಿ ಸುಂದರನೂ, ಪ್ರತಿಯೊಂದು ಲತಾಗೃಹಗಳಲ್ಲಿರುವ ರಮಣಿಯರ ವೃಂದಗಳ ವಿಲಾಸಗಳಲ್ಲಿ ಆಶಕ್ತನೂ, ಪೀತಾಂಬರಧಾರಿಯೂ, ಸುಂದರನೂ, ದಿವ್ಯರೂಪನೂ, ಚಂದನಾಲೇಪದಿಂದ ಭೂಷಿತನೂ ಆಗಿರುವನು.

೪೮–೪೯. ಆ ಪರಮಪುರುಷನು ಅಧರಾಮೃತಪಾನದಲ್ಲಿ ಆಸಕ್ತವಾದ ವೇಣುಗಾನದಿಂದ ಗೋಪಿಕಾಂಗನೆಯರನ್ನು ಮೋಹಗೊಳಿಸುವವನೂ, ಚಿದಾನಂದರೂಪಿಯೂ, ಮದನಮದಮರ್ದನನೂ, ಅಸಂಖ್ಯಾತರಾದ ಕಾಮಕುಂತಿಕಲಿತನೂ, ಕೋಟಿಚಂದ್ರಕಲಾಪೂರ್ಣನೂ, ತ್ರಿವಳಿಯುತವೂ, ರತ್ನಾಭರಣಸಹಿತವೂ ಆದ ಕಂಠದಿಂದ ಅಲಂಕೃತನೂ ಆಗಿರುವನು.

**ಯಮುನಾಪುಲಿನೇ ತುಂಗೇ ತಮಾಲವನಕಾನನೇ ।**
**ಕದಂಬಚಂಪಕಾಶೋಕ ಪಾರಿಜಾತ ಮನೋಹರೇ ॥ ೫೦ ॥**

**ಶಿಖಿಪಾರಾವತಶುಕಪಿಕಕೋಲಾಹಲಾಕುಲೇ ।**
**ನಿರೋಧಾರ್ಥಂ ಗವಾಮೇವ ಧಾವಮಾನಮಿತಸ್ತತಃ ॥ ೫೧ ॥**

**ರಾಧಾವಿಲಾಸರಸಿಕಂ ಕೃಷ್ಣಾಖ್ಯಂ ಪುರುಷಂ ಪರಂ ।**
**ಶ್ರುತವಾನಸ್ಮಿ ವೇದೇಭ್ಯೋ ಯತಸ್ತದ್ಗೋಚರೋಽಭವತ್ ॥ ೫೨ ॥**

**ಏವಂ ಬ್ರಹ್ಮಣಿ ಚಿನ್ಮಾತ್ರೇ ನಿರ್ಗುಣೇ ಭೇದವರ್ಜಿತೇ ।**
**ಗೋಲೋಕಸಂಜ್ಞಿಕೇ ಕೃಷ್ಣೋ ದೀವ್ಯತೀತಿ ಶ್ರುತಂ ಮಯಾ ॥ ೫೩ ॥**

---

೫೦–೫೧. ಅವನು ತಮಾಲವನದಿಂದ ಶೋಭಿತವೂ, ನೀಪ,ಸಂಪಿಗೆ, ಅಶೋಕ, ಪಾರಿಜಾತ, ಇವೇ ಮೊದಲಾದ ವೃಕ್ಷಗಳಿಂದತಿಮನೋಹರವೂ, ನವಿಲು, ಪಾರಿವಾಳ, ಶುಕ, ಕೋಗಿಲೆ, ಇವುಗಳ ಇಂಪಾದ ಗಾನದಿಂದ ರಂಜಿತವೂ, ಉನ್ನತವೂ ಆದ ಯಮುನಾನದಿಯ ತೀರದಲ್ಲಿ ಗೋವುಗಳನ್ನು ತಡೆಯುವುದಕ್ಕಾಗಿ ಇಲ್ಲಿಂದಲ್ಲಿಗೆ ಓಡಾಡುತ್ತಿರುವನೆಂದು ಮಹಾತ್ಮರು ವರ್ಣಿಸುವರು.

೫೨. ಮತ್ತು ಆ ಭಗವಂತನು ಕಾಂತಿಯಾದ ರಾಧೆಯ ವಿಲಾಸದಲ್ಲಿ ರಸಿಕನೂ, ಕೃಷ್ಣನಾಮಕನೂ, ಪರಮಪುರುಷನೂ ಆಗಿರುವನೆಂದು ಗುರುಗಳಿಂದ ಕೇಳಿರುತ್ತೇನೆ. ವೇದಗಳೂಸಹ ಅದೇ ರೀತಿಯಾಗಿಯೇ ವರ್ಣಿಸುತ್ತವೆ. ಅವನು ವೇದವೇದ್ಯನೆಂದು ಮಹಾತ್ಮರು ಹೇಳುವರು.

೫೩. ಹೀಗೆ ಜ್ಞಾನಪೂರ್ಣನೂ, ಪೂರ್ಣಗುಣನೂ, ಪ್ರಾಕೃತಗುಣವರ್ಜಿತನೂ, ಅವತಾರಗಳಲ್ಲಿ ಭೇದಶೂನ್ಯನೂ, ಆದ ಪರಬ್ರಹ್ಮನು ಶ್ರೀಕೃಷ್ಣರೂಪದಿಂದ ಅವತರಿಸಿ ಗೋಕುಲದಲ್ಲಿ ನಾನಾವಿಧ ವಿನೋದಗಳನ್ನು ಮಾಡುವನೆಂದು ನಾನು ಹೇಳುತ್ತೇನೆ.

**ನಾತಃ ಪರತರಂ ಕಿಂಚಿನ್ನಿಗಮಾಗಮಯೋರಪಿ ।**
**ತಥಾಪಿ ನಿಗಮೋ ವಕ್ತಿ ಹ್ಯಕ್ಷರಾತ್ ಪರತಃ ಪರಃ ॥ ೫೪ ॥**

**ಗೋಲೋಕವಾಸೀ ಭಗವಾನಕ್ಷರಾತ್ಪರ ಉಚ್ಯತೇ ।**
**ತಸ್ಮಾದಪಿ ಪರಃ ಕೋಽಸೌ ಗೀಯತೇ ಶ್ರುತಿಭಿಃ ಸದಾ ॥ ೫೫ ॥**

**ಉದಿತೋ ವೇದವಚನೈರ್ವಿಶೇಷೋ ಜ್ಞಾಯತೇ ಕಥಂ ।**
**ಶ್ರುತೇರ್ವಾರ್ಥೋಽನ್ಯಥಾ ಬೋಧ್ಯಃ ಪರತಸ್ತ್ವಕ್ಷರಾದಿತಿ ॥ ೫೬ ॥**

**ಶ್ರುತ್ಯರ್ಥೇ ಸಂಶಯಾಪನ್ನೋ ವ್ಯಾಸಃ ಸತ್ಯವತೀಸುತಃ ।**
**ವಿಚಾರಯಾಮಾಸ ಚಿರಂ ನ ಪ್ರಪೇದೇ ಯಥಾತಥಂ ॥ ೫೭ ॥**

---

೫೪. ಅಂತಹ ಪರಮ ಪುರುಷನಾದ ಕೃಷ್ಣನಿಗಿಂತಲೂ ಉತ್ತಮನಾದ ಬೇರೊಬ್ಬದೇವನು ಜಗತ್ತಿನಲ್ಲಿಯೇ ಇಲ್ಲವೆಂದು ವೇದಶಾಸ್ತ್ರಗಳು ಸಾರಿ ಹೇಳುತ್ತವೆ. ಆದರೆ ಅಕ್ಷರಶಬ್ದವಾಚ್ಯನಾದ ಚತುರ್ಮುಖನಿಗಿಂತಲೂ ಪರಬ್ರಹ್ಮನು ಶ್ರೇಷ್ಠನಾಗಿರುವನು.

೫೫. ಗೋಕುಲವಾಸಿಯಾದ ಶ್ರೀಕೃಷ್ಣಪರಮಾತ್ಮನೇ ಅಕ್ಷರನಾಮಕರಾದ ಲಕ್ಷ್ಮ್ಯಾದಿಗಿಂತಲೂ ಉತ್ತಮನಾಗಿರುವನೆಂದು ಮಹಾತ್ಮರು ಹೇಳುತ್ತಾರೆ. ಅವನಿಗಿಂತಲೂ ಬೇರೆಯಾದ ಯಾವನುತಾನೆ ಶ್ರುತಿ ಸ್ಮೃತಿಗಳಿಂದ ಹೊಗಳಲ್ಪಡುವನು.

೫೬. ಆದುದರಿಂದ ಮೇಲೆ ನಿರೂಪಿಸಿರುವ ವೇದವಚನಗಳು ನಿರೂಪಿಸಿರುವ ಅರ್ಥಕ್ಕಿಂತಲೂ ವಿಶೇಷಾರ್ಥವನ್ನು ಹೇಗೇ ಹೇಳಬಲ್ಲವು ? ಶ್ರುತಿಗಳೇ ಅಕ್ಷರನಿಗಿಂತಲೂ ಬೇರೆಯಾದ ಪುರುಷನನ್ನೇ ವರ್ಣಿಸುತ್ತವೆಯೆಂದು ಹೇಗೆ ತಿಳಿಯಬೇಕು

೫೭. ವೇದಾರ್ಥಗಳ ವಿಚಾರದಲ್ಲಿ ಸಂಶಯಾಪನ್ನನೂ, ಸತ್ಯವತೀದೇವಿಯ ಕುಮಾರನೂ ಆದ ವೇದವ್ಯಾಸದೇವನು ಬಹುಕಾಲದವರೆಗೂ ವಿಚಾರವನ್ನು ಮಾಡಿ. ದರೂಕೂಡ ಯಥಾರ್ಥವನ್ನು ತಿಳಿಯಲಿಲ್ಲ.

|| ಸೂತ ಉವಾಚ ||

ವಿಚಾರಯನ್ನಪಿ ಮುನಿರ್ನಾಪ ವೇದಾರ್ಥನಿಶ್ಚಯಂ ।
ವೇದೋ ನಾರಾಯಣಃ ಸಾಕ್ಷಾದ್ಯತ್ರ ಮುಹ್ಯಂತಿ ಸೂರಯಃ || ೫೮ ||

ತದಾಪಿ ಮಹತೀಮಾರ್ತಿಂ ಸತಾಂ ಹೃದಯತಾಪನೀಂ ।
ಪುನರ್ವಿಚಾರಯಾಮಾಸ ಕಂ ವ್ರಜಾಮಿ ಕರೋಮಿ ಕಿಂ || ೫೯ ||

ಪಶ್ಯಾಮಿ ನ ಜಗತ್ಯಸ್ಮಿನ್ ಸರ್ವಜ್ಞಂ ಸರ್ವದರ್ಶನಂ ।
ಅಜ್ಞಾತ್ವಾಽನ್ಯತಮಂ ಲೋಕೇ ಸಂದೇಹವಿನಿವರ್ತಕಂ || ೬೦ ||

ಮೇರೋಃ ಕುಹರಿಣೀಂ ಗತ್ವಾ ಚಚಾರ ಪರಮಂ ತಪಃ ।
ಯತ್ರ ಕಾರ್ತಸ್ವರಸ್ಫೂರ್ಜಜ್ಜ್ಯೋತ್ಸ್ನಾಜಾಲೈರ್ನಿರಂತರಂ || ೬೧ ||

---

೫೮. ಸೂತಮುನಿಯು ಹೇಳಿದನು:—ಹೀಗೆ ವ್ಯಾಸಮುನಿಯು ಬಹುಕಾಲ ವಿಚಾರಮಾಡಿದರೂ ವೇದಾರ್ಥಗಳ ವಿಷಯದಲ್ಲಿ ನಿಶ್ಚಯವನ್ನು ಹೊಂದಲಿಲ್ಲ. ಸಾಕ್ಷಾನ್ನಾರಾಯಣನೇ ವೇದಪ್ರತಿಪಾದ್ಯನಾಗಿರುವನು. ಈ ವಿಷಯದಲ್ಲಿ ಜ್ಞಾನಿಗಳೂ ಕೂಡ ಭ್ರಾಂತರಾಗಿರುವರೆಂದು ಹೇಳಿದನು.

೫೯. ಹೀಗೆ ನಿಶ್ಚಯವನ್ನು ಹೊಂದಿದ್ದರೂ ಕೂಡ ಆ ಮುನಿಯು ಸತ್ಪುರುಷರ ಮನಸ್ಸಿಗೆ ಸಂತಾಪಕಾರಿಯಾದ ಮಹಾಚಿಂತೆಯನ್ನು ಹೊಂದಿ ಇದನ್ನು ನಿಶ್ಚಿತವಾಗಿ ತಿಳಿಯಲು ಯಾರ ಬಳಿಗೆ ಹೋಗಲಿ ಯಾವ ಕಾರ್ಯವನ್ನು ಮಾಡಲೆಂದು ಪುನಃ ಪುನಃ ಆಲೋಚಿಸಿದನು.

೬೦. ಈ ಲೋಕದಲ್ಲಿ ಸಕಲ ಶಾಸ್ತ್ರಾರ್ಥಗಳನ್ನರಿತ ಸರ್ವಜ್ಞನಾದ ಪುರುಷನು ಯಾವನೂ ಇಲ್ಲ. ಆದುದರಿಂದ ಸಂದೇಹವನ್ನು ಪರಿಹರಿಸುವ ಬೇರೊಬ್ಬ ಪುರುಷನೇ ಇಲ್ಲವೆಂದು ತಿಳಿದನು.

೬೧–೬೨. ಆದುದರಿಂದ ವ್ಯಾಸಮುನಿಯು, ಮೇರುಗಿರಿಯ ಗವಿಯನ್ನು ಹೊಂದಿ ಅತಿಘೋರವಾದ ತಪಸ್ಸನ್ನು ಮಾಡಿದನು. ಆ ಪ್ರದೇಶದಲ್ಲಿ ನಿರಂತರವೂ ಜಗಜಗಸುತ್ತಿರುವ ಸುವರ್ಣಕಾಂತಿ ಪುಂಜಗಳು, ದೃಷ್ಟಿಗೆ ಪ್ರತಿಬಂಧಕವಾದ

ಸದಾ ಪ್ರಭಾಧತೇ ವಿಷ್ವಕ್ತಮಃಸ್ತೋಮಂ ದೃಶಂತುದಂ ।
ಚಕಾಸ್ತೇ ಯತ್ರ ಪರಮಂ ಕಾಂತಾರಮತಿಸುಂದರಂ ॥ ೬೨ ॥

ನಾನಾದ್ರುಮಲತಾಕುಂಜಕೂಜತ್ಪಕ್ಷಿನಿನಾದಿತಂ ।
ಕ್ಷುತ್ಪಿಪಾಸಾಭಯಕ್ರೋಧತಾಪಗ್ಲಾನಿವಿವರ್ಜಿತಂ ॥ ೬೩ ॥

ಜಲಾಶಯೈರ್ಬಹುವಿಧೈಃ ಪದ್ಮಿನೀಖಂಡಮಂಡಿತೈಃ ।
ಜಾತರೂಪಶಿಲಾನದ್ಧತಟಸಂಚಾರಪಕ್ಷಿಭಿಃ ॥ ೬೪ ॥

ಯುಕ್ತಮಂಭೋಜಪವನೈಃ ಸೇವ್ಯಮಾನಂ ಸಮಂತತಃ ।
ಶಿವೈರಧ್ಯಾಸಿತಂ ಭಾವೈರ್ಹಿಂಸ್ರೈಃ ಸತ್ತ್ವೈಃ ಸಮುಜ್ಝಿತಂ ॥ ೬೫ ॥

ನಿರ್ಜನಂ ದಿವ್ಯಲತಿಕಾಪ್ರಿಯಖಂಡವಿರಾಜಿತಂ ।
ಶುಕೈಃ ಪಾರಾವತೈರ್ಹೃದ್ಯೈರುನ್ಮದನ್ಮತ್ತಕೋಕಿಲಂ ॥ ೬೬ ॥

---

ಅಂಧಕಾರ ತಂಡವನ್ನು, ಸಂಪೂರ್ಣವಾಗಿ ಪರಿಹರಿಸಿ ಸದಾಕಾಲದಲ್ಲಿಯೂ ಹೊಳೆಯುತ್ತಿವೆ. ಅಲ್ಲಿನ ಅರಣ್ಯಗಳು ಅತಿಸುಂದರವಾಗಿಯೂ, ಉತ್ತಮವಾಗಿಯೂ, ಪ್ರಕಾಶಿಸುವುವು.

೬೩–೬೫. ಆ ಅರಣ್ಯವು ನಾನಾದ್ರುಮಗಳು ಲತೆಗಳು, ಪೊದೆಗಳು ಅವುಗಳಲ್ಲಿ ಮನೋಹರವಾಗಿ ಗಾನಮಾಡುವ ಪಕ್ಷಿಗಳ ಗಾನದಿಂದ ಮನೋಹರವೂ, ಹಸಿವು, ಬಾಯಾರಿಕೆ, ಭಯ, ಕೋಪ, ತಾಪ, ಶ್ರಮ ಇವುಗಳಿಂದ ರಹಿತವೂ, ಬಹುವಿಧಗಳಾದ ಕಮಲ ಪುಂಜಗಳಿಂದಲಂಕೃತವೂ, ಅನೇಕ ಜಲಾಶಯಗಳಿಂದ ಮಂಡಿತವೂ, ಸುವರ್ಣಮಯವಾದ ಕಲ್ಲುಗಳಿಂದ ಕಟ್ಟಲ್ಪಟ್ಟ ದಡಗಳಲ್ಲಿ ಸಂಚರಿಸುವ ಪಕ್ಷಿಗಳಿಂದಲಂಕೃತವೂ, ಸುವಾಸನೆಯಾದ ಮಂದಮಾರುತದಿಂದ ಸಹಿತವೂ, ಸರ್ವಭಾಗದಲ್ಲಿಯೂ ಸರ್ವರಿಂದ ಸೇವ್ಯವೂ, ಸಾಧುಗಳಾದ ನರಿನಾಯಿಗಳಿಂದಯುತವೂ ದುಷ್ಟಪ್ರಾಣಿಗಳಿಂದ ವರ್ಜಿತವೂ ಜನರಹಿತವೂ ಆಗಿದೆ.

೬೬–೬೭. ಮತ್ತು ಉದ್ಯಾನವನವು ದಿವ್ಯಲತೆಗಳೂ, ವಿವಿಧಪ್ರಿಯವಾದ ವೃಕ್ಷಗಳೂ, ಇವುಗಳಿಂದ ರಂಜಿತವೂ, ಮನೋಹರಗಳಾದ ಶುಕಗಳೂ, ಪಾರಿವಾಳಗಳೂ ಇವುಗಳಿಂದ ಸುಂದರವೂ, ಮದಿಸಿರುವ ಕೋಕಿಲಗಳಿಂದ ರಂಜಿತವೂ,

ಉತ್ಪತತ್ಪದ್ಮರಜಸಾಂ ಪಟಲಾಮೋದದಿಙ್ಮುಖಂ ।
ತತ್ರಾಪಿ ಕಾಂಚಿನೀ ದಿವ್ಯಾ ಗುಹಾ ಪರಮಶೋಭಿನಾ ॥ ೬೭ ॥

ತಾಂ ಪ್ರವಿಶ್ಯ ಜಿತಾಹಾರೋ ಜಿತಚಿತ್ತೋ ಜಿತಾಸನಃ ।
ಸಸ್ಮಾರ ವೇದಾಂಶ್ಚತುರಸ್ತದೇಕಾಗ್ರಮನಾ ಮುನಿಃ ॥ ೬೮ ॥

ತ್ರಯೀ ಜಗಾಮ ಶರದಾಂ ಶತಸ್ಯ ಸ್ಮರತೋಽಸ್ಯ ಹಿ ।
ಪ್ರಾದುರಾಸಂಸ್ತತೋ ವೇದಾಶ್ಚತ್ವಾರ ಶ್ಚಾರುದರ್ಶನಾಃ ॥ ೬೯ ॥

ಸ್ಫುರತ್ಪದ್ಮಪಲಾಶಾಕ್ಷಾ ಜಟಾಮುಕುಟಧಾರಿಣಃ ।
ಕುಶಮುಷ್ಟಿಕರಾಂಭೋಜಾ ಮೃಗತ್ವಙ್ಮಂಡಿತಾಂಸಕಾಃ ॥ ೭೦ ॥

---

ಕಮಲರಜಸ್ಸು, ಪಾದರಿಯಪುಷ್ಪಪರಿಮಳ ಇವುಗಳಿಂದ ಸುಗಂಧಿಯೂ, ಮನೋಹರವೂ ಆಗಿದೆ. ಆ ಉಪವನದಲ್ಲಿ ದಿವ್ಯವೂ, ಸುವರ್ಣಮಯವೂ, ಪರಮಸುಂದರವೂ ಆದ ಒಂದು ಗುಹೆಯು ರಂಜಿಸುವುದು.

೬೮. ಆ ವ್ಯಾಸಮುನಿಯು ಆ ಗುಹೆಯನ್ನು ಪ್ರವೇಶಿಸಿ ಜಿತಾಹಾರಿಯೂ, ಮನೋನಿಗ್ರಹಿಯೂ, ಜಿತಾಸನನೂ, ಏಕಾಗ್ರಚಿತ್ತನೂ ಆಗಿ ನಾಲ್ಕು ವೇದಗಳನ್ನೂ ಸ್ಮರಿಸಿದನು.

೬೯. ಆ ಮಹಾಮುನಿಯು ನೂರುವರ್ಷಕಾಲ ಧ್ಯಾನಮಾಡಲಾಗಿ ಆ ನಾಲ್ಕು ವೇದಗಳೂ ಸುಂದರವಾದ ಮೂರ್ತಿಯನ್ನು ಪಡೆದು ಆವಿರ್ಭವಿಸಿದುವು.

೭೦. ಆ ವೇದಪುರುಷರು ವಿಕಸಿತಗಳಾದ ಕಮಲದಳಗಳಂತೆ ವಿಶಾಲವಾದ ನೇತ್ರಗಳುಳ್ಳವರೂ, ಜಟೆಗಳೆಂಬ ಕಿರೀಟಗಳಿಂದ ಮಂಡಿತರೂ, ಕುಶಾಗ್ರಪಾಣಿಗಳೂ, ಕಮಲಪಾಣಿಗಳೂ (ಜಿಂಕೆಯ ಚರ್ಮ) ಕೃಷ್ಣಾಜಿನಗಳಿಂದಲಂಕೃತವಾದ ಅಂಸಗಳುಳ್ಳವರೂ ಆಗಿ ರಂಜಿಸುವರು.

ಸ್ವರೈಃ ಷೋಡಶಭಿಃ ಕ್ಲೃಪ್ತವದನಃ ಪ್ರಣವಾಂತರಾಃ ।
ಕಚವರ್ಗೋದ್ಭವೈರ್ವರ್ಣೈಃ ಪಂಚಾವಯವಪಾಣಯಃ ॥ ೭೧ ॥

ಪವರ್ಗದಕ್ಷಚರಣಾ ವಾಮಪಾದಾಸ್ತವರ್ಗತಃ ।
ಅತರಂತ್ಯಂತವರ್ಣಾಶ್ಚ ಯೇಷಾಂ ಕುಕ್ಷಿದ್ವಯಾತ್ಮಕೌ ॥ ೭೨ ॥

ನಾಭಿನಿದ್ರಾಃ ಕಾಂತಪೃಷ್ಠಾ ಮೋದರಾಃ ಯರಲವೋತ್ಕಚಾಃ ।
ಅಗ್ನಿದಕ್ಷಾಂಶರುಚಿರಾ ಧರಾಗ್ರೀವಾ ಭೃತಾಂಸಕಾಃ ॥ ೭೩ ॥

ಅಂತಸ್ಥಸಂಧಿಸಂಸ್ಥಾನಾ ವೈಖರೀವಾಗ್ವಿಜೃಂಭಿತಾಃ ।
ಅಪಶ್ಯನ್ಮಧುರಾಮೇಷಾಂ ಹೃದಯಾಂಭೋಜಕಲ್ಪಿತಾಂ ॥ ೭೪ ॥

ಹರೇರ್ಭಗವತಃ ಸಾಕ್ಷಾದಾವಿರ್ಭಾವಸ್ಥಲೀ ಹಿ ಸಾ ।
ಕಾಶೀಮಪಶ್ಯದ್ಭ್ರೂಮಧ್ಯೇ ಮಾಯಾಮಾಧಾರಸಂಸ್ಥಿತಾಂ ॥ ೭೫ ॥

---

೭೧–೭೨. ಅಂತಹ ವೇದಪುರುಷರು ಹದಿನಾರು ಸ್ವರಗಳಿಂದಲಂಕೃತವಾದ ಮುಖಗಳೂ, ಪ್ರಣವವೆಂಬ ಮನಸ್ಸುಳ್ಳವರೂ, ಕೇಶಗಳ ವರ್ಗಗಳಿಂದುಂಟಾದ ವರ್ಣಗಳುಳ್ಳವರೂ ಐದು ಬೆರಳುಗಳಿಂದ ಯುಕ್ತವಾದ ಹಸ್ತವುಳ್ಳವರೂ, ಪವರ್ಗದಿಂದ ಸಮರ್ಥವಾದ ಪಾದಗಳುಳ್ಳವರೂ, ವಾಮಪಾದವೆಂಬ ತವರ್ಗವುಳ್ಳವರೂ, ನಾಭಿದ್ವಯುಗಳಲ್ಲಿರುವ ಅಂತವರ್ಣಗಳುಳ್ಳವರೂ ಆಗಿರುವರು.

೭೩. ಅವರು ನಾಭಿಯೆಂಬ ನಿದ್ರೆಯುಳ್ಳವರೂ, ಮನೋಹರವಾದ ಪೃಷ್ಠಭಾಗವುಳ್ಳವರೂ, ಮಹೋದರರೂ, ಯರಲವವೆಂಬ ಕೇಶಪಾಶಿಗಳೂ, ಅಗ್ನಿಮುಖರೂ, ಚರುವೆಂಬ ಶಿರಸ್ಸುಳ್ಳವರೂ, ಭೂಮಿಯೆಂಬ ಕತ್ತುಳ್ಳವರೂ, ಪೂರ್ಣಾಂಸಿಗಳೂ ಆಗಿರುವರು.

೭೪–೭೫. ಮತ್ತು ಅವರು ಹೃದಯುಗತವಾದ ಸಂಧಿಸಂಸ್ಥಾನಗಳಲ್ಲುದ್ಭವಿಸುವ ವೈಖರಿಯ ಮಾತುಗಳಿಂದ ವಿಜೃಂಭಿತರೂ ಆಗಿರುವರು. ಅಂತಹ ವೇದಪುರುಷರ ಹೃದಯಕಮಲದಲ್ಲಿ ಕಲ್ಪಿತವಾದ ಮಧುರಾನಗರಿಯನ್ನು ವ್ಯಾಸಮುನಿಯು ನೋಡಿದನು. ಆ ಮಧುರಾಪಟ್ಟಣವು ಸಾಕ್ಷಾತ್ ಶ್ರೀಮನ್ನಾರಾಯಣನು ಅವತರಿಸುವ ಸ್ಥಳವಾಗಿದೆಯಷ್ಟೆ, ಮತ್ತು ಭ್ರೂಮಧ್ಯಭಾಗದಲ್ಲಿ ಮಾಯಾಕಲ್ಪಿತವೂ, ಶ್ರೀಹರಿಗೆ ಜನ್ಮಭೂಮಿಯೂ ಆದ ಕಾಶೀನಗರಿಯನ್ನು ನೋಡಿದನು.

ಲಿಂಗದೇಶೇ ತತಃ ಕಾಂಚೀಮವಂತೀಂ ನಾಭಿಮಂಡಲೇ ।
ಕಂಠಸ್ಥಾಂ ದ್ವಾರಕಾಮೇಷಾಂ ಪ್ರಯಾಗಂ ಪ್ರಾಣಗಂ ತಥಾ ॥ ೭೬ ॥

ಸವ್ಯಾಪಸವ್ಯಯೋಸ್ತೇಷಾಂ ಗಂಗಾಪಿ ಯಮುನಾ ನದೀ ।
ಮಧ್ಯೇ ಸರಸ್ವತೀ ಸಾಕ್ಷಾದ್ಗಯಾಕ್ಷೇತ್ರಂ ತಥಾನನೇ ॥ ೭೭ ॥

ಹನುಗ್ರೀವಾಮಧ್ಯಗತಂ ಪ್ರಭಾಸಕ್ಷೇತ್ರಮುತ್ತಮಂ ।
ಬದರ್ಯಾಶ್ರಮಸ್ತೇಷಾಂ ಬ್ರಹ್ಮರಂಧ್ರೇ ದದರ್ಶ ಹ ॥ ೭೮ ॥

ಪೌಂಡ್ರವರ್ಧನನೇಪಾಲಪೀಠಂ ನಯನಯೋರ್ಯುಗೇ ।
ಪೀಠಂ ಪೂರ್ಣಗಿರಿಂ ನಾಮ ಲಲಾಟೇ ಸಮದೃಶ್ಯತ ॥ ೭೯ ॥

ಕಂಠೇ ಚ ಮಥುರಾಪೀಠಂ ಕಾಂಚೀಪೀಠಂ ಕಟಿಸ್ಥಿತಂ ।
ಜಾಲಂಧರಂ ತಥಾ ಪೀಠಂ ಸ್ತನದೇಶೇಷ್ವದೃಶ್ಯತ ॥ ೮೦ ॥

---

೭೬. ತರುವಾಯ ವೇದವ್ಯಾಸಮಹಾಮುನಿಯು ಆ ವೇದಪುರುಷರ ಲಿಂಗದೇಶದಲ್ಲಿ ಕಾಂಚೀಪುರಿಯನ್ನೂ, ನಾಭಿಪ್ರದೇಶದಲ್ಲಿ ಅವಂತೀನಗರಿಯನ್ನೂ ಕಂಠಗತವಾದ ದ್ವಾರಕಾನಗರವನ್ನೂ, ಪ್ರಾಣಗತವಾದ ಪ್ರಯಾಗಕ್ಷೇತ್ರವನ್ನೂ ನೋಡಿದನು.

೭೭–೭೮. ಅವರ ಸವ್ಯದಕ್ಷಿಣಭುಜಗಳಲ್ಲಿ ಗಂಗಾ, ಯಮುನಾ ನದಿಗಳನ್ನೂ ಅವುಗಳ ಮಧ್ಯಭಾಗವೆಂಬ ಸರಸ್ವತೀನದಿಯನ್ನೂ, ಮುಖದಲ್ಲಿ ಗಯಾಕ್ಷೇತ್ರವನ್ನೂ, ದವಡೆ ಮತ್ತು ಕಂಠದ ಮಧ್ಯದಲ್ಲಿ ಉತ್ತಮವಾದ ಪ್ರಭಾಸಕ್ಷೇತ್ರವನ್ನೂ, ಬ್ರಹ್ಮರಂಧ್ರವಿರುವ ಶಿರಸ್ಸಿನಲ್ಲಿ ಬದರಿಕಾಶ್ರಮವನ್ನೂ ಕಂಡನು.

೭೯. ತರುವಾಯ ಅವರ ನೇತ್ರದ್ವಯಗಳಲ್ಲಿ ಪೌಂಡ್ರವರ್ಧನ ನೇಪಾಲಿ ಪೀಠಗಳನ್ನೂ, ಲಲಾಟದೇಶದಲ್ಲಿ (ಹಣೆಯಲ್ಲಿ) ಪೂರ್ಣಗಿರಿಯೆಂಬ ಪೀಠವನ್ನೂ ಕಂಡನು.

೮೦. ಮತ್ತು ಕಂಠದಲ್ಲಿ ಮಧುರಾಪೀಠವನ್ನೂ, ಸೊಂಟದಲ್ಲಿ ಕಾಂಚೀಪೀಠವನ್ನೂ, ಸ್ತನಪ್ರದೇಶದಲ್ಲಿ ಜಾಲಂಧರ ಪೀಠವನ್ನೂ ನೋಡಿದನು.

ಭೃಗುಪೀಠಂ ಕರ್ಣದೇಶೇ ಹ್ಯಯೋಧ್ಯಾಂ ನಾಸಿಕಾಪುಟೇ ।
ಬ್ರಹ್ಮರಂಧ್ರೇ ಸ್ಥಿತಂ ಬ್ರಾಹ್ಮ್ಯಂ ಶೈವಂ ಸೀಮಂತಸೀಮನಿ ॥ ೮೧ ॥

ಶಾಕ್ತಂ ಜಿಹ್ವಾಗ್ರಧಿಷಣಂ ವೈಷ್ಣವಂ ಹೃದಯಾಂಬುಜೇ ।
ಸೌರಂ ಚಕ್ಷುಃಪ್ರದೇಶಸ್ಥಂ ಬೌದ್ಧಚ್ಛಾಯಾಸು ಸಂಗತಂ ॥ ೮೨ ॥

ಸೌತ್ರಾಮಣಿಂ ಕಂಠದೇಶೇ ಪಶುಬಂಧಮಥೋರಸಿ ।
ವಾಜಪೇಯಂ ಕಟಿತಟೇ ಹ್ಯಗ್ನಿಹೋತ್ರಂ ತಥಾನನೇ ॥೮೩ ॥

ಅಶ್ವಮೇಧಂ ಕಟಿತಟೇ ನರಮೇಧಮಥೋದರೇ ।
ರಾಜಸೂಯಂ ಶಿರೋದೇಶೇ ಆವಸಥ್ಯಂ ತಥಾಽಧರೇ ॥ ೮೪ ॥

ಊರ್ಧ್ವೋರ್ಷ್ಠೇ ದಕ್ಷಿಣಾಗ್ನಿಂ ಚ ಗಾರ್ಹಪತ್ಯಂ ಮುಖಾಂತರೇ ।
ಹವ್ಯಂ ಶ್ರುತೌ ಮಂತ್ರಭೇದಾಂಸ್ತಥಾ ರೋಮಸ್ವವಸ್ಥಿತಾನ್ ॥
ಭೃತ್ಯೈರಿವ ಮಹಾರಾಜಂ ಪುರಾಣೈರ್ನ್ಯಾಯಮಿಶ್ರಿತೈಃ ॥ ೮೫ ॥

---

೮೧-೮೩. ಆ ವೇದಪುರುಷನ ಕಿವಿಯಲ್ಲಿ ಭೃಗುಪೀಠವನ್ನೂ, ಮೂಗಿನ ಹೊಳ್ಳೆಯಲ್ಲಿ ಅಯೋಧ್ಯಾನಗರಿಯನ್ನೂ, ಬ್ರಹ್ಮರಂಧ್ರದಲ್ಲಿ ಬ್ರಹ್ಮಪೀಠವನ್ನೂ, ಸೀಮಂತ ಪ್ರದೇಶದಲ್ಲಿ ಶಿವಪೀಠವನ್ನೂ, ನಾಲಿಗೆಯ ತುದಿಯಲ್ಲಿ ಶಕ್ತಿಪೀಠವನ್ನೂ, ಹೃದಯಪೀಠದಲ್ಲಿ ವೈಷ್ಣವಪೀಠವನ್ನೂ, ಚಕ್ಷುಸ್ಸುಗಳಲ್ಲಿ ಸೂರ್ಯಪೀಠವನ್ನೂ, ಛಾಯೆಯಲ್ಲಿ ಬೌದ್ಧಪೀಠವನ್ನೂ, ಕಂಠದೇಶದಲ್ಲಿ ಇಂದ್ರಪೀಠವನ್ನೂ, ಹೃದಯದಲ್ಲಿ ಪಶುಬಂಧನವನ್ನೂ, ಕಟಿಪ್ರದೇಶದಲ್ಲಿ ವಾಜಪೇಯುವನ್ನೂ, ಮುಖದಲ್ಲಿ ಅಗ್ನಿಹೋತ್ರವನ್ನೂ ನೋಡಿದನು.

೮೪-೮೫. ಮತ್ತು ಕಟಿತಟದಲ್ಲಿ ಅಶ್ವಮೇಧವನ್ನೂ, ಹೃದಯದಲ್ಲಿ ನರಮೇಧವನ್ನೂ, ಶಿರಸ್ಸಿನಲ್ಲಿ ರಾಜಸೂಯಯಾಗವನ್ನೂ, ತುಟಿಯಲ್ಲಿ ಆವಸಥ್ಯವನ್ನೂ, ಊರ್ಧ್ವತುಟಿಯಲ್ಲಿ ದಕ್ಷಿಣಾಗ್ನಿಯನ್ನೂ, ಮುಖಭಾಗದಲ್ಲಿ ಗಾರ್ಹಪತ್ಯವನ್ನೂ, ಕಿವಿಯಲ್ಲಿ ಹವ್ಯವನ್ನೂ, ಕೂದಲುಗಳಲ್ಲಿ ಮಂತ್ರಭೇದಗಳನ್ನೂ ನೋಡಿದನು.

**ಸಂಹಿತಾಭಿಶ್ಚ ತಂತ್ರೈಶ್ಚ ಪೃಥಕ್ ಪೃಥಗುಪಾಸಿತಾನ್ ।**
**ಕರ್ಮಜ್ಞಾನೋಪಾಸನಾಭಿರ್ಜನಾನುಗ್ರಹಕಾರಕಾನ್ ॥ ೮೬ ॥**

**ದೃಷ್ಟ್ವಾ ಸುವಿಸ್ಮಿತಮನಾ ಮುನಿಃ ಕೃಷ್ಣೋ ಬಭೂವ ತಾನ್ ।**
**ಬ್ರಹ್ಮತೇಜೋಮಯಾರ್ ದಿವ್ಯಾಂಸ್ತ್ವಪತೋಽರ್ಕಾನಿವ ಚ್ಯುತಾನ್ ॥**
**ಜ್ವಲತೋಽಗ್ನಿನಿವೋದರ್ಕಾನ್ ಕೋಟೀಂದುಸಮದರ್ಶನಾತ್ ॥ ೮೭ ॥**

**ವವಂದೇ ಸಹಸೋತ್ಥಾಯ ದಂಡವತ್ಪತಿತೋ ಮುನಿಃ ।**
**ಕೃತಾರ್ಥೋಽಹಂ ಕೃತಾರ್ಥೋಽಹಂ ಕೃತಾರ್ಥೋಽಹಮಿತೀರಯನ್ ॥**

**ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತತಃ ।**
**ಅದ್ಯ ಮೇ ಸಫಲಂ ಚಾಯುರ್ಯದ್ಭವಂತೋಽಕ್ಷಿಗೋಚರಾಃ ॥ ೮೯ ॥**

**ಅಲೌಕಿಕಂ ಲೌಕಿಕಂ ಚ ಯತ್ ಕಿಂಚಿದಪಿ ವಿದ್ಯತೇ ।**
**ನ ತದ್ವೋಽವಿದಿತಂ ವೇದ್ಯಂ ಭೂತಂ ಭವ್ಯಂ ಭವಚ್ಚ ಯತ್ ॥ ೯೦ ॥**

---

೮೬–೮೮. ಭೃತ್ಯರು ರಾಜರನ್ನು ಸೇವಿಸುವಂತೆ ನ್ಯಾಯೋಪೇತವಾದ ಪುರಾಣಗಳಿಂದಲೂ, ಸಂಹಿತೆಗಳಿಂದಲೂ, ಮಂತ್ರಗಳಿಂದಲೂ, ಪ್ರತ್ಯೇಕವಾಗಿ ಉಪಾಸಿಸಲ್ಪಟ್ಟವರೂ, ಕರ್ಮಜ್ಞಾನ ಉಪಾಸನೆಗಳಿಂದ ಜನರನ್ನು ಉದ್ಧಾರಕರೂ ಆದ ವೇದಪುರುಷರನ್ನು ನೋಡಿ ವ್ಯಾಸದೇವನು ವಿಸ್ಮಿತವಾದನು. ಮತ್ತು ಬ್ರಹ್ಮತೇಜೋಮಯರೂ, ದಿವ್ಯರೂ, ಚ್ಯುತರೂ ಆದ ಸೂರ್ಯರಂತೆಪ್ರಕಾಶಕರೂ, ಅಗ್ನಿಯಂತೆ ಪ್ರಜ್ವಲಿಸುವವರೂ, ಕೋಟಿಚಂದ್ರಸಮಾನವಾದ ಕಾಂತಿಯುಳ್ಳವರೂ ಆದ ಅವರನ್ನು ನೋಡಿ ವ್ಯಾಸರು ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರಮಾಡಿದರು. ನಾನು ಕೃತಾರ್ಥನಾದೆನು ನಾನು ಕೃತಕೃತ್ಯನಾದೆನೆಂದು ಹೇಳಿ ನಮಸ್ಕಾರ ಮಾಡಿದರು.

೮೯. ಎಲೈ ಮುನಿವರ್ಯರೇ, ನೀವು ನನ್ನ ದೃಷ್ಟಿಗೆ ಗೋಚರವಾದುದರಿಂದ ನನ್ನ ಜನ್ಮವು ಈಗ ಸಫಲವಾಯಿತು. ನನ್ನ ಮನಸ್ಸು ಈಗ ಸಾರ್ಥಕವಾಯಿತು. ನನ್ನ ಆಯುಷ್ಯವೂ ಸಫಲವಾಯಿತು ಎಂದು ಹೊಗಳಿದರು.

೯೦. ಎಲೈ ಪೂಜ್ಯರೇ, ಈ ಲೋಕದಲ್ಲಿ ಲೌಕಿಕಾಲೌಕಿಕವೂ, ಭೂತಭವಿಷ್ಯದ್ವರ್ತಮಾನಕಾಲಿಕವೂ ಆದ ಯಾವ ಯಾವ ವಸ್ತುಗಳಿವೆಯೋ ಅವೆಲ್ಲವೂ ನಿಮಗೆ ತಿಳಿಯದೇ ಇಲ್ಲ ತಿಳಿದೇ ಇರುತ್ತವೆ.

ನ ಪ್ರವೃತ್ತಿಫಲಾ ಯೂಯಂ ದರ್ಶಯಂತೋಽಪಿ ತಾನ್ಸದಾ ।
ಯದೃಚ್ಛಾಕರಸಂಕೋಚವಿಧಾನಾಯೇಹ ರಾಗಿಣಾಂ || ೯೧ ||

ಪ್ರಪಂಚಸ್ಯಾಪಿ ಮಿಥ್ಯಾತ್ವೇ ಬ್ರಹ್ಮತ್ವೇ ವಾ ವಿಧೀತರೌ ।
ನ ಮೃಷಾರಾಗವಿಷಯೌ ತತ್ಸಂಕೋಚವಿಧಿಕ್ಷಯೌ || ೯೨ ||

ಅತೋ ಲೋಕಹಿತೈರ್ನೂನಂ ಪರಮಾರ್ಥನಿರೂಪಣೇ ।
ಸ್ತೋತ್ರಾಃ ಸ್ವರ್ಗಾದಿವಿಷಯಾಃ ನಶ್ವರಾ ಇತಿ ನಿಂದಿತಾಃ || ೯೩ ||

ಅಧಿಕಾರಿವಿಭೇದೇನ ಕರ್ಮಜ್ಞಾನೋಪದೇಶತಃ ।
ತ್ರಾತಂ ಸರ್ವಂ ಜಗನ್ನೂನಂ ಶಬ್ದಬ್ರಹ್ಮಾತ್ಮಮೂರ್ತಿಭಿಃ || ೯೪ ||

---

೯೧. ಎಲೈ ಮಹಾತ್ಮರೇ, ನೀವು ಸರ್ವರದೃಷ್ಟಿಗೆ ವಿಷಯರಾಗಿದ್ದರೂ ನಿಷ್ಕಾಮ ಕರ್ಮಿಗಳಾಗಿ ಕಾಣುತ್ತೀರಿ· ಅನುರಾಗಿಗಳಾದ ಪ್ರಜೆಗಳಿಗೆ ಆಕಸ್ಮಿಕವಾಗಿ ಯುಂಟಾಗುವ ಫಲವನ್ನು ಹೇಳುವವರಂತೇ ಕಾಣುತ್ತೀರಿ.

೯೨. ಎಲೈ ಪೂಜ್ಯರೇ ಈ ಜಗತ್ತು ಮಿಥ್ಯವೇ ? ಅಥವಾ ಬ್ರಹ್ಮಸ್ವರೂಪವೇ ? ಎಂಬುದನ್ನು ತಿಳಿಸಿರಿ. ವಿಧಿನಿಷೇಧಗಳು ನಿರರ್ಥಕವಾದ ರಾಗವಿಷಯಗಳೇ ? ಅಥವಾ ಪಾರಮಾರ್ಥಿಗಳಾಗಿವೆಯೇ? ಲೋಕದ ವೃದ್ಧಿಕ್ಷಯಗಳು ಮೃಷಾವಿಷಯಗಳೇ ಅಥವಾ ಯಥಾರ್ಥಗಳೇ ಎಂಬುದನ್ನು ತಿಳಿಸಬೇಕೆಂದರು.

೯೩. ಆದುದರಿಂದ ಮಹಾನುಭಾವರಾದ ತಾವು ಲೋಕಕಲ್ಯಾಣಕ್ಕಾಗಿ ಪರ ಮಾರ್ಥಗಳನ್ನು ನಿರೂಪಿಸಬೇಕು. ತಾವು ಹೇಳಿರುವ ಸ್ವರ್ಗಾದಿ ವಿಷಯಸುಖಗಳು ನಶ್ವರಗಳು ದೂಷ್ಯವೂ ಆಗಿವೆಯೆಂದು ಹೇಳಿದನು.

೯೪. ಶಬ್ದ ಬ್ರಹ್ಮಸ್ವರೂಪಿಗಳೂ, ಮಹಾತ್ಮರೂ ಆದ ತಾವು, ಅಧಿಕಾರಗಳಿಗನು ಗುಣವಾಗಿ ಕರ್ಮಜ್ಞಾನಗಳನ್ನುಪದೇಶಮಾಡಿ ಸಮಸ್ತವಾದ ಈ ಜಗತ್ತನ್ನೂ ರಕ್ಷಿಸಿರುವಿರೆಂದು ಹೊಗಳಿದನು.

ಅತೋಽಹಂ ಪ್ರಷ್ಟುಮಿಚ್ಛಾಮಿ ಭವಂತಶ್ಚೇತ್ಕೃಪಾಲವಃ ।
ಕರ್ಮಣಾಂ ಫಲಮಾದಿಷ್ಟಂ ಸರ್ಗಃ ಕಾಮೈಕಚೇತಸಾಂ ॥ ೯೫ ॥

ಈಶಾರ್ಪಿತಧಿಯಾಂ ಪುಂಸಾಂ ಕೃತಸ್ಯಾಪಿ ಚ ಕರ್ಮಣಃ ।
ಚಿತ್ತಶುದ್ಧಿಸ್ತತೋ ಜ್ಞಾನಂ ಮೋಕ್ಷಶ್ಚ ತದನಂತರಂ ॥ ೯೬ ॥

ಮೋಕ್ಷೋ ಬ್ರಹ್ಮೈಕ್ಯಮಿತ್ಯೇವಂ ಸಚ್ಚಿದಾನಂದಮೇವ ಯತ್ ।
ಸರ್ವಂ ಸಮಾಪ್ಯತೇ ತಸ್ಮಿಂಜ್ಞಾತೇ ಯದ್ಧಿ ಕೃತಾಕೃತಂ ॥ ೯೭ ॥

ಯನ್ನಿಃಸಂಗಂ ಚಿದಾಕಾಶಂ ಜ್ಞಾನಸ್ವರೂಪಮಸಂವೃತಂ ।
ನಿರೀಹಮಚಲಂ ಶುದ್ಧಮಗುಣಂ ವ್ಯಾಪಕಂ ಸ್ಮೃತಂ ॥ ೯೮ ॥

---

೯೫. ತಾವು ಬಹಳ ಕರುಣಾಳುಗಳಾಗಿರುವುದರಿಂದ ತಮ್ಮಿಂದ ಈ ವಿಷಯಗಳನ್ನು ತಿಳಿಯಲು ಬಯಸುತ್ತೇನೆ. ಕೇವಲ ಕಾಮ್ಯಕರ್ಮಾಕಾಂಕ್ಷಿಗಳೂ ವಿಷಯಾಸಕ್ತರೂ ಆದ ಕಾಮಿಗಳಿಗೆ ಯಜ್ಞಯಾಗಾದಿ ಕರ್ಮಗಳಿಂದ ಸ್ವರ್ಗಾದಿ ಅನಿತ್ಯಫಲಗಳುಂಟಾಗುವುವೆಂದು ತಿಳಿಸಿರುತ್ತೀರಿ.

೯೬. ಯಾವ ಪುರುಷನು ಈಶ್ವರಾರ್ಪಣ ಬುದ್ಧಿಯಿಂದ ನಿಷ್ಕಾಮಕರ್ಮಗಳನ್ನು ಮಾಡುವನೋ, ಅವನು ಚಿತ್ತಶುದ್ಧಿಯನ್ನೂ, ಅದರಿಂದ ಬ್ರಹ್ಮಜ್ಞಾನವನ್ನೂ ಅದರಿಂದ ಅಕ್ಷಯವೂ, ಶಾಶ್ವತವೂ ಆದ ಮೋಕ್ಷವನ್ನು ಪಡೆಯುವನೆಂದು ನಿರೂಪಿಸೋಣವಾಗಿದೆಯೆಂದನು.

೯೭. ಮೋಕ್ಷವೆಂದರೆ ಸಚ್ಚಿದಾನಂದರೂಪಿಯೂ ಶಾಶ್ವತವೂ ಆದ ಬ್ರಹ್ಮಸಾಯುಜ್ಯಪ್ರಾಪ್ತಿಯೇ ಆಗಿರುತ್ತದೆ. ಅಂತಹ ಬ್ರಹ್ಮಜ್ಞಾನೋದಯವಾದರೆ ಕೃತಾಕೃತಗಳಾದ ಸರ್ವಕರ್ಮಗಳೂ ಸಮಾಪ್ತವಾಗುವುವು.

೯೮. ಅಂತಹ ಬ್ರಹ್ಮನು ಸಂಗರಹಿತನೂ, ಜ್ಞಾನಿಯೂ, ನಿರ್ವಿಕಾರನೂ, ಚಿದಾನಂದರೂಪಿಯೂ, ಅನಾವೃತನೂ, ಆಶಾರಹಿತನೂ, ಅಚಲನೂ, ಶುದ್ಧನೂ, ಪ್ರಾಕೃತ ಗುಣರಹಿತನೂ, ವ್ಯಾಪಕನೂ ಆಗಿರುವನು.

ವಿಕಾರೇಷು ವಿನಿಶ್ಯತ್ಸು ನಿರ್ವಿಕಾರಂ ನ ನಶ್ಯತಿ ।
ಯಥಾನ್ಧತಮಸಾ ವ್ಯಾಪ್ತಲೋಕಸ್ಯ ರವಿರೋಜಸಾ ॥ ೯೯ ॥

ಲೋಹಸ್ಯೇವ ಮಣಿಸ್ತದ್ವದರಣಿಶ್ಚಾನಲೇ ಯಥಾ ।
ಯದಾಭಾಸೇನ ಸಾ ಸತ್ತಾಂ ಪ್ರತಿಪದ್ಯ ವಿಜೃಂಭತೇ ॥ ೧೦೦ ॥

ಜೀವೇಶ್ವರಾದಿರೂಪೇಣ ವಿಶ್ವಾಕಾರೇಣ ಚಾಪ್ಯಹೋ ।
ತಸ್ಯಾಮಪಿ ಪ್ರಲೀನಾಯಾಂ ಕೂಟಸ್ಥಂ ಚ ಯದೇಕಲಂ ॥ ೧೦೧ ॥

ಭವದ್ಭಿರೇವಂ ನಿರ್ಣೀತಂ ತತ್ತಥೈವ ನ ಸಂಶಯಃ ।
ತಥಾಪಿ ಮಮ ಜಿಜ್ಞಾಸಾ ವರ್ತತೇ ಕೇವಲಂ ಹೃದಿ ॥ ೧೦೨ ॥

ಅತೋಽಪಿ ಪರಮಂ ಕಿಂಚಿದ್ವರ್ತತೇ ಕಿಲ ವಾ ನ ವಾ ।
ತದ್ವದಂತು ಮಹಾಭಾಗಾ ಭವಂತಸ್ತತ್ವದರ್ಶನಾಃ ॥ ೧೦೩ ॥

---

೯೯. ಜಗದ್ವ್ಯಾಪಕವಾದ ಅಂಧಕಾರವು ಸೂರ್ಯನ ದಿವ್ಯತೇಜಸ್ಸಿನಿಂದ ಹೇಗೆ ನಷ್ಟವಾಗುತ್ತದೆಯೋ ಹಾಗೆಯೇ ವಿಕಾರಗಳಾದ ವಸ್ತುಗಳು ಬ್ರಹ್ಮಜ್ಞಾನದಿಂದ ನಷ್ಟವಾಗುತ್ತವೆ. ನಿರ್ವಿಕಾರನಾದ ಬ್ರಹ್ಮನು ನಾಶವಿಲ್ಲದೆ ಸ್ಥಿರನಾಗಿರುವನು.

೧೦೦. ಸ್ಫಟಿಕಮಣಿಯು ಜಪಾಕುಸುಮಸನ್ನಿಧಿಯಿಂದ ಕೆಂಪಾಗಿ ಹೊಳೆಯುವಂತೆಯೂ, ಅರಣಿಯಲ್ಲಿ ಅಗ್ನಿಯು ಪ್ರಕಾಶಿಸುವಂತೆಯೂ, ಈ ವಿಶ್ವವು ಬ್ರಹ್ಮಾಶ್ರಯದಿಂದ ಸ್ಥಿತಿಯನ್ನು ಹೊಂದಿ ನಾನಾ ರೀತಿಯಾಗಿ ವಿಜೃಂಭಿಸುತ್ತದೆ.

೧೦೧. ಬ್ರಹ್ಮನು ಜೀವೇಶ್ವರಾದಿ ರೂಪದಿಂದಲೂ, ವಿಶ್ವಾಕಾರದಿಂದಲೂ, ತೋರುವನು. ಆ ಮಾಯೆಯು ಲೀನವಾಗಲು ಕೂಟಸ್ಥನಾದ ಬ್ರಹ್ಮನು ಒಬ್ಬನೇ ಪ್ರಕಾಶಿಸುವನು.

೧೦೨. ಎಲೈ ಮಹಾತ್ಮರೇ, ನೀವು ಯಾವ ರೀತಿಯಾಗಿ ನಿರ್ಣಯ ಮಾಡಿರುವಿರೋ ಅದೇ ನಿಶ್ಚಯವಾದ ವಿಷಯವಾಗಿದೆ. ಆದರೂ ನನ್ನ ಮನಸ್ಸಿನಲ್ಲಿ ಸಂದೇಹ ಮಾತ್ರ ವಿಶೇಷವಾಗಿದೆ.

೧೦೩. ಅಂತಹ ಪರಮಪುರುಷನಿಗಿಂತಲೂ, ಶ್ರೇಷ್ಠನಾದ ಬೇರೊಬ್ಬ ಪುರುಷನಿರುವನೋ ಅಥವಾ ಯಾವನೂ ಇಲ್ಲವೋ ? ಮಹಾನುಭಾವರೂ, ತತ್ವಜ್ಞಾನಿಗಳೂ, ಸರ್ವಜ್ಞರೂ ಆದ ನೀವು ಈ ವಿಷಯವನ್ನು ತಿಳಿಸಬೇಕೆಂದು ಬೇಡಿದನು.

ಯಚ್ಛೃಣ್ವತಃ ಫಲಮೇವೇಹ ಜನುಷೋ ಮೇ ಕೃತಾರ್ಥತಾ ।
ಏವಂ ಬ್ರುವಂತಮನಘಂ ವ್ಯಾಸಂ ಸತ್ಯವತೀಸುತಂ ॥
ಸಾಧು ಸಾಧ್ವಿತಿ ಸಂಕೀರ್ತ್ಯ ಪ್ರತ್ಯೂಚುರ್ನಿಗಮಾ ವಚಃ ॥ ೧೦೪ ॥

॥ ವೇದಾ ಊಚುಃ ॥

ಸಾಧು ಸಾಧು ಮಹಾಪ್ರಾಜ್ಞ ವಿಷ್ಣುರಾತ್ಮಾ ಶರೀರಿಣಾಂ ।
ಅಜೋಽಪಿ ಜನ್ಮ ಸಂಪದ್ಯ ಲೋಕಾನುಗ್ರಹಮಿಹಸೇ ॥ ೧೦೫ ॥

ಅನ್ಯಥಾ ತೇ ನ ಘಟತೇ ಸಂಸಾರಕರ್ಮಬಂಧನಂ ।
ಅಸ್ಪೃಷ್ಟೋ ಮಾಯಯಾ ದೇವ್ಯಾ ಕದಾಚಿತ್ ಜ್ಞಾನಗೂಹಯಾ ॥೧೦೬॥

ಬಿಭರ್ಷಿ ಸ್ವೇಚ್ಛಯಾ ರೂಪಂ ಸ್ವೇಚ್ಛಯೈವ ನಿಗೂಹಸೇ ।
ಅಸ್ಮತ್ಸಮ್ಮತ ಏವಾರ್ಥೋ ಭವತಾ ಸಂಪ್ರದರ್ಶಿತಃ ॥ ೧೦೭ ॥

೧೦೪. ಎಲೈ ವೇದಪುರುಷರೇ, ಈ ನಿಮ್ಮ ದಿವ್ಯವಾದ ಉಪದೇಶವನ್ನು ಕೇಳಿದ ಈ ನನ್ನ ಶ್ರೋತ್ರಗಳು ಸಾರ್ಥಕವಾದುವು. ನನ್ನ ಜನ್ಮವೂ ಸಾರ್ಥಕ ವಾಯಿತು. ಈ ರೀತಿಯಾಗಿ ಹೇಳಿದ ಸತ್ಯವತೀದೇವಿಯ ಕುಮಾರನೂ, ದೋಷ ವಿದೂರನೂ, ಸರ್ವಜ್ಞನೂ ಆದ ವ್ಯಾಸದೇವನನ್ನು ಕುರಿತು ಆ ವೇದಪುರುಷರು ನೀವು ಹೇಳಿದ ವಿಷಯಗಳು ಸಾಧುಗಳಿಗೆ ಸಮ್ಮತವಾಗಿವೆಯೆಂದು ಹೇಳಿದರು.

೧೦೫. ವೇದಪುರುಷರು ಹೇಳಿದರು—ಎಲೈ ಪ್ರಾಜ್ಞನಾದ ಮಹರ್ಷಿಯೇ, ನೀನು ಹೇಳಿದ ವಿಷಯವು ಅತ್ಯುತ್ತಮವಾಗಿದೆ. ಮಹಾವಿಷ್ಣುವೇ ಪ್ರಾಣಿಗಳಿಗೆ ಆತ್ಮನಾಗಿರುವನು. ಅಂದರೆ ನಿಯಾಮಕನಾಗಿರುವನು. ಅವನಿಗೆ ಜನನವಿಲ್ಲದಿದ್ದರೂ ಅವತರಿಸಿ ಲೋಕಾನುಗ್ರಹವನ್ನು ಮಾಡುವನು.

೧೦೬-೧೦೭. ಹಾಗಿಲ್ಲದಿದ್ದರೆ ನಿನಗೆ ಈ ಸಂಸಾರಕರ್ಮಬಂಧವು ಯುಕ್ತ ವಾಗಿರುವುದಿಲ್ಲ. ಜ್ಞಾನತಿರೋಧಾಯಕಳೂ, ಮಾಯಾರೂಪಿಯೂ ಆದ ರಮಾದೇವಿ ಯಿಂದ ಕೂಡಿ ಸ್ವೇಚ್ಛೆಯಾಗಿ ನೀನು ರೂಪವನ್ನು ಧರಿಸಿರುತ್ತೀಯೆ. ಇಚ್ಛಾನುಸಾರ ವಾಗಿ ಮರೆಮಾಚಿಬಿಡುತ್ತೀಯೆ. ನೀನು ಹೇಳಿದಹಾಗೆ ಪ್ರಕಾಶಿಸಲ್ಪಟ್ಟ ವಿಷಯಗಳು ನಮಗೆ ಪರಮಸಮ್ಮತವಾಗಿದೆ.

ಪುರಾಣೇಷ್ವಿತಿಹಾಸೇಷು ಸೂತ್ರೇಷ್ವಪಿ ಚ ನೈಕಧಾ ।
ಅಕ್ಷರಂ ಬ್ರಹ್ಮ ಪರಮಂ ಸರ್ವಕಾರಣಕಾರಣಂ ॥ ೧೦೮ ॥

ತಸ್ಮಾತ್ಮನೋಽಸ್ಯಾತ್ಮಭಾವತಯಾ ಪುಷ್ಪಸ್ಯ ಗಂಧವತ್ ।
ರಸವದ್ವಾ ಸ್ಥಿತಂ ರೂಪಮವೇಹಿ ಪರಮಂ ಹಿ ತತ್ ॥ ೧೦೯ ॥

ಅನುಭೂತಂ ತದಸ್ಮಾಭಿರ್ಜಾತೇ ಪ್ರಾಕೃತಿಕೇ ಲಯೇ ।
ಅಕ್ಷರಾತ್ಪರತಸ್ತಸ್ಮಾದ್ಯತ್ಪರಂ ಕೇವಲೋ ರಸಃ ॥
ನ ಚ ತತ್ರ ವಯಂ ಶಕ್ತಾಃ ಶಬ್ದಾತೀತೇ ತದಾತ್ಮಕಾಃ ॥ ೧೧೦ ॥

ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ ಅನುಷಂಗಪಾದೇ
"ವ್ಯಾಸಸಂಶಯಾಪನೋದನಂ" ನಾಮ
ದ್ವಿಚತ್ವಾರಿಂಶೋಽಧ್ಯಾಯಃ

---

೧೦೮. ಪುರಾಣೇತಿಹಾಸಗಳು ಬ್ರಹ್ಮಸೂತ್ರವೇ ಮೊದಲಾದ ಶಾಸ್ತ್ರಗಳು ಇವುಗಳಲ್ಲಿ ಉಕ್ತನಾದ ಪರಬ್ರಹ್ಮನು ಅಕ್ಷರನಾಮಕನೂ, ಉತ್ತಮನೂ, ಸರ್ವ ಕಾರಣಗಳಿಗೂ ಕಾರಣನೂ, ಲೋಕವಿಖ್ಯಾತನೂ ಆಗಿರುವನು.

೧೦೯. ಪುಷ್ಪಗಳಲ್ಲಿ ಪರಿಮಳವೂ, ರಸವೂ ಹೇಗೆ ಇರುತ್ತವೆಯೋ ಹಾಗೆ ಪರಮಪುರುಷನೂ, ಸರ್ವಶಕ್ತನೂ, ಸರ್ವಜ್ಞನೂ ಆದ ಭಗವಂತನು ಸಕಲ ಜೀವ ರಲ್ಲಿಯೂ ನಿಯಾಮಕನೂ, ಸರ್ವೋತ್ತಮನೂ ಆಗಿರುವನೆಂದು ತಿಳಿಸಿರುತ್ತೇನೆಂದು ಹೇಳಿದನು.

೧೧೦. ಎಲೈ ಮುನಿಯೇ, ಅವಾಂತರಲಯವು ಬಂದಾಗ ನಾವು ಈ ವಿಷಯ ವನ್ನು ಚೆನ್ನಾಗಿ ತಿಳಿದಿರುತ್ತೇವೆ. ಅಕ್ಷರನೂ, ರಸರೂಪಿಯೂ, ಸರ್ವೋತ್ತಮನೂ, ಶಬ್ದಾತೀತನೂ ಆದ ಶ್ರೀಹರಿಗಿಂತಲೂ ಬೇರೊಬ್ಬ ಪುರುಷನು ಈ ಜಗತ್ತಿನಲ್ಲಿ ಯಾರೂ ಇಲ್ಲ. ಇನ್ನು ಅಧಿಕವಾಗಿ ವಿಚಾರಮಾಡಲು ನಮಗೆ ಶಕ್ತಿಯಿಲ್ಲವೆಂದು ವೇದಪುರುಷರು ವ್ಯಾಸಮುನಿಗೆ ಹೇಳಿದರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದ ಅನುಷಂಗ ಪಾದದಲ್ಲಿ
"ವ್ಯಾಸಸಂಶಯ ಪರಿಹಾರ" ವೆಂಬ ನಲವತ್ತೆರಡನೆಯ ಅಧ್ಯಾಯವು
ಸಮಾಪ್ತವಾದುದು.



## ನಲವತ್ತೆರಡನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಅಷ್ಟಾದಶ ಪುರಾಣಗಳಲ್ಲಿರುವ ಗ್ರಂಥಗಳ ಸಂಖ್ಯೆಯನ್ನೂ, ವ್ಯಾಸಮಹರ್ಷಿಗೆ ಉಂಟಾದ ಸಂದೇಹ ಪರಿಹಾರಗಳನ್ನೂ, ವರ್ಣಿಸಿರುತ್ತಾರೆ. ಅಷ್ಟಾದಶ ಮಹಾಪುರಾಣಗಳಲ್ಲಿ ಸೇರಿರುವ ಶ್ರೀಮತ್ಸ್ಯಪುರಾಣದಲ್ಲಿ ಹದಿನಾಲ್ಕುಸಾವಿರ ಶ್ಲೋಕಗಳೂ, ಭವಿಷ್ಯತ್ಪುರಾಣದಲ್ಲಿ ಹದಿನಾಲ್ಕುಸಾವಿರದ ಐದುನೂರು ಶ್ಲೋಕಗಳೂ, ಮಾರ್ಕಂಡೇಯಪುರಾಣದಲ್ಲಿ ಒಂಭತ್ತುಸಾವಿರ ಶ್ಲೋಕಗಳೂ, ಬ್ರಹ್ಮವೈವರ್ತಪುರಾಣದಲ್ಲಿ ಹದಿನೆಂಟುಸಾವಿರ ಗ್ರಂಥಗಳೂ, ಬ್ರಹ್ಮಾಂಡಪುರಾಣದಲ್ಲಿ ಹನ್ನೆರಡುಸಾವಿರ ಪದ್ಯಗಳೂ, ಶ್ರೀಮದ್ಭಾಗವತಪುರಾಣದಲ್ಲಿ ಹದಿನೆಂಟುಸಾವಿರ ಶ್ಲೋಕಗಳೂ, ಬ್ರಹ್ಮಪುರಾಣದಲ್ಲಿ ಹತ್ತುಸಾವಿರ ಶ್ಲೋಕಗಳೂ, ಆದಿಪುರಾಣದಲ್ಲಿ ಹತ್ತುಸಾವಿರದ ಆರುನೂರು ಗ್ರಂಥಗಳೂ, ವಾಯುಪುರಾಣದಲ್ಲಿ ಇಪ್ಪತ್ತಮೂರು ಸಾವಿರ ಪದ್ಯಗಳೂ, ನಾರದೀಯಪುರಾದಲ್ಲಿ ಇಪ್ಪತ್ತಮೂರುಸಾವಿರ ಶ್ಲೋಕಗಳೂ, ಗರುಡಪುರಾಣದಲ್ಲಿ ಹತ್ತೊಂಭತ್ತುಸಾವಿರ ಗ್ರಂಥಗಳೂ, ಪದ್ಮಪುರಾಣದಲ್ಲಿ ಐವತ್ತೈದುಸಾವಿರ ಶ್ಲೋಕಗಳೂ, ಕೂರ್ಮಪುರಾಣದಲ್ಲಿ ಹದಿನೇಳುಸಾವಿರ ಪದ್ಯಗಳೂ, ವರಾಹಪುರಾಣದಲ್ಲಿ ಇಪ್ಪತ್ತನಾಲ್ಕುಸಾವಿರ ಗ್ರಂಥಗಳೂ, ಸ್ಕಾಂದಪುರಾಣದಲ್ಲಿ ಎಂಭತ್ತೊಂದುಸಾವಿರ ಶ್ಲೋಕಗಳೂ, ಇವೆಯೆಂದು ವರ್ಣಿತವಾಗಿದೆ. ಮತ್ತು ಬ್ರಾಹ್ಮ, ಶೈವ ವೈಷ್ಣವ, ಸೌರ, ಶಾಕ್ತೇಯ, ಜೈನವೆಂಬ ಷಡ್ದರ್ಶನಗಳೂ ನಿರೂಪಿತವಾಗಿವೆ. ಜ್ಞಾನ, ಭಕ್ತಿ, ವೈರಾಗ್ಯಮಾರ್ಗಗಳೂ ಉಕ್ತವಾಗಿವೆ. ಮತ್ತು ಜೀವೇಶ್ವರಸ್ವರೂಪ, ಗಯಾಮಾಹಾತ್ಮ್ಯ, ಜಾಗ್ರತ್ಸ್ವಪ್ನ, ಸುಷುಪ್ತ್ಯವಸ್ಥೆಗಳು, ಮಾಯಾಸ್ವರೂಪ, ದ್ವಾರಕಾನಗರ, ಶ್ರೀಕೃಷ್ಣ ಇವರ ಮಹಿಮೆಗಳು ಬದರಿಕಾಶ್ರಮ ವರ್ಣನೆ, ವೇದಪುರುಷರಸ್ವರೂಪ ಅವರ ಸಂವಾದ, ಪರಾಪರತತ್ವಗಳ ವಿಚಾರ. ಶ್ರೀಕೃಷ್ಣನ ಪರತತ್ವಸ್ವರೂಪ ಇವುಗಳು ವರ್ಣಿತವಾಗಿವೆ.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀ ಮ ದ್ವಾ ಯು ಮ ಹಾ ಪು ರಾ ಣ ಂ

## ತ್ರಿಚತ್ವಾರಿಂಶೋಽಧ್ಯಾಯಃ

॥ ವಾಯುರುವಾಚ ॥

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಗಯಾಮಾಹಾತ್ಮ್ಯಮುತ್ತಮಂ ।**
**ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧ ॥**

॥ ಸೂತ ಉವಾಚ ॥

**ಸನಕಾದ್ಯೈರ್ಮಹಾಭಾಗೈರ್ದೇವರ್ಷಿಃ ಸ ಚ ನಾರದಃ ।**
**ಸನತ್ಕುಮಾರಂ ಪಪ್ರಚ್ಛ ಪ್ರಣಮ್ಯ ವಿಧಿಪೂರ್ವಕಂ ॥ ೨ ॥**

---

## ನಲವತ್ತಮೂರನೆಯ ಅಧ್ಯಾಯವು

೧. ವಾಯುದೇವನು ಹೇಳಿದನು ;—ಇನ್ನು ಮೇಲೆ ಉತ್ತಮವೂ, ಮಹಾಫಲದಾಯಕವೂ ಆದ ಗಯಾಮಾಹಾತ್ಮ್ಯಗಳನ್ನು ನಿರೂಪಿಸುವೆನು. ಇವನ್ನು ಕೇಳುವುದರಿಂದ ಪುರುಷರು ಮಾಡಿದ ಸಕಲ ಪಾಪಗಳೂ ಪರಿಹೃತವಾಗುವುವು. ಈ ವಿಷಯದಲ್ಲಿ ಸಂದೇಹಪಡಬೇಕಾಗಿಲ್ಲ.

೨. ಸೂತಮುನಿಯು ಹೇಳಿದನು. :—ದೇವರ್ಷಿಯೂ, ಲೋಕವಿಖ್ಯಾತನೂ ಆದ ನಾರದಮುನಿಯು ಮಹಾನುಭಾವರಾದ ಸನಕಾದಿ ಮಹರ್ಷಿಗಳ ಬಳಿಗೆಹೋಗಿ ವಿಧಿಪೂರ್ವಕವಾಗಿ ವಂದಿಸಿ ಸನತ್ಕುಮಾರನನ್ನು ಕೇಳಿದನು.

॥ ನಾರದ ಉವಾಚ ॥

ಸನತ್ಕುಮಾರ ಮೇ ಬ್ರೂಹಿ ತೀರ್ಥಂ ತೀರ್ಥೋತ್ತಮೋತ್ತಮಂ ।
ತಾರಕಂ ಸರ್ವಭೂತಾನಾಂ ಪಠತಾಂ ಶೃಣ್ವತಾಂ ತಥಾ ॥ ೧ ॥

॥ ಸನತ್ಕುಮಾರ ಉವಾಚ ॥

ವಕ್ಷ್ಯೇ ತೀರ್ಥವರಂ ಪುಣ್ಯಂ ಶ್ರಾದ್ಧಾದೌ ಸರ್ವತಾರಕಂ ।
ಗಯಾತೀರ್ಥಂ ಸರ್ವದೇಶೇ ತೀರ್ಥೇಭ್ಯೋಽಪ್ಯಧಿಕಂ ಶೃಣು ॥ ೨ ॥

ಗಯಾಸುರಸ್ತಪಸ್ತೇಪೇ ಬ್ರಹ್ಮಣಾ ಕ್ರತವೇಽರ್ಥಿತಃ ।
ಪ್ರಾಪ್ತಸ್ಯ ತಸ್ಯ ಶಿರಸಿ ಶಿಲಾಂ ಧರ್ಮೋ ಹ್ಯಧಾರಯತ್ ॥ ೩ ॥

ತತ್ರ ಬ್ರಹ್ಮಾಕರೋದ್ಯಾಗಂ ಸ್ಥಿತಶ್ಚಾಪಿ ಗದಾಧರಃ ।
ಫಲ್ಗುತೀರ್ಥಾದಿರೂಪೇಣ ನಿಶ್ಚಲಾರ್ಥಮಹರ್ನಿಶಂ ॥
ಗಯಾಸುರಸ್ಯ ವಿಪ್ರೇಂದ್ರ ಬ್ರಹ್ಮಾದ್ಯೈರ್ದೇವತೈಃ ಸಹ ॥ ೪ ॥

---

೧. ನಾರದಮುನಿಯು ಪ್ರಶ್ನಿಸಿದನು :—ಎಲೈ ಮಹಾನುಭಾವರಾದ ಸನತ್ಕುಮಾರರೇ ತೀರ್ಥಗಳಲ್ಲಿ ಉತ್ತಮೋತ್ತಮವೂ, ಅತಿಪುಣ್ಯದಾಯಕವೂ ಆದ ತೀರ್ಥವನ್ನು ತಿಳಿಸಿರಿ. ಯಾವ ತೀರ್ಥಮಾಹಾತ್ಮ್ಯಗಳ ಶ್ರವಣಪಠನಮಾತ್ರಗಳಿಂದ ಸಕಲಪ್ರಾಣಿಗಳೂ ಉದ್ಧೃತವಾಗಿ ಮುಕ್ತಿಯನ್ನು ಹೊಂದುವುವೋ ಅದು ಯಾವದು? ಎಂದನು.

೨. ಸನತ್ಕುಮಾರನು ಹೇಳಿದನು :—ಎಲೈ ನಾರದನೇ, ಅತ್ಯಂತ ಪುಣ್ಯದಾಯಕವೂ, ಶ್ರಾದ್ಧಾದಿಗಳನ್ನು ಮಾಡಿದರೆ ಸರ್ವತಾರಕವೂ, ಉತ್ತಮೋತ್ತಮವೂ ಆದ ತೀರ್ಥವನ್ನು ವರ್ಣಿಸುವೆನು ಕೇಳು. ಗಯಾಕ್ಷೇತ್ರವೆಂಬುವುದು ಸಮಸ್ತ ದೇಶಗಳಲ್ಲಿರುವ ತೀರ್ಥಗಳಿಗಿಂತಲೂ ಸರ್ವೋತ್ತಮವಾಗಿರುವುದು ಎಂದು ಹೇಳಿದನು.

೩. ಆ ಕ್ಷೇತ್ರದಲ್ಲಿ ಗಯಾಸುರನು ಬ್ರಹ್ಮದೇವನ ಯಾಗಕ್ಕೋಸ್ಕರವಾಗಿ ತಪಸ್ಸನ್ನು ಬಹುಕಾಲ ಮಾಡಿದನು. ಹೀಗೆ ಬಂದಿದ್ದ ಅವನ ಶಿರಸ್ಸಿನಲ್ಲಿ ಧರ್ಮದೇವನು ಶಿಲೆಯನ್ನು ಸ್ಥಾಪಿಸಿದನು.

೪. ಎಲೈ ನಾರದಮುನಿಯೇ, ಬ್ರಹ್ಮದೇವನು ಆ ಗಯಾಕ್ಷೇತ್ರದಲ್ಲಿ ಯಾಗವನ್ನು ಮಾಡಿದನು. ಗದಾಧರನಾದ ಶ್ರೀಭಗವಂತನು ಬ್ರಹ್ಮದೇವನ ಯಾಗಕ್ಕೋಸ್ಕರ ದೇವತೆಗಳೊಡನೆ ಅಲ್ಲಿಗೆ ಬಂದಿದ್ದನು. ಆ ಭಗವಂತನು ಫಲ್ಗುತೀರ್ಥವೇ ಮೊದಲಾದ ತೀರ್ಥಗಳಲ್ಲಿಯೂ, ಗಯಾಸುರನ ಕ್ಷೇತ್ರದಲ್ಲಿಯೂ, ದೇವತೆಗಳಿಂದ ಸಹಿತನಾಗಿ ಸದಾಕಾಲದಲ್ಲಿಯೂ, ವಾಸಮಾಡುವನು.

ಕೃತಯಜ್ಞೋ ದದೌ ಬ್ರಹ್ಮಾ ಬ್ರಾಹ್ಮಣೇಭ್ಯೋ ಗೃಹಾದಿಕಂ ।
ಶ್ವೇತಕಲ್ಪೇ ತು ವಾರಾಹೇ ಗಯಾಯಾಗಮಕಾರಯತ್ ॥ ೭ ॥

ಗಯಾನಾಮ್ನಾ ಗಯಾ ಖ್ಯಾತಾ ಕ್ಷೇತ್ರಂ ಬ್ರಹ್ಮಾಭಿಕಾಂಕ್ಷಿತಂ ।
ಕಾಂಕ್ಷಂತಿ ಪಿತರಃ ಪುತ್ರಾನ್ನರಕಾದ್ಭಯಭೀರವಃ ॥ ೮ ॥

ಗಯಾಂ ಯಾಸ್ಯತಿ ಯಃ ಪುತ್ರಃ ಸ ನಸ್ತ್ರಾತಾ ಭವಿಷ್ಯತಿ ।
ಗಯಾಪ್ರಾಪ್ತಂ ಸುತಂ ದೃಷ್ಟ್ವಾ ಪಿತೄಣಾಮುತ್ಸವೋ ಭವೇತ್ ॥
ಪದ್ಭ್ಯಾಮಪಿ ಜಲಂ ಸ್ಪೃಷ್ಟ್ವಾ ಸೋಽಸ್ಮಭ್ಯಂ ಕಿ ನ ದಾಸ್ಯತಿ ॥ ೯ ॥

ಗಯಾಂ ಗತ್ವಾನ್ನದಾತಾ ಯಃ ಪಿತರಸ್ತೇನ ಪುತ್ರಿಣಃ ।
ಪಕ್ಷತ್ರಯನಿವಾಸೀ ಚ ಪುನಾತ್ಯಾಸಪ್ತಮಂ ಕುಲಂ ॥
ನೋ ಚೇತ್ಪಂಚದಶಾಹಂ ವಾ ಸಪ್ತರಾತ್ರಂ ತ್ರಿರಾತ್ರಿಕಂ ॥ ೧೦ ॥

---

೭. ಬ್ರಹ್ಮದೇವನು ಸುಪ್ರಸಿದ್ಧವಾದ ಯಾಗವನ್ನು ಮಾಡಿ ಬ್ರಾಹ್ಮಣರಿಗೆ ಗೃಹಾದಿಸಕಲ ದಾನಗಳನ್ನೂ ಕೊಟ್ಟು ತೃಪ್ತಿಗೊಳಿಸಿದನು. ಶ್ವೇತವರಾಹಕಲ್ಪದಲ್ಲಿ ಯೂ ಸಹ ಬ್ರಹ್ಮದೇವನು ಗಯಾಕ್ಷೇತ್ರದಲ್ಲಿ ಯಾಗವನ್ನು ಮಾಡಿದನು.

೮. ಬ್ರಹ್ಮಾದಿದೇವತೆಗಳು ಅಪೇಕ್ಷಿಸತಕ್ಕ ಆ ಗಯಾಕ್ಷೇತ್ರವು ಲೋಕದಲ್ಲಿ ಸುಪ್ರಸಿದ್ಧವಾಗಿದೆ. ರೌರವಾದಿ ನರಕದಿಂದ ಭೀತರಾದ ಪಿತೃಗಳು ಗಯಾ ಶ್ರಾದ್ಧಾ ಕಾಂಕ್ಷೆಯಿಂದ ಮಕ್ಕಳನ್ನು ಬಯಸುತ್ತಾರೆ. ಅಂದರೆ ನಮ್ಮ ವಂಶದಲ್ಲಿ ಮಕ್ಕಳು ಹುಟ್ಟಿ ಗಯಾಶ್ರಾದ್ಧವನ್ನು ಮಾಡಿ ನಮ್ಮನ್ನುದ್ಧರಿಸಲೆಂದು ಬಯಸುವರು.

೯. ಯಾವ ಕುಮಾರನು ಗಯಾಕ್ಷೇತ್ರಕ್ಕೆ ಹೋಗುವನೋ ಅವನು ನಮ್ಮನ್ನುದ್ಧರಿಸುವನು. ಗಯೆಗೆ ಹೊರಡುವ ಮಕ್ಕಳನ್ನು ನೋಡಿ ಪಿತೃಗಳಿಗೆ ಅಧಿಕವಾಗಿ ಸಂತೋಷವಾಗುವುದು. ಪುತ್ರರು ಗಯೆಗೆ ಹೋಗಿ ಪಾದಪ್ರಕ್ಷಾಳನೆ ಮಾಡಿಕೊಂಡರೂ ಕೂಡ ಪಿತೃಗಳಿಗೆ ತೃಪ್ತಿಯಾಗುತ್ತದೆ. ಪಿಂಡದಾನ, ತರ್ಪಣಾದಿ ಗಳನ್ನು ಕೊಟ್ಟರೆ ಕೇಳಬೇಕೆ ? ಸಂಪೂರ್ಣ ಫಲಗಳು ಲಭಿಸುವುವು.

೧೦. ಯಾವನು ಗಯೆಗೆ ಹೋಗಿ ಪಿತೃಗಳಿಗೆ ಅನ್ನದಾನವನ್ನು ಮಾಡು ವನೋ ಅವನ ತಂದೆಯೇ ಪುತ್ರವಂತರಲ್ಲಿ ಅಗ್ರಗಣ್ಯನಾಗಿರುವನು. ಯಾವ ಪುತ್ರನು ಗಯಾಕ್ಷೇತ್ರದಲ್ಲಿ ಮೂರು ಪಕ್ಷಗಳು ವಾಸಿಸುವನೋ ಅವನ ಏಳು ತಲೆಗಳು (ವಂಶದವರು) ಉದ್ಧೃತರಾಗುವರು. ಅಥವಾ ಆ ಗಯೆಯಲ್ಲಿ ಹದಿನೈದು ದಿವಸಗಳು ಏಳು ದಿವಸಗಳು ಅಥವಾ ಮೂರು ದಿವಸಗಳು ವಾಸಿಸಿದರೂ ಸಪ್ತಕುಲಗಳು ಉದ್ಧೃತವಾಗುವುವು.

ಮಹಾಕಲ್ಪಕೃತಂ ಪಾಪಂ ಗಯಾಂ ಪ್ರಾಪ್ಯ ವಿನಶ್ಯತಿ ।
ಪಿಂಡಂ ದದ್ಯಾಚ್ಚ ಪಿತ್ರಾದೇರಾತ್ಮನೋಽಪಿ ತಿಲೈರ್ವಿನಾ ॥ ೧೧ ॥

ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಪಾಪಂ ತತ್ಸಂಗಜಂ ಸರ್ವಂ ಗಯಾಶ್ರಾದ್ಧಾದ್ವಿನಶ್ಯತಿ ॥ ೧೨ ॥

ಆತ್ಮಜೋಽಪ್ಯನ್ಯಜೋ ವಾಪಿ ಗಯಾಭೂಮೌ ಯದಾ ತದಾ ।
ಯನ್ನಾಮ್ನಾ ಪಾತಯೇತ್ಪಿಂಡಂ ತಂ ನಯೇದ್ಬ್ರಹ್ಮ ಶಾಶ್ವತಂ ॥ ೧೩ ॥

ಬ್ರಹ್ಮಜ್ಞಾನಂ ಗಯಾಶ್ರಾದ್ಧಂ ಗೋಗೃಹೇ ಮರಣಂ ತಥಾ ।
ವಾಸಃ ಪುಂಸಾಂ ಕುರುಕ್ಷೇತ್ರೇ ಮುಕ್ತಿರೇಷಾ ಚತುರ್ವಿಧಾ ॥ ೧೪ ॥

ಬ್ರಹ್ಮಜ್ಞಾನೇನ ಕಿಂ ಕಾರ್ಯಂ ಗೋಗೃಹೇ ಮರಣೇನ ಕಿಂ ।
ವಾಸೇನ ಕಿಂ ಕುರುಕ್ಷೇತ್ರೇ ಯದಿ ಪುತ್ರೋ ಗಯಾಂ ವ್ರಜೇತ್ ॥ ೧೫ ॥

---

೧೧. ಅನೇಕ ಕಲ್ಪಗಳಿಂದ ಕೃತವಾದ ಪಾಪಗಳೆಲ್ಲವೂ ಗಯೆಗೆ ಹೋದರೆ ನಾಶವಾಗುವುವು ಅಲ್ಲಿ ಪಿತೃಗಳಿಗೆ ಪಿಂಡದಾನವನ್ನು ಮಾಡಿದರೂ, ಎಳ್ಳಿಲ್ಲದೇ ಆತ್ಮಶ್ರಾದ್ಧವನ್ನು ಮಾಡಿದರೂ ಮಹಾಫಲಗಳು ಲಭಿಸುವುವು.

೧೨. ಬ್ರಹ್ಮಹತ್ಯೆ, ಸುರಾಪಾನ, ಸುವರ್ಣಸ್ತೇಯ, ಗುರುಪತ್ನೀಗಮನ ಇವರ ಸಹವಾಸಗಳೆಂಬ ಪಂಚಮಹಾಪಾತಕಗಳೂ ಕೂಡ ಗಯಾದಲ್ಲಿ ಮಾಡುವ ಶ್ರಾದ್ಧಾದಿಗಳಿಂದ ಪರಿಹೃತವಾಗುತ್ತವೆ.

೧೩. ಆತ್ಮಪುತ್ರನಾಗಲೀ ಅಥವಾ ಬೇರೊಬ್ಬ ಪುರುಷನಾಗಲೀ, ಗಯಾ ಕ್ಷೇತ್ರದಲ್ಲಿ ಯಾವ ಕಾಲದಲ್ಲಾದರೂ ಯಾವ ಪಿತೃಗಳನ್ನುದ್ದೇಶಿಸಿ ಪಿಂಡದಾನ ವನ್ನು ಮಾಡುವರೋ ಅವರು ಶಾಶ್ವತವಾದ ಬ್ರಹ್ಮಪದವಿಯನ್ನು ಹೊಂದುವರು.

೧೪. ಬ್ರಹ್ಮಜ್ಞಾನ, ಗಯಾಶ್ರಾದ್ಧ, ಗೋಕುಲದಲ್ಲಿ ಮರಣ, ಕುರುಕ್ಷೇತ್ರ ವಾಸ ಇವು ನಾಲ್ಕೂ ಪುರುಷರಿಗೆ ಮುಕ್ತಿದಾಯಕವಾಗಿವೆ.

೧೫. ಪುತ್ರನು ಗಯೆಗೆ ಹೋಗಿ ಶ್ರಾದ್ಧವನ್ನೂ, ಪಿಂಡದಾನವನ್ನೂ ಮಾಡಿ ದರೆ ಬ್ರಹ್ಮಜ್ಞಾನ, ಗೋಕುಲಮರಣ, ಕುರುಕ್ಷೇತ್ರವಾಸ ಇವುಗಳಿಂದುಂಟಾಗುವ ಫಲಕ್ಕಿಂತಲೂ ಅಧಿಕವಾದ ಫಲವು ಲಭಿಸುವುದು. ಅಂದರೆ ಇವೆಲ್ಲಕ್ಕಿಂತಲೂ ಗಯಾಕ್ಷೇತ್ರವೇ ಉತ್ತಮವಾಗಿದೆ.

ಗಯಾಯಾಂ ಸರ್ವಕಾಲೇಷು ಪಿಂಡಂ ದದ್ಯಾದ್ವಿಚಕ್ಷಣಃ ।
ಅಧಿಮಾಸೇ ಜನ್ಮದಿನೇ ಚಾಸ್ತೇಽಪಿ ಗುರುಶುಕ್ರಯೋಃ ॥ ೧೬ ॥

ನ ತ್ಯಕ್ತವ್ಯಂ ಗಯಾಶ್ರಾದ್ಧಂ ಸಿಂಹಸ್ಥೇಽಪಿ ಬೃಹಸ್ಪತೌ ।
ತಥಾ ದೈವಪ್ರಮಾದೇನ ಪ್ರಹತೇಷು ವ್ರಣೇಷು ಚ ॥
ಪುನಃ ಕರ್ಮಾಧಿಕಾರೀ ಚ ಶ್ರಾದ್ಧಕೃದ್ಬ್ರಹ್ಮಲೋಕಭಾಕ್ ॥ ೧೭ ॥

ಸಕೃದ್ಗಯಾಭಿಗಮನಂ ಸಕೃತ್ಪಿಂಡಸ್ಯ ಪಾತನಂ ।
ದುರ್ಲಭಂ ಕಿಂ ಪಿತ್ಯಾನ್ನಿತ್ಯಂ ಅಸ್ಮಿನ್ನೇವ ವ್ಯವಸ್ಥಿತಿಃ ॥ ೧೮ ॥

ಪ್ರಮಾದಾನ್ಮ್ರಿಯತೇ ಕ್ಷೇತ್ರೇ ಬ್ರಹ್ಮಾದೇರ್ಮುಕ್ತಿದಾಯಕೇ ।
ಬ್ರಹ್ಮಜ್ಞಾನಾದ್ಯಥಾ ಮುಕ್ತಿರ್ಲಭ್ಯತೇ ನಾತ್ರ ಸಂಶಯಃ ॥ ೧೯ ॥

---

೧೬. ಗಯಾಕ್ಷೇತ್ರದಲ್ಲಿ ವಿವೇಕಿಯಾದ ಪುರುಷನು ಪಿತೃಕಾರ್ಯವನ್ನು ಯಾವ ಕಾಲದಲ್ಲಿಯಾದರೂ ಮಾಡಬಹುದು. ಮತ್ತು ಅಧಿಕಮಾಸದಲ್ಲಿಯೂ, ಜನ್ಮದಿವಸದಲ್ಲಿಯೂ, ಗುರುಶುಕ್ರಾಸ್ತಗಳಲ್ಲಿಯೂ ಶ್ರಾದ್ಧವನ್ನು ಮಾಡಿದರೆ ಮಹಾ ಫಲಪ್ರಾಪ್ತಿಯಾಗುವುದು.

೧೭. ಅದರಂತೆ ಬೃಹಸ್ಪತಿಯು ಸಿಂಹಗತವಾಗಲು ಗಯಾಶ್ರಾದ್ಧವನ್ನು ತಪ್ಪದೆ ಮಾಡಲೇ ಬೇಕು. ದೈವಯೋಗದಿಂದ ವ್ರಣವನ್ನು ಹೊಂದಿ ಅನಧಿಕಾರಿ ಯಾದರೂ ಗಯಾಶ್ರಾದ್ಧದಿಂದ ಪುನಃ ಸರ್ವಾಧಿಕಾರಿಯಾಗಿ ಶ್ರಾದ್ಧದಿಂದ ಬ್ರಹ್ಮ ಲೋಕವನ್ನು ಹೊಂದುವನು.

೧೮. ಒಂದು ಸಲ ಗಯೆಗೆ ಹೋಗಿ ಪಿಂಡದಾನವನ್ನು ಮಾಡಿದರೆ ದುರ್ಲಭ ವಾದ ಫಲಪ್ರಾಪ್ತಿಯಾಗುವುದು. ಆ ಗಯಾಕ್ಷೇತ್ರದಲ್ಲಿಯೇ ವಾಸಿಸಿ ನಿರಂತರ ಶ್ರಾದ್ಧಮಾಡುವವನಿಗೆ ಫಲಪ್ರಾಪ್ತಿಯಾಗುವುದೆಂದು ಹೇಳತಕ್ಕದ್ದೇನಿದೆ.

೧೯. ಬ್ರಹ್ಮಾದಿಗಳಿಗೂ ಮುಕ್ತಿದಾಯಕವಾದ ಗಯಾಮಹಾಕ್ಷೇತ್ರದಲ್ಲಿ ಆಕಸ್ಮಿಕವಾಗಿ ಮರಣ ಸಂಭವಿಸಿದರೂ ಬ್ರಹ್ಮಜ್ಞಾನದಿಂದಾಗತಕ್ಕ ಮಹಾಮೋಕ್ಷವು ಲಭಿಸುವ ವಿಷಯದಲ್ಲಿ ಲೇಶಮಾತ್ರವೂ ಸಂದೇಹವಿಲ್ಲ.

ಕೀಟಕಾದಿಮೃತಾನಾಂ ಚ ಪಿತೄಣಾಂ ತಾರಣಾಯ ಚ ।
ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯಂ ಸುವಿಚಕ್ಷಣೈಃ ॥ ೨೦ ॥

ಬ್ರಹ್ಮಪ್ರಕಲ್ಪಿತಾನ್ ವಿಪ್ರಾನ್ ಹವ್ಯಕವ್ಯಾದಿನಾರ್ಚಯೇತ್ ।
ತೈಸ್ತುಷ್ಟೈಸ್ತೋಷಿತಾಃ ಸರ್ವಾಃ ಪಿತೃಭಿಃ ಸಹ ದೇವತಾಃ ॥ ೨೧ ॥

ಮುಂಡನಂ ಚೋಪವಾಸಶ್ಚ ಸರ್ವತೀರ್ಥೇಷ್ವಯಂ ವಿಧಿಃ ।
ವರ್ಜಯಿತ್ವಾ ಕುರುಕ್ಷೇತ್ರಂ ವಿಶಾಲಾಂ ವಿರಜಾಂ ಗಯಾಂ ॥ ೨೨ ॥

ದಂಡಂ ಪ್ರದರ್ಶಯೇದ್ಭಿಕ್ಷುರ್ಗಯಾಂ ಗತ್ವಾ ನ ಪಿಂಡದಃ ।
ದಂಡಂ ನ್ಯಸ್ತ್ವಾ ವಿಷ್ಣುಪದೇ ಪಿತೃಭಿಃ ಸಹ ಮುಚ್ಯತೇ ॥ ೨೩ ॥

---

೨೦. ಕ್ರಿಮಿಕೀಟಾದಿಗಳು ಗಯಾಕ್ಷೇತ್ರದಲ್ಲಿ ಮೃತವಾದರೆ ಅವೂ ಕೂಡ ಮೋಕ್ಷವನ್ನು ಪಡೆಯುವುವು. ಹೀಗಿರುವಲ್ಲಿ ಪಿತೃಗಳು ಉದ್ಧೃತರಾಗುವರೆಂದು ಹೇಳಬೇಕಾಗಿಯೇ ಇಲ್ಲ. ಆದುದರಿಂದ ವಿವೇಕಿಯಾದ ಪುರುಷರು ಸರ್ವಪ್ರಯತ್ನದಿಂದಲೂ ಗಯಾಕ್ಷೇತ್ರಕ್ಕೆ ಹೋಗಿ ಶ್ರಾದ್ಧಾದಿಗಳನ್ನು ಮಾಡಬೇಕು.

೨೧. ಬ್ರಹ್ಮದೇವನು ಕಲ್ಪಿಸಿರುವ ಬ್ರಾಹ್ಮಣರನ್ನು ಹವ್ಯಕವ್ಯಾದಿಗಳಲ್ಲಿ ಶ್ರದ್ಧೆಯಿಂದ ಪೂಜಿಸಬೇಕು. ಹೀಗೆ ಪ್ರಸಿದ್ಧರಾದ ವಿಪ್ರರು ಸಂತುಷ್ಟರಾದರೆ ಪಿತೃಗಳು ಪ್ರೀತರಾಗುವರು. ಪಿತೃದೇವತೆಗಳೂ ಕೂಡ ಪ್ರಸನ್ನರಾಗುವರು.

೨೨. ವಪನೋಪವಾಸಗಳನ್ನು ಸರ್ವಕ್ಷೇತ್ರಗಳಲ್ಲಿಯೂ ಮಾಡಬೇಕೆಂದು ಸಾಮಾನ್ಯವಿಧಿ ಇರುತ್ತದೆ. ಆದರೆ ಕುರುಕ್ಷೇತ್ರ, ವಿಶಾಲಕ್ಷೇತ್ರ, ವಿರಜಾನದೀ, ಗಯಾಕ್ಷೇತ್ರ ಇವುಗಳನ್ನು ಬಿಟ್ಟು ಉಳಿದ ಕ್ಷೇತ್ರಗಳಲ್ಲಿ ಮುಂಡನೋಪವಾಸಗಳನ್ನು ಮಾಡಬೇಕು.

೨೩. ಸನ್ಯಾಸಿಯು ಗಯಾಕ್ಷೇತ್ರಕ್ಕೆ ಹೋಗಿ ಪಿಂಡದಾನವನ್ನು ಮಾಡಿ ದಂಡವನ್ನು ಪ್ರದರ್ಶಿಸಬಾರದು. ಯತಿಯು ವಿಷ್ಣುಪಾದದಲ್ಲಿ ದಂಡವನ್ನು ಬಿಟ್ಟು ಪಿಂಡದಾನವನ್ನು ಮಾಡಿದರೆ ಪಿತೃದೇವತೆಗಳು ಸಂತುಷ್ಟರಾಗುವರು.

ನ ದಂಡೀ ಕಿಲ್ಬಿಷಂ ಧತ್ತೇ ಪುಣ್ಯಂ ವಾ ಪರಮಾರ್ಥತಃ ।
ಅತಃ ಸರ್ವಾಂ ಕ್ರಿಯಾಂ ತ್ಯಕ್ತ್ವಾ ವಿಷ್ಣುಂ ಧ್ಯಾಯತಿ ಭಾವುಕಃ ॥ ೨೪ ॥

ಸಂನ್ಯಸೇತ್ಸರ್ವಕರ್ಮಾಣಿ ವೇದಮೇಕಂ ನ ಸನ್ಯಸೇತ್ ।
ಮುಂಡಂ ಕರ್ಯಾಚ್ಚ ಪೂರ್ವೇಽಸ್ಮಿನ್ಪಶ್ಚಿಮೇ ದಕ್ಷಿಣೋತ್ತರೇ ॥ ೨೫ ॥

ಸಾರ್ದ್ಧಂ ಕ್ರೋಶದ್ವಯಂ ಮಾನಂ ಗಯೇತಿ ಬ್ರಹ್ಮಣೇರಿತಂ ।
ಪಂಚಕ್ರೋಶಂ ಗಯಾಕ್ಷೇತ್ರಂ ಕ್ರೋಶಮೇಕಂ ಗಯಾಶಿರಃ ॥ ೨೬ ॥

ತನ್ಮಧ್ಯೇ ಸರ್ವತೀರ್ಥಾನಿ ತ್ರೈಲೋಕ್ಯೇ ಯಾನಿ ಸಂತಿ ವೈ ।
ಶ್ರಾದ್ಧಕೃದ್ಯೋ ಗಯಾಕ್ಷೇತ್ರೇ ಪಿತೄಣಾಮನೃಣೋ ಹಿ ಸಃ ॥ ೨೭ ॥

---

೨೪. ನಿಜವಾಗಿ ವಿಚಾರಮಾಡಿದರೆ ಯತಿಗಳಿಗೆ ಪುಣ್ಯಪಾಪಗಳ ಲೇಪವಿಲ್ಲ. ಆದುದರಿಂದ ಸನ್ಯಾಸಿಯು ಉಭಯವಿಧವಾದ ಕರ್ಮಗಳನ್ನೂ ಪರಿತ್ಯಾಗಮಾಡಿ ಮಹಾವಿಷ್ಣುವನ್ನು ಧ್ಯಾನಿಸಬೇಕು.

೨೫. ಯತಿಯು ಸರ್ವಸಂಗತ್ಯಾಗವನ್ನು ಮಾಡಬೇಕು. ಆದರೆ ವೇದಾಧ್ಯಯವನ್ನು ಶಾಸ್ತ್ರಾಭ್ಯಾಸವನ್ನು ಬಿಡದೇ ಮಾಡಲೇಬೇಕು. ಈ ಕ್ಷೇತ್ರದಲ್ಲಿ ಪೂರ್ವ, ದಕ್ಷಿಣ, ಪಶ್ಚಿಮ ಭಾಗಗಳಲ್ಲಿ ಮುಂಡನವನ್ನು ಮಾಡಿಸಿಕೊಳ್ಳಬೇಕು. ಇದು ತೀರ್ಥವಿಧಾನವಾಗಿರುವುದು.

೨೬. ಗಯಾಕ್ಷೇತ್ರವು ಏಳೂವರೆ ಹರದಾರಿಯಷ್ಟು ಅಥವಾ ಅರ್ಧಯೋಜನದಷ್ಟು ವಿಸ್ತಾರವಾಗಿದೆಯೆಂದು ಬ್ರಹ್ಮದೇವನು ಹೇಳಿರುವನು. ಗಯಾಸುರನ ಕ್ಷೇತ್ರವು ಐದುಕ್ರೋಶ ಹದಿನೈದು ಹರದಾರಿಯಷ್ಟು ವಿಸ್ತಾರವಿದೆಯೆಂದೂ, ಶಿರೋಭಾಗವು ಒಂದುಹರದಾರಿಯಷ್ಟು ವಿಶಾಲವಿದೆಯೆಂದು ಮಹಾತ್ಮರು ಹೇಳುವರು.

೨೭. ಮೂರುಲೋಕಗಳಲ್ಲಿ ಎಷ್ಟು ತೀರ್ಥಗಳಿವೆಯೋ ಅವೆಲ್ಲವೂ ಈ ಗಯಾಕ್ಷೇತ್ರದ ಮಧ್ಯದಲ್ಲಿವೆ. ಆದುದರಿಂದ ಗಯಾಕ್ಷೇತ್ರದಲ್ಲಿ ಶ್ರಾದ್ಧವನ್ನು ಮಾಡಿದವನು ಪಿತೃಋಣಗಳಿಂದ ಮುಕ್ತನಾಗುವನು.

ಶಿರಸಿ ಶ್ರಾದ್ಧಕೃದ್ಯಸ್ತು ಕುಲಾನಾಂ ಶತಮುದ್ಧರೇತ್ ।
ಗೃಹಾಚ್ಚಲಿತಮಾತ್ರೇಣ ಗಯಾಯಾಂ ಗಮನಂ ಪ್ರತಿ ॥
ಸ್ವರ್ಗಾರೋಹಣಸೋಪಾನಂ ಪಿತೄಣಾಂ ಚ ಪದೇ ಪದೇ ॥ ೨೮ ॥

ಪದೇ ಪದೇಽಶ್ವಮೇಧಸ್ಯ ಯತ್ಫಲಂ ಗಚ್ಛತೋ ಗಯಾಂ ।
ತತ್ಫಲಂ ಚ ಭವೇನ್ನೂನಂ ಸಮಗ್ರಂ ನಾತ್ರ ಸಂಶಯಃ ॥ ೨೯ ॥

ಪಾಯಸೇನಾಪಿ ಚರುಣಾ ಸಕ್ತುನಾ ಪಿಷ್ಟಕೇನ ವಾ ।
ತಂಡುಲೈಃ ಫಲಮೂಲಾದ್ಯೈರ್ಗಯಾಯಾಂ ಪಿಂಡಪಾತನಂ ॥ ೩೦ ॥

ತಿಲಕಲ್ಕೇನ ಖಂಡೇನ ಗುಡೇನ ಸಘೃತೇನ ವಾ ।
ಕೇವಲೇನೈವ ದಧ್ನಾ ವಾ ಊರ್ಜನೇ ಮಧುನಾಽಥ ವಾ ॥ ೩೧ ॥

---

೨೮. ಗಯಾಕ್ಷೇತ್ರದ ಶಿರೋಭಾಗದಲ್ಲಿ ಶ್ರಾದ್ಧವನ್ನು ಮಾಡಿದವನು ತನ್ನ ನೂರು ಕುಲಗಳನ್ನುದ್ಧರಿಸುವನು. ಗಯಾಕ್ಷೇತ್ರಕ್ಕೆ ಪ್ರಯಾಣೋದ್ದೇಶ್ಯದಿಂದ ಮನೆಯಿಂದ ಹೊರಟ ಮಾತ್ರದಿಂದಲೇ ಅವನ ಪಿತೃಗಳಿಗೆ ಸ್ವರ್ಗಾರೋಹಣ ಸೋಪಾನಗಳು ದೊರೆಯುವುವು.

೨೯. ಪುರುಷನು ಪದೇಪದೇ ಅಶ್ವಮೇಧಯಾಗವನ್ನು ಮಾಡಿದರೆ ಯಾವ ಫಲವನ್ನು ಹೊಂದುವನೋ ಅಂತಹ ಫಲವನ್ನು ಗಯಾಕ್ಷೇತ್ರಕ್ಕೆ ಹೊರಟ ಪುರುಷನು ಹೊಂದುವನು. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

೩೦. ಗಯಾಕ್ಷೇತ್ರದಲ್ಲಿ ಶ್ರಾದ್ಧವನ್ನು ಮಾಡಿ ಪಾಯಸ, ಅನ್ನ, ಹಿಟ್ಟು, ಅರಳಹಿಟ್ಟು, ಮಂತ್ರಾಕ್ಷತೆ, ಚರು, ಫಲಮೂಲ ಇವುಗಳಿಂದ ಸಹಿತವಾಗಿ ಪಿಂಡ ದಾನವನ್ನು ಮಾಡಿದರೆ ಕ್ಷಿಪ್ರಫಲಪ್ರಾಪ್ತಿಯಾಗುವುದು.

೩೧–೩೨. ಎಳ್ಳಿನಹಿಂಡಿ, ಬೆಲ್ಲದಖಂಡ, ಘೃತ, ಕೇವಲ, ಮೊಸರು, ಉತ್ತಮವಾದ ಜೇನು, ಕುಂಕುಮಕೇಸರಿ, ಘೃತಮಿಶ್ರವಾದ ಸಕ್ಕರೆ ಇವು ಪಿತೃಗಳಿಗೆ ಅಕ್ಷಯಫಲಪ್ರದವಾಗಿವೆ. ಅಥವಾ ಆಯಾ ಋತುಗಳಲ್ಲುಂಟಾಗುವ ಪಲ್ಯಕಾಯಿ

**ಪಿಣ್ಯಾಕಂ ಸಘೃತಂ ಖಂಡಂ ಪಿತೃಭ್ಯೋಽಕ್ಷಯಮಿತ್ಯುತ |**
**ಇಜ್ಯತೇ ವಾರ್ತವಂ ಭೋಜ್ಯಂ ಹವಿಷ್ಯಾನ್ನಂ ಮುನೀರಿತಂ || ೩೨ ||**

**ಏಕತಃ ಸರ್ವವಸ್ತ್ರಾಣಿ ರಸವಂತಿ ಮಧೂನಿ ಹಿ |**
**ಸ್ಮೃತ್ವಾ ಗದಾಧರಾಂಘ್ರ್ಯಬ್ಜಂ ಫಲ್ಗುತೀರ್ಥಾಂಬುಚೈಕತಃ || ೩೩ ||**

**ಪಿಂಡಾಸನಂ ಪಿಂಡದಾನಂ ಪುನಃ ಪ್ರತ್ಯವನೇಜನಂ |**
**ದಕ್ಷಿಣಾ ಚಾನ್ನಸಂಕಲ್ಪ ಸೀರ್ಥಶ್ರಾದ್ಧೇಷ್ವಯಂ ವಿಧಿಃ || ೩೪ ||**

**ನ ವಾಹನಂ ನ ದಿಗ್ಬಂಧೋ ನ ದೋಷೋ ದೃಷ್ಟಿಸಂಭವಃ |**
**ಸಕಾರುಣ್ಯೇನ ಕರ್ತವ್ಯಂ ತೀರ್ಥಶ್ರಾದ್ಧಂ ವಿಚಕ್ಷಣೈಃ || ೩೫ ||**

**ಅನ್ಯತ್ರಾವಾಹಿತಾಃ ಕಾಲೇ ಪಿತರೋ ಯಾಂತ್ಯಮುಂ ಪ್ರತಿ |**
**ತೀರ್ಥೇ ಸದಾ ವಸಂತ್ಯೇತೇ ತಸ್ಮಾದಾವಾಹನಂ ನ ಹಿ || ೩೬ ||**

---

ಗಳೂ, ಭಕ್ಷ್ಯಭೋಜ್ಯಗಳೂ, ಮುನಿಗಳಿಗೆ ಹಿತವೂ, ಸಾತ್ವಿಕವೂ ಆದ ಹವಿಸ್ಸು, ಚರು ಮೊದಲಾದುವೂ ಕೂಡ ಅನಂತಫಲಪ್ರದವಾಗಿವೆ.

೩೩-೩೪. ಒಂದು ಭಾಗದಲ್ಲಿ ಸರ್ವವಸ್ತ್ರಗಳು, ರಸವತ್ತಾದ ಪದಾರ್ಥಗಳು, ಜೇನು ಇವುಗಳನ್ನೂ, ಇನ್ನೊಂದು ಭಾಗದಲ್ಲಿ ಫಲ್ಗುತೀರ್ಥೋದಕವನ್ನೂ ಇಟ್ಟು ಕೊಂಡು ಗದಾಧರನ ಪಾದಕಮಲಗಳನ್ನು ಧ್ಯಾನಿಸುತ್ತಾ ಆಸನ, ಪಿಂಡದಾನ, ಪುನರ್ಮಾರ್ಜನ, ದಕ್ಷಿಣೆ, ಅನ್ನದಾನ, ಸ್ನಾನ, ಸಂಕಲ್ಪ ಇವುಗಳು ತೀರ್ಥಶ್ರಾದ್ಧ ಗಳಲ್ಲಿ ಮಾಡತಕ್ಕ ವಿಧಿಯಾಗಿವೆ.

೩೫. ಆ ಗಯಾಕ್ಷೇತ್ರದಲ್ಲಿ ಆವಾಹನ, ದಿಗ್ಬಂಧ, ದೃಷ್ಟಿದೋಷ ಇವುಗಳು ಇಲ್ಲ. ವಿವೇಕಿಗಳಾದ ಜ್ಞಾನಿಗಳು ದಯಾಪೂರ್ಣರಾಗಿಯೂ, ಶುದ್ಧಮನಸ್ಕರಾಗಿಯೂ ತೀರ್ಥಶ್ರಾದ್ಧಗಳನ್ನು ಮಾಡಬೇಕು.

೩೬. ಪಿತೃಗಳು ಬೇರೆ ಸ್ಥಳಗಳಲ್ಲಿ ಆವಾಹಿತರಾದರೂ ಕೂಡ ಪರ್ವಕಾಲ ಗಳಲ್ಲಿಯೂ, ಗಯಾತೀರ್ಥಗಳಲ್ಲಿಯೂ, ಸದಾ ಸನ್ನಿಹಿತರಾಗಿರುವರು. ಈಗ ಅವರು ತೀರ್ಥಕ್ಷೇತ್ರಾದಿಗಳಲ್ಲಿ ಸದಾ ವಾಸಿಸುವುದರಿಂದ ಅಲ್ಲಿ ಶ್ರಾದ್ಧವನ್ನು ಮಾಡುವಾಗ ಅವರನ್ನು ಆವಾಹನೆಮಾಡಬೇಕಾಗಿಲ್ಲ.

ತೀರ್ಥಶ್ರಾದ್ಧಂ ಪ್ರಯಚ್ಛದ್ಭಿಃ ಪುರುಷೈಃ ಫಲಕಾಂಕ್ಷಿಭಿಃ ।
ಕಾಮಂ ಕ್ರೋಧಂ ತಥಾ ಲೋಭಂ ತ್ಯಕ್ತ್ವಾ ಕಾರ್ಯಾ ಕ್ರಿಯಾಽನಿಶಂ ॥

ಬ್ರಹ್ಮಚಾರ್ಯೇಕಭೋಜೀ ಚ ಭೂಶಾಯೀ ಸತ್ಯವಾಕ್ಛುಚಿಃ ।
ಸರ್ವಭೂತಹಿತೇ ರಕ್ತಃ ಸ ತೀರ್ಥಫಲಮಶ್ನುತೇ ॥ ೩೮ ॥

ತೀರ್ಥಾನ್ಯನುಸರನ್ ಧೀರಃ ಪಾಷಂಡಂ ಪೂರ್ವತಸ್ತ್ಯಜೇತ್ ।
ಪಾಷಂಡಃ ಸ ಚ ವಿಜ್ಞೇಯೋ ಯೋ ಭವೇತ್ಕಾಮಕಾರತಃ ॥ ೩೯ ॥

ತೀರ್ಥೇಷು ಯೇ ನರಾ ಧೀರಾಃ ಕರ್ಮ ಕುರ್ವಂತಿ ತದ್ಗತಾಃ ।
ಯಥಾ ಬ್ರಹ್ಮವಿದೋ ವೇದ್ಯಂ ವಸ್ತು ಚಾನನ್ಯಚೇತಸಃ ॥
ಪ್ರವಿಶಂತಿ ಪರೇಶಾಖ್ಯಂ ಬ್ರಹ್ಮ ಬ್ರಹ್ಮಪರಾಯಣಾಃ ॥ ೪೦ ॥

---

೩೭. ತೀರ್ಥಶ್ರಾದ್ಧದಿಂದ ಐಶ್ವರ್ಯಾದಿಫಲಾಕಾಂಕ್ಷೆಗಳಾದ ಪುರುಷರು ಕಾಮ, ಕ್ರೋಧ, ಲೋಭ, ಮದ, ಮಾತ್ಸರ್ಯಾದ್ಯರಿಷಡ್ವರ್ಗಗಳನ್ನು ಬಿಟ್ಟು, ಯಾವಾಗಲೂ ಸತ್ಕಾರ್ಯಗಳನ್ನು ಆಚರಿಸಬೇಕು.

೩೮. ಬ್ರಹ್ಮಚಾರಿಯು, ಏಕಭುಕ್ತನೂ (ಒಂದೇ ಸಲ ಭೋಜನವನ್ನು ಮಾಡಿದವನೂ) ಹಾಸಿಗೆಯಿಲ್ಲದೆ ಭೂಶಾಯಿಯೂ, ಮೌನಿಯೂ, ಶುಚಿಯೂ, ಸರ್ವಭೂತಹಿತಾಸಕ್ತನೂ ಆದರೆ ಸರ್ವತೀರ್ಥಗಳಲ್ಲಿ ಸ್ನಾನ, ಜಪತಪಾದಿಗಳಿಂದುಂಟಾಗುವ ಮಹಾಫಲಗಳನ್ನು ಹೊಂದುವನು.

೩೯. ತೀರ್ಥಯಾತ್ರೆಯನ್ನು ಮಾಡುವ ಪುರುಷನು ಪಾಷಂಡಿಗಳೊಡನೆ ಸೇರದೆ ಅವರನ್ನು ತ್ಯಜಿಸಬೇಕು. ಯಾವನು ಸ್ವೇಚ್ಛಾಚಾರಿಯೂ, ಧರ್ಮವಿರೋಧಿಯೂ, ಆಚಾರತ್ಯಾಗಿಯೂ ಆಗುವನೋ ಅವನೇ ಪಾಷಂಡಿಯಾಗುವನು.

೪೦. ಧೀರರೂ, ಬ್ರಹ್ಮಧ್ಯಾನಿಗಳೂ, ಸದಾಚಾರಿಗಳೂ ಆದ ಯಾವ ಪುರುಷರು ಅನನ್ಯಮನಸ್ಕರೂ, ಬ್ರಹ್ಮಪರಾಯಣರೂ ಆಗಿ ಪಿತೃಕಾರ್ಯಾದಿಗಳನ್ನು ಮಾಡುವರೋ ಅವರು ಬ್ರಹ್ಮಾನುಗ್ರಹದಿಂದ ಬ್ರಹ್ಮಪದವಿಯನ್ನು ಪಡೆಯುವರು.

ಯಾಸ್ತೇ ವೈತರಣೀ ನಾಮ ನದೀ ತ್ರೈಲೋಕ್ಯವಿಶ್ರುತಾ ।
ಸಾವತೀರ್ಣಾ ಗಯಾಕ್ಷೇತ್ರೇ ಪಿತ್ರೂಣಾಂ ತಾರಣಾಯ ವೈ ॥
ಸ್ನಾತೋ ಗೋದೋ ವೈತರಣ್ಯಾಂ ತ್ರಿಃ ಸಪ್ತ ಕುಲಮುದ್ಧರೇತ್ ॥ ೪೧ ॥

ತಥಾಕ್ಷಯವಟಂ ಗತ್ವಾ ವಿಪ್ರಾನ್ ಸಂತೋಷಯಿಷ್ಯತಿ ।
ಬ್ರಹ್ಮಪ್ರಕಲ್ಪಿತಾನ್ವಿಪ್ರಾನ್ ಹವ್ಯಕವ್ಯಾದಿನಾಽರ್ಚಯೇತ್ ॥
ತೈಸ್ತುಷ್ಟೈಸ್ತೋಷಿತಾಃ ಸರ್ವಾಃ ಪಿತೃಭಿಃ ಸಹ ದೇವತಾಃ ॥ ೪೨ ॥

ಗಯಾಯಾಂ ನ ಹಿ ತಸ್ಥಾನಂ ಯತ್ರ ತೀರ್ಥಂ ನ ವಿದ್ಯತೇ ।
ಸಾನ್ನಿಧ್ಯಂ ಸರ್ವತೀರ್ಥಾನಾಂ ಗಯಾತೀರ್ಥಂ ತತೋ ವರಂ ॥ ೪೩ ॥

ಮೀನೇ ಮೇಷೇ ಸ್ಥಿತೇ ಸೂರ್ಯೇ ಕನ್ಯಾಯಾಂ ಕಾರ್ಮುಕೇ ಘಟೇ ।
ದುರ್ಲಭಂ ತ್ರಿಷು ಲೋಕೇಷು ಗಯಾಯಾಂ ಪಿಂಡಪಾತನಂ ॥ ೪೪ ॥

---

೪೧. ಮೂರುಲೋಕ ವಿಖ್ಯಾತವೂ, ಸರ್ವಪಾಪ ಪರಿಹಾರಕವೂ, ವೈತರಣೀ ನಾಮಕವೂ ಆದ ಯಾವ ಮಹಾನದಿಯು ಇರುವುದೋ ಆ ಮಹಾನದಿಯು ಪಿತೃಗಳಿಗೆ ಮುಕ್ತಿಯನ್ನು ಕೊಡಲು ಗಯಾಕ್ಷೇತ್ರದಲ್ಲಿ ಅವತರಿಸಿರುವುದು. ಅದರಲ್ಲಿ ಸ್ನಾನ, ಜಪ, ತಪಾದಿಗಳನ್ನು ಮಾಡಿ ಗೋದಾನವನ್ನು ಮಾಡುವ ಪುರುಷನು ತನ್ನ ಇಪ್ಪತ್ತೊಂದು ಕುಲವನ್ನು ಉದ್ಧರಿಸುವನು.

೪೨. ಹಾಗೆಯೇ ಅಕ್ಷಯವಟಕ್ಕೆ ಹೋಗಿ ಬ್ರಾಹ್ಮಣರನ್ನು ಸಂತೋಷಪಡಿಸಬೇಕು. ಬ್ರಹ್ಮದೇವನಿಂದ ಕ್ಲಿಪ್ತರಾದ ಬ್ರಾಹ್ಮಣರನ್ನು ಹವ್ಯಕವ್ಯಾದಿಗಳಿಂದ ಅರ್ಚಿಸಬೇಕು. ತೃಪ್ತರಾದ ಅವರು ದೇವಪಿತೃಗಳನ್ನು ತೃಪ್ತಿಗೊಳಿಸುವರು.

೪೩. ಗಯಾಕ್ಷೇತ್ರದಲ್ಲಿ ತೀರ್ಥಗಳಿಲ್ಲದ ಪ್ರದೇಶಗಳಲ್ಲಿ ಅಂದರೆ ಗಯೆಯಲ್ಲಿ ಸಕಲ ತೀರ್ಥಗಳೂ ಸನ್ನಿಹಿತವಾಗಿರುವುವು. ಆದುದರಿಂದ ಗಯಾತೀರ್ಥವು ಇತರ ಸಕಲ ತೀರ್ಥಗಳಿಗಿಂತಲೂ ಅತ್ಯುತ್ತಮವೂ, ಮಹಾಫಲಪ್ರದವೂ, ಆಗಿದೆ.

೪೪. ಸೂರ್ಯನು ಮೀನ, ಮೇಷ, ಧನಸ್ಸು, ಕುಂಭ ಮತ್ತು ಕನ್ಯ ಈ ಲಗ್ನಗಳಲ್ಲಿರುವಾಗ ಗಯಾದಲ್ಲಿ ಪಿಂಡದಾನವನ್ನು ಮಾಡಿದರೆ ಮೂರುಲೋಕಗಳಲ್ಲಿಯೂ ಅತ್ಯಂತದುರ್ಲಭವಾದ ಕಾರ್ಯವನ್ನು ಮಾಡಿದಂತೆ ಫಲಸಿದ್ಧಿಯಾಗುವುದು.

**ಮಕರೇ ವರ್ತಮಾನೇ ಚ ಗ್ರಹಣೇ ಚಂದ್ರಸೂರ್ಯಯೋಃ ।**
**ದುರ್ಲಭಂ ತ್ರಿಷು ಲೋಕೇಷು ಗಯಾ ಶ್ರಾದ್ಧಂ ಸುದುರ್ಲಭಂ ॥ ೪೫ ॥**

**ಗಯಾಯಾಂ ಪಿಂಡದಾನೇನ ಯತ್ಫಲಂ ಲಭತೇ ನರಃ ।**
**ನ ತಚ್ಛಕ್ಯಂ ಮಯಾ ವಕ್ತುಂ ಕಲ್ಪಕೋಟಿಶತೈರಪಿ ॥ ೪೬ ॥**

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ "ಗಯಾಮಾಹಾತ್ಮ್ಯಂ"**
**ನಾಮ ತ್ರಿಚತ್ವಾರಿಂಶೋಽಧ್ಯಾಯಃ**

---

೪೫. ಮಕರ ಮಾಸದಲ್ಲಿಯೂ, ಸೂರ್ಯ ಚಂದ್ರ ಗ್ರಹಣಕಾಲದಲ್ಲಿಯೂ, ಗಯಾಶ್ರಾದ್ಧವು ದೊರೆಯುವುದು ಅತಿ ದುರ್ಲಭವು. ಅದು ಮೂರು ಲೋಕಗಳಲ್ಲಿಯೂ ದೊರೆಯದ ಮಹಾ ಫಲಪ್ರದವಾಗಿದೆ.

೪೬. ಗಯೆಯಲ್ಲಿ ಪಿತೃಗಳ ಉದ್ದೇಶ್ಯವಾಗಿ ಪಿಂಡದಾನವನ್ನು ಮಾಡಿದರೆ ಪುರುಷರು ಯಾವ ಫಲವನ್ನು ಪಡೆಯುವರೋ ಆ ಫಲವನ್ನು ನೂರಾರು ಕೋಟಿ ಕಲ್ಪಗಳಿಂದ ವರ್ಣಿಸಲು ಅಶಕ್ಯವಾಗಿದೆಯೆಂದು ಸೂತಮುನಿಯು ಮಹರ್ಷಿಗಳಿಗೆ ನಿರೂಪಿಸಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಗಯಾಮಾಹಾತ್ಮ್ಯ ನಿರೂಪಣೆಯೆಂಬ ನಲವತ್ತಮೂರನೆಯ ಅಧ್ಯಾಯವು ಸಮಾಪ್ತವಾದುದು.



## ನಲವತ್ತಮೂರನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಗಯಾಕ್ಷೇತ್ರದ ಮಹಿಮೆಯು ವರ್ಣಿತವಾಗಿದೆ. ಪೂರ್ವದಲ್ಲಿ ಜ್ಞಾನಿಯಾದ ನಾರದರು ಮಹರ್ಷಿಗಳೊಡನೆ ಸನತ್ಕುಮಾರರ ಬಳಿಗೆಹೋಗಿ ಗಯೆಯಮಹಿಮೆಯನ್ನು ಕೇಳಿದರು. ಆಗ ಸನತ್ಕುಮಾರರು ಈ ಕ್ಷೇತ್ರದ ಮಹಿಮೆಯನ್ನು ಹೇಳಿದರು. ಗಯೆಯಲ್ಲಿ ಪಿತೃಗಳ ಉದ್ದೇಶ್ಯಕವಾಗಿ ಶ್ರಾದ್ಧವನ್ನು ಮಾಡಿ, ಪಿಂಡದಾನವನ್ನು ಮಾಡುವುದರಿಂದ ಸಪ್ತವಂಶಗಳು ಉದ್ಧಾರವಾಗುವುವು. ಬ್ರಹ್ಮಹತ್ಯಾದಿ ಮಹಾಪಾತಕಗಳು ಪರಿಹೃತವಾಗಿ ಮುಕ್ತರಾಗುವರು. ಬ್ರಹ್ಮಜ್ಞಾನ, ಗಯಾಶ್ರಾದ್ಧ, ಗೋಗೃಹಮರಣ, ಕುರುಕ್ಷೇತ್ರಯಾತ್ರೆ ಇವು ನಾಲ್ಕೂ ಮುಕ್ತಿಯನ್ನು ಕೊಡುವುದರಲ್ಲಿ ಸಮವಾಗಿವೆ. ಈ ಕ್ಷೇತ್ರವು ಸಕಲತೀರ್ಥಗಳಿಂದಲೂ ಪೂರ್ಣವಾಗಿದೆ. ಇದರಲ್ಲಿ ಪಿತೃಗಳು ಸದಾ ಸನ್ನಿಹಿತರಾಗಿರುವರು. ವೈತರಣೀ ನದಿಯೂ ಸಹ ಪಿತೃಗಳ ಉದ್ಧಾರಕ್ಕಾಗಿ ಇಲ್ಲಿಗೆ ಬಂದಿರುವುದು. ಮಕರಮಾಸಾದಿಗಳಲ್ಲಿಯೂ, ಸೂರ್ಯಚಂದ್ರ ಗ್ರಹಣಕಾಲಾದಿಗಳಲ್ಲಿಯೂ ಇಲ್ಲಿ ಮಾಡಿದ ಶ್ರಾದ್ಧಾದಿ ಕರ್ಮಗಳು ಇಹದಲ್ಲಿ ಐಶ್ವರ್ಯಾದಿ ಸಕಲಫಲದಾಯಕಗಳೂ, ಪರದಲ್ಲಿ ಪರಮಪದವಿಯನ್ನು ಕೊಡುವುವೂ ಆಗಿವೆ. ಎಂದು ಸೂತರು ಹೇಳಿದರು.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಮಹಾಪುರಾಣಂ

## ಚತುಶ್ಚತ್ವಾರಿಂಶೋಽಧ್ಯಾಯಃ

॥ ನಾರದ ಉವಾಚ ॥

**ಗಯಾಸುರಃ ಕಥಂ ಜಾತಃ ಕಿಂಪ್ರಭಾವಃ ಕಿಮಾತ್ಮಕಃ ।**
**ತಪಸ್ತಪ್ತಂ ಕಥಂ ತೇನ ಕಥಂ ದೇಹಪವಿತ್ರತಾ ॥ ೧ ॥**

॥ ಸನತ್ಕುಮಾರ ಉವಾಚ ॥

**ವಿಷ್ಣೋರ್ನಾಭ್ಯಂಬುಜಾಜ್ಜಾತೋ ಬ್ರಹ್ಮಾ ಲೋಕಪಿತಾಮಹಃ ।**
**ಪ್ರಜಾಃ ಸಸರ್ಜ ಸಂಪ್ರೋಕ್ತಃ ಪೂರ್ವಂದೇವೇನ ವಿಷ್ಣುನಾ ॥ ೨ ॥**

---

## ನಲವತ್ತನಾಲ್ಕನೆಯ ಅಧ್ಯಾಯವು

೧. ನಾರದಮುನಿಯು ಹೇಳಿದನು:—ಎಲೈ ಸನತ್ಕುಮಾರನೇ, ಗಯಾಸುರನು ಹೇಗೆ ಹುಟ್ಟಿದನು? ಅವನ ಸಾಮರ್ಥ್ಯವು ಎಂತಹುದು? ಅವನ ರೂಪವು ಹೇಗಿದೆ? ಅವನು ಹೇಗೆ ತಪಸ್ಸು ಮಾಡಿದನು? ಅವನ ಶರೀರವು ಹೇಗೆ ಪವಿತ್ರವಾಯಿತು? ಎಂದು ನಾರದನು ಕೇಳಿದನು.

೨. ಸನತ್ಕುಮಾರನು ಹೇಳಿದನು:—ಎಲೈ ನಾರದನೇ, ಶ್ರೀ ಮಹಾವಿಷ್ಣುವಿನ ನಾಭಿಕಮಲದಿಂದ ಸಂಭೂತನಾದ ಬ್ರಹ್ಮದೇವನು ಆ ಶ್ರೀಹರಿಯಿಂದ ಪ್ರೇರಿತನಾಗಿ ಮೊದಲನೆಯ ಪ್ರಜೆಗಳ ಸೃಷ್ಟಿಯನ್ನು ಮಾಡಲುಪಕ್ರಮಿಸಿದನು.

ಆಸುರೇಣೈವ ಭಾವೇನ ಹ್ಯಸುರಾನಸೃಜತ್ಪುರಾ ।
ಸೌಮನಸ್ಯೇನ ಭಾವೇನ ದೇವಾನ್ ಸುಮನಸೋಽಸೃಜತ್ ॥ ೩ ॥

ಗಯಾಸುರೋಽಸುರಾಣಾಂ ಚ ಮಹಾಬಲ ಪರಾಕ್ರಮಃ ।
ಯೋಜನಾನಾಂ ಸಪಾದಂ ಚ ಶತಂ ತಸ್ಯೋಚ್ಛ್ರಯಃ ಸ್ಮೃತಃ ॥ ೪ ॥

ಸ್ಥೂಲಃ ಷಷ್ಠಿಯೋರ್ಜನಾನಾಂ ಶ್ರೇಷ್ಠೋಽಸೌ ವೈಷ್ಣವಃ ಸ್ಮೃತಃ ।
ಕೋಲಾಹಲಗಿರಿವರೇ ತಪಸ್ತೇಪೇ ಸುದಾರುಣಂ ॥ ೫ ॥

ಬಹುವರ್ಷಸಹಸ್ರಾಣಿ ನಿರುಚ್ಛ್ವಾಸಂ ಸ್ಥಿರೋಽಭವತ್ ।
ತತ್ತಪಸ್ತಾಪಿತಾ ದೇವಾಃ ಸಂಕ್ಷೋಭಂ ಪರಮಂ ಗತಾಃ ॥ ೬ ॥

ಬ್ರಹ್ಮಲೋಕಂ ಗತಾ ದೇವಾಃ ಪ್ರೋಚುಸ್ತೇಽಥ ಪಿತಾಮಹಂ ।
ಗಯಾಸುರಾದ್ರಕ್ಷ ದೇವ ಬ್ರಹ್ಮಾ ದೇವಾಂಸ್ತತೋಽಬ್ರವೀತ್ ॥ ೭ ॥

---

೩. ಹೀಗೆ ಪ್ರೇರಿತನಾದ ಬ್ರಹ್ಮನು ಆಸುರಭಾವದಿಂದ ಕೂಡಿ ದುಷ್ಟರಾದ ರಾಕ್ಷಸರನ್ನೂ, ಉತ್ತಮಸ್ವಭಾವದಿಂದ ಯುಕ್ತನಾಗಿ ತತ್ಸ್ವರೂಪಿಗಳಾದ ದೇವತೆಗಳನ್ನೂ ಸೃಷ್ಟಿಮಾಡಿದನು.

೪-೫. ಗಯಾಸುರನು ಅಸುರರಲ್ಲಿ ಅತ್ಯಂತ ಬಲಶಾಲಿಯೂ, ನೂರ ಇಪ್ಪತ್ತೈದು ಯೋಜನಗಳಷ್ಟು ಉನ್ನತನೂ, ಅರವತ್ತು ಯೋಜನಗಳಷ್ಟು ಸ್ಥೂಲ ಕಾಯನೂ, ವೈಷ್ಣವಾಗ್ರೇಸರನೂ ಆಗಿದ್ದನೆಂದು ಪ್ರಸಿದ್ಧಿಯಿರುತ್ತದೆ. ಇಂತಹ ಅಸುರವರ್ಯನು ಶ್ರೇಷ್ಠವಾದ ಕೋಲಾಹಲನಾಮಕವಾದ ಪರ್ವತದಲ್ಲಿ ಬಹುಕಾಲ ಅತ್ಯಂತ ಘೋರವಾದ ತಪಸ್ಸನ್ನು ಮಾಡಿದನು.

೬. ಆ ಗಯಾಸುರನು ಅನೇಕ ಸಹಸ್ರವರ್ಷಗಳು ಉಚ್ಛ್ವಾಸನಿಶ್ವಾಸವಿಲ್ಲದೆಯೇ ಸ್ತಬ್ಧನಾಗಿ ಘೋರವಾದ ತಪಸ್ಸನ್ನು ಮಾಡಿದನು. ಅವನ ತಪಸ್ಸಿನಿಂದ ಪೀಡಿತರಾದ ದೇವತೆಗಳೆಲ್ಲರೂ ಅತ್ಯಂತ ಖಿನ್ನರಾದರು.

೭. ತರುವಾಯ ಆ ದೇವತೆಗಳು ಆ ತಾಪವನ್ನು ತಡೆಯಲಾರದೇ ಭಯ ಪೀಡಿತರಾಗಿ ಬ್ರಹ್ಮದೇವನ ಲೋಕಕ್ಕೆ ಹೋಗಿ ಪಿತಾಮಹನಾದ ಬ್ರಹ್ಮದೇವನನ್ನು ಕುರಿತು ಓ ಬ್ರಹ್ಮದೇವನೇ, ಈ ಗಯಾಸುರನಿಂದುಂಟಾದ ಪೀಡೆಯಿಂದ ನಮ್ಮನ್ನು ರಕ್ಷಿಸಬೇಕು ದೇವಾ ಎಂದು ಬೇಡಲು ಬ್ರಹ್ಮದೇವನು ಅವರಿಗೆ ಇಂತೆಂದನು.

ವೃಜಾಮಃ ಶಂಕರಂ ದೇವಾ ಬ್ರಹ್ಮಾದ್ಯಾಶ್ಚ ಗತಾಃ ಶಿವಂ ।
ಕೈಲಾಸೇ ಚಾಬ್ರುವನ್ನತ್ವಾ ರಕ್ಷ ದೇವ ಮಹಾಸುರಾತ್ ॥ ೮ ॥

ಬ್ರಹ್ಮಾದ್ಯಾನಬ್ರವೀಚ್ಛಂಭುರ್ವ್ರಜಾಮಃ ಶರಣಂ ಹರಿಂ ।
ಕ್ಷೀರಾಬ್ಧೌ ದೇವದೇವೇಶ ಸ ನಃ ಶ್ರೇಯೋ ವಿಧಾಸ್ಯತಿ ॥
ಬ್ರಹ್ಮಾ ಮಹೇಶ್ವರೋ ದೇವಾ ವಿಷ್ಣುಂ ನತ್ವಾ ಪ್ರತುಷ್ಟುವುಃ ॥ ೯ ॥

॥ ದೇವಾ ಊಚುಃ ॥

ನಮೋ ವಿಷ್ಣವೇ ಭರ್ತ್ರೇ ಸರ್ವೇಷಾಂ ಪ್ರಭವಿಷ್ಣವೇ ।
ರೋಚಿಷ್ಣವೇ ಜಿಷ್ಣವೇ ಚ ರಾಕ್ಷಸಾದಿಗ್ರಸಿಷ್ಣವೇ ॥ ೧೦ ॥

ಧರಿಷ್ಣವೇಽಖಿಲಸ್ಯಾಸ್ಯ ಯೋಗಿನಾಂ ಪಾರಯಿಷ್ಣವೇ ।
ವರ್ದ್ಧಿಷ್ಣವೇ ಹ್ಯನಂತಾಯ ನಮೋ ಭ್ರಾಜಿಷ್ಣವೇ ನಮಃ ॥ ೧೧ ॥

---

೮. ಆಗ ಬ್ರಹ್ಮನು ಎಲೈ ದೇವತೆಗಳಿರಾ ! ನಾವೆಲ್ಲರೂ ಪರಮೇಶ್ವರನ ಬಳಿಗೆ ಹೋಗಿ ಮೊರೆಯಿಡೋಣ ಅವನು ನಮ್ಮನ್ನು ರಕ್ಷಿಸುವನೆನಲು ಬ್ರಹ್ಮಾದಿ ದೇವತೆಗಳು ಕೈಲಾಸಕ್ಕೆ ಹೋಗಿ ಈಶ್ವರನಿಗೆ ವಂದಿಸಿ ಓ ದೇವನೇ, ಗಯಾಸುರನ ಬಾಧೆಯಿಂದ ನಮ್ಮನ್ನು ರಕ್ಷಿಸು ಎಂದು ಬೇಡಿದರು.

೯. ಆಗ ಈಶ್ವರನು ಬ್ರಹ್ಮಾದಿದೇವತೆಗಳನ್ನು ಕುರಿತು ನಾವು ಶ್ರೀಹರಿಯ ಬಳಿಗೆ ಹೋಗಿ ಶರಣುಹೊಂದೋಣ. ಕ್ಷೀರಸಮುದ್ರಶಾಯಿಯೂ, ದೇವೇಶನೂ ಆದ ಸ್ವಾಮಿಯು ನಮಗೆ ಶ್ರೇಯಸನ್ನುಂಟುಮಾಡುವನು ಎಂದು ಹೇಳಿ ಬ್ರಹ್ಮರುದ್ರರು ದೇವತೆಗಳೊಡನೆ ಕ್ಷೀರಸಾಗರಕ್ಕೆ ಹೋಗಿ ಶ್ರೀಹರಿಗೆ ವಂದಿಸಿ ಸ್ತೋತ್ರಮಾಡಿದರು.

೧೦. ದೇವತೆಗಳು ಹೇಳಿದರು ;—ಸಮಸ್ತರಾದ ದೇವತೆಗಳಿಗೆ ಸ್ವಾಮಿಯೂ, ಅತ್ಯಂತಸಮರ್ಥನೂ, ಪ್ರಕಾಶಶಾಲಿಯೂ, ಜಯಶೀಲನೂ, ರಾಕ್ಷಸಾಂತಕನೂ ಆದ ಶ್ರೀಮಹಾವಿಷ್ಣುವಿಗೆ ನಮಸ್ಕಾರಗಳು.

೧೧. ಈ ಸಮಸ್ತರಾದ ಜಗದುದ್ಧಾರಕನೂ, ಯೋಗಿಗಳಿಗೆ ಮುಕ್ತಿದಾಯಕನೂ, ವರ್ಧಿಷ್ಣುವೂ, ಅಂತರಹಿತನೂ, ಪ್ರಕಾಶಕನೂ ಆದ ಶ್ರೀಹರಿಗೆ ಅನೇಕ ವಂದನೆಗಳೆಂದು ದೇವತೆಗಳು ಹೊಗಳಿದರು.

|| ಸನತ್ಕುಮಾರ ಉವಾಚ ||

ಏವಂ ಸ್ತುತೋ ವಾಸುದೇವಃ ಸುರಾಣಾಂ ದರ್ಶನಂ ದದೌ |
ಕಿಮರ್ಥಮಾಗತಾ ದೇವಾ ವಿಷ್ಣುನೋಕ್ತಾಸ್ತಮಬ್ರುವನ್ || ೧೨ ||

ಗಯಾಸುರಭಯಾದ್ದೇವ ರಕ್ಷಾಸ್ಮಾನ್ನಬ್ರವೀದ್ಧರಿಂ |
ಬ್ರಹ್ಮಾದ್ಯಾ ಯಾಂತು ತಂ ದೈತ್ಯಮಾಗಮಿಷ್ಯಾಮ್ಯಹಂ ತತಃ || ೧೩ ||

ಕೇಶವೋ ಗರುಡಾರೂಢೋ ವರಂ ದಾತುಂ ಗಯಾಸುರೇ |
ಸರ್ವೇ ಸ್ವಂ ಸ್ವಂ ಸಮಾಸ್ಥಾಯ ಯಯುರ್ವಾಹನಮುತ್ತಮಂ || ೧೪ ||

ಊಚುಸ್ತಂ ವಾಸುದೇವಾದ್ಯಾಃ ಕಿಮರ್ಥಂ ತಪ್ಯತೇ ತ್ವಯಾ |
ಸಂತುಷ್ಟಾಃ ಸ್ವಾಗತಾಃ ಸರ್ವೇ ವರಂ ಬ್ರೂಹಿ ಗಯಾಸುರ || ೧೫ ||

---

೧೨. ಸನತ್ಕುಮಾರನು ಹೇಳಿದನು:—ಸ್ವಾಮಿಯಾದ ಶ್ರೀಹರಿಯು ಹೀಗೆ ದೇವತೆಗಳಿಂದ ಸ್ತುತ್ಯನಾಗಿ ಅವರಿಗೆ ದರ್ಶನವನ್ನು ಕೊಟ್ಟು ಎಲೈ ದೇವೋತ್ತಮರೇ ನೀವು ಏತಕ್ಕಾಗಿ ಇಲ್ಲಿಗೆ ಬಂದಿರುವಿರೆಂದು ಕೇಳಲು ದೇವತೆಗಳು ಇಂತೆಂದರು.

೧೩. ಎಲೈ ಸ್ವಾಮಿಯೇ, ನಾವು ಗಯಾಸುರನ ಭಯದಿಂದ ಚಕಿತರಾಗಿ ಇಲ್ಲಿಗೆ ಬಂದಿದ್ದೇವೆ ನಮ್ಮನ್ನು ರಕ್ಷಿಸು ಎಂದು ಬೇಡಿದರು. ತರುವಾಯ ಶ್ರೀ ಹರಿಯು ಎಲೈ ದೇವೇಶರೇ, ನೀವು ಮೊದಲು ಆ ಗಯಾಸುರನ ಬಳಿಗೆ ಹೋಗಿ ಅನಂತರ ನಾನು ಅಲ್ಲಿಗೆ ಬರುವೆನೆಂದು ಹೇಳಿದನು.

೧೪. ಆಗ ಸಮಸ್ತರಾದ ದೇವತೆಗಳು ತಮ್ಮ ತಮ್ಮ ವಾಹನವನ್ನೇರಿಕೊಂಡು ಗಯಾಸುರನ ಸಮೀಪಕ್ಕೆ ಹೋದರು. ಶ್ರೀಹರಿಯೂ ಕೂಡ ಆ ಗಯಾಸುರನಿಗೆ ವರವನ್ನು ಕೊಡಲು ಗರುಡಾರೂಢನಾಗಿ ಗಯಾಕ್ಷೇತ್ರಕ್ಕೆ ಹೊರಟನು.

೧೫. ತರುವಾಯ ಶ್ರೀವಾಸುದೇವನೇ ಮೊದಲಾದ ಸಮಸ್ತ ದೇವತೆಗಳೂ ಅಸುರನ ಬಳಿಗೆ ಹೋಗಿ ಎಲೈ ಅಸುರೋತ್ತಮನೇ, ನೀನು ಏತಕ್ಕಾಗಿ ತಪಸ್ಸನ್ನು ಮಾಡುತ್ತಿದ್ದೀಯೇ ನಿನ್ನ ತಪಸ್ಸಿಗೆ ನಾವು ಪ್ರೀತರಾಗಿದ್ದೇವೆ. ನಿನಗೆ ಯಾವ ವರಗಳು ಬೇಕು ಅದನ್ನು ಕೊಡಲು ನಾವು ಇಲ್ಲಿಗೆ ಬಂದಿರುತ್ತೇವೆಯೆಂದು ಹೇಳಿದರು.

॥ ಗಯಾಸುರ ಉವಾಚ ॥

ಯದಿ ತುಷ್ಟಾಃ ಸ್ಥ ಮೇ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।
ಸರ್ವದೇವದ್ವಿಜಾತಿಭ್ಯೋ ಯಜ್ಞತೀರ್ಥಶಿಲೋಚ್ಚಯಾತ್ ॥ ೧೬ ॥

ದೇವೇಭ್ಯೋಽತಿ ಪವಿತ್ರೋಽಹ ಮೃಷಿಭ್ಯೋಽಪಿ ಶಿವವ್ರಯಾತ್ ।
ಮಂತ್ರೇಭ್ಯೋ ದೇವದೇವೇಭ್ಯೋ ಯೋಗಿಭ್ಯಶ್ಚಾಪಿ ಸರ್ವಶಃ ॥ ೧೭ ॥

ನ್ಯಾಸಿಭ್ಯಶ್ಚಾಪಿ ಕರ್ಮಿಭ್ಯೋ ಧರ್ಮಿಭ್ಯಶ್ಚ ತಥಾ ಪುನಃ ।
ಜ್ಞಾತಿಭ್ಯೋಽತಿಪವಿತ್ರೇಭ್ಯಃ ಪವಿತ್ರಃ ಸ್ಯಾಂ ಸದಾ ಸುರಾಃ ॥ ೧೮ ॥

ಪವಿತ್ರಮಸ್ತು ತಂ ದೇವಾ ದೈತ್ಯಮುಕ್ತ್ವಾ ಯಯುರ್ದಿವಂ ।
ದೈತ್ಯಂ ದೃಷ್ಟ್ವಾ ಚ ಸ್ಪೃಷ್ಟ್ವಾ ಚ ಸರ್ವೇ ಹರಿಪುರಂ ಯಯುಃ ॥ ೧೯ ॥

ಶೂನ್ಯಂ ಲೋಕತ್ರಯಂ ಜಾತಂ ಶೂನ್ಯಾ ಯಮಪುರೀ ಹ್ಯಭೂತ್ ।
ಯಮ ಇಂದ್ರಾದಿಭಿಃ ಸಾರ್ಧಂ ಬ್ರಹ್ಮಲೋಕಂ ತತೋಽಗಮತ್ ॥ ೨೦ ॥

---

೧೬-೧೮. ಗಯಾಸುರನು ಹೇಳಿದನು: –ಎಲೈ ಬ್ರಹ್ಮ, ವಿಷ್ಣು, ಮಹೇಶ್ವರಾದಿ ದೇವತೆಗಳಿರಾ! ನನ್ನ ತಪಸ್ಸಿನಿಂದ ನೀವು ನಿಜವಾಗಿಯೂ ಸಂತುಷ್ಟರಾಗಿದ್ದರೆ ಸಮಸ್ತರಾದ ದೇವತೆಗಳು, ದ್ವಿಜರು, ಯಜ್ಞಯಾಗಾದಿಗಳು, ತೀರ್ಥಗಳು, ಪರ್ವತಗಳು, ವೇದಗಳು, ಪವಿತ್ರರಾದ ಮಹರ್ಷಿಗಳು, ಶಿವಾಲಯಗಳು, ಮಂತ್ರಗಳು, ದೇವಾನುದೇವತೆಗಳು, ಯೋಗಿಗಳು, ಸನ್ಯಾಸಿಗಳು. ಕರ್ಮಠರು, ಧರ್ಮಿಷ್ಠರು, ಜ್ಞಾತಿಗಳು ಇವರೆಲ್ಲರಿಗಿಂತಲೂ ಪವಿತ್ರವಾದ ಸಕಲತೀರ್ಥಕ್ಷೇತ್ರಗಳಿಗಿಂತಲೂ ನಾನು ಪವಿತ್ರನಾಗಬೇಕು. ಈ ವರವನ್ನು ಕೊಡಿರೆಂದು ಗಯಾಸುರನು ಪ್ರಾರ್ಥಿಸಿಕೊಂಡನು.

೧೯. ಎಲೈ ಅಸುರೇಶನೇ, ನೀನು ಈ ಜಗತ್ತುಗಳಲ್ಲಿರುವ ಸರ್ವರಿಗಿಂತಲೂ ಸಕಲವಸ್ತುಗಳಿಗಿಂತಲೂ ಪವಿತ್ರತಮನಾಗು ಎಂದು ವರಗಳನ್ನು ಕೊಟ್ಟು ತಮ್ಮ ಸ್ವರ್ಗಲೋಕಕ್ಕೆ ಹೋದರು. ಆಗ ಶ್ರೀಮನ್ನಾರಾಯಣನೂ ಸಹ ಆ ದೈತ್ಯೇಂದ್ರನನ್ನು ನೋಡಿ ಅವನನ್ನು ಸ್ಪರ್ಶಿಸಿ ವರವನ್ನು ಕೊಟ್ಟು ತನ್ನ ವೈಕುಂಠಲೋಕಕ್ಕೆ ಹೊರಟುಹೋದನು. ಈ ಸಂಗತಿಯನ್ನರಿತ ತ್ರೈಲೋಕ್ಯವಾಸಿಗಳೆಲ್ಲರೂ ಅಲ್ಲಿಗೆ ಬಂದು ಅವನನ್ನು ಸ್ಪರ್ಶಮಾಡಿ ಪಾಪಮುಕ್ತರಾಗಿ ಮೋಕ್ಷವನ್ನು ಹೊಂದಿದರು.

೨೦. ಹೀಗೆ ಎಲ್ಲರೂ ಮೋಕ್ಷವನ್ನು ಪಡೆಯಲಾಗಿ ಲೋಕತ್ರಯಗಳೂ, ಯಮಲೋಕವೂ ಜನಗಳಿಲ್ಲದೆ ಶೂನ್ಯವಾದುವು. ಆಗ ಯಮದೇವನು ಇಂದ್ರಾದಿ ದೇವತೆಗಳೊಡನೆ ಬ್ರಹ್ಮದೇವನ ಸತ್ಯಲೋಕಕ್ಕೆ ಹೋದರು.

ಬ್ರಹ್ಮಾಣಮೂಚಿರೇ ದೇವಾ ಗಯೊಾಸುರವಿಲೋಪಿತಾಃ ।
ತ್ವಯಾ ದತ್ತೋಽಧಿಕಾರೋ ವೈ ಗೃಹಾಣ ತ್ವಂ ಪಿತಾಮಹ ॥ ೨೧ ॥

ಬ್ರಹ್ಮಾಬ್ರವೀತ್ತತೋ ದೇವಾನ್ ವ್ರಜಾಮೋ ತಷ್ಣುಮವ್ಯಯಂ ।
ಬ್ರಹ್ಮಾದಯೋಽಬ್ರುವನ್ವಿಷ್ಣುಂ ತ್ವಯಾ ದತ್ತವರೇಽಸುರೇ ॥ ೨೨ ॥

ತದ್ದರ್ಶನಾದ್ಯಯುಃ ಸ್ವರ್ಗಂ ಶೂನ್ಯಂ ಲೋಕತ್ರಯಂ ಹ್ಯಭೂತ್ ।
ದೇವೈರುಕ್ತೋ ವಾಸುದೇವೋ ಬ್ರಹ್ಮಾಣಂ ಸ ವಚೋಽಬ್ರವೀತ್ ॥ ೨೩ ॥

ಗತ್ವಾ ಸುರಂ ಪ್ರಾರ್ಥಯಸ್ವ ಯಜ್ಞಾರ್ಥಂ ದೇಹಿದೇಹಕಂ ।
ವಿಷ್ಣೂಕ್ತಃ ಸ ಸುರೋ ಬ್ರಹ್ಮಾ ಗತ್ವಾ ಪಶ್ಯನ್ಮಹಾಸುರಂ ॥ ೨೪ ॥

---

೨೧. ಗಯಾಸುರನಿಂದ ಅವಮಾನಿತರಾದ ದೇವತೆಗಳು ಬ್ರಹ್ಮದೇವನನ್ನು ಕುರಿತು ಎಲೈ ಬ್ರಹ್ಮದೇವನೇ, ನೀನು ಗಯಾಸುರನಿಗೆ ಕೊಟ್ಟಿರುವ ಅಧಿಕಾರವನ್ನು ಪುನಃ ಹಿಂದಕ್ಕೆ ವಾಪಸು ತೆಗೆದುಕೊಳ್ಳಬೇಕು ಎಂದು ಬೇಡಿಕೊಂಡರು.

೨೨-೨೩. ತರುವಾಯ ಬ್ರಹ್ಮದೇವನು ದೇವತೆಗಳನ್ನು ಕುರಿತು ನಾವು ಮಹಾತ್ಮನೂ, ಸ್ವಾಮಿಯೂ ಆದ ಶ್ರೀಹರಿಯ ಬಳಿಗೆ ಹೋಗೋಣ ಮತ್ತು ಪ್ರಾರ್ಥಿಸೋಣವೆನಲು, ಹಾಗೆಯೇ ಎಲ್ಲರೂ ಶ್ರೀಹರಿಯ ಬಳಿಗೆ ಹೋದರು. ಎಲೈ ಶ್ರೀಹರಿಯೇ ನೀನು ಕೊಟ್ಟಿರುವ ವರದಿಂದ ಆ ಗಯಾಸುರನು ತನ್ನ ದರ್ಶನಕ್ಕೆ ಬಂದ ಸರ್ವರಿಗೂ ಮೋಕ್ಷವನ್ನು ದಯಪಾಲಿಸಿರುವನು. ಇದರಿಂದ ಮೂರುಲೋಕಗಳೂ ಯಮಪುರಿಯೂ ಶೂನ್ಯವಾಗಿವೆ. ಎಂದು ಹೇಳಿದರು. ತರುವಾಯ ಶ್ರೀಹರಿಯು ಬ್ರಹ್ಮದೇವನಿಗೆ ಇಂತೆಂದನು.

೨೪. ಎಲೈ ಬ್ರಹ್ಮನೇ, ನೀನು ಅವನಬಳಿಗೆಹೋಗಿ ಯಾಗವನ್ನು ಮಾಡಲು ನಿನ್ನ ಶರೀರವನ್ನು ದಾನಮಾಡಬೇಕೆಂದು ಬೇಡಿಕೋ ಎಂದು ಹೇಳಿದನು. ಅದರಂತೆಯೇ ಬ್ರಹ್ಮದೇವನು ಅವನ ಬಳಿಗೆಹೋಗಿ ಆ ಮಹಾಸುರನನ್ನು ನೋಡಿದನು.

ಗಯಾಸುರೋಽಬ್ರವೀದ್ದೃಷ್ಟ್ವಾ ಬ್ರಹ್ಮಾಣಂ ತ್ರಿದಶೈಃ ಸಹ ।
ಸಂಪೂಜ್ಯೋಽರ್ಘ್ಯಾದ್ಯೈ ವಿಧಿವತ್ಪ್ರಣತಃ ಶ್ರದ್ಧಯಾನ್ವಿತಃ ॥ ೨೫ ॥

॥ ಗಯಾಸುರ ಉವಾಚ ॥

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ।
ಯದಾಗತೋಽತಿಥಿರ್ಬ್ರಹ್ಮಾ ಸರ್ವಂ ಪ್ರಾಪ್ತಂ ಮಯಾದ್ಯ ವೈ ॥ ೨೬ ॥

ಯೋಗಿನ್ಯೋಗಾಂಗವಿತ್ಸರ್ವಲೋಕಸ್ವಾಮಿನ್ಪಿತರ್ಗುರೋ ।
ಯದರ್ಥಮಾಗತೋ ಬ್ರಹ್ಮಂಸ್ತತ್ಕಾರ್ಯಂ ಕರವಾಣ್ಯಹಂ ॥ ೨೭ ॥

॥ ಬ್ರಹ್ಮೋವಾಚ ॥

ಪೃಥಿವ್ಯಾಂ ಯಾನಿ ತೀರ್ಥಾನಿ ದೃಷ್ಟಾನಿ ಭ್ರಮತಾ ಮಯಾ ।
ಯಜ್ಞಾರ್ಥಂ ನ ತು ತೇ ತಾನಿ ಪವಿತ್ರಾಣಿ ಶರೀರತಃ ॥ ೨೮ ॥

---

೨೫. ತರುವಾಯ ಗಯಾಸುರನು ದೇವತೆಗಳಿಂದಸಹಿತನಾಗಿ ಬಂದಿರುವ ಬ್ರಹ್ಮದೇವನಿಗೆ ಅರ್ಘ್ಯಪಾದ್ಯಾದಿಗಳಿಂದ ವಿಧಿವತ್ತಾಗಿಯೂ, ಶ್ರದ್ಧೆಯಿಂದಲೂ, ಪೂಜಿಸಿ ಇಂತೆಂದನು.

೨೬. ಗಯಾಸುರನು ಹೇಳಿದನು :—ಬ್ರಹ್ಮದೇವನು ಸಮಸ್ತರಾದ ದೇವತೆಗಳೊಡನೆ ಅತಿಥಿಯಾಗಿ ನನ್ನ ಬಳಿಗೆ ಬಂದಿರುವುದರಿಂದ ನನ್ನ ಜನ್ಮವು ಸಾರ್ಥಕವಾಯಿತು. ನನ್ನ ತಪಸ್ಸು ಈಗ ಸಫಲವಾಯಿತು. ನನ್ನ ಸಕಲ ಮನೋರಥಗಳು ಸಿದ್ಧವಾದುವು.

೨೭. ಯೋಗಿವರ್ಯನೂ, ಯೋಗಾಂಗಗಳನ್ನು ತಿಳಿದವನೂ, ಸರ್ವಲೋಕಸ್ವಾಮಿಯೂ, ತಂದೆಯೂ, ಗುರುವೂ ಆದ ಎಲೈ ಬ್ರಹ್ಮದೇವನೇ, ನೀನು ಏತಕ್ಕಾಗಿ ಇಲ್ಲಿಗೆ ಬರೋಣವಾಗಿದೆ. ಆ ಕಾರ್ಯವನ್ನು ನಾನು ಖಂಡಿತವಾಗಿಯೂ ನೆರವೇರಿಸಿ ಕೊಡುತ್ತೇನೆಂದು ಗಯಾಸುರನು ಬ್ರಹ್ಮನಿಗೆ ಹೇಳಿದನು.

೨೮–೨೯. ಬ್ರಹ್ಮದೇವನು ಹೇಳಿದನು :—ಎಲೈ ಅಸುರೋತ್ತಮನೇ ನಾನು ಈ ಭೂಮಂಡಲದಲ್ಲಿ ಅಲೆದಾಡಿ ಯಜ್ಞವನ್ನು ಮಾಡುವುದಕ್ಕಾಗಿ ಹುಡಿಕಿ ನೋಡಿದರೂ ನಿನ್ನ ದೇಹಕ್ಕಿಂತಲೂ ಅತಿ ಪವಿತ್ರವಾದ ಬೇರೊಂದು ಸ್ಥಾನವು ನನಗೆ

ತ್ವಯಾ ದೇಹೇ ಪವಿತ್ರತ್ವಂ ಪ್ರಾಪ್ತಂ ವಿಷ್ಣು ಪ್ರಸಾದತಃ ।
ಅತಃ ಪವಿತ್ರಂ ದೇಹಂ ತ್ವಂ ಯಜ್ಞಾರ್ಥಂ ದೇಹಿ ಮೇಽಸುರ || ೨೯ ||

॥ ಗಯಾಸುರ ಉವಾಚ ॥

ಧನ್ಯೋಽಹಂ ದೇವದೇವೇಶ ಯದ್ದೇಹಂ ಪ್ರಾರ್ಥ್ಯಸೇ ತ್ವಯಾ ।
ಪಿತೃವಂಶಃ ಕೃತಾರ್ಥೋಽಮೇ ದೇಹೇ ಯಾಗಂ ಕರೋಷಿ ಚೇತ್ .|| ೩೦ ||

ತ್ವಯೈವೋತ್ಪಾದಿತೋ ದೇಹಃ ಪ್ರವಿತ್ರಸ್ತು ತ್ವಯಾ ಕೃತಃ ।
ಸರ್ವೇಷಾಮುಪಕರಾಯ ಯಾಗೋಽವಶ್ಯಂ ಭವಿಷ್ಯತಿ || ೩೧ ||

ಇತ್ಯುಕ್ತ್ವಾ ಸೋಽಪತದ್ಭೂಮೌ ಶ್ವೇತಕಲ್ಪೇ ಗಯಾಸುರಃ ।
ನೈಋತೀಂ ದಿಶಮಾಶ್ರಿತ್ಯ ತದಾ ಕೋಲಾಹಲೇ ಗಿರೌ || ೩೨ ||

---

ದೊರೆಯಲಿಲ್ಲ. ನಿನ್ನ ದೇಹವು ಶ್ರೀಹರಿಯ ಅನುಗ್ರಹದಿಂದ ಅತಿ ಪವಿತ್ರವಾಗಿದೆ. ಆದುದರಿಂದ ಯಾಗಮಾಡಲು ಅತ್ಯಂತ ಪವಿತ್ರವಾದ ನಿನ್ನ ದೇಹವನ್ನು ನನ್ನ ಯಾಗಕ್ಕಾಗಿ ಕೊಡಬೇಕೆಂದು ಕೇಳಿದನು.

೩೦. ಗಯಾಸುರನು ಹೇಳಿದನು:—ದೇವದೇವೇಶನಾದ ಎಲೈ ಬ್ರಹ್ಮನೇ, ನೀನು ನನ್ನ ದೇಹವನ್ನು ಯಾಗಕ್ಕಾಗಿ ಪ್ರಾರ್ಥಿಸುವುದರಿಂದ ನಾನು ಧನ್ಯನಾದೆನು. ನನ್ನ ವಂಶವು, ಪಿತೃಗಳೂ, ಕೃತಾರ್ಥರಾದರು. ಇದರಿಂದ ನಮ್ಮ ವಂಶದವರು ತೃಪ್ತರಾಗುವರು. ಎಂದು ಹೇಳಿದನು.

೩೧. ಎಲೈ ಬ್ರಹ್ಮದೇವನೇ, ನೀನೇ ಈ ನನ್ನ ಶರೀರವನ್ನು ಸೃಷ್ಟಿಸಿ ಅದಕ್ಕೆ ಪವಿತ್ರತೆಯನ್ನು ಕೊಟ್ಟಿರುತ್ತೀ. ಇಂತಹ ಪವಿತ್ರವಾದ ಶರೀರದಲ್ಲಿ ನೀನು ಯಾಗ ಮಾಡುವುದಾದರೆ ಖಂಡಿತವಾಗಿಯೂ ಕೊಡುತ್ತೇನೆಂದು ಗಯಾಸುರನು ಬ್ರಹ್ಮನಿಗೆ ಹೇಳಿದನು.

೩೨. ಗಯಾಸುರನು ಹೀಗೆ ಹೇಳಿ ಶ್ವೇತವರಾಹ ಕಲ್ಪದಲ್ಲಿ ಕೋಲಾಹಲ ನಾಮಕವೂ, ಪವಿತ್ರವೂ ಆದ ಪರ್ವತದಲ್ಲಿ ನೈಋತ್ಯದಿಕ್ಕನ್ನು ಆಶ್ರಯಿಸಿ ನೆಲದಮೇಲೆ ಮಲಗಿದನು.

ಶಿರಃ ಕೃತ್ವೋತ್ತರೇ ದೈತ್ಯಃ ಪಾದೌ ಕೃತ್ವಾ ತು ದಕ್ಷಿಣೇ ।
ಬ್ರಹ್ಮಾ ಸಂಭೃತಸಂಭಾರೋ ಮಾನಸಾನ್ಸೃತ್ವಿಜೋಽಸೃಜತ್ ॥ ೩೩ ॥

ಅಗ್ನಿಶರ್ಮಾಣಮಮೃತಂ ಶೌನಕಂ ಯೊಂಜಲಿಂ ಮೃದುಂ ।
ಕುಮುಥಿಂ ವೇದಕೌಂಡಿಲ್ಯಂ ಹಾರೀತಂ ಕಾಶ್ಯಪಂ ಕೃಪಂ ॥ ೩೪ ॥

ಗರ್ಗಂ ಕೌಶಿಕವಾಸಿಷ್ಠೌ ಮುನಿಂ ಭಾರ್ಗವಮವ್ಯಯಂ ।
ವೃದ್ಧಂ ಪರಾಶರಂ ಕಣ್ವಂ ಮಾಂಡವ್ಯಂ ಶ್ರುತಿಕೇವಲಂ ॥ ೩೫ ॥

ಶ್ವೇತಂ ಸುತಾಲಂ ದಮನಂ ಸುಹೋತ್ರಂ ಕಂಕಮೇವ ಚ ।
ಲೌಕಾಕ್ಷಿಂ ಚ ಮಹಾಬಾಹುಂ ಜೈಗೀಷವ್ಯಂ ತಥೈವ ಚ ॥ ೩೬ ॥

ದಧಿಪಂಚಮುಖಂ ವಿಪ್ರಮೃಷಭಂ ಕರ್ಕಮೇವ ಚ ।
ಕಾತ್ಯಾಯನಂ ಗೋಭಿಲಂ ಚ ಮುನಿಮುಗ್ರ ಮಹಾವ್ರತಂ ॥ ೩೭ ॥

ಸುಪಾಲಕಂ ಗೌತಮಂ ಚ ತಥಾ ವೇದಶಿರೋವ್ರತಂ ।
ಜಟಾಮಾಲಿನಮವ್ಯಗ್ರಂ ಚಾಟುಹಾಸಂ ಚ ದಾರುಣಂ ॥ ೩೮ ॥

---

೩೩. ಆಗ ಗಯಾಸುರನು ಶಿರಸ್ಸನ್ನು ಉತ್ತರಕ್ಕೂ, ಎರಡುಕಾಲುಗಳನ್ನು ದಕ್ಷಿಣಕ್ಕೂ ಇಟ್ಟುಕೊಂಡು ಮಲಗಿದನು. ತರುವಾಯ ಬ್ರಹ್ಮದೇವನು ಸಕಲಸಾಮಗ್ರಿಗಳನ್ನೂ ಸಿದ್ಧಮಾಡಿಕೊಂಡು ಮನಸ್ಸಿನಿಂದಲೇ ಋತ್ವಿಜರನ್ನು ಸೃಷ್ಟಿಸಿದನು.

೩೪–೩೯. ತರುವಾಯ ಅಗ್ನಿಶರ್ಮ, ಅಮೃತ, ಶೌನಕ, ಯೊಂಜಲಿ, ಮೃದು, ಕುಮುಥ, ವೇದಕೌಂಡಿಲ್ಯ, ಹಾರೀತ, ಕಾಶ್ಯಪ, ಕೃಪ, ಗರ್ಗ, ಕೌಶಿಕ, ವಸಿಷ್ಠ, ಭಾರ್ಗವ, ವೃದ್ಧ, ಪರಾಶರ, ಕಣ್ವ, ಮಾಂಡವ್ಯ, ಶ್ರುತಿಕೇವಲ, ಶ್ವೇತ, ಸುತಾಲ, ದಮನ, ಸುಹೋತ್ರ, ಕಂಕ, ಮಹಾಬಾಹುವಾದ ಲೋಕಾಕ್ಷಿ, ಜೈಗೀಷವ್ಯ, ದಧಿಪಂಚಮುಖ, ವಿಪ್ರ, ಋಷಭ, ಕರ್ಕ, ಕಾತ್ಯಾಯನ ಗೊಭಿಲ, ಉಗ್ರ ಮಹಾವ್ರತವುಳ್ಳ ಮುನಿ, ಸುಪಾಲಕ, ಗೌತಮ, ವೇದಶಿರೋವ್ರತ, ಜಾಗರೂಕನಾದ ಜಟಾಮಾಲಿ, ಕ್ರೂರನಾದ ಚಾಟುಹಾಸ, ಆತ್ರೇಯ, ಅಂಗೀರಸ, ಮಹಾವ್ರತ

ಆತ್ರೇಯಂ ಚಾಪ್ಯಂಗಿರಸಮೌಪಮನ್ಯುಂ ಮಹಾವ್ರತಂ ।
ಗೋಕರ್ಣಂ ಚ ಗುಹಾವಾಸಂ ಶಿಖಂಡಿನಮುಮಾವ್ರತಂ ॥ ೩೯ ॥

ಏತಾನನ್ಯಾಂಶ್ಚ ವಿಪ್ರೇಂದ್ರಾನ್ ವೇಧಾ ಲೋಕಪಿತಾಮಹಃ ।
ಪರಿಕಲ್ಪ್ಯಾಕರೋದ್ಯಾಗಂ ಗಯಾಸುರಶರೀರಕೇ ॥ ೪೦ ॥

ಅಗ್ನಿಶರ್ಮಾಪಿ ಪಂಚಾಗ್ನೀನ್ಮುಖಾದೇತಾನಥಾ ಸೃಜತ್ ।
ದಕ್ಷಿಣಾಗ್ನಿಂ ಗಾರ್ಹಪತ್ಯಾಹವನೀಯೌ ತಥೋಽವ್ಯಯಃ ॥ ೪೧ ॥

ಸತ್ಯಾವಸಥ್ಯೌ ದೇವರ್ಷೇ ಯೇಷು ಯಜ್ಞಾಃ ಪ್ರತಿಷ್ಠಿತಾಃ ।
ಯಜ್ಞಸ್ಯ ಚ ಪ್ರತಿಷ್ಠಾರ್ಥಂ ವಿಪ್ರೇಭ್ಯೋ ದಕ್ಷಿಣಾಂ ದದೌ ॥ ೪೨ ॥

ಹುತ್ವಾ ಪೂರ್ಣಾಹುತಿಂ ಬ್ರಹ್ಮಾ ಸ್ನಾತ್ವಾ ಚಾವಭೃಥೇನ ತು ।
ಯಜ್ಞಯೂಪಂ ಸುರೈಃ ಸಾರ್ದ್ಧಂ ಸಮಾನೀಯ ವ್ಯರೋಪಯತ್ ॥ ೪೩ ॥

---

ವುಳ್ಳ ಔಪಮನ್ಯು, ಗುಹಾವಾಸಿಯಾದ ಗೋಕರ್ಣ, ಶಿಖಂಡಿ, ಉಮಾವ್ರತ ಇವರೇ ಮೊದಲಾದ ಮಹಾಮುನಿಗಳು ಬ್ರಹ್ಮದೇವನ ಸಂಕಲ್ಪಮಾತ್ರದಿಂದ ಯಾಗಕ್ಕಾಗಿ ಉದ್ಭವಿಸಿದರು.

೪೦. ಲೋಕಪಿತಾಮಹನಾದ ಬ್ರಹ್ಮದೇವನು ಹೀಗೆ ಮೇಲೆ ನಿರೂಪಿಸಿರುವ ಮಹರ್ಷಿಗಳನ್ನೂ, ಇತರರಾದ ಬ್ರಾಹ್ಮಣೋತ್ತಮರನ್ನೂ, ಸೃಷ್ಟಿಸಿ ಸಕಲ ಸಂಭಾರಗಳನ್ನೂ, ಸಿದ್ಧಪಡಿಸಿಕೊಂಡು ಗಯಾಸುರನ ಶರೀರದಲ್ಲಿ ಯಾಗವನ್ನು ಮಾಡಿದನು.

೪೧-೪೨. ಮುನೀಶ್ವರನಾದ ನಾರದನೇ, ಅಗ್ನಿಶರ್ಮನು ತನ್ನ ಮುಖದಿಂದ ದಕ್ಷಿಣಾಗ್ನಿ ಗಾರ್ಹಪತ್ಯ, ಆಹವನೀಯ, ಸತ್ಯ, ಅವಸಥ್ಯ ಎಂಬ ಪಂಚಾಗ್ನಿಗಳನ್ನು ಸೃಷ್ಟಿಸಿದನು. ಅವುಗಳಿಂದ ಯಾಗವನ್ನು ಸ್ಥಾಪಿಸಿದನು. ಯಾಗಸ್ಥಾಪನೆಗಾಗಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟನು.

೪೩. ಬ್ರಹ್ಮದೇವನು ಹೀಗೆ ಯಾಗವನ್ನು ಮಾಡಿ ಪೂರ್ಣಾಹುತಿಯನ್ನು ಕೊಟ್ಟು ದೇವತೆಗಳೊಡನೆ ಅವಭೃತಸ್ನಾನವನ್ನು ಮಾಡಿ ಯೂಪಸ್ತಂಭವನ್ನು ತಂದು ಸ್ಥಾಪಿಸಿದನು.

ಬ್ರಹ್ಮಣಃ ಸರಸಾಂ ಶ್ರೇಷ್ಠೋ ಸರಸ್ಯೇವಾಶ್ರಿತಂ ಶುಭಂ ।
ಚಲಿತಶ್ಚ ಕಿತೋ ಬ್ರಹ್ಮಾ ಧರ್ಮರಾಜಮಭಾಷತ ॥ ೪೪ ॥

ಜಾತಾ ಗೃಹೇ ತವ ಶಿಲಾ ಸಮಾನೀಯಾವಿಚಾರಯೇ ।
ದೈತ್ಯಸ್ಯ ಶೀಘ್ರಂ ಶಿರಸಿ ತಾಂ ಧಾರಯ ಮಮಾಜ್ಞಯಾ ॥ ೪೫ ॥

ನಿಶ್ಚಲಾರ್ಥಂ ಯಮಃ ಶ್ರುತ್ವಾ ಧಾರಯನ್ಮಸ್ತಕೇ ಶಿಲಾಂ ।
ಶಿಲಾಯಾಂ ಧಾರಿತಾಯಾಂ ತು ಸಶಿಲಶ್ಚಾಸುರೋಽಚಲತ್ ॥ ೪೬ ॥

ದೇವಾನೂಚೇಽಥ ರುದ್ರಾದೀನ್‌ಚ್ಛಿಲಾಯಾಂ ನಿಶ್ಚಲಾಃ ಕಿಲ ।
ತಿಷ್ಠಂ ತು ದೇವಾಃ ಸಕಲಾಸ್ತಥೇತ್ಯುಕ್ತ್ವಾ ಚ ತೇ ಸ್ಥಿತಾಃ ॥ ೪೭ ॥

---

೪೪. ಆಗ ಬ್ರಹ್ಮದೇವನು ಆ ಯೂಪಸ್ತಂಭವನ್ನು ಪವಿತ್ರವಾದ ಬ್ರಹ್ಮ ಸರೋವರದಲ್ಲಿ ಸ್ಥಾಪಿಸಿದನು. ಅನಂತರ ಯಮದೇವನ ಬಳಿಗೆ ಹೋಗಿ ಯೂಪ ಸ್ತಂಭವನ್ನು ಸ್ಥಾಪಿಸಿದರೂ ಈ ಗಯಾಸುರನು ಚಲಿಸುವನು ಎಂದು ಹೇಳಿದನು

೪೫. ಎಲೈ ಧರ್ಮದೇವನೇ, ನಿನ್ನ ಮಹತ್ತಾದ ವಧ್ಯಶಿಲೆಯು ಇರುವುದು ನನ್ನುಪದೇಶದಂತೆ ಅದನ್ನು ನೀನು ತಂದು ವಿಚಾರಮಾಡದೆ ಈ ಅಸುರನು ಚಲಿಸದೇ ಇರುವುದಕ್ಕಾಗಿ ಅವನ ಶಿರಸ್ಸಿನಲ್ಲಿ ಸ್ಥಾಪಿಸೆಂದು ಬ್ರಹ್ಮದೇವನು ಹೇಳಿದನು.

೪೬. ಯಮದೇವನು ಆ ವಚನವನ್ನು ಕೇಳಿ ಆ ಅಸುರನು ಚಲಿಸದೆ ಇರುವುದಕ್ಕಾಗಿ ಅವನ ಶಿರಸ್ಸಿನಮೇಲೆ ಆ ಬಂಡೆಯನ್ನು ಸ್ಥಾಪಿಸಿದನು. ಹಾಗೆ ಆ ಶಿಲೆಯು ಸ್ಥಾಪಿತವಾದರೂಕೂಡ ಅವನ ಶಿರಸ್ಸು ಶಿಲಾಸಹಿತವಾಗಿಯೇ ಚಲಿಸುತ್ತಿತ್ತು.

೪೭. ಅನಂತರ ಬ್ರಹ್ಮದೇವನು ರುದ್ರಾದಿದೇವತೆಗಳನ್ನು ನೋಡಿ ಈ ಮಹಾ ಶಿಲೆಯು ಸ್ಥಾಪಿತವಾದರೂ ಈ ಅಸುರನು ಚಲಿಸುತ್ತಿರುವನು. ಇವನು ಚಲಿಸದೇ ಯಿರುವುದಕ್ಕಾಗಿ ನೀವೆಲ್ಲರೂಕೂಡ ಇವನ ತಲೆಯಮೇಲೆ ನಿಂತುಕೊಳ್ಳಿರೆಂದು ಹೇಳಿ ದನು. ಅವರೆಲ್ಲರೂ ಹಾಗೆಯೇ ಆಗಲೆಂದು ಹೇಳಿ ಅವನ ಶಿರಸ್ಸಿನಮೇಲೆ ನಿಂತು ಕೊಂಡರು.

ದೇವಾಃ ಪಾದ್ಯೈರ್ಲಕ್ಷಯಿತ್ವಾ ತಥಾಪಿ ಚಲಿತೋಽಸುರಃ ।
ಬ್ರಹ್ಮಾಥ ವ್ಯಾಕುಲೋ ವಿಷ್ಣುಂ ಗತಃ ಕ್ಷೀರಾಬ್ಧಿಶಾಯಿನಂ ॥
ತುಷ್ಟಾವ ಪ್ರಣತೋ ಭೂತ್ವಾ ನತ್ವಾ ಚಾದ್ಯತ್ಯ ತಂ ಪ್ರಭುಂ ॥ ೪೮ ॥

॥ ಬ್ರಹ್ಮೋವಾಚ ॥

ಬ್ರಹ್ಮಾಂಡಸ್ಯ ಪತೇ ನಾಥ ನಮಾಮಿ ಜಗತಾಂ ಪತಿಂ ।
ಗತಿಂ ಕೀರ್ತಿಮತಾಂ ನೃಣಾಂ ಭುಕ್ತಿಮುಕ್ತಿಪ್ರದಾಯಕಂ ॥ ೪೯ ॥

ವಿಷ್ವಕ್ಸೇನೋಽಬ್ರವೀದ್ವಿಷ್ಣುಂ ದೇವ ತ್ವಾಂ ಸ್ತೌತಿ ಪದ್ಮಜಃ ।
ಹರಿರಾಹಾನಯ ತ್ವಂ ತಂ ವಿಷ್ಣೂಕ್ತಃ ಸ ಸಮಾನಯತ್ ॥
ಅಜಮಾಚೇ ಹರಿಃ ಕಸ್ಮಾದಾಗತೋಽಸಿ ವದಸ್ವ ತತ್ ॥ ೫೦ ॥

---

೪೮. ಆದರಂತೆ ದೇವತೆಗಳು, ತಮ್ಮ ಪಾದಗಳನ್ನು ಆ ಶಿಲೆಯಮೇಲೆ ಇಟ್ಟು ನಿಂತುಕೊಂಡರೂ ಸಹ ಆ ಶಿಲೆಯು ಪೂರ್ವದಹಾಗೆಯೇ ಚಲಿಸುತಿತ್ತು. ಆಗ ಬ್ರಹ್ಮನು, ಚಿಂತಾಕ್ರಾಂತನಾಗಿ ಕ್ಷೀರಸಾಗರಶಾಯಿಯಾದ ವಿಷ್ಣುವಿನ ಬಳಿಗೆ ಹೋಗಿ ವಂದಿಸಿ ಸ್ತೋತ್ರಮಾಡಿದನು.

೪೯. ಬ್ರಹ್ಮದೇವನು ಹೇಳಿದನು:—ಬ್ರಹ್ಮಾಂಡಪತಿಯೂ, ಜಗನ್ನಾಥನೂ, ಕೀರ್ತಿವಂತನೂ, ಪುರುಷರಿಗೆ ಭುಕ್ತಿಮುಕ್ತಿದಾಯಕನೂ, ಸದ್ಗತಿದಾಯಕನೂ ಆದ ಎಲೈ ಶ್ರೀಹರಿಯೇ, ನಾನು ನಿನಗೆ ನಮಸ್ಕರಿಸುವೆನೆಂದು ಹೇಳಿದನು.

೫೦. ಹೀಗೆ ಬ್ರಹ್ಮನು ಹೊಗಳಲಾಗಿ, ವಿಷ್ವಕ್ಸೇನನು ವಿಷ್ಣುವನ್ನು ನೋಡಿ ಓ ಸ್ವಾಮಿಯೇ, ಕಮಲಸಂಭೂತನಾದ ಬ್ರಹ್ಮದೇವನು ಬಂದು ಪ್ರಾರ್ಥಿಸುತ್ತಾನೆ. ಎನಲು, ಆಗ ಶ್ರೀಹರಿಯು ಬೇಗನೆ ಬ್ರಹ್ಮದೇವನನ್ನು ಕರೆತರುವಂತೆ ಆಜ್ಞಾಪಿಸಿದನು. ತರುವಾಯ ಬ್ರಹ್ಮನು ಬರಲು ಎಲೈ ಬ್ರಹ್ಮದೇವನೇ, ಬಂದ ಕಾರ್ಯವಾವುದು ತಿಳಿಸು ಎಂದು ಕೇಳಿದನು.

॥ ಬ್ರಹ್ಮೋವಾಚ ॥

ದೇವದೇವ ಕೃತೇ ಯಾಗೇ ಪ್ರಚಚಾಲ ಗಯಾಸುರಃ ।
ಶಿಲಾಯಾಂ ದೇವರೂಪಿಣ್ಯಾಂ ನ್ಯಸ್ತಾಯಾಂ ತಸ್ಯ ಮಸ್ತಕೇ ॥ ೫೧ ॥

ರುದ್ರಾದಿಷು ಚ ದೇವೇಷು ಸಂಸ್ಥಿತೇಷ್ವಸುರೋಽಚಲತ್ ।
ಇದಾನೀಂ ನಿಶ್ಚಲಾರ್ಥಂ ಹಿ ಪ್ರಸಾದಂ ಕುರು ಮಾಧವ ॥ ೫೨ ॥

ಬ್ರಹ್ಮಣೋ ವಚನಂ ಶ್ರುತ್ವಾ ಧ್ಯಾತ್ವಾ ಕೃಷ್ಣ ಸ್ವಶರೀರತಃ ।
ಮೂರ್ತಿಂ ದದೌ ನಿಶ್ಚಲಾರ್ಥಂ ಬ್ರಹ್ಮಣೇ ಭಗವಾನ್ ಹರಿಃ ॥ ೫೩ ॥

ಆನೀಯ ಮೂರ್ತಿಂ ಬ್ರಹ್ಮಾಪಿ ಶಿಲಾಯಾಂ ಸಮಧಾರಯತ್ ।
ತಥಾಪಿ ಚಲಿತಂ ವೀಕ್ಷ್ಯ ಪುನರ್ದೇವಮಥಾಹ್ವಯತ್ ॥ ೫೪ ॥

---

೫೧. ಬ್ರಹ್ಮದೇವನು ಹೇಳಿದನು:— ದೇವೋತ್ತಮನಾದ ಎಲೈ ಸ್ವಾಮಿಯೇ, ಗಯಾಸುರನ ದೇಹದ ಮೇಲೆ ಯಾಗವನ್ನು ಮಾಡಿ ದೇವರೂಪಿಯಾದ ಶಿಲೆಯನ್ನು ಶಿರಸ್ಸಿನಮೇಲೆ ಸ್ಥಾಪಿಸಿದರೂ ಅವನು ಈಗಲೂ ಚಲಿಸುತ್ತಿರುವನು.

೫೨. ಮತ್ತು ಇಂದ್ರಾದಿ ದೇವತೆಗಳು ಅವನ ಶಿರಸ್ಸಿನಮೇಲಿರುವ ಶಿಲಯು ಮೇಲೆ ನಿಂತರೂ, ಚಲಿಸುತ್ತಲೇ ಇರುವನು. ಅವನು ಚಲಿಸದೇ ಇರುವುದಕ್ಕಾಗಿ ನೀನು ಅನುಗ್ರಹಿಸಬೇಕೆಂದು ಬೇಡಿಕೊಂಡನು.

೫೩. ಆಗ ಸ್ವಾಮಿಯಾದ ಶ್ರೀಹರಿಯು ಬ್ರಹ್ಮನ ಮಾತನ್ನು ಕೇಳಿ ತನ್ನ ಶರೀರದಿಂದ ಒಂದು ಮುರ್ತಿಯನ್ನು ಸೃಷ್ಟಿಸಿ, ಆ ಅಸುರನು ಚಲಿಸದೇ ಇರುವುದಕ್ಕಾಗಿ ಬ್ರಹ್ಮನಿಗೆ ಕೊಟ್ಟನು.

೫೪. ಬ್ರಹ್ಮದೇವನು ಆ ಹರಿಯ ಮೂರ್ತಿಯನ್ನು ತಂದು, ಆ ಶಿಲೆಯ ಮೇಲೆಸ್ಥಾಪಿಸಿದರೂ ಸಹ ಅದು ಮತ್ತೆ ಚಲಿಸಿತು. ಆದನ್ನು ನೋಡಿ ಪಿತಾಮಹನು ಶ್ರೀ ಹರಿಗೆ ಇಂತೆಂದನು. ಎಲೈ ಸ್ವಾಮಿಯೇ, ನೀನೇ ಬಂದು ಸ್ಥಾಪಿಸಬೇಕೆಂದು ಬೇಡಿದನು.

ಆಗತ್ಯ ವಿಷ್ಣುಃ ಕ್ಷೀರೋಬ್ಧೇಃ ಶಿಲಾಯಾಂ ಸಂಸ್ಥಿತೋಽಭವತ್ ।
ಜನಾರ್ದನಾಭಿದಾನೇನ ಪುಂಡರೀಕೇತಿ ನಾಮತಃ ॥
ಶಿಲಾಯಾಂ ಚಲಿತಂ ವೀಕ್ಷ್ಯ ಪುನರ್ದೇವಮಥಾಹ್ವಯೇತ್ ॥ ೫೫ ॥

ನಿಶ್ಚಲಾರ್ಥಂ ಪಂಚಧಾಸೀಚ್ಛಿಲಾಯಾಂ ಪ್ರಪಿತಾಮಹಃ ।
ಪಿತಾಮಹೋಽಥ ಫಲ್ಗ್ವೀಶಃ ಕೇದಾರಃ ಕನಕೇಶ್ವರಃ ॥ ೫೬ ॥

ಬ್ರಹ್ಮಾ ಸ್ಥಿತಃ ಸ್ವಯಂ ತತ್ರ ಗಜರೂಪೀ ವಿನಾಯಕಃ ।
ಗಯಾದಿತ್ಯಶ್ಚೋತ್ತರಾರ್ಕೋ ದಕ್ಷಿಣಾರ್ಕಸ್ತ್ರಿಧಾ ರವಿಃ ॥ ೫೭ ॥

ಲಕ್ಷ್ಮೀಃ ಸೀತಾಭಿದಾನೇನ ಗೌರೀ ಚ ಮಂಗಲಾಹ್ವಯಾ ।
ಗಾಯತ್ರೀ ಚೈವ ಸಾವಿತ್ರೀ ತ್ರಿಸಂಧ್ಯಾ ಚ ಸರಸ್ವತೀ ॥ ೫೮ ॥

---

೫೫. ತರುವಾಯ ಶ್ರೀ ಮಹಾವಿಷ್ಣುವು ಕ್ಷೀರಸಾಗರದಿಂದ ಅಲ್ಲಿಗೆ ಬಂದು ಜನಾರ್ದನ ಮತ್ತು ಪುಂಡರೀಕವೆಂಬ ನಾಮಗಳಿಂದ ಪ್ರಖ್ಯಾತನಾಗಿ ಆ ಶಿಲಯಮೇಲೆ ಸ್ಥಿರವಾಗಿ ನಿಂತನು. ಮತ್ತು ಆ ಶಿಲೆಯು ಚಲಿಸದೇ ಇರುವುದಕ್ಕಾಗಿ ಹರಿಯು ಆದಿ ಗದಾಧರ ರೂಪನಾಗಿ ನಿಂತನು.

೫೬. ಬ್ರಹ್ಮದೇವನಿಗೆ ಜನಕನೂ, ಸ್ವಾಮಿಯೂ ಆದ ಶ್ರೀಹರಿಯು ಆ ಶಿಲೆಯು ಚಲಸದೇ ಇರುವುದಕ್ಕಾಗಿ ಬ್ರಹ್ಮ, ಫಲ್ಗು, ಈಶ, ಕೇದಾರ, ಕನಕೇಶ್ವರವೆಂಬ ಪಂಚರೂಪದಿಂದ ಅದರ ಮೇಲೆ ನಿಂತನು.

೫೭. ತರುವಾಯ ಬ್ರಹ್ಮನು ಗಜಮುಖಿಯಾದ ವಿನಾಯಕ ರೂಪದಿಂದ ಆ ಶಿಲೆಯಮೇಲೆ ನಿಂತನು. ಸೂರ್ಯದೇವನು ಗಯಾದಿತ್ಯ, ಉತ್ತರಾರ್ಕ, ದಕ್ಷಿಣಾರ್ಕ ವೆಂಬ ಮೂರುರೂಪಗಳಿಂದ ನಿಂತನು.

೫೮. ತರುವಾಯ ಲಕ್ಷ್ಮೀದೇವಿಯು ಸೀತಾನಾಮದಿಂದಲೂ ಪ್ರಖ್ಯಾತಳಾಗಿ ಅಲ್ಲಿ ನಿಂತಳು. ಅದರಂತೆ ಗಾಯಿತ್ರೀ, ಸಾವಿತ್ರಿ, ಸರಸ್ವತೀ, ತ್ರಿಸಂಧ್ಯಾದೇವಿ ಯರೂಕೂಡ ಆ ಬಂಡೆಯಮೇಲೆ ನಿಂತರು.

ಇಂದ್ರೋ ಬೃಹಸ್ಪತಿಃ ಪೂಷಾ ವಸವೋಷ್ಟೌ ಮಹಾಬಲಾಃ ।
ವಿಶ್ವೇದೇವಾಶ್ಚಾಶ್ವಿನೇಯೋ ಮಾರುತೋ ವಿಶ್ವನಾಯಕಃ ॥
ಸಯಕ್ಷೋರಗಗಂಧರ್ವಾಸ್ತಸ್ಥುರ್ದೇವಾಃ ಸ್ವಶಕ್ತಿಭಿಃ ॥ ೫೯ ॥

ಆದ್ಯಯಾ ಗದಯಾ ಚಾಸೌ ಯಸ್ಮಾದ್ದೈತ್ಯಃ ಸ್ಥಿರೀಕೃತಃ ।
ಸ್ಥಿತ ಇತ್ಯೇವ ಹರಿಣಾ ತಸ್ಮಾದಾದಿಗದಾಧರಃ ॥ ೬೦ ॥

ಊಚೇ ಗಯಾಸುರೋ ದೇವಾನ್ ಕಿಮರ್ಥಂ ವಂಚಿತೋ ಹ್ಯಹಂ ।
ಯಜ್ಞಾರ್ಥಂ ಬ್ರಹ್ಮಣೇ ದತ್ತಂ ಶರೀರಮಮಲಂ ಮಯಾ ॥ ೬೧ ॥

ಯತ್ಸರ್ವೈಃ ಪೀಡಿತೋತ್ಯರ್ಥಂ ಗದಯಾ ಹರಿಣಾ ತಥಾ ।
ಪೀಡಿತೋ ಯದ್ಯಹಂ ದೇವಾಃ ಪ್ರಸನ್ನಾಃ ಸಂತು ಸರ್ವದಾ ॥ ೬೨ ॥

---

೫೯. ಮತ್ತು ಇಂದ್ರ, ಬೃಹಸ್ಪತಿ, ಸೂರ್ಯ, ಮಹಾಬಲಿಷ್ಠರಾದ ಅಷ್ಟ ವಸುಗಳು, ವಿಶ್ವೇದೇವತೆಗಳು, ಅಶ್ವಿನೀದೇವತೆಗಳು, ಗಂಧರ್ವರು ಇವರೇ ಮೊದಲಾದ ದೇವತೆಗಳು ತಮ್ಮ ತಮ್ಮ ಶಕ್ತಿಯಿಂದ ಕೂಡಿ ಆ ಶಿಲೆಯಮೇಲೆ ನಿಂತರು.

೬೦. ಆದಿಯಾದ ಗದೆಯನ್ನು ಧರಿಸಿರುವ ಶ್ರೀಹರಿಯಿಂದ ಆ ಗಯಾಸುರನು ಸ್ಥಿರೀಕೃತನಾದನು. ಶ್ರೀಹರಿಯಿಂದ ಅವನು ನಿಶ್ಚಲವಾಗಿ ನಿಂತಿರುವುದರಿಂದ ಆ ಹರಿಯು ಆದಿಗದಾಧರನೆಂದು ಲೋಕವಿಖ್ಯಾತನಾದನು.

೬೧. ತರುವಾಯ ಗಯಾಸುರನು ದೇವತೆಗಳನ್ನು ನೋಡಿ ಓ ದೇವತೆಗಳಿರಾ ನೀವು ಏತಕ್ಕಾಗಿ ನನ್ನನ್ನು ವಂಚಿಸಿರುವಿರಿ. ನಾನು ಈ ನನ್ನ ನಿರ್ಮಲವಾದ ಶರೀರವನ್ನು ಯಾಗಕ್ಕಾಗಿ ಬ್ರಹ್ಮದೇವನಿಗೆ ದಾನಮಾಡಿರುವೆನು. ಶ್ರೀಹರಿಯ ಆಜ್ಞಾನುಸಾರವಾಗಿ ನಾನು ನಿಶ್ಚಲನಾಗಿರುವೆನೆಂದು ಹೇಳಿದನು.

೬೨. ಎಲೈ ಅಮರರೇ ನಾನು ನಿಮ್ಮಿಂದಲೂ, ಹರಿಯ ಗದಾಯುಧದಿಂದಲೂ, ಶ್ರೀಹರಿಯಿಂದಲೂ ಬಹಳವಾಗಿ ಪೀಡಿತನಾಗಿರುವೆನು. ಇಂತಹ ನನಗೆ ನೀವೆಲ್ಲರೂ ಪ್ರಸನ್ನರಾಗಿ ಅನುಗ್ರಹಿಸಿರೆಂದು ಬೇಡಿಕೊಂಡನು.

ಗದಾಧರಾದಯಸ್ತುಷ್ಟಾಃ ಪ್ರೋಚುಃ ಸಾರ್ಧಂ ಗಯಾಸುರಂ ।
ವರಂ ಬ್ರೂಹಿ ಪ್ರಸನ್ನಾಃ ಸ್ಮೋ ದೇವಾನೂಚೇ ಗಯಾಸುರಃ ॥ ೬೩ ॥

ಯಾವತ್ಪೃಥ್ವೀ ಪರ್ವತಾಶ್ಚ ಯಾವಚ್ಚಂದ್ರಾರ್ಕತಾರಕಾಃ ।
ತಾವಚ್ಛಿಲಾಯಾಂ ತಿಷ್ಠಂತು ಬ್ರಹ್ಮವಿಷ್ಣುಮಹೇಶ್ವರಾಃ ॥
ಅನ್ಯೇ ಚ ಸಕಲಾ ದೇವಾ ಮನ್ನಾಮ್ನಾ ಕ್ಷೇತ್ರಮಸ್ತು ವೈ ॥ ೬೪ ॥

ಪಂಚಕ್ರೋಶಂ ಗಯಾಕ್ಷೇತ್ರಂ ಕ್ರೋಶಮೇಕಂ ಗಯಾಶಿರಃ ।
ತನ್ಮಧ್ಯೇ ಸರ್ವತೀರ್ಥಾನಿ ಪ್ರಯಚ್ಛಂತು ಹಿತಂ ನೃಣಾಂ ॥ ೬೫ ॥

ಸ್ನಾನಾದಿತರ್ಪಣಂ ಕೃತ್ವಾ ಪಿಂಡದಾನಾತ್ಫಲಾಧಿಕಂ ।
ಮಹಾತ್ಮಾವೈ ಸಹಸ್ರಂ ಚ ಕುಲಾನಾಂ ಚೋದ್ಧರೇನ್ನರಃ ॥ ೬೬ ॥

---

೬೩. ಆಗ ಹರಿಯೇ ಮೊದಲಾದ ದೇವತೆಗಳು ಪ್ರೀತರಾಗಿ ಒಟ್ಟುಗೂಡಿ ಗಯಾಸುರನಿಗೆ ಇಂತೆಂದರು. ಎಲೈ ಅಸುರೋತ್ತಮನೇ, ನಾವು ನಿನಗೆ ಸದಾ ಪ್ರಸನ್ನರಾಗಿರುವೆವು. ನೀನು ಬೇಕಾದ ವರವನ್ನು ಬೇಡಿಕೋ ಕೊಡುತ್ತೇವೆ ಎನಲು ಗಯಾಸುರನು ವರವನ್ನು ಬೇಡಿದನು.

೬೪. ಎಲೈ ದೇವೋತ್ತಮರೇ, ಎಲ್ಲಿಯವರೆಗೂ ಈ ಭೂಮಿ, ಪರ್ವತಗಳು, ಸೂರ್ಯ, ಚಂದ್ರರು. ನಕ್ಷತ್ರಗಳು ಇರುತ್ತವೆಯೋ ಅಲ್ಲಿಯವರೆಗೂ ಬ್ರಹ್ಮ,ವಿಷ್ಣು, ಮಹೇಶ್ವರ ಮತ್ತು ಇತರರಾದ ದೇವತೆಗಳು ಇಂತಹ ನೀವೆಲ್ಲರೂ ಈ ಶಿಲೆಯಮೇಲೆ ಸದಾ ವಾಸಮಾಡಿರಿ. ಈ ಕ್ಷೇತ್ರವೂಸಹ ನನ್ನ ನಾಮದಿಂದಲೇ ಪ್ರಖ್ಯಾತವಾಗಲೆಂದು ಬೇಡಿಕೊಂಡನು.

೬೫. ಈ ಗಯಾಸುರನ ಕ್ಷೇತ್ರವು ಪಂಚಕೋಶಗಳು ಎಂದರೆ ಹದಿನೈದು ಹರಿದಾರಿ ೪೫ ಮೈಲು ವಿಸ್ತಾರವಾಗಿದೆ. ಆ ಗಯಾಸುರನ ಶಿರೋಭಾಗವು ಮೂರು ಹರಿದಾರಿ; ೧೫ ಹದಿನೈದು ಮೈಲು ವಿಸ್ತಾರವಾಗಿದೆ. ಈ ಮಧ್ಯದಲ್ಲಿರುವ ಸಕಲ ತೀರ್ಥಗಳೂ ಪ್ರಜೆಗಳಿಗೆ ಕಲ್ಯಾಣದಾಯಕವಾಗಲೆಂದು ಬೇಡಿದನ .

೬೬. ಯಾವ ಪುರುಷನು ಈ ಗಯಾಕ್ಷೇತ್ರದಲ್ಲಿ ಸ್ನಾನ ಜಪತಪಾದಿಗಳನ್ನೂ, ತರ್ಪಣವನ್ನೂ, ಪಿಂಡದಾನವನ್ನೂ ಮಾಡುವನೋ ಆ ಮಹಾತ್ಮನು ಸಹಸ್ರಕುಲಗಳನ್ನು ಉದ್ಧಾರಮಾಡುವನು.

ವ್ಯಕ್ತಾವ್ಯಕ್ತಸ್ವರೂಪೇಣ ಯೂಯಂ ತಿಷ್ಠತ ಸರ್ವದಾ ।
ಗದಾಧರಃ ಸ್ವಯಂ ಲೋಕಾದ್ಭಯಾತ್ಸರ್ವಾಘನಾಶನಾತ್ ॥ ೧೭ ॥

ಶ್ರಾದ್ಧಂ ಸಪಿಂಡಕಂ ಯೇಷಾಂ ಬ್ರಹ್ಮಲೋಕಂ ಪ್ರಯಾಂತು ತೇ ।
ಬ್ರಹ್ಮಹತ್ಯಾಧಿಕಂ ಪಾಪಂ ವಿನಶ್ಯತು ಚ ಸೇವಿನಾಂ ॥ ೧೮ ॥

ನೈಮಿಷಂ ಪುಷ್ಕರಂ ಗಂಗಾ ಪ್ರಯಾಗಶ್ಚಾವಿಮುಕ್ತಿಕಂ ।
ಏತಾನ್ಯನ್ಯಾನಿ ತೀರ್ಥಾನಿ ದಿವಿ ಭುವ್ಯಂತರಿಕ್ಷತಃ ॥
ಸಮಾಯಾಂತು ಸದಾ ನೃಣಾಂ ಪ್ರಯಚ್ಛಂತು ಹಿತಂ ಸುರಾಃ ॥ ೧೯ ॥

ಕಿಂಬಹೂಕ್ತ್ಯಾ ಸುರಗಣಾ ಯುಷ್ಮಾಸ್ವೇಕಾಪಿ ದೇವತಾ ।
ಚೇನ್ನ ತಿಷ್ಠೇದಹಂ ಚಾಪಿ ಸಮಯಃ ಪ್ರತಿಪಾಲ್ಯತಾಂ ॥ ೨೦ ॥

---

೧೭. ಓ ದೇವತೆಗಳಿರಾ ನೀವೆಲ್ಲರೂ ವ್ಯಕ್ತಾವ್ಯಕ್ತ ಸ್ವರೂಪಗಳಿಂದ ನನ್ನಲ್ಲಿ ಸದಾ ಸನ್ನಿಹಿತರಾಗಿ ವಾಸಮಾಡಿರಿ. ಗದಾಧರನಾದ ಶ್ರೀಹರಿಯು ಇಲ್ಲಿದ್ದುಗೊಂಡು ಸಕಲ ಪುರುಷರ ಭಯವನ್ನೂ, ಪಾಪಗಳನ್ನೂ, ಪರಿಹರಿಸಲೆಂದು ಬೇಡಿದನು.

೧೮. ಈ ಕ್ಷೇತ್ರದಲ್ಲಿ ಯಾರು ಪಿಂಡದಾನಪೂರ್ವಕವಾಗಿ ಶ್ರಾದ್ಧಕರ್ಮವನ್ನು ಭಕ್ತಿಯಿಂದ ಮಾಡುವರೋ ಅವರ ಪಿತೃಗಳು ಸತ್ಯಲೋಕವನ್ನು ಹೊಂದಲಿ. ಶ್ರಾದ್ಧಾದಿಕರ್ಮಗಳನ್ನು ಮಾಡಿದರೆ ಬ್ರಹ್ಮಹತ್ಯಾದಿಸಕಲ ಪಾಪಗಳು ಪರಿಹಾರವಾಗಲೆಂದು ಪ್ರಾರ್ಥಿಸಿದನು.

೧೯. ನೈಮಿಷಕ್ಷೇತ್ರ, ಪುಷ್ಕರಕ್ಷೇತ್ರ, ಗಂಗಾ ಮತ್ತು ಪ್ರಯಾಗ ಈ ನಾಲ್ಕು ಮುಕ್ತಿದಾಯಕವಾಗಿವೆ. ದೇವತೆಗಳು ಆಕಾಶದಿಂದ ದಿವ್ಯವಾದ ಈ ಕ್ಷೇತ್ರಗಳಿಗೆ ಬಂದು ಸಕಲ ಪುರುಷರಿಗೂ ಸಕಲಾಭೀಷ್ಟಗಳನ್ನು ಕೊಡಲೆಂದನು.

೨೦. ಎಲೈ ಸುರಪುಂಗವರೇ ಅತಿ ಪ್ರಸಂಗದಿಂದೇನುಪ್ರಯೋಜನ? ಮಹಾತ್ಮರಾದ ನಿಮ್ಮಲ್ಲಿ ಯಾರೊಬ್ಬರಾದರೂ ಇರದಿದ್ದರೆ ನಾನು ಸಹ ಇಲ್ಲಿ ಇರಲಾರೆನು. ಹೀಗೆ ಅನುಗ್ರಹಿಸಬೇಕೆಂದು ಬೇಡಿಕೊಂಡನು.

ಗಯೋಸುರವಚಃ ಶ್ರುತ್ವಾ ಪ್ರೋಚುರ್ವಿಷ್ಣ್ವಾದಯಃ ಸುರಾಃ ।
ತ್ವಯಾ ಯತ್ಪ್ರಾರ್ಥಿತಂ ಸರ್ವಂ ತದ್ಭವಿಷ್ಯತ್ಯಸಂಶಯಂ ॥ ೭೧ ॥

ಅಸ್ಮತ್ಪಾದಾನರ್ಚಯಿತ್ವಾ ಯಾಸ್ಯಂತಿ ಪರಮಾಂ ಗತಿಂ ।
ದೇವೈರ್ದತ್ತವರೋ ದೈತ್ಯೋ ಹರ್ಷಿತೋ ನಿಶ್ಚಲೋಽಭವತ್ ॥ ೭೨ ॥

ಸ್ಥಿತೇಷು ಚೈವ ದೇವೇಷು ಬ್ರಾಹ್ಮಣೇಭ್ಯೋ ದದಾವಜಃ ।
ಗ್ರಾಮಾಂಶ್ಚ ಪಂಚಪಂಚಾಶತ್ಪಂಚಕ್ರೋಶೀಂ ಗಯಾಂ ತಥಾ ॥
ಗೃಹಾಣ ಕೃತ್ವಾ ದದೌ ದಿವ್ಯಾನ್ ಸರ್ವೋಪಸ್ಕರಸಂಯುತಾನ್ ॥ ೭೩ ॥

ಕಾಮಧೇನುಂ ಕಲ್ಪವೃಕ್ಷಂ ಪಾರಿಜಾತಾದಿಕಾಂಸ್ತರೂನ್ ।
ಮಹಾನದೀಂ ಕ್ಷೀರವಹಾಂ ಘೃತಕುಲ್ಯಾಸ್ತಥೈವ ಚ ॥ ೭೪ ॥

ಮಧುಸ್ರವಾಂ ಮಧುಕುಲ್ಯಾಂ ದಧ್ಯಾದ್ಯಾಢ್ಯ ಸರಾಂಸಿ ಚ ।
ಸುವರ್ಣದೀರ್ಘಿಕಾಂ ಚೈವ ಬಹೂನನ್ನಾದಿಪರ್ವತಾನ್ ॥ ೭೫ ॥

---

೭೧. ತರುವಾಯ ವಿಷ್ಣ್ವಾದಿದೇವತೆಗಳು ಆ ಗಯಾಸುರನ ಮಾತುಗಳನ್ನು ಕೇಳಿ ಎಲೈ ಅಸುರೋತ್ತಮನೇ ನೀನು ಯಾವ ವರಗಳನ್ನು ಕೇಳಿರುವಿಯೋ ಅವೆಲ್ಲವೂ ನಿಜವಾಗಿಯೂ ನೆರವೇರಲೆಂದು ಹೇಳಿ ಅವನಿಗೆ ವರಗಳನ್ನು ಕೊಟ್ಟರು.

೭೨. ಪುರುಷರು ನಮ್ಮ ಪಾದಗಳನ್ನು ಅರ್ಚಿಸಿದರೆ ಪರಮಪದವಿಯನ್ನು ಹೊಂದಲೆಂದು ದೇವತೆಗಳು ವರಗಳನ್ನು ಕೊಡಲಾಗಿ ಸಂತುಷ್ಟನಾದ ಗಯಾಸುರನು ನಿಶ್ಚಲನಾದನು.

೭೩. ದೇವತೆಗಳು ಹೀಗೆ ವರವನ್ನು ಕೊಟ್ಟು ಅಲ್ಲಿಯೇ ನಿಲ್ಲಲಾಗಿ, ಬ್ರಹ್ಮದೇವನು ಬ್ರಾಹ್ಮಣರಿಗೆ ಐವತ್ತೈದುಗ್ರಾಮಗಳನ್ನೂ, ಪಂಚಕ್ರೋಶವಿಸ್ತೀರ್ಣವಾದ ಗಯಾಕ್ಷೇತ್ರವನ್ನೂ, ಸರ್ವಸಮೃದ್ಧಿಗಳಿಂದ ಭರಿತವೂ, ನೂತನವೂ ಆದ ದಿವ್ಯಭವನಗಳನ್ನೂ ದಾನಮಾಡಿದನು.

೭೪–೭೬. ಮತ್ತು ಬ್ರಹ್ಮದೇವನು ಬ್ರಾಹ್ಮಣರಿಗೆ ಕಾಮಧೇನು, ಕಲ್ಪವೃಕ್ಷ, ಪಾರಿಜಾತ ಇವೇಮೊದಲಾದ ದಿವ್ಯ ವೃಕ್ಷಗಳನ್ನೂ, ಮಹಾಕ್ಷೀರ ನದಿಯನ್ನೂ, ಘೃತದ ಕಾಲುವೆಗಳನ್ನೂ, ಜೇನುವಿನ ಪ್ರವಾಹವನ್ನೂ, ಮೊಸರಿನ ಸರಸ್ಸುಗಳನ್ನೂ, ಅಸಂಖ್ಯಾತಗಳಾದ ಅನ್ನಾದಿಪರ್ವತಗಳನ್ನೂ, ಭಕ್ಷ್ಯಭೋಜ್ಯ ಫಲಗಳರಾಶಿಯನ್ನೂ

ಭಕ್ಷ್ಯಭೋಜ್ಯಫಲಾದೀಂಶ್ಚ ಸರ್ವಂ ಬ್ರಹ್ಮಾ ಸೃಜನ್ದದೌ ।
ನ ಯಾಚಯಧ್ವಂ ವಿಪ್ರೇಂದ್ರಾ ಅನ್ಯಾನುಕ್ತ್ವಾ ದದಾವಜಃ ॥ ೭೬ ॥

ದತ್ವಾ ಯಯೌ ಬ್ರಹ್ಮಲೋಕಂ ನತ್ವಾ ಹ್ಯಾದಿಗದಾಧರಂ ।
ಧರ್ಮಾರಣ್ಯೇ ತತ್ರ ಧರ್ಮಂ ಯಾಜಯಿತ್ವಾ ಯಯಾಚಿರೇ ॥ ೭೭ ॥

ಧರ್ಮಯೋಗೇ ಚ ಲೋಭಾದ್ವೈ ಪ್ರತಿಗೃಹ್ಯ ಧನಾಧಿಕಂ ।
ತತೋ ಬ್ರಹ್ಮಾ ಸಮಾಗತ್ಯ ಬ್ರಾಹ್ಮಣಾಂಸ್ತಾಂಶಶಾಪ ಹ ॥ ೭೮ ॥

ಕೃತವಂತೋ ಯತೋ ಲೋಭಂ ಮದ್ದತ್ತೇಷ್ವಖಿಲೇಷ್ವಪಿ ।
ತಸ್ಮಾದ್ದೃಣಾದಿಕಾ ಯೂಯಂ ಭವಿಷ್ಯಂತಿ ಸದಾ ದ್ವಿಜಾಃ ॥ ೭೯ ॥

ಯುಷ್ಮಾಕಂ ಸ್ಯಾದ್ವಾರಿ ವಹಾ ನದೀ ಪಾಷಾಣಪರ್ವತಾಃ ।
ನದ್ಯಾದಯೋ ವಾರಿವಹಾ ಮೃನ್ಮಯಾಶ್ಚ ತಥಾ ಗೃಹಾಃ ॥ ೮೦ ॥

---

ಸೃಷ್ಟಿಸಿ, ಬ್ರಾಹ್ಮಣರಿಗೆ ದಾನಮಾಡಿ, ಎಲೈ ವಿಪ್ರವರ್ಯರೇ ನೀವು ಬೇರೊಬ್ಬರನ್ನು ಯಾಚಿಸಬೇಡಿರೆಂದು ಹೇಳಿ ಸರ್ವವನ್ನೂ ಒಪ್ಪಿಸಿದನು.

೭೭–೭೮. ಹೀಗೆ ಹೇಳಿದ ಬ್ರಹ್ಮದೇವನು ಗದಾಧರನಿಗೆ ನಮಸ್ಕಾರಮಾಡಿ ಬ್ರಹ್ಮಲೋಕಕ್ಕೆ ಹೊರಟನು. ತರುವಾಯ ಧರ್ಮಾರಣ್ಯದಲ್ಲಿ ಧರ್ಮದೇವನ ಯಾಗವು ಪ್ರಾರಂಭವಾಯಿತು. ಆಗ ಗಯೆಯಲ್ಲಿದ್ದ ಬ್ರಾಹ್ಮಣರೆಲ್ಲರೂ ಅಲ್ಲಿಗೆ ಹೋಗಿ ಲೋಭದಿಂದ ಧನಾದಿಗಳನ್ನು ದಾನವಾಗಿ ತೆಗೆದುಕೊಂಡು ಬಂದರು. ಈ ಸಮಾಚಾರ ವನ್ನು ತಿಳಿದ ಬ್ರಹ್ಮದೇವನು ಅಲ್ಲಿಗೆ ಬಂದು ಆ ಬ್ರಾಹ್ಮಣರಿಗೆ ಶಾಪವನ್ನು ಕೊಟ್ಟನು.

೭೯. ಎಲೈ ವಿಪ್ರವರ್ಯರೇ, ನಾನು ನಿಮಗೆ ಸಕಲಸಂಪತ್ತುಗಳನ್ನೂ ಕೊಟ್ಟು ಪರರಿಂದದಾನವನ್ನು ಸ್ವೀಕರಿಸಬೇಡಿರೆಂದು ಹೇಳಿ ಹೋಗಿದ್ದರೂ ನೀವು ಲೋಭ ದಿಂದ ಪರರ ದಾನವನ್ನು ಸ್ವೀಕರಿಸಿರುವಿರಿ. ಇದರಿಂದ ನೀವು ಯಾವಾಗಲೂ ಋಣ ಗಳಿಂದ ಪೀಡಿತರಾಗರೆಂದು ಶಪಿಸಿದನು.

೮೦–೮೧. ಓ ವಿಪ್ರರೇ, ಇಂತಹ ದಿವ್ಯನದ್ಯಾದಿಗಳು ನಿಮ್ಮ ಲೋಭ ದಿಂದ ಪಾಷಾಣಮಯವಾಗಿಯೂ, ಮೃಣ್ಮಯವಾಗಿಯೂ ಆಗಲಿ. ನಿಮ್ಮ

ಕಾಮಧೇನುಃ ಕಲ್ಪವೃಕ್ಷೋ ಮಲ್ಲೋಕಮುಪತಿಷ್ಠತಾಂ ।
ಏವಂ ಶಪ್ತಾ ಬ್ರಹ್ಮಣಾ ತೇ ಪ್ರಾರ್ಥಯಂತೋಽಬ್ರುವನ್ನಜಂ ॥ ೮೧ ॥

ತ್ವಯಾ ಯದ್ದತ್ತಮಖಿಲಂ ತತ್ಸರ್ವಂ ಶಾಪತೋ ಗತಂ ।
ಜೀವನಾರ್ಥಂ ಪ್ರಸಾದಂ ನೋ ಭಗವಾನ್ ಕರ್ತುಮರ್ಹಸಿ ॥ ೮೨ ॥

ತಚ್ಛ್ರುತ್ವಾ ಬ್ರಾಹ್ಮಣಾನ್ ಬ್ರಹ್ಮಾ ಪ್ರೋವಾಚೇದಂ ದಯಾನ್ವಿತಃ ।
ತೀರ್ಥೋಪಜೀವಿಕಾ ಯೂಯಮಾಚಂದ್ರಾರ್ಕಂ ಭವಿಷ್ಯಥ ॥ ೮೩ ॥

ಲೋಕಾಃ ಪುಣ್ಯಾ ಗಯಾಯಾಂ ಯೇ ಶ್ರಾದ್ಧಿನೋ ಬ್ರಹ್ಮಲೋಕಗಾಃ ।
ಯುಷ್ಮಾನ್ಯೇ ಪೂಜಯಿಷ್ಯಂತಿ ತೈರಹಂ ಪೂಜಿತಃ ಸದಾ ॥ ೮೪ ॥

---

ಗೃಹಗಳು ಮೃಣ್ಮಯವಾಗಲಿ. ಕಾಮಧೇನು, ಕಲ್ಪವೃಕ್ಷಗಳು ಸ್ವರ್ಗಲೋಕಕ್ಕೆ ಹೋಗಲಿ ಎಂಬುದಾಗಿ ಶಾಪವನ್ನು ಕೊಡಲಾಗಿ ಬ್ರಾಹ್ಮಣರು ಅವನನ್ನು ಪ್ರಾರ್ಥಿಸಿಕೊಂಡರು.

೮೨. ಎಲೈ ಸ್ವಾಮಿಯಾದ ಬ್ರಹ್ಮದೇವನೇ, ನೀನು ದಯಪಾಲಿಸಿದ್ದ ಸಕಲೈಶ್ವರ್ಯಗಳೂ ತಮ್ಮ ಶಾಪದಿಂದ ನಷ್ಟವಾಗಿವೆ. ನಮ್ಮ ಜೀವನಕ್ಕೇನುಗತಿ ? ಪ್ರಭುವಾದ ನೀನೇ ಅನುಗ್ರಹಿಸಬೇಕೆಂದು ಪ್ರಾರ್ಥಿಸಿಗೊಂಡರು.

೮೩. ತರುವಾಯ ಬ್ರಹ್ಮನು ಬ್ರಾಹ್ಮಣರ ಆ ವಾಕ್ಯವನ್ನು ಕೇಳಿ ದಯಾಪೂರ್ಣನಾಗಿ ಹೀಗೆ ಹೇಳಿದನು. ಎಲೈ ವಿಪ್ರರೇ ನೀವು ಚಂದ್ರಸೂರ್ಯರಿರುವವರೆಗೂ ಈ ತೀರ್ಥೋಪಜೀವಿಗಳಾಗಿರಿರೆಂದು ವರವನ್ನು ಕೊಟ್ಟನು.

೮೪. ಯಾವಪುರುಷರು ಪವಿತ್ರವಾದ ಈ ಕ್ಷೇತ್ರಕ್ಕೆ ಬಂದು ಗಯೆಯಲ್ಲಿ ಶ್ರಾದ್ಧವನ್ನು ಮಾಡುವರೋ ಅವರು ಬ್ರಹ್ಮಲೋಕವನ್ನು ಹೊಂದುವರು. ಮತ್ತು ನಿಮ್ಮನ್ನು ಯಾರು ಪೂಜಿಸುವರೋ ಅವರಿಗೆ ನನ್ನನ್ನು ಪೂಜಿಸಿದ ಫಲವು ಲಭಿಸಲೆಂದು ಬ್ರಹ್ಮದೇವನು ಹೇಳಿದನು.

ಆಕ್ರಾಂತಂ ದೈತ್ಯಜಠರಂ ಧರ್ಮೇಣ ವಿರಜಾದ್ರಿಣಾ ।
ನಾಭಿಕೂಪಸಮೀಪೇ ತು ದೇವೀ ಯಾ ವಿರಜಾ ಸ್ಥಿತಾ ॥
ತತ್ರಪಿಂಡಾದಿಕಂ ಕೃತ್ವಾ ತ್ರಿಃಸಪ್ತಕುಲಮುದ್ಧರೇತ್ ॥ ೮೫ ॥

ಮಹೇಂದ್ರಗಿರಿಣಾ ತಸ್ಯ ಕೃತೌ ಪಾದೌ ಸುನಿಶ್ಚಲೌ ।
ತತ್ರ ಪಿಂಡಾದಿಕೃತ್ಸಪ್ತ ಕುಲಾನ್ಯುದ್ಧರತೇ ನರಃ ॥ ೮೬ ॥

ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ "ಗಯಾಮಾಹಾತ್ಮ್ಯಂ" ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

೮೫. ಆ ಗಯಾಸುರನ ಜಠರದಲ್ಲಿ, ವಿರಜಾಗಿರಿಯಲ್ಲಿ ವಾಸಿಸುವ ಧರ್ಮದೇವನು ವಾಸಿಸುವನು. ಅವನ ನಾಭಿಕುಹರದಲ್ಲಿ ಪವಿತ್ರಳೂ, ಪೂಜ್ಯಳೂ ಆದ ವಿರಜೆಯು ಸನ್ನಿಹಿತಳಾಗಿರುವಳು. ಅವುಗಳಲ್ಲಿ ಪಿಂಡದಾನವನ್ನು ಮಾಡಿದರೆ ಇಪ್ಪತ್ತೊಂದು ಕುಲದವರೂ ಉದ್ಧೃತರಾಗುವರು.

೮೬. ಮಹೇಂದ್ರಪರ್ವತವು ಆ ಗಯಾಸುರನ ಎರಡು ಪಾದಗಳ ಮೇಲೆಯೂ ನಿಶ್ಚಲವಾಗಿರುವುದು. ಆ ಗಯಾಸುರನ ಪಾದಗಳಲ್ಲಿ ಯಾವನು ಶ್ರಾದ್ಧವನ್ನು ಮಾಡಿ ಪಿಂಡದಾನವನ್ನು ಮಾಡುವನೋ ಅವನು ತನ್ನ ಏಳು ಕುಲವನ್ನೂ ಉದ್ಧರಿಸುವನು. ಎಂದು ಸೂತನು ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಗಯಾಮಾಹಾತ್ಮ್ಯ"ವೆಂಬ ನಲವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.



## ನಲವತ್ತನಾಲ್ಕನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಗಯಾಸುರ, ಗಯಾಕ್ಷೇತ್ರ ಇವುಗಳ ಮಹಿಮೆಯು ವರ್ಣಿತವಾಗಿದೆ. ಶ್ರೀಮನ್ನಾರಾಯಣನ ನಾಭಿಕಮಲದಲ್ಲಿ ಜನಿಸಿದ ಬ್ರಹ್ಮದೇವನು ಪ್ರಜೆಗಳನ್ನು ಮತ್ತು ಅಸುರರನ್ನು ಸೃಷ್ಟಿಸಿದನು. ಆಗ ಗಯಾಸುರನು ಜನಿಸಿದನು. ಅವನು ಘೋರವಾದ ತಪಸ್ಸನ್ನು ಮಾಡಲು ಬ್ರಹ್ಮಾದಿದೇವತೆಗಳು ಶ್ರೀಹರಿಯ ಬಳಿಗೆ ಹೋಗಿ ಮೊರೆಹೊಕ್ಕರು. ಆಗ ವಿಷ್ಣುವು ಅವನಬಳಿಗೆಬಂದು ಅವನು ಬೇಡಿದ ವರಗಳನ್ನು ಕೊಟ್ಟನು. ಅವನ ಮಹಿಮೆಯಿಂದ ತ್ರಿಲೋಕವಾಸಿಗಳೂ ಮುಕ್ತಿಯನ್ನು ಪಡೆದರು. ಆಗ ಯಮಲೋಕಾದಿಗಳು ಶೂನ್ಯವಾದುವು. ಆಗ ಬ್ರಹ್ಮದೇವನು ಯಾಗವನ್ನು ಮಾಡಲು ಗಯಾಸುರನ ದೇಹವನ್ನು ಕೇಳಿದನು. ಅಸುರನು ಧನ್ಯನಾದೆನೆಂದು ಅದಕ್ಕೆ ಒಪ್ಪಿದನು. ಅದರಂತೆ ಬ್ರಹ್ಮನು ಸಕಲ ಸಂಭಾರಗಳಿಂದಲೂ, ಮಹರ್ಷಿಗಳಿಂದಲೂ ಕೂಡಿ ಯಾಗವನ್ನು ಮಾಡಿ ಅವಭೃತಸ್ನಾನವನ್ನು ನೆರವೇರಿಸಿದನು. ತರುವಾಯ ಆ ಅಸುರನು ಚಲಿಸದೇ ಇರಲು ಅವನ ಶರೀರದ ಮೇಲೆ ಮಹಾಶಿಲೆಯನ್ನು ಸ್ಥಾಪಿಸಿದನು. ಅದರ ಮೇಲೆ ಬ್ರಹ್ಮಾದಿದೇವತೆಗಳೆಲ್ಲರು ನಿಂತರೂ ಅವನು ಚಲಿಸುತ್ತಿರುವುದನ್ನು ನೋಡಿ ಶ್ರೀಹರಿಯು ಗದಾಧಾರಿಯೂ, ಲಕ್ಷ್ಮೀಸಹಿತನೂ ಆಗಿ ಅವನ ಮೇಲೆ ನಿಂತು ಅವನಿಗೆ ವರವನ್ನು ಕೊಟ್ಟನು. ಅವನ ನಾಮದಿಂದಲೇ ಗಯಾಕ್ಷೇತ್ರವು ಪ್ರಖ್ಯಾತವಾಗಿದೆ.

ಬ್ರಹ್ಮದೇವನು ಯಾಗವನ್ನು ಮುಗಿಸಿ ಬ್ರಾಹ್ಮಣರಿಗೆ ಸಕಲೈಶ್ವರ್ಯಗಳನ್ನೂ ಕೊಟ್ಟು ಪರರನ್ನು ಯಾಚಿಸದಂತೆ ಹೇಳಿ ಹೋಗಿದ್ದನು. ಆ ಬ್ರಾಹ್ಮಣರು ಲೋಭದಿಂದ ಯಾಗಕ್ಕೆ ಹೋಗಿ ಧರ್ಮದೇವನಿಂದ ದಾನವನ್ನು ಪಡೆದರು. ಅದರಿಂದ ಕುಪಿತನಾದ ಬ್ರಹ್ಮನು ಶಾಪವನ್ನು ಕೊಡಲು ಆ ಬ್ರಾಹ್ಮಣರು ದರಿದ್ರರಾದರು. ವಿಪ್ರರು ಪುನಃ ಬ್ರಹ್ಮದೇವನನ್ನು ಬೇಡಲು ಅವನು ದಯೆಯಿಂದ ನೀವು ಕ್ಷೇತ್ರಜೀವಿಗಳಾಗಿ ಆಚಂದ್ರಾರ್ಕಪರ್ಯಂತ ಬದುಕಿರಿ ಎಂದು ಹೇಳಿದನು. ಆದುದರಿಂದ ಗಯಾವಾಸಿಗಳನ್ನು ಪೂಜಿಸಿದರೆ ಪಿತೃಗಳೂ ಮತ್ತು ಬ್ರಹ್ಮದೇವನೂ ಪ್ರೀತರಾಗುವರು. ಎಂಬ ವಿಷಯವು ಈ ಅಧ್ಯಾಯದಲ್ಲಿ ನಿರೂಪಿತವಾಗಿದೆ.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಮಹಾಪುರಾಣಂ

## ಪಂಚಚತ್ವಾರಿಂಶೋಽಧ್ಯಾಯಃ

**॥ ನಾರದ ಉವಾಚ ॥**

**ಕಥಂ ಶಿಲಾ ಸಮುತ್ಪನ್ನಾ ಯಯಾಕ್ರಾಂತೋ ಗಯಾಸುರಃ ।**
**ಕಿಂ ರೂಪಂ ಕಿಂ ಚ ಮಾಹಾತ್ಮ್ಯಂ ತಸ್ಯಾಃ ಕಿಂ ವದ ನಾಮ ಚ ॥ ೧ ॥**

**॥ ಸನತ್ಕುಮಾರ ಉವಾಚ ॥**

**ಆಸೀದ್ಧರ್ಮೋ ಮಹಾತೇಜಾಃ ಸರ್ವವಿಜ್ಞಾನಪಾರಗಃ ।**
**ವಿಶ್ವರೂಪಾ ಚ ತತ್ಪತ್ನೀ ಭರ್ತೃವ್ರತಪರಾಯಣಾ ॥ ೨ ॥**

## ನಲವತ್ತೈದನೆಯ ಅಧ್ಯಾಯವು

೧. ನಾರದನು ಹೇಳಿದನು:—ಎಲೈ ಸನತ್ಕುಮಾರನೇ, ಯಾವ ಶಿಲೆಯಿಂದ ಗಯಾಸುರನು ಮುಚ್ಚಲ್ಪಟ್ಟನೋ ಅಂತಹ ಶಿಲೆಯು ಹೇಗೆ ಉತ್ಪನ್ನವಾಯಿತು? ಅದು ಹೇಗಿದೆ? ಅದರ ಮಹಿಮೆಯನ್ನೂ, ನಾಮವನ್ನೂ ತಿಳಿಸಬೇಕೆಂದು ಕೇಳಿದನು.

೨. ಸನತ್ಕುಮಾರನು ಹೇಳಿದನು:—ಪೂರ್ವದಲ್ಲಿ ಮಹಾತೇಜಸ್ವಿಯೂ, ಮಹಾಜ್ಞಾನಿಯೂ ಆದ ಧರ್ಮದೇವನು ಸರ್ವಶಾಸ್ತ್ರಪಾರಂಗತನಾಗಿದ್ದನು. ಆತನು ಸಾಧ್ವೀಶಿರೋಮಣಿಯೂ, ಪತಿವ್ರತಾಪರಾಯಣಳೂ ಆದ ವಿಶ್ವರೂಪೆಯೆಂಬ ನಾರಿಯನ್ನು ಮದುವೆಯಾದನು.

ತಸ್ಯಾಂ ಧರ್ಮಾತ್ಸಮುತ್ಪನ್ನಾ ಕನ್ಯಾ ಧರ್ಮವ್ರತಾ ಸತೀ ।
ಸರ್ವಲಕ್ಷಣಸಂಪನ್ನಾ ಲಕ್ಷ್ಮೀರಿವ ಗುಣಾಧಿಕಾ ॥ ೩ ॥

ತಸ್ಯಾಂ ಯೇ ತು ಗುಣಾ ಹ್ಯಾಸಂಸ್ತೇ ತಿಷ್ಠಂತಿ ಜಗತ್ರಯೇ ।
ಧರ್ಮೋ ಧರ್ಮವ್ರತಾಯಾಸ್ತು ತ್ರಿಷು ಲೋಕೇಷು ಮಾರ್ಗಯೆನ್ ॥ ೪ ॥

ನಾನುರೂಪಂ ವರಂ ಲೇಭೇ ಧರ್ಮೋsಥ ವರಸಿದ್ಧಯೇ ।
ತಪಃ ಕುರು ವರಾರ್ಥಂ ತ್ವಂ ತಥೇತ್ಯುಕ್ತ್ವಾ ವನಂ ಯಯೌ ॥ ೫ ॥

ಕನ್ಯಾ ಸಾ ಚ ತಪಸ್ತೇಪೇ ಸರ್ವೇಷಾಂ ದುಷ್ಕರಂ ಚ ಯತ್ ।
ವಾಯುಭಕ್ಷಾ ಶ್ವೇತಕಲ್ಪೇ ಯುಗಾನಾಮಯುತಂ ಪುರಾ ॥ ೬ ॥

---

೩. ಆ ಧರ್ಮದೇವನಿಗೆ ಪತ್ನಿಯಾದ ವಿಶ್ವರೂಪೆಯಲ್ಲಿ, ಧರ್ಮ ಮತ್ತು ವ್ರತಪರಾಯಣಳೂ, ಸಾಧ್ವೀಮಣಿಯೂ, ಸರ್ವಲಕ್ಷಣಸಂಪನ್ನಳೂ, ಲಕ್ಷ್ಮೀ ದೇವಿಯಂತೆ ಗುಣಾಗ್ರಣಿಯೂ ಆದ ಕನ್ಯಾರತ್ನವು ಜನನವಾಯಿತು.

೪. ಆ ಕನ್ಯೆಯಲ್ಲಿ ಯಾವ ಗುಣಗಳಿದ್ದುವೋ ಅವೇ ಮೂರು ಲೋಕಗಳಲ್ಲಿಯೂ ಇದ್ದುವು. ಧರ್ಮದೇವನು ಧರ್ಮಪರಾಯಣಳಾದ ಕನ್ಯೆಗೆ ಅನುರೂಪನಾದ ವರನನ್ನು ಮೂರು ಲೋಕಗಳಲ್ಲಿಯೂ ಹುಡುಕಿದನು.

೫. ಹೀಗೆ ಹುಡುಕಿದರೂ ಯೋಗ್ಯನಾದ ವರನು ಸಿಕ್ಕಲಿಲ್ಲ. ತರುವಾಯ ವರನನ್ನು ಪಡೆಯಲೋಸ್ಕರ ತಪಸ್ಸನ್ನು ಮಾಡೆಂದು ತಂದೆಯು ಮಗಳಿಗೆ ಹೇಳಿದನು. ಕುಮಾರಿಯು ತಂದೆಯ ಮಾತಿನಂತೆ ತಪಸ್ಸಿಗಾಗಿ ವನಕ್ಕೆ ಹೊರಟಳು.

೬. ಆ ಬಾಲಿಕೆಯು ಪೂರ್ವದ ಶ್ವೇತವರಾಹಕಲ್ಪದಲ್ಲಿ ಹತ್ತುಸಾವಿರ ಯುಗಗಳವರೆಗೂ ವಾಯುಭಕ್ಷಕಳಾಗಿ ಅತ್ಯಂತ ದುಷ್ಕರವೂ, ಭಯಂಕರವೂ ಆದ ತಪಸ್ಸನ್ನು ಮಾಡಿದಳು.

ಬ್ರಹ್ಮಣೋ ಮಾನಸಃ ಪುತ್ರೋ ಮರೀಚಿರ್ನಾಮ ವಿಶ್ರುತಃ ।
ಪರ್ಯಟನ್ ಪೃಥಿವೀಂ ಸರ್ವಾಂ ಕನ್ಯಾರತ್ನಂ ದದರ್ಶ ಸಃ ॥ ೭ ॥

ರೂಪಯೌವನಸಂಪನ್ನಾಂ ಪರಮೇ ತಪಸಿ ಸ್ಥಿತಾಂ ।
ಪಪ್ರಚ್ಛಾಥ ಮರೀಚಿಸ್ತಾಂ ಕಾ ತ್ವಂ ಕಸ್ಯಾಸಿ ತದ್ವದ ॥ ೮ ॥

ರೂಪೇಣಾನೇನ ಮಾಂ ಭೀರು ವಿಮೋಹಯಸಿ ಸುವ್ರತೇ ।
ಬ್ರಹ್ಮಾತ್ಮಜೋಽಹಂ ವಿಖ್ಯಾತೋ ಮರೀಚಿರ್ವೇದಪಾರಗಃ ॥ ೯ ॥

ಮರೀಚೇರ್ವಚನಂ ಶ್ರುತ್ವಾ ಕನ್ಯಾ ಪ್ರೋವಾಚ ತಂ ಮುನಿಂ ।
ಅಹಂ ಧರ್ಮವ್ರತಾ ನಾಮ ಧರ್ಮಪುತ್ರೀ ತಪೋನ್ವಿತಾ ॥ ೧೦ ॥

---

೭. ಇಷ್ಟರಲ್ಲಿ ಬ್ರಹ್ಮದೇವನ ಮಾನಸಕುಮಾರನೂ, ಜ್ಞಾನಿಯೂ ಆದ ಮರೀಚಿಮುನಿಯು, ಭೂಮಂಡಲದಲ್ಲಿ ಅಲೆದಾಡುತ್ತಾ ಆ ಕನ್ಯಾರತ್ನವನ್ನು ನೋಡಿದನು.

೮. ಆ ಮರೀಚಿಮುನಿಯು, ರೂಪಾತಿಶಯಳೂ, ಯೌವನಸಂಪನ್ನಳೂ, ಮಹಾ ತಪಸ್ಸಿನಲ್ಲಿ ನಿರತಳೂ ಆದ ಆ ಕುಮಾರಿಯನ್ನು ನೋಡಿ ನೀನು ಯಾರು, ಯಾರ ಕುಮಾರಿಯು, ಏತಕ್ಕಾಗಿ ತಪಸ್ಸನ್ನು ಮಾಡುತ್ತಿದ್ದೀಯೆ ಎಂದು ಕೇಳಿದನು.

೯. ಮಹಾತಪಸ್ವಿಯೂ, ಅತಿಸುಂದರಿಯೂ ಆದ ನೀನು ಈ ನಿನ್ನ ದಿವ್ಯ ರೂಪದಿಂದ ನನ್ನನ್ನು ಮೋಹಗೊಳಿಸುತ್ತಿದ್ದೀಯೆ. ನಾನು ಬ್ರಹ್ಮದೇವನ ಮಾನಸ ಕುಮಾರನೂ, ವೇದಪಾರಂಗತನೂ ಆದ ಬ್ರಾಹ್ಮಣನಾಗಿದ್ದೇನೆ ಎಂದನು.

೧೦. ತರುವಾಯ ಆ ಕುಮಾರಿಯು ಮರೀಚಿಮುನಿಯ ಮಾತನ್ನು ಕೇಳಿ ಸಂತುಷ್ಟಳಾಗಿ ಹೀಗೆ ಹೇಳಿದಳು. ಎಲೈ ಮುನಿವರ್ಯನೇ, ನಾನು ಧರ್ಮಪುತ್ರಿಯೂ, ಧರ್ಮವ್ರತಪರಾಯಣಳೂ, ತಪೋನಿರತಳೂ ಆಗಿರುತ್ತೇನೆ ಎಂದಳು.

ಪ್ರತಿವ್ರತಾರ್ಥಂ ವಿಪ್ರೇಂದ್ರೇ ಚರಾಮಿ ಪರಮಂ ತಪಃ ।
ಧರ್ಮವ್ರತಾಂ ಮರೀಚಿಸ್ತಾಮುವಾಚ ಪ್ರೀತಿಪೂರ್ವಕಂ ॥ ೧೧ ॥

ಪತಿವ್ರತಾ ದರ್ಶನಾಮ್ನೇ ಭವಿಷ್ಯಸಿ ಶುಭವ್ರತೇ ।
ಪತಿವ್ರತೇಚ್ಛಯಾ ಪೃಥ್ವೀಂ ವಿಚರಾಮಿ ಹ್ಯಹರ್ನಿಶಂ ॥ ೧೨ ॥

ತ್ವಂಚೇತ್ಪತಿವ್ರತಾ ಜಾತಾ ಭಜೇ ತ್ವಾಂ ಭಜ ಮಾಂ ವರಂ ।
ಲೋಕೇ ನ ತ್ವಾದೃಶೀ ಕನ್ಯಾ ಮಮ ತುಲ್ಯೋ ನ ತೇ ವರಃ ॥ ೧೩ ॥

ಧರ್ಮವ್ರತೇ ಧರ್ಮಪತ್ನೀ ತಸ್ಮಾತ್ತ್ವಂ ಭವ ಮೇಽಧುನಾ ।
ಧರ್ಮವ್ರತಾ ಮುನಿಂ ಪ್ರಾಹ ಧರ್ಮಂ ಯಾಚಯ ಸುವ್ರತ ॥ ೧೪ ॥

---

೧೧. ಎಲೈ ಮುನೀಂದ್ರನೇ, ಯೋಗ್ಯನಾದ ಪತಿಯನ್ನು ಪಡೆಯಲು ಈ ಶ್ರೇಷ್ಠವಾದ ತಪಸ್ಸನ್ನು ಆಚರಿಸುತ್ತಿದ್ದೇನೆ. ವಿಪ್ರವರ್ಯನೇ ಪತಿಯನ್ನು ಪಡೆಯುವುದೇ ಮುಖ್ಯೋದ್ದೇಶವಾಗಿದೆ ಎಂದಳು. ಆಗ ಮರೀಚಿಮುನಿಯು ಧರ್ಮಪುತ್ರಿಯಾದ ಆಕೆಯನ್ನು ಕುರಿತು ಪ್ರೀತಿಪೂರ್ವಕವಾಗಿ ಹೇಳಿದನು.

೧೨. ಎಲೈ ಮಂಗಳಾಂಗಿ, ನಿನ್ನನ್ನು ನೋಡುವ ಮಾತ್ರದಿಂದಲೇ ಪತಿವ್ರತೆಯಹಾಗೆ ಕಾಣುತ್ತಿದ್ದೀಯೆ. ನಾನೂ ಸಹ ಇಂತಹ ಪತಿವ್ರತೆಯಾದ ಕನ್ಯೆಯನ್ನು ಉದ್ದೇಶಿಸಿಕೊಂಡೇ ಈ ಭೂಮಂಡಲದಲ್ಲಿ ಹಗಲೂ, ರಾತ್ರಿಯೂ ಸಂಚರಿಸುತ್ತಿದ್ದೇನೆಂದು ಹೇಳಿದನು.

೧೩. ನೀನು ಅಂತಹ ಪತಿವ್ರತೆಯಾಗಿದ್ದರೆ ನಿನ್ನನ್ನು ನಾನು ವರಿಸುವೆನು. ನೀನೂ ಸಹ ವರನಾದ ನನ್ನನ್ನು ವರಿಸುವವಳಾಗು. ಲೋಕದಲ್ಲಿ ನಿನ್ನಂಥ ಕನ್ಯೆಯೂ ದೊರೆಯುವುದಿಲ್ಲ ನನ್ನಂಥ ವರನೂ ದೊರೆಯುವುದು ದುರ್ಲಭವೆಂದನ .

೧೪ ಆದುದರಿಂದ ಎಲೈ ಧರ್ಮವ್ರತೆಯೇ, ನೀನು ನನಗೆ ಧರ್ಮಪತ್ನಿಯಾಗು ಎಂದು ಹೇಳಲು ಧರ್ಮವ್ರತೆಯು ಎಲೈ ಮುನಿವರ್ಯನೇ ನೀನು ನನ್ನ ತಂದೆಯಾದ ಧರ್ಮದೇವನನ್ನು ಕೇಳು ಎಂದಳು.

ತಚ್ಛ್ರುತ್ವಾ ಧರ್ಮಮಾಗಮ್ಯ ನಿಂ ಧರ್ಮೋ ದದರ್ಶ ಹ ।
ತೇಜಃಪುಂಜಂ ವರಂ ನತ್ವಾ ಅಸನಾರ್ಘ್ಯಾದಿನಾರ್ಚಯೇತ್ ॥ ೧೫ ॥

ಕಿಮರ್ಥಮಾಗತಃ ಪೃಷ್ಟೋ ಮರೀಚಿರ್ಧರ್ಮಮಬ್ರವೀತ್ ।
ಕನ್ಯಾರ್ಥಂ ಭ್ರಮತಾ ಪೃಥ್ವೀಂ ದೃಷ್ಟ್ವಾ ತೇ ಕನ್ಯಕಾ ವರಾ ॥
ಮಹ್ಯಂ ಕನ್ಯಾಂಚ ತಾಂ ದೇಹಿ ಶ್ರೇಯಸ್ತವ ಭವಿಷ್ಯತಿ ॥ ೧೬ ॥

ಅರ್ಘ್ಯಾದಿನಾ ಸಮಭ್ಯರ್ಚ ಧರ್ಮಃ ಪ್ರೋಚೇ ತಥೇತಿ ತಂ ।
ಧರ್ಮವ್ರತಾಂ ಸಮಾನೀಯ ದತ್ತವಾಂಸ್ತಾಂ ಮರೀಚಯೇ ॥ ೧೭ ॥

ವರಂ ಚ ದತ್ತವಾಂಸ್ತಸ್ಮೈ ತದ್ವಾಕ್ಯಂ ಯತ್ತಥಾ ಕೃತಂ ।
ಅಗ್ನಿಹೋತ್ರೇಣ ಸಹಿತಾಂ ಸ್ವಾಶ್ರಮಂ ತಾಂ ದ್ವಿಜೋನಯೇತ್ ॥ ೧೮ ॥

---

೧೫. ಮರೀಚಿಮುನಿಯು ಆ ಮಾತನ್ನು ಕೇಳಿ ಧರ್ಮನ ಬಳಿಗೆ ಹೋದನು. ಆ ಧರ್ಮದೇವನು ತೇಜೋರಾಶಿಯಾದ ಆ ಮುನಿವರ್ಯನನ್ನು ನಮಸ್ಕರಿಸಿ ವರನೆಂದು ಭಾವಿಸಿ, ಅರ್ಘ್ಯ, ಪಾದ್ಯ, ಆಚಮನ ಆಸನಾದಿಗಳಿಂದ ಪೂಜಿಸಿದನು.

೧೬. ತರುವಾಯು ಧರ್ಮದೇವನು ಬಂದ ಕಾರಣವೇನೆಂದು ಮುನಿಯನ್ನು ಕೇಳಲು, ಮರೀಚಿಯು ಕನ್ಯಾರ್ಥಿಯಾಗಿ ಭೂಮಿಯಲ್ಲಿ ನಾನು ಸಂಚಾರಮಾಡುತ್ತಾ ಇಲ್ಲಿಗೆ ಬಂದಿರುತ್ತೇನೆ. ನಿನ್ನ ಕುಮಾರಿಯನ್ನು ನೋಡಿದೆನು, ಆ ಕುಮಾರಿಯನ್ನು ನನಗೆ ದಾನವನ್ನು ಮಾಡು ನಿನಗೆ ಶ್ರೇಯಸ್ಸುಂಟಾಗುವುದು ಎಂದು ಧರ್ಮನಿಗೆ ಹೇಳಿದನು.

೧೭. ಅನಂತರ ಧರ್ಮನು ಆ ಮುನಿವರ್ಯನಿಗೆ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಹಾಗೆಯೇ ಆಗಲೆಂದು ತಿಳಿಸಿ ತನ್ನ ಪುತ್ರಿಯಾದ ಧರ್ಮವ್ರತೆಯನ್ನು ಕರೆತಂದು ಆ ಮರೀಚಿಮುನಿಯನ್ನು ಪೂಜಿಸಿ, ಕನ್ಯಾದಾನವನ್ನು ಮಾಡಿದನು.

೧೮. ತರುವಾಯು ಆ ಧರ್ಮನು ಮಗಳಿಗೆ ಲಗ್ನವನ್ನು ಮಾಡಿ ವರವನ್ನು ಕೊಟ್ಟು ಕಳುಹಿಸಿದನು. ಮರೀಚಿಮುನಿಯು ಅಗ್ನಿಹೋತ್ರಗಳಿಂದಲೂ, ಪತ್ನಿಯಿಂದಲೂ ಸಹಿತನಾಗಿ ತನ್ನಾಶ್ರಮಕ್ಕೆ ತೆರಳಿದನು.

ರೇಮೇ ಮುನಿಸ್ತ್ರಯಾ ಸಾರ್ಧಂ ಯಥಾ ವಿಷ್ಣುಃ ಶ್ರಿಯಾ ಸಹ ।
ಪಾರ್ವತ್ಯಾ ಚ ಯಥಾ ಶಂಭುಃ ಸರಸ್ವತ್ಯಾ ಯಥಾ ಹ್ಯಜಃ ॥ ೧೯ ॥

ಜಜ್ಞೇ ಪುತ್ರಶತಂ ತಸ್ಯಾಂ ಮರೀಚೇರ್ವಿಷ್ಣುನೋಪಮಂ ।
ಮರೀಚಿಃ ಫಲಪುಷ್ಪಾರ್ಥಂ ವನಂ ಗತ್ವಾ ಸಮಾಗತಃ ॥ ೨೦ ॥

ಶ್ರಾಂತಃ ಕದಾಚಿತ್ತಾಂ ಪತ್ನೀಮುವಾಚೇತಿ ಪತಿವ್ರತಾಂ ।
ಭುಕ್ತ್ವಾ ತು ಶಯನಸ್ಥಸ್ಯ ಪಾದಸಂವಾಹನಂ ಕುರು ॥ ೨೧ ॥

ಧರ್ಮವ್ರತಾ ತಥೇತ್ಯುಕ್ತ್ವಾ ಶಯನಸ್ಥಸ್ಯ ಸಾ ಮುನೇಃ ।
ಪಾದಸಂವಾಹನಂ ಚಕ್ರೇ ಘೃತೇನಾಭ್ಯಜ್ಯ ತತ್ಪರಾ ॥ ೨೨ ॥

---

೧೯. ಆ ಮುನಿಯು ತನ್ನ ದಿವ್ಯವಾದ ಆಶ್ರಮದಲ್ಲಿ ಸುಂದರಿಯಾದ ಪತ್ನಿಯೊಡನೆ ಲಕ್ಷ್ಮೀದೇವಿಯಿಂದೊಡಗೂಡಿದ ವಿಷ್ಣುವಿನಂತೆಯೂ, ಪಾರ್ವತಿಯಿಂದ ಸಹಿತನಾದ ಶಿವನಂತೆಯೂ, ಸರಸ್ವತಿಯಿಂದೊಡಗೂಡಿದ ಬ್ರಹ್ಮನಂತೆಯೂ, ದಿವ್ಯಸುಖಗಳನ್ನನುಭವಿಸುತ್ತಾ ಪ್ರಕಾಶಿಸಿದನು.

೨೦. ಆ ಮರೀಚಿಮುನಿಗೆ ಧರ್ಮವ್ರತೆಯಲ್ಲಿ ವಿಷ್ಣುವಿಗೆ ಸಮರಾದ ನೂರಾರು ಜನ ಮಕ್ಕಳು ಜನಿಸಿದರು. ಹೀಗಿರಲು ಒಂದಾನೊಂದು ದಿವಸ ಆ ಮುನಿಯು ಫಲಪುಷ್ಪಗಳಿಗಾಗಿ ವನಾಂತರಕ್ಕೆ ಹೋದನು.

೨೧. ಆಗ ಅವನು ಅಲೆದಾಡಿ, ಶ್ರಮದಿಂದ ಆಶ್ರಮಕ್ಕೆ ಬಂದು, ಸ್ನಾನಭೋಜನಾದಿಗಳನ್ನು ಮುಗಿಸಿಕೊಂಡು ಮಲಗಿ, ಬಹಳ ಶ್ರಮವಾಗಿದೆ ಪಾದಸೇವೆಯನ್ನು ಮಾಡು ಎಂದು ಪತಿವ್ರತೆಯಾದ ತನ್ನ ಪತ್ನಿಗೆ ಹೇಳಿದನು.

೨೨. ಅನಂತರ ಆ ಧರ್ಮವ್ರತೆಯು ಹಾಗೆಯೇ ಆಗಲೆಂದು ಹೇಳಿ ತುಪ್ಪವನ್ನು ತಂದು ಸವರಿ ನಯವಾಗಿ ಪಾದಸೇವೆಯನ್ನು ಭಕ್ತಿಯಿಂದ ಮಾಡಿದಳು.

ನಿದ್ರಾಯಮಾಣೇಽಥ ಮುನೌ ಬ್ರಹ್ಮಾ ತಂ ದೇಶಮಾಗತಃ ।
ಇತ್ಯೇಷ ದೃಷ್ಟ್ವಾ ಬ್ರಹ್ಮಾಣಂ ಮನಸಾಽರ್ಚಯಿತುಂ ಪ್ರಭುಃ ॥ ೨೩ ॥

ಪಾದಸಂವಾಹನಂ ಕುರ್ಯಾಂ ಕಿಂ ಪೂಜ್ಯೋಽಯಂ ಜಗದ್ಗುರುಃ ।
ಇತ್ಯಾಕುಲಾ ಸಮುತ್ತಸ್ಥೌ ಮತ್ವಾ ಸಾ ತಂ ಗುರೋರ್ಗುರುಂ ॥ ೨೪ ॥

ಅರ್ಘ್ಯಪಾದ್ಯಾದಿಕಂ ದತ್ವಾ ಬ್ರಹ್ಮಾಣಂ ಸಮಪೂಜಯತ್ ।
ಸತ್ಕೃತಾಯಾಂತು ಶಯ್ಯಾಯಾಂ ವಿಶ್ರಾಮಮಕರೋದಜಃ ॥ ೨೫ ॥

ಏತಸ್ಮಿನ್ನಂತರೇ ಭರ್ತಾ ಸಮುತ್ತಸ್ಥೌ ಚ ತಲ್ಪತಃ ।
ಧರ್ಮವ್ರತಾಮಪಶ್ಯನ್ಸ ವಿಪ್ರಃ ಕ್ರುದ್ಧಃ ಶಶಾಪ ತಾಂ ॥ ೨೬ ॥

---

೨೩. ಹೀಗೆ ಅವಳು ಪಾದಸೇವೆಯನ್ನು ಮಾಡುತ್ತಿರಲು ಮರೀಚಿಮುನಿಯು ಸುಖವಾಗಿ ನಿದ್ರಿಸಿದನು. ಆ ಸಮಯದಲ್ಲಿ ಬ್ರಹ್ಮದೇವನು ಅಲ್ಲಿಗೆ ಬಂದನು. ಆಗ ಅವಳು ಬ್ರಹ್ಮದೇವನನ್ನು ನೋಡಿ ಅವನಿಗೆ ಪೂಜಿಸಬೇಕೆಂದು ಮನಸ್ಸಿನಲ್ಲಿ ಆಲೋಚಿಸಿದಳು.

೨೪. ಅನಂತರ ಅವಳು ಪತಿಯ ಪಾದಸೇವೆಯನ್ನು ಮಾಡಲೇ ಅಥವಾ ಜಗದ್ಗುರುವಾದ ಬ್ರಹ್ಮದೇವನನ್ನು ಪೂಜಿಸಲೇ ಎಂದು ಬಹಳವಾಗಿ ಯೋಚಿಸಿ ಪತಿಯ ಗುರುವಾದ ಬ್ರಹ್ಮನನ್ನು ಪೂಜಿಸಲು ಮೇಲಕ್ಕೆದ್ದಳು.

೨೫. ತರುವಾಯ ಧರ್ಮವ್ರತೆಯು ಅರ್ಘ್ಯಪಾದ್ಯಾಚಮನಾದಿಗಳನ್ನು ಕೊಟ್ಟು ಬ್ರಹ್ಮದೇವನನ್ನು ಸತ್ಕರಿಸಿದಳು. ಹೀಗೆ ಅವಳಿಂದ ಪೂಜಿತನಾದ ಬ್ರಹ್ಮನು ಹಾಸಿಗೆಯಲ್ಲಿ ವಿಶ್ರಾಂತಿಯನ್ನು ಪಡೆದನು.

೨೬. ಅಷ್ಟರಲ್ಲಿ ಪತಿಯಾದ ಮರೀಚಿಮುನಿಯು ಹಾಸಿಗೆಯಿಂದ ಎದ್ದು ಧರ್ಮವ್ರತೆಯನ್ನು ನೋಡಿ ಕುಪಿತನಾಗಿ ಪತಿವಾಕ್ಯವನ್ನು ಅತಿಕ್ರಮಿಸಿದಳೆಂದು ಭಾವಿಸಿ ಶಾಪವನ್ನು ಕೊಟ್ಟನು.

ಪಾದಸಂವಾಹನಂ ತ್ಯಕ್ತ್ವಾ ಯಸ್ಮಾದಾಜ್ಞಾಂ ವಿಹಾಯ ಮೇ ।
ಗತಾಸ್ಯತ್ರ ತತಃ ಪಾಪಾಚ್ಛಾಪದಗ್ಧಾ ಶಿಲಾ ಭವ ॥ ೨೭ ॥

ಭರ್ತಾ ಧರ್ಮವ್ರತಾ ಶಪ್ತಾ ಮರೀಚಿಂ ಪ್ರಾಹ ಸಾ ರುಷಾ ।
ತಯಾನೇ ತ್ವಯಿ ಸಂಪ್ರಾಪ್ತೇ ಬ್ರಹ್ಮಾ ತ್ವಜ್ಜನಕೋ ಗರುಃ ॥ ೨೮ ॥

ತ್ವಯೋತ್ಥಾಯ ಹಿ ಕರ್ತವ್ಯಂ ಸ್ವಗುರೋಃ ಪೂಜನಂ ಸದಾ ।
ಮಯಾ ತು ಧರ್ಮಚಾರಿಣ್ಯಾ ತವಕಾರ್ಯೇ ಕೃತೇ ಮುನೇ ॥ ೨೯ ॥

ಅದೋಷಾಹಂ ಯತಃ ಶಪ್ತಾ ತಸ್ಮಾಚ್ಛಾಪಂ ದದಾಮಿ ತೇ ।
ತ್ವಂ ಚ ಶಾಪಂ ಮಹಾದೇವಾದ್ಧೂರ್ತಃ ಪ್ರಾಪ್ಸ್ಯಸ್ಯಸಂಶಯಂ ॥ ೩೦ ॥

ವ್ಯಾಕುಲಂ ತಂ ಪತಿಂ ದೃಷ್ಟ್ವಾ ವ್ಯಾಕುಲಾಗಾತ್ಪ್ರಜಾಪತಿಂ ।
ನತ್ವಾ ತಯಾನಂ ಬ್ರಹ್ಮಾಣಮಗ್ನಿಂ ಪ್ರಜ್ವಾಲ್ಯ ಚೇಂಧನೈಃ ॥ ೩೧ ॥

---

೨೭. ಎಲೌ ಪತ್ನಿಯೇ, ನೀನು ನನ್ನ ಪಾದಸೇವೆಯನ್ನು ಬಿಟ್ಟು ನನ್ನ ಆಜ್ಞೆಯನ್ನು ಮೀರಿ, ಬೇರೆ ಕಾರ್ಯದಲ್ಲಿ ನಿರತಳಾಗಿರುವೆ. ಆದುದರಿಂದ ನೀನು ಶಿಲೆಯಾಗೆಂದು ಶಾಪವನ್ನು ಕೊಟ್ಟನು.

೨೮. ಹೀಗೆ ಪತಿಯಿಂದ ಶಪ್ತಳಾದ ಧರ್ಮವ್ರತೆಯು ಕೋಪದಿಂದ ಮರೀಚಿಯನ್ನು ಕುರಿತು, ನೀವು ಮಲಗಿ ನಿದ್ರಿಸುತ್ತಿರುವಾಗ ನಿಮ್ಮ ತಂದೆಯವರು ಬಂದರೆ ನಾನು ಹೋಗಿ ಅವರಿಗೆ ಪೂಜಿಸುವುದು ಯುಕ್ತವಾಗಿದೆಯಲ್ಲವೇ ? ಎಂದು ಹೇಳಿದಳು.

೨೯-೩೦. ನಿಮ್ಮ ತಂದೆಯು ಬಂದಾಗ ನೀವೇ ಎದ್ದು ಮಾಡಬೇಕಾದ ಪೂಜೆಯನ್ನು ನಾನು ಮಾಡಿರುವುದು ಅಧರ್ಮವೇ ? ಇದು ನೀವು ಮಾಡಬೇಕಾದ ಕಾರ್ಯವಲ್ಲವೇ ? ಹೀಗೆ ನಿರ್ದೋಷಿಯಾದ ನನಗೆ ಶಾಪವನ್ನು ಕೊಟ್ಟಿರುವುದರಿಂದ ನಾನೂ ಕೂಡ ಪ್ರತಿಯಾಗಿ ಶಾಪವನ್ನು ಕೊಡುವೆನು. ಎಲೈ ಪ್ರಿಯನೇ ನೀನೂ ಕೂಡ ಮಹದೇವನಿಂದ ಖಂಡಿತವಾಗಿಯೂ ಶಾಪವನ್ನು ಪಡೆಯುವವನಾಗು ಇದರಲ್ಲಿ ಸಂದೇಹವಿಲ್ಲವೆಂದು ಹೇಳಿದಳು.

೩೧. ಆಗ ಧರ್ಮವ್ರತೆಯು ವ್ಯಾಕುಲನಾದ ತನ್ನ ಪತಿಯನ್ನು ನೋಡಿ ತಾನೂ ವ್ಯಾಕುಲಿತಳಾಗಿ ಬ್ರಹ್ಮದೇವನ ಬಳಿಗೆ ಹೋಗಿ ನಮಸ್ಕರಿಸಿ, ಸಂಗತಿಗಳನ್ನು ತಿಳಿಸಿದಳು. ತರುವಾಯ ತಪಸ್ಸಿಗಾಗಿ ಸೌದೆಗಳಿಂದ ಅಗ್ನಿಯನ್ನು ಪ್ರಜ್ವಲಿಸಿದಳು.

ಗಾರ್ಹಪತ್ಯೇ ಸ್ಥಿತಾ ಚಕ್ರೇ ತಪಃ ಪರಮದುಷ್ಕರಂ ।
ತಥಾ ಶಪ್ತೋ ಮರೀಚಿಶ್ಚ ತಪಸ್ತೇಪೇ ಸುದಾರುಣಂ ॥ ೩೨ ॥

ಪತಿವ್ರತಾಯಾಸ್ತಪಸಾ ಮರೀಚೇಸ್ತಪಸಾ ತಥಾ ।
ಇಂದ್ರಾದಯಶ್ಚ ಸಂತಪ್ತಾ ಗತಾಸ್ತೇ ಶರಣಂ ಹರಿಂ ॥ ೩೩ ॥

ಊಚುಃ ಕ್ಷೀರಾಂಬುಧೌ ಸುಪ್ತಂ ಸಂತಪ್ತಾಸ್ತಪಸಾ ಹರೇ ।
ಪತಿವ್ರತಾಯಾಶ್ಚ ಮುನೇಸ್ತ್ರೈಲೋಕ್ಯಂ ರಕ್ಷ ಕೇಶವ ॥ ೩೪ ॥

ಇಂದ್ರಾದೀನಾಂ ವಚಃ ಶ್ರುತ್ವಾ ವಿಷ್ಣುರ್ಧರ್ಮವ್ರತಾಂ ಯಯೌ ।
ಏತಸ್ಮಿನ್ನೇವ ಕಾಲೇ ತು ಪ್ರಬುದ್ಧೋ ಭಗವಾನಜಃ ॥
ಊಚುರ್ಧರ್ಮವ್ರತಾಂ ದೇವಾ ಅಗ್ನಿಸ್ಥಾಂ ತಾಂ ಸಕೇಶವಾಃ ॥ ೩೫ ॥

---

೩೨. ತರುವಾಯ ಧರ್ಮವ್ರತೆಯು, ಪ್ರಜ್ವಲಿತವಾದ ಗಾರ್ಹಪತ್ಯಾಗ್ನಿಯ ಮಧ್ಯದಲ್ಲಿ ನಿಂತುಕೊಂಡು ಪರಮದುಷ್ಕರವಾದ ತಪಸ್ಸನ್ನು ಮಾಡಿದಳು. ಅನಂತರ ಅವಳಿಂದ ಶಪ್ತನಾದ ಮರೀಚಿಮುನಿಯೂ ಸಹ ಘೋರವಾದ ತಪಸ್ಸನ್ನು ಮಾಡಿದನು.

೩೩. ಪತಿವ್ರತೆಯಾದ ಧರ್ಮವ್ರತೆ ಮಹಾತ್ಮನಾದ ಮರೀಚಿಮುನಿ ಇವರ ತಪೋಜ್ವಾಲೆಗಳಿಂದ ಪೀಡಿತರಾದ ಇಂದ್ರಾದಿದೇವತೆಗಳು ಶ್ರೀಹರಿಯನ್ನು ಮೊರೆ ಹೊಕ್ಕರು.

೩೪. ಎಲೈ ಶ್ರೀಹರಿಯೇ, ಪತಿವ್ರತೆಯಾದ ಧರ್ಮವ್ರತೆ ಮಹಾತ್ಮನಾದ ಮರೀಚಿಮುನಿ ಇವರ ಮಹಾತಪೋಜ್ವಾಲೆಗಳಿಂದ ನಮ್ಮನ್ನು ರಕ್ಷಿಸು, ಮೂರು ಲೋಕಗಳೂ ಪೀಡಿತವಾಗಿವೆಯೆಂದರು.

೩೫. ಹೀಗೆ ಇಂದ್ರಾದಿದೇವತೆಗಳ ಮಾತುಗಳನ್ನು ಕೇಳಿದ ಶ್ರೀಹರಿಯು ಧರ್ಮವ್ರತೆಯ ಬಳಿಗೆ ಹೊರಟನು. ಅಷ್ಟರಲ್ಲಿ ಭಗವಂತನಾದ ಬ್ರಹ್ಮನು ಎಚ್ಚರಗೊಂಡಿದ್ದನು. ತರುವಾಯ ಅಗ್ನಿಮಧ್ಯದಲ್ಲಿ ತಪಸ್ಸನ್ನು ಮಾಡುತ್ತಿದ್ದ ಧರ್ಮವ್ರತೆಯನ್ನು ಕುರಿತು, ಶ್ರೀಹರಿಯೇ ಮೊದಲಾದ ದೇವತೆಗಳು ಹೇಳಿದರು.

ಅಗ್ನಿಮಧ್ಯೇ ತಪಃ ಕರ್ತುಂ ಕಸ್ಯ ಶಕ್ತಿಃ ಪ್ರತಿವ್ರತೇ ।
ತ್ವಯಾ ಕೃತಂ ತತ್ಪರಮಂ ಸರ್ವಲೋಕಭಯಂಕರಂ ॥ ೩೩ ॥

ವರಂ ವರಯ ಧರ್ಮಜ್ಞೇ ಅಸ್ಮತ್ತೋ ಯದಭೀಪ್ಸಿತಂ ।
ವಿಷ್ಣ್ವಾದೀನಾಂ ವಚಃ ಶ್ರುತ್ವಾ ದೇವಾನ್ ಧರ್ಮವ್ರತಾಬ್ರವೀತ್ ॥ ೩೭ ॥

ಭರ್ತೃಶಾಪಮಶಕ್ತಾಹಂ ನಿವರ್ತಯಿತುಮೋಜಸಾ ।
ದತ್ತೋ ಮರೀಚಿನಾ ಶಾಪೋ ಮಹ್ಯಂ ಸ ಹ್ಯಪಗಚ್ಛತು ॥ ೩೮ ॥

ಧರ್ಮವ್ರತಾವಚಃ ಶ್ರುತ್ವಾ ಪ್ರೋಚುರೇತಾಂ ಸುರಾಃ ಪುನಃ ।
ಧರ್ಮವ್ರತೇ ಧರ್ಮಪುತ್ರೀ ಶಾಪೋಽಯಂ ಪರಮರ್ಷಿಣಾ ॥ ೩೯ ॥

---

೩೬. ಎಲೈ ಸಾಧ್ವೀಶಿರೋಮಣಿಯೇ, ನಿನ್ನಂತೆ ಅಗ್ನಿಮಧ್ಯದಲ್ಲಿ ಘೋರವಾದ ತಪಸ್ಸನ್ನು ಮಾಡಲು ಯಾರಿಗೆ ಸಾಧ್ಯವು. ನೀನು ಮಾಡುವ ಈ ತಪಸ್ಸು ಸಮಸ್ತ ಲೋಕಕ್ಕೂ ಭಯಪ್ರದವಾಗಿದೆಯೆಂದು ದೇವತೆಗಳು ಹೇಳಿದರು.

೩೭. ಆದುದರಿಂದ ಧರ್ಮಜ್ಞಳಾದ ಧರ್ಮವ್ರತೆಯೇ, ನಿನಗೆ ಬೇಕಾದ ವರಗಳನ್ನು ಬೇಡಿಕೋ ಕೊಡುತ್ತೇವೆ ಎನಲು, ಆಕೆಯು ಆ ಮಾತುಗಳನ್ನು ಕೇಳಿ ದೇವತೆಗಳಿಗೆ ಹೀಗೆ ಹೇಳಿದಳು.

೩೮. ಎಲೈ ದೇವತೆಗಳಿರಾ, ನನ್ನ ಪತಿಯಾದ ಮರೀಚಿಮುನಿಯು ಶಿಲೆಯಾಗುವಂತೆ ನನಗೆ ಶಾಪವನ್ನು ಕೊಟ್ಟಿರುವನು. ಅದನ್ನು ಪರಿಹರಿಸಿಕೊಳ್ಳಲು ನನಗೆ ಶಕ್ತಿಯಿಲ್ಲ. ಅದನ್ನು ನೀವು ಪರಿಹರಿಸಬೇಕು ಇದಕ್ಕಾಗಿ ತಪಸ್ಸನ್ನಾಚರಿಸುತ್ತಿದ್ದೇನೆಂದು ತಿಳಿಸಿದಳು.

೩೯. ಆಗ ಬ್ರಹ್ಮಾದಿ ದೇವತೆಗಳು ಅವಳ ಮಾತುಗಳನ್ನು ಕೇಳಿ, ಪತಿವ್ರತೆಯಾದ ನಿನಗೆ ನಿನ್ನ ಪತಿಯಾದ ಮರೀಚಿಮುನಿಯು ಕೊಟ್ಟ ಶಾಪವನ್ನು ಪರಿಹರಿಸಲು ನಮಗೆ ಸಾಮರ್ಥ್ಯವಿಲ್ಲ. ಆದುದರಿಂದ ಬೇರೊಂದು ವರವನ್ನು ಕೇಳು ಕೊಡುತ್ತೇವೆ. ಅದರಿಂದ ಲೋಕಗಳಲ್ಲಿ ಧರ್ಮವು ಸ್ಥಾಪಿತವಾಗಲೆಂದು ಹೇಳಿದರು.

ದತ್ತಸ್ತೇನ ನಿರಾಕರ್ತುಂ ಶಕ್ಯೋ ದೇವದ್ವಿಜಾತಿಭಿಃ ।
ತಸ್ಮಾದನ್ಯಂ ವರಂ ಬ್ರೂಹಿ ಯತೋ ಧರ್ಮಸ್ಯ ಸಂಸ್ಥಿತಿಃ ॥ ४೦ ॥

ಭವೇದ್ವೈ ತ್ರಿಷು ಲೋಕೇಷು ವೇದೋಕ್ತಸ್ಯ ಶುಭವ್ರತೇ ।
ದೇವಾನಾಂ ವಚನಂ ಶ್ರುತ್ವಾ ದೇವಾನ್ ಧರ್ಮವ್ರತಾಬ್ರವೀತ್ ॥ ೪೧ ॥

ಭರ್ತುಃ ಶಾಪಾನ್ ಮೋಚಯಿತುಂ ನ ಶಕ್ತಾಶ್ಚ ಯದಾಮರಾಃ ।
ಮಹ್ಯಂ ವರಂ ಪ್ರಯಚ್ಛಧ್ವಮೇವಂವಿಧಮನುತ್ತಮಂ ॥ ೪೨ ॥

ಶಿಲಾಹಂ ಹಿ ಭವಿಷ್ಯಾಮಿ ಬ್ರಹ್ಮಾಂಡೇ ಪಾವನೀ ಶುಭಾ ।
ನದೀನದಸರಸ್ತೀರ್ಥ ದೇವಾದಿಭ್ಯೋಽತಿಪಾವನೀ ॥ ೪೩ ॥

ಋಷ್ಯಾದಿಭ್ಯೋ ಮುನಿಭ್ಯಶ್ಚ ಮುಖ್ಯದೇವೇಭ್ಯ ಏವ ಚ ।
ತ್ರೈಲೋಕ್ಯೇ ಯೋನಿ ಲಿಂಗಾನಿ ವ್ಯಕ್ತಾವ್ಯಕ್ತಾತ್ಮಕಾನ್ಯಪಿ ॥
ತಾನಿ ತಿಷ್ಠಂತು ಮದ್ದೇಹೇ ತೀರ್ಥರೂಪೇಣ ಸರ್ವದಾ ॥ ೪೪ ॥

---

೪೧. ಎಲೌ ಮಂಗಳಾಂಗಿಯೇ, ವೇದಜ್ಞರಾದ ಮಹರ್ಷಿಗಳು ಹೇಳಿದ ವಚನಗಳು ಸತ್ಯವಲ್ಲವೇ? ಅವು ಎಂದಿಗೂ ಅನೃತವಾಗುವುದಿಲ್ಲವೆನಲು ಧರ್ಮವ್ರತೆಯು ಪುನಃ ದೇವತೆಗಳಿಗೆ ಹೀಗೆ ಹೇಳಿದಳು.

೪೨. ಎಲೈ ಅಮರೋತ್ತಮರೇ, ನನ್ನ ಪತಿಯ ಶಾಪವನ್ನು ಪರಿಹರಿಸಲು ಶಕ್ತಿಯಿಲ್ಲದಿದ್ದರೆ ಇದಕ್ಕೆ ಸಮವೂ, ಉತ್ತಮವೂ ಆದ ಬೇರೊಂದು ವರವನ್ನಾದರೂ ದ..ಪಾಲಿಸಿರೆಂದು ಪ್ರಾರ್ಥಿಸಿದಳು.

೪೩. ಎಲೈ ಅಮರೋತ್ತಮರೇ, ನಾನು ಪತಿಯ ಶಾಪದಿಂದ ಶಿಲೆಯ ರೂಪವನ್ನು ಹೊಂದುತ್ತೇನೆಯಲ್ಲವೆ? ಆ ಶಿಲೆಯಾದರೂ ಈ ಬ್ರಹ್ಮಾಂಡದಲ್ಲಿರುವ ಸಮಸ್ತವಾದ ತೀರ್ಥಕ್ಷೇತ್ರಗಳು ನದೀನದಸರೋವರಗಳು ಮತ್ತು ದೇವತೆಗಳು ಇವರೆಲ್ಲರಿಗಿಂತಲೂ ಅತಿಪವಿತ್ರವೂ, ಮಂಗಳಕರವೂ, ಆಗುವಂತೆ ವರವನ್ನು ಕೊಡಿರೆಂದು ಬೇಡಿದಳು

೪೪. ಮತ್ತು ಆ ಶಿಲೆಯು ಮುನಿಗಳು, ಮಹರ್ಷಿಗಳು, ಮುಖ್ಯರಾದ ದೇವತೆಗಳು ಇವರಿಗಿಂತಲೂ ಪವಿತ್ರವಾಗಲಿ. ಮತ್ತು ಮೂರು ಲೋಕಗಳಲ್ಲಿ ವ್ಯಕ್ತಾವ್ಯಕ್ತಗಳೂ, ಸುಪ್ರಸಿದ್ಧಗಳೂ ಆದ ಈಶ್ವರಲಿಂಗಗಳೂ ಸಮಸ್ತ ತೀರ್ಥಗಳೂ ಶಿಲಾರೂಪವಾದ ನನ್ನ ದೇಹದ ಮೇಲೆ ಸದಾ ಸನ್ನಿಹಿತವಾಗಿರಲೆಂದು ಪ್ರಾರ್ಥಿಸಿದಳು.

ತೀರ್ಥಾನ್ಯಪಿ ಚ ಸರ್ವಾಣಿ ನಕ್ಷತ್ರಪ್ರಮುಖಾಸ್ತಥಾ ।
ತಿಷ್ಠಂತು ದೇವಾಃ ಸಕಲಾಃ ದೇವ್ಯಶ್ಚ ಮುನಯಸ್ತಥಾ ॥ ೪೫ ॥

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಲಕ್ಷಯಿತ್ವಾ ಪದಂ ಮಯಿ ।
ಪಂಚಾಗ್ನಯಃ ಕುಮಾರಾದ್ಯಾ ಬಹುರೂಪೇಣ ಸಂಸ್ಥಿತಾಃ ॥ ೪೬ ॥

ಮೂರ್ತಾಮೂರ್ತಸ್ವರೂಪೇಣ ಪದರೂಪೇಣ ದೇವತಾಃ ।
ಶಿಲಾಯಾಂ ಕ್ರೋಶಮಾತ್ರೇಣ ಮೂರ್ತಿರೂಪಾಃ ಸ್ಥಿತಾ ಭುವಿ ॥ ೪೭ ॥

ತಾಂ ದೃಷ್ಟ್ವಾ ಸರ್ವಲೋಕಶ್ಚ ಮಹಾಪಾತಕನಾಶಿನೀಂ ।
ಪೂತೋ ಧರ್ಮಾಧಿಕಾರೀ ಚ ಶ್ರಾದ್ಧಕೃದ್ಬ್ರಹ್ಮಲೋಕಭಾಕ್ ॥ ೪೮ ॥

ಶಿಲಾಸ್ಥಿತೇಷು ತೀರ್ಥೇಷು ಸ್ನಾತ್ವಾ ಕೃತ್ವಾಥ ತರ್ಪಣಂ ।
ಶ್ರಾದ್ಧಂ ಸಪಿಂಡಕಂ ಯೇಷಾಂ ಬ್ರಹ್ಮಲೋಕಂ ಪ್ರಯಾಂತು ತೇ ॥ ೪೯ ॥

---

೪೫–೪೬. ಆಕೆಯ ಪ್ರಾರ್ಥನೆಯಂತೆ ಸಮಸ್ತ ತೀರ್ಥಗಳು, ನಕ್ಷತ್ರಾದಿ ದೇವತೆಗಳು, ದೇವಪತ್ನಿಯರು, ಮಹರ್ಷಿಗಳು, ಬ್ರಹ್ಮ, ವಿಷ್ಣು, ಮಹೇಶ್ವರಾದಿಗಳು, ಪಂಚಾಗ್ನಿಗಳು, ಕುಮಾರಾದಿಗಳು ಇವರು ಅವಳ ದೇಹದ ಮೇಲೆ ಪಾದಗಳನ್ನಿಟ್ಟುಕೊಂಡು ಸದಾ ಸನ್ನಿಹಿತರಾಗಿ ನಿಂತರು.

೪೭. ಹೀಗೆ ಬ್ರಹ್ಮಾದಿ ದೇವತೆಗಳು ಮೂರ್ತಾಮೂರ್ತಸ್ವರೂಪರಾಗಿಯೂ, ಪಾದರೂಪಗಳಾಗಿಯೂ ಆ ಶಿಲೆಯ ಮೇಲೆ ಮೂರು ಹರದಾರಿಗಳವರೆಗೂ ಮೂರ್ತೀಭವಿಸಿ ವ್ಯಾಪ್ತರಾಗಿರುವರು.

೪೮. ಸಮಸ್ತ ಜನರೂ ಮಹಾಪಾತಕನಾಶಕವಾದ ಆ ಶಿಲೆಯ ದರ್ಶನ ಮಾತ್ರದಿಂದಲೇ ಸರ್ವಪಾಪಗಳಿಂದ ಮುಕ್ತರೂ, ಪವಿತ್ರರೂ, ಸರ್ವಧರ್ಮಾಚರಣೆಗೆ ಅಧಿಕಾರಿಗಳೂ ಆಗಿ ಕೊನೆಗೆ ಶ್ರಾದ್ಧವನ್ನು ಮಾಡಿ ಬ್ರಹ್ಮಲೋಕವನ್ನು ಹೊಂದುವರು.

೪೯. ಯಾವ ಪುರುಷರು ಆ ಶಿಲೆಯಲ್ಲಿರುವ ತೀರ್ಥಗಳಲ್ಲಿ ಸ್ನಾನ, ಜಪ, ತಪ, ತರ್ಪಣ, ಶ್ರಾದ್ಧ, ಪಿಂಡದಾನಾದಿಗಳನ್ನು ಮಾಡುವರೋ ಅವನು ಬ್ರಹ್ಮಲೋಕಕ್ಕೆ ಹೋಗುವರು.

ಗದಾಧರೋ ದೃಶ್ಯತೀರ್ಥಂ ಸರ್ವತೀರ್ಥೋತ್ತಮೋತ್ತಮಂ ।
ಸ್ಥಾಸ್ಯಂತಿ ಚ ಮರಿಷ್ಯಂತಿ ಯಾಂತು ಬ್ರಹ್ಮಪುರೀಂ ನರಾಃ ॥
ವಾರಾಣಸೀ ಪ್ರಯಾಗಶ್ಚ ಪುರುಷೋತ್ತಮಸಂಜ್ಞಿಕಂ ॥ ೫೦ ॥

ಗಂಗಾಸಾಗರಸಂಜ್ಞಂ ಚ ನಿತ್ಯಂ ತಿಷ್ಠತು ಫಲ್ಗುನಿ ।
ಗದಾಧರಾಧಿಷ್ಠಿತಂ ತತ್ಸರ್ವತೀರ್ಥೋತ್ತಮೋತ್ತಮಂ ॥
ಮುಕ್ತಿರ್ಭವೇತ್ ಪಿತ್ರೂಣಾಂ ಚ ಮೃತಾನಾಂ ಶ್ರಾದ್ಧತಃ ಸದಾ ॥ ೫೧ ॥

ಜರಾಯುಜಾಂಡಜಾ ವಾಪಿ ಸ್ವೇದಜಾ ವಾಪಿ ಚೋದ್ಭಿದಃ ।
ತ್ಯಕ್ತ್ವಾ ದೇಹಂ ಶಿಲಾಯಾಂತೇ ಯಾಂತು ವಿಷ್ಣುಸ್ವರೂಪತಾಂ ॥ ೫೨ ॥

ಯಥಾರ್ಚಿತೇ ಹರೌ ಸರ್ವೇ ಯಜ್ಞಾಃ ಪೂರ್ಣಾ ಭವಂತಿ ಹಿ ।
ತಥಾ ಶ್ರಾದ್ಧಂ ತರ್ಪಣಂ ಚ ಸ್ನಾನಂ ಚಾಕ್ಷಯಮಸ್ತ್ವಿಹ ॥ ೫೩ ॥

---

೫೦–೫೧. ಗದಾಧರನೂ ಸರ್ವತೀರ್ಥೋತ್ತಮವಾದ ದೃಶ್ಯತೀರ್ಥವೂ ಆ ಶಿಲೆಯಲ್ಲಿ ಸನ್ನಿಹಿತವಾಗಿವೆ. ಆ ಕ್ಷೇತ್ರದಲ್ಲಿ ಮೃತರಾದ ಪುರುಷರು, ಬ್ರಹ್ಮಪುರಿಗೆ ಹೋಗುವರು. ಕಾಶೀನಗರಿಯು, ಪ್ರಯಾಗವು, ಪುರುಷೋತ್ತಮಕ್ಷೇತ್ರವು, ಗಂಗಾ ಸಾಗರಸಂಗಮವು ಇವೇ ಮೊದಲಾದ ಕ್ಷೇತ್ರಗಳು, ಸರ್ವಕಾಲದಲ್ಲಿಯೂ, ಫಲ್ಗು ಕ್ಷೇತ್ರದಲ್ಲಿ ಸನ್ನಿಹಿತವಾಗಿರುತ್ತವೆ. ಗದಾಧರನಿರತಕ್ಕ ಆ ತೀರ್ಥವು ಸರ್ವ ತೀರ್ಥೋತ್ತಮವಾಗಿದೆ. ಆ ಕ್ಷೇತ್ರದಲ್ಲಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಮುಕ್ತಿ ಯಾಗುವುದು.

೫೨. ಗರ್ಭಜನ್ಯಪ್ರಾಣಿಗಳೂ, ಅಂಡಜಪ್ರಾಣಿಗಳೂ, ಸ್ವೇದಜಪ್ರಾಣಿಗಳೂ, ಉದ್ಭಿಜಪ್ರಾಣಿಗಳೂ ಕೂಡ ಗಯಾಕ್ಷೇತ್ರದ ಆ ಶಿಲೆಯಮೇಲೆ ಪ್ರಾಣಗಳನ್ನು ಬಿಟ್ಟರೆ ಅವುಗಳೆಲ್ಲವೂ, ಪರಮಪದವಿಯಾದ ಮುಕ್ತಿಯನ್ನು ಪಡೆಯುತ್ತವೆ. ಈ ವಿಷಯದಲ್ಲಿ ಸಂದೇಹವಿಲ್ಲ.

೫೩. ಶ್ರೀಹರಿಯನ್ನು ಪೂಜಿಸಿದರೆ ಸಮಸ್ತ ಯಾಗಗಳ ಸಂಪೂರ್ಣ ಫಲಗಳು ಹೇಗೆ ಉಂಟಾಗುತ್ತವೆಯೋ ಹಾಗೆ ಈ ಗಯಾಕ್ಷೇತ್ರದಲ್ಲಿ ಸ್ನಾನ, ಜಪ, ತಪ, ತರ್ಪಣ, ಶ್ರಾದ್ಧಾದಿಗಳನ್ನು ಮಾಡಿದರೆ ಅಕ್ಷಯವಾದ ಫಲವು ಪ್ರಾಪ್ತಿಯಾಗುವುದು.

ಮಮ ದೇಹೇ ಸುರೇಶಾನಾಂ ಯೇ ಜಪಂತಿ ಜಪ್ರಾದಿಕಂ |
ಅಚಿರೇಣಾಪಿ ತೇ ಸಿದ್ಧಾಃ ಸಿದ್ಧಿಭಾಜೋ ಭವಂತು ವೈ || ೫೪ ||

ಪಿತೄಣಾಂ ಕುಲಸಾಹಸ್ರಮಾತ್ಮನಾ ಸಹಿತಂ ನರಃ |
ಶ್ರಾದ್ಧಾದಿನಾ ಸಮುದ್ಧೃತ್ಯ ವಿಷ್ಣುಲೋಕಂ ನಯೇದ್ ಧ್ರುವಂ || ೫೫ ||

ಯಾವತ್ಯೋಹಿ ಸರಿಚ್ಛ್ರೇಷ್ಠಾ ಗಂಗಾದ್ಯಾಶ್ಚ ಹ್ರದಾಃ ಶುಭಾಃ |
ಸಮುದ್ರಾದ್ಯಾಃ ಸರೋಮುಖ್ಯಾ ಮಾನಸಾದ್ಯಾಃ ಸುರೇಶ್ವರಾಃ ||
ನೃಣಾಂ ಶ್ರಾದ್ಧಂ ವಿದಧತೋ ಮುಕ್ತಯೇ ನಿವಸಂತು ಮೇ || ೫೬ ||

ಶರೀರೇಣ ಸಮಾಯಾಂತು ಕ್ವಚಿನ್ನೋ ಯಾಂತು ದೇವತಾಃ |
ಏಕೋ ವಿಷ್ಣುಸ್ತ್ರಿಧಾಮೂರ್ತಿರ್ಯೋವತ್ಸಂಕೀರ್ತ್ಯತೇ ಬುಧೈಃ || ೫೭ ||

---

೫೪. ಈ ನನ್ನ ದೇಹದ ಮೇಲೆ ಯಾವ ಮನುಜರು ದೇವತಾವಿಷಯಕ ವಾದ ಜಪತಪಾದಿಗಳನ್ನು ಮಾಡುವರೋ ಅವರು ಶೀಘ್ರದಲ್ಲಿಯೇ ಸಕಲ ಸಿದ್ಧಿ ಗಳನ್ನೂ ಪಡೆಯಲೆಂದು ಪ್ರಾರ್ಥಿಸಿದಳು.

೫೫. ಯಾವ ಪುರುಷನು ಈ ಗಯಾಶಿಲೆಯಲ್ಲಿ ಪಿತೃಗಳ ಉದ್ದೇಶ್ಯವಾಗಿ ಶ್ರಾದ್ಧವನ್ನು ಮಾಡುವನೋ ಅವನು ತನ್ನ ಸಹಸ್ರಾರು ಕುಲಗಳೊಡನೆ ಉದ್ಧೃತ ನಾಗಿ ಖಂಡಿತವಾಗಿಯೂ ವಿಷ್ಣುಲೋಕಕ್ಕೆ ಹೋಗುವನು.

೫೬. ಗಂಗಾದಿ ನದಿಗಳೂ, ಮಂಗಳಕರವಾದ ಹ್ರದಗಳೂ, ಸಮುದ್ರಾದಿಗಳೂ, ಸುರೇಶರೂ, ಮಾನಸಾದಿ ಸರೋವರಗಳೂ, ದೇವೇಶರೂ ಇವರು ಈ ಶಿಲೆಯಲ್ಲಿ ಶ್ರಾದ್ಧಕರ್ಮಗಳನ್ನು ಮಾಡಿದ ಪುರುಷರಿಗೆ ನಿತ್ಯಮುಕ್ತಿಯನ್ನು ಕೊಡಲಿ ಎಂದು ಬೇಡಿದಳು.

೫೭. ಕೆಲವು ದೇವತೆಗಳು ಸಶರೀರವಾಗಿ ಇಲ್ಲಿ ನಿಂತು ಸ್ವರ್ಗವನ್ನು ಪಡೆ ಯಲಿ. ಒಬ್ಬನೇ ಒಬ್ಬ ದೇವತೆಯು ಮೂರು ರೂಪಗಳಿಂದ ಈ ಶಿಲೆಯಲ್ಲಿ ನಿಂತು ಮುಕ್ತಿಪ್ರದನಾಗುವನೆಂದು ಸಮಸ್ತ ಪಂಡಿತರು ವರ್ಣಿಸುವರು.

ತಾವಚ್ಛಿಲಾಯಾಂ ಸರ್ವಾಣಿ ತೀರ್ಥಾನಿ ಸಹ ದೈವತೈಃ ।
ಸದಾ ತಿಷ್ಠಂತು ಮುನಯೋ ಗಂಧರ್ವಾಣಾಂ ಗಣಾಶ್ಚ ಯೇ ॥ ೫೮ ॥

ಸರ್ವದೇವ ಸ್ವರೂಪಾ ಚ ನಾಮೇಯಂ ದೇವರೂಪಿಣೀ ।
ಯಾವತ್ತಿಷ್ಠತಿ ಬ್ರಹ್ಮಾಂಡಂ ತಾವತ್ತಿಷ್ಠತು ವೈ ಶಿಲಾ ॥
ಮಮ ದೇಹೇಽಶ್ಮರೂಪೇ ಚ ಯೇ ಜಪಂತಿ ತಪಂತಿ ಚ ॥ ೫೯ ॥

ಜುಹೋತ್ಯಗ್ನೌ ಚ ತೇಷಾಂ ವೈ ತದಕ್ಷಯ್ಯೋಪತಿಷ್ಠತಾಂ ।
ಅಕ್ಷಯಂತು ಭವೇಚ್ಛ್ರಾದ್ಧಂ ಜಪಹೋಮತಪಾಂಸಿ ಚ ॥
ಶಿಲಾಪರ್ವತರೂಪೇಣ ಮಯಿ ತಿಷ್ಠತು ಸರ್ವದಾ ॥ ೬೦ ॥

ಪತಿವ್ರತಾವಚಃ ಶ್ರುತ್ವಾ ದೇವಾಃ ಪ್ರೋಚುಃ ಪತಿವ್ರತಾಂ ।
ತ್ವಯಾ ಯತ್ಪ್ರಾರ್ಥಿತಂ ಸರ್ವಂ ತದ್ಭವಿಷ್ಯತ್ಯಸಂಶಯಂ ॥ ೬೧ ॥

---

೫೮. ಬ್ರಹ್ಮ, ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳು ಎಲ್ಲಿಯವರೆಗೂ ಇರುವರೋ, ಅಲ್ಲಿಯವರೆಗೂ ಸರ್ವತೀರ್ಥಗಳೂ, ಸಮಸ್ತದೇವತೆಗಳೂ, ಮುನೀಶ್ವರರೂ, ಗಂಧರ್ವಗಣಗಳೂ ಕೂಡ ಸನ್ನಿಹಿತರಾಗಿರಲಿ.

೫೯-೬೦. ಈ ದೇವರೂಪಿಣಿಯು ಸಕಲ ದೇವತಾಸ್ವರೂಪಳೂ ಆಗಿರುವಳು. ಬ್ರಹ್ಮಾಂಡವು ಎಷ್ಟು ಕಾಲವಿರುವುದೋ ಅಲ್ಲಿಯವರೆಗೂ ದೇವರೂಪಿಣಿಯಾದ ಶಿಲೆಯು ಸ್ಥಿರವಾಗಿರಲೆಂದು ಪ್ರಾರ್ಥಿಸಿದಳು ಶಿಲಾರೂಪವಾದ ಈ ನನ್ನ ಶರೀರದ ಮೇಲೆ ಯಾವ ಪುರುಷರು ಜಪತಪಾದಿಗಳನ್ನೂ, ಅಗ್ನಿಹೋತ್ರಾದಿಗಳನ್ನೂ ಮಾಡುವರೋ ಅವರು ಅಕ್ಷಯವಾದ ಅನಂತ ಫಲಗಳನ್ನು ಹೊಂದುವರು. ಶಿಲಾರೂಪವಾದ ನನ್ನ ದೇಹದ ಮೇಲೆ ಮಾಡಿದ ಸ್ನಾನ, ಜಪ, ತಪ, ಹೋಮಾದಿಗಳೂ, ಶ್ರಾದ್ಧವೂ ಸಹ ಅಕ್ಷಯಫಲದಾಯಕಗಳಾಗಲೆಂದು ಪ್ರಾರ್ಥಿಸಿದಳು.

೬೧. ಧರ್ಮವ್ರತಾನಾಮಕಳೂ, ಪತಿವ್ರತಾಶಿರೋಮಣಿಯೂ ಆದ ಧರ್ಮಪುತ್ರಿಯ ವಾಕ್ಯಗಳನ್ನು ಕೇಳಿದ ದೇವತೆಗಳೆಲ್ಲರೂ ಎಲೈ ಸಾಧ್ವೀಮಣಿಯೇ, ನೀನು ಯಾವ ಯಾವ ವರಗಳನ್ನು ಪ್ರಾರ್ಥಿಸಿಕೊಂಡಿರುತ್ತೀಯೋ ಅವೆಲ್ಲವೂ ನಿಸ್ಸಂದೇಹವಾಗಿಯೂ ನೆರವೇರುವುವು ಎಂದು ದೇವತೆಗಳು ಅವಳಿಗೆ ವರವನ್ನು ಕೊಟ್ಟರು.

**ಗಯೋಸುರಸ್ಯ ಶಿರಸಿ ಭವಿಷ್ಯಸಿ ಯದಾ ಸ್ಥಿರಾ ।**
**ತದಾ ಪಾದಾದಿರೂಪೇಣ ಸ್ಥಾಸ್ಯಾಮಸ್ತ್ವಯಿ ಸುಸ್ಥಿರಾಃ ॥**
**ವರಂ ಶಿಲಾಯ್ಯೈ ದತ್ತ್ವೈವಂ ತತ್ರೈವಾಂತರ್ದ್ಧಘುಃ ಸುರಾಃ ॥ ೬೨ ॥**

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ "ಗಯಾಮಾಹಾತ್ಮ್ಯಂ" ನಾಮ ಪಂಚಚತ್ವಾರಿಂಶೋಽಧ್ಯಾಯಃ**

---

೬೨. ಎಲೈ ಧರ್ಮವ್ರತಯೇ, ನೀನು ಈ ಗಯಾಸುರನ ಶಿರಸ್ಸಿನ ಮೇಲೆ ಎಲ್ಲಿಯವರೆಗೂ ಶಿಲಾರೂಪಳಾಗಿ ಸ್ಥಿರವಾಗಿ ವಾಸಿಸುವಿಯೋ ಅಲ್ಲಿಯವರೆಗೂ ನಾವು ನಿನ್ನಲ್ಲಿ ಪಾದರೂಪದಿಂದ ಸ್ಥಿರವಾಗಿರುವೆವು. ಎಂದು ಬ್ರಹ್ಮಾದಿದೇವತೆಗಳು ಶಿಲಾ ರೂಪಿಯಾದ ಅವಳಿಗೆ ವರಗಳನ್ನು ಕೊಟ್ಟು ಅಲ್ಲಿಯೇ ಅಂತರ್ಧಾನರಾದರು. (ಮಾಯವಾದರೆಂದು) ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಗಯಾಮಾಹಾತ್ಮ್ಯ ನಿರೂಪಣೆ"ಯೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು.



## ನಲವತ್ತೈದನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಗಯಾಶಿಲೆಯು ವರ್ಣಿತವಾಗಿದೆ. ನಾರದರು ಸನತ್ಕುಮಾರರನ್ನು ಕುರಿತು, ಈ ಶಿಲೆಯು ಹೇಗೆ ಉತ್ಪನ್ನವಾಯಿತು. ಆ ಅಸುರನ ತಲೆಯ ಮೇಲೆ ಶಿಲೆಯು ಬರಲು ಕಾರಣವೇನು? ಅವನ ಮಹಿಮೆಗಳಾವುವು? ಇವೆಲ್ಲವನ್ನೂ ತಿಳಿಸಬೇಕೆಂದು ಕೇಳಲು ಅವರು ಎಲ್ಲವನ್ನೂ ನಿರೂಪಿಸಿದರು.

ಪೂರ್ವದಲ್ಲಿ ಧರ್ಮದೇವ ವಿಶ್ವರೂಪೆಯೆಂಬ ದಂಪತಿಗಳಿಗೆ ಪತಿವ್ರತೆಯಾದ ಧರ್ಮವ್ರತೆಯೆಂಬ ಕುಮಾರಿಯು ಜನಿಸಿದಳು. ತಂದೆಯು ಆ ಪುತ್ರಿಗೆ ಅನುಗುಣನಾದ ವರನನ್ನು ಹುಡುಕಲಾಗಿ ಯೋಗ್ಯನಾದ ವರನು ದೊರೆಯಲಿಲ್ಲ. ಆಗ ಎಲೌ ಕುಮಾರಿಯೇ, ನೀನು ತಪಸ್ಸಿನಿಂದ ವರನನ್ನು ಪಡೆಯೆಂದು ಹೇಳಿದನು. ಅದರಂತೆ ಅವಳು ಪಂಚಾಗ್ನಿಗಳ ಮಧ್ಯದಲ್ಲಿ ಘೋರವಾದ ತಪಸ್ಸನ್ನು ಮಾಡುತ್ತಿದ್ದಳು. ಹೀಗಿರುವಲ್ಲಿ ಬ್ರಹ್ಮನ ಮಾನಸಪುತ್ರನಾದ ಮರೀಚಿಮುನಿಯು ಸಂಚರಿಸುತ್ತಾ ಅಲ್ಲಿಗೆ ಬಂದು ಅವಳ ರೂಪಕ್ಕೆ ಮೆಚ್ಚಿ ನೀನು ಯಾರೆಂದೂ ಏಕೆ ತಪಸ್ಸನ್ನು ಮಾಡುತ್ತಿರುವೆಯೆಂದೂ ಕೇಳಿದನು. ಆಗ ಅವಳು ಉತ್ತಮನಾದ ಪತಿಯನ್ನು ಪಡೆಯಲು ಹೀಗೆ ಮಾಡುತ್ತಿರುತ್ತೇನೆಂದಳು. ಆಗ ಪರಸ್ಪರ ಅನುರೂಪರೆಂದು ಭಾವಿಸಿ ಧರ್ಮನು ಕುಮಾರಿಯನ್ನು ಅವನಿಗೆ ದಾನಮಾಡಿದನು. ತರುವಾಯ ಮರೀಚಿಯು ಪತ್ನಿಯೊಡನೆ ತನ್ನಾಶ್ರಮದಲ್ಲಿ ಸುಖವಾಗಿ ವಾಸಿಸಿದನು.

ಒಂದು ದಿನ ಮರೀಚಿಯು ಶ್ರಮದಿಂದ ಮಲಗಿ ಸೇವೆಯನ್ನು ಮಾಡೆಂದು ಆಜ್ಞಾಪಿಸಿ ನಿದ್ರಿಸಿದನು. ಹೀಗಿರುವಲ್ಲಿ ಬ್ರಹ್ಮನು ಅಲ್ಲಿಗೆ ಬರಲು ಅವಳು ಎದ್ದು ಬ್ರಹ್ಮನಿಗೆ ಉಪಚರಿಸಿದಳು. ತರುವಾಯ ನಿದ್ರೆಯಿಂದ ಎದ್ದ ಮರೀಚಿಯು ತನ್ನ ಸೇವೆಯನ್ನು ಬಿಟ್ಟ ಪತ್ನಿಗೆ ಕೋಪದಿಂದ ಶಿಲೆಯಾಗೆಂದು ಶಾಪವನ್ನು ಕೊಟ್ಟನು. ತರುವಾಯ ಅವಳು ತಪಸ್ಸನ್ನು ಮಾಡಿ ಪತಿಯ ಶಾಪದಿಂದ ಮುಕ್ತಳಾಗುವಂತೆ ಮಾಡಬೇಕೆಂದು ಬೇಡಿದಳು. ಹಾಗೆ ಆಗದೆ ಗಯಾಸುರನ ತಲೆಯ ಮೇಲೆ ಶಿಲೆಯಾಗಿ ನಿಂತಳು. ಅನಂತರ ಗಯಾಸುರನು ನಿಶ್ಚಲನಾದನು. ಆಗ ಅವಳು ಬ್ರಹ್ಮ, ವಿಷ್ಣು, ಮಹೇಶ್ವರಾದಿ ಸಕಲ ದೇವತೆಗಳೂ, ಸಕಲ ತೀರ್ಥಗಳೂ, ನಿಶ್ಚಲವಾಗಿ ನನ್ನಲ್ಲಿರಬೇಕೆಂದು ಕೇಳಲು ಹಾಗೆಯೇ ಆಗಲೆಂದು ವರವನ್ನು ಕೊಟ್ಟರು. ಅದರಂತೆ ಸನ್ನಿಹಿತರಾಗಿರುವರು. ಆದುದರಿಂದ ಆ ಶಿಲೆಯಲ್ಲಿ ಜಪತಪಹೋಮ ಶ್ರಾದ್ಧಾದಿಗಳನ್ನು ಮಾಡಿದರೆ ಪಿತೃಗಳು ಅಕ್ಷಯವಾದ ಪರಮಪದವಿಯನ್ನು ಹೊಂದುವರೆಂದು ಸನತ್ಕುಮಾರರು ನಾರದರಿಗೆ ತಿಳಿಸಿದರು.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಮಹಾಪುರಾಣಂ

## ಷಟ್ಚತ್ವಾರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ವಕ್ಷ್ಯೇ ಶಿಲಾಯಾ ಮಾಹಾತ್ಮ್ಯಂ ಶೃಣು ನಾರದ ಮುಕ್ತಿದಂ ।
ಯಸ್ಯಾ ಗಾಯಂತಿ ದೇವಾಶ್ಚ ಮಾಹಾತ್ಮ್ಯಂ ಮುನಿಪುಂಗವಾಃ ॥ ೧ ॥

ಶಿಲಾ ಸ್ಥಿತಾ ಪೃಥಿವ್ಯಾಂ ಸಾ ದೇವರೂಪಾತಿಪಾವನೀ ।
ವಿಚಿತ್ರಾಖ್ಯಂ ಶಿಲಾತೀರ್ಥಂ ತ್ರಿಷು ಲೋಕೇಷು ವಿಶ್ರುತಂ ॥ ೨ ॥

ತಸ್ಯಾಃ ಸಂಸ್ಪರ್ಶನಾಲ್ಲೋಕಾಃ ಸರ್ವೇ ಹರಿಪುರಂ ಯಯುಃ ।
ಶೂನ್ಯೇ ಲೋಕತ್ರಯೇ ಜಾತೇ ಶೂನ್ಯಾ ಯಮಪುರೀ ಹ್ಯಭೂತ್ ॥ ೩ ॥

---

## ನಲವತ್ತಾರನೆಯ ಅಧ್ಯಾಯವು

೧. ಸನತ್ಕುಮಾರಮುನಿಯು ಹೇಳಿದನು :—ಎಲೈ ನಾರದನೇ, ಮುಕ್ತಿದಾಯಕವಾದ ಆ ಶಿಲೆಯ ಮಹಿಮೆಗಳನ್ನು ಹೇಳುತ್ತೇನೆ ಕೇಳು. ಆ ಶಿಲೆಯ ಮಾಹಾತ್ಮ್ಯಗಳನ್ನು ದೇವತೆಗಳೂ, ಮುನೀಶ್ವರರೂ ಕೂಡ ಸರ್ವಕಾಲದಲ್ಲಿಯೂ ವರ್ಣಿಸುತ್ತಾರೆ.

೨. ಸಕಲ ದೇವತಾಸ್ವರೂಪವೂ, ಅತಿಪವಿತ್ರವೂ ಆದ ಆ ಶಿಲೆಯು ಈ ಭೂಲೋಕದಲ್ಲಿ ಪ್ರಸಿದ್ಧವಾಗಿದೆ. ವಿಚಿತ್ರವಾದ ಮಹಿಮೆಯುಳ್ಳ ಈ ಶಿಲಾತೀರ್ಥವು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ.

೩. ಅಂತಹ ಶಿಲೆಯ ಸ್ಪರ್ಶಮಾತ್ರದಿಂದಲೇ ಸಮಸ್ತರಾದ ಜನರೂ ವೈಕುಂಠ ಲೋಕವನ್ನು ಹೊಂದುವರು. ಇದರಿಂದ ಮೂರು ಲೋಕಗಳೂ, ಯಮಪುರಿಯೂ ಜನರಿಲ್ಲದೇ ಶೂನ್ಯವಾದುವು.

ಯಮ ಇಂದ್ರಾದಿಭಿರ್ಗತ್ವಾ ಊಚೇ ಬ್ರಹ್ಮಾಣಮುದ್ಭುತಂ ।
ಅಧಿಕಾರಂ ಗೃಹಾಣಾಥ ಯಮದಂಡಂ ಪಿತಾಮಹ ॥ ೪ ॥

ಯಮಮೂಚೇ ತತೋ ಬ್ರಹ್ಮಾ ಸ್ವಗೃಹೇ ಧಾರಯಸ್ವ ತಾಂ ।
ಬ್ರಹ್ಮೋಕ್ತೋ ಧರ್ಮರಾಜಸ್ತು ಗೃಹೇ ತಾಂ ಸಮಧಾರಯೆತ್ ॥ ೫ ॥

ಯಮೋಽಧಿಕಾರಂ ಸ್ವಂ ಚಕ್ರೇ ಪಾಪಿನಾಂ ಶಾಸನಾದಿಕಂ ।
ಏವಂ ವಿಧಾ ಗುರುತರಾ ಶಿಲಾ ಜಗತಿ ವಿಶ್ರುತಾ ॥ ೬ ॥

ಯಥಾ ಬ್ರಹ್ಮಾ ಯಥಾ ವಿಷ್ಣುರ್ಯಥಾ ದೇವೋ ಮಹೇಶ್ವರಃ ।
ಬ್ರಹ್ಮಾಂಡೇ ಚ ಯಥಾ ಮೇರುಸ್ತಥೇಯಂ ದೇವರೂಪಿಣೀ ॥ ೭ ॥

---

೪. ತರುವಾಯ ಯಮದೇವನು ಇಂದ್ರಾದಿಗಳೊಡನೆ ಸತ್ಯಲೋಕಕ್ಕೆ ಹೋಗಿ ಎಲೈ ಸ್ವಾಮಿಯೇ ನನ್ನ ನಗರಿಯು ಶೂನ್ಯವಾಗಿದೆ. ಈ ಯಮಲೋಕದ ಅಧಿಕಾರವನ್ನೂ, ಯಮದಂಡವನ್ನೂ ನೀನೇ ಸ್ವೀಕರಿಸಬೇಕು. ನನಗೆ ಯಾವ ಕಾರ್ಯವೂ ಇಲ್ಲದಂತಾಗಿದೆಯೆಂದನು.

೫. ಅನಂತರ ಬ್ರಹ್ಮದೇವನು ಎಲೈ ಯಮದೇವನೇ, ನೀನು ಆ ಶಿಲೆಯನ್ನು ನಿನ್ನ ಗೃಹದಲ್ಲಿಯೇ ಇಟ್ಟುಕೋ ಎಂದು ಹೇಳಿದನು. ತರುವಾಯ ಬ್ರಹ್ಮನ ಮಾತಿನಂತೆ ಯಮಧರ್ಮನು ಆ ಶಿಲೆಯನ್ನು ತನ್ನ ಗೃಹದಲ್ಲಿಯೇ ಸ್ಥಾಪಿಸಿಕೊಂಡನು.

೬. ಅನಂತರ ಧರ್ಮರಾಜನು ಪಾಪಿಗಳನ್ನು ಶಾಸನಮಾಡುವ ತನ್ನ ಅಧಿಕಾರವನ್ನು ಪುನಃ ಸ್ವೀಕರಿಸಿದನು. ಹೀಗೆ ಆ ಶಿಲೆಯು ಮೂರು ಲೋಕಗಳಲ್ಲಿ ಪ್ರಖ್ಯಾತವಾಗಿಯೂ, ಸರ್ವಮಾನ್ಯವಾಗಿಯೂ ಆಗಿತ್ತು.

೭. ಈ ಸಮಸ್ತಲೋಕಗಳಲ್ಲಿಯೂ ಬ್ರಹ್ಮ, ವಿಷ್ಣು, ಮಹೇಶ್ವರರು ಹೇಗೆ ಸರ್ವರಿಂದ ಮಾನ್ಯರಾಗಿರುವರೋ ಬ್ರಹ್ಮಾಂಡದಲ್ಲಿ ಮೇರುಗಿರಿಯು ಹೇಗೆ ಸಕಲ ದೇವತೆಗಳಿಗೆ ಆಶ್ರಯವಾಗಿರುವುದೋ ಅದರಂತೆ ದೇವರೂಪಿಯಾದ ಈ ಶಿಲೆಯೂ ಸಹ ಸರ್ವಮಾನ್ಯವಾಗಿಯೂ, ಸರ್ವಾಶ್ರಯವಾಗಿಯೂ ಇರುತ್ತದೆ.

ಗಯಾಸುರಸ್ಯ ಶಿರಸಿ ಗುರುತ್ವಾದ್ಧಾರಿತಾ ಯತಃ
ಅತಃ ಪವಿತ್ರಯೋರ್ಯೋಗಃ ಪಿತೄಣಾಂ ಮೋಕ್ಷದಾಯಕಃ || ೮ ||

ಪವಿತ್ರಯೋರ್ದ್ವಯೋರ್ಯೋಗೇ ಹಯಮೇಧಮಜೋಽಕರೋತ್ |
ಭಾಗಾರ್ಥಮಾಗತಾನ್ ದೃಷ್ಟ್ವಾ ವಿಷ್ಣ್ವಾದೀನಬ್ರವೀಚ್ಛಿಲಾ || ೯ ||

ಶಿಲಾಸ್ಥಿತಿಪ್ರತಿಜ್ಞಾಂ ತು ಕುರ್ವಂತು ಪಿತೃಮುಕ್ತಯೇ |
ತಥೇತ್ಯುಕ್ತ್ವಾ ಶಿಲಾಯಾಂತೇ ದೇವಾ ವಿಷ್ಣ್ವಾದಯಃ ಸ್ಥಿತಾಃ || ೧೦ ||

ಶಿಲಾರೂಪೇಣ ಮೂರ್ತ್ಯಾ ಚ ಪದರೂಪೇಣ ದೇವತಾಃ |
ಮೂರ್ತಾಮೂರ್ತಸ್ವರೂಪೇಣ ಸ್ಥಿತಾಃ ಪೂರ್ವಪ್ರತಿಜ್ಞಯಾ || ೧೧ ||

---

೮. ಆ ದೇವರೂಪಿಯಾದ ಆ ಶಿಲೆಯು ಭಾರವಾಗಿರುವುದಕ್ಕಾಗಿ ಗಯಾಸುರನ ಶಿರಸ್ಸಿನಲ್ಲಿ ಸ್ಥಾಪಿತವಾಗಿತ್ತು. ಆದುದರಿಂದ ಅತಿಪವಿತ್ರವಾಗಿಯೂ, ಪಿತೃಗಳಿಗೆ ಮೋಕ್ಷಪ್ರದವಾಗಿಯೂ ಇರುತ್ತದೆ.

೯. ಗಯಾಸುರನ ಪವಿತ್ರತೆಯೂ, ಧರ್ಮವ್ರತೆಯ ಪಾರಶುದ್ಧ್ಯವೂ ಎಂಬ ಉಭಯವಿಧಪವಿತ್ರತೆಯು ಆ ಕ್ಷೇತ್ರದಲ್ಲಿರುವುದರಿಂದ ಬ್ರಹ್ಮದೇವನು ಅಲ್ಲಿ ಅಶ್ವಮೇಧಯಾಗವನ್ನು ಮಾಡಿದನು. ಆ ಯಾಗಕ್ಕಾಗಿ ಬಂದಿರುವ ವಿಷ್ಣ್ವಾದಿ ದೇವತೆಗಳಿಗೆ ಶಿಲಾರೂಪಿಣಿಯಾದ ಧರ್ಮವ್ರತೆಯು ಹೀಗೆಂದು ಹೇಳಿದಳು.

೧೦. ಓ ದೇವತೆಗಳಿರಾ! ನೀವು ಸರ್ವಕಾಲದಲ್ಲಿಯೂ ಒಂದೊಂದು ಅಂಶಗಳಿಂದ ಈ ಶಿಲೆಯಲ್ಲಿ ಸನ್ನಿಹಿತರಾಗಿರತಕ್ಕದ್ದೆಂದು ಪ್ರತಿಜ್ಞೆಯನ್ನು ಮಾಡಬೇಕೆಂದು ಪ್ರಾರ್ಥಿಸಿದಳು. ಅವಳ ಬೇಡಿಕೆಯಂತೆ ವಿಷ್ಣುವೇ ಮೊದಲಾದ ಸಕಲ ದೇವತೆಗಳೂ (ಅಲ್ಲಿಯೇ) ಗಯಾಕ್ಷೇತ್ರದಲ್ಲಿಯೇ ಸ್ಥಿರವಾಗಿ ನಿಂತುಕೊಂಡು ಪಿತ್ರಾದಿಸರ್ವರಿಗೂ ಸಮಸ್ತ ಕಲ್ಯಾಣಗಳನ್ನೂ ಕೊಡುತ್ತಾ ಇರುವರು.

೧೧. ಹೀಗೆ ದೇವತೆಗಳು ತಮ್ಮ ಪ್ರತಿಜ್ಞಾನುಸಾರವಾಗಿ ಆ ಶಿಲೆಯಲ್ಲಿ ತಮ್ಮ ಸ್ವರೂಪಗಳಿಂದಲೂ, ಪಾದರೂಪದಿಂದಲೂ ವ್ಯಕ್ತಾವ್ಯಕ್ತಸ್ವರೂಪರಾಗಿ ಸನ್ನಿಹಿತರಾಗಿರುವರು.

ದೈತ್ಯಸ್ಯ ಮುಂಡಪೃಷ್ಠೇ ತು ಯಸ್ಮಾತ್ತಸ್ಯ ಸಂಸ್ಥಿತಾ ಶಿಲಾ ।
ತಸ್ಮಾತ್ಸ ಮುಂಡಪೃಷ್ಠಾದ್ರಿಃ ಪಿತೄಣಾಂ ಬ್ರಹ್ಮಲೋಕದಃ ॥ ೧೨ ॥

ಆಚ್ಛಾದಿತಃ ಶಿಲಾಪಾದಾಃ ಪ್ರಭಾಸೇನಾದ್ರಿಣಾ ಯತಃ ।
ಭಾಸಿತೋ ಭಾಸ್ಕರೇಣೇತಿ ಪ್ರಭಾಸಃ ಪರಿಕಲ್ಪಿತಃ ॥ ೧೩ ॥

ಪ್ರಭಾಸಂ ಹಿ ವಿನಿರ್ಭಿದ್ಯ ಶಿಲಾಂಗುಷ್ಠೋ ವಿನಿರ್ಗತಃ ।
ಅಂಗುಷ್ಠೋತ್ಥಿತ ಈಶೋಽಪಿ ಪ್ರಭಾಸೇಶಃ ಪ್ರಕೀರ್ತಿತಃ ॥ ೧೪ ॥

ಶಿಲಾಂಗುಷ್ಠೈಕದೇಶೋ ಯಃ ಸಾ ಚ ಪ್ರೇತಶಿಲಾ ಸ್ಮೃತಾ ।
ಪಿಂಡದಾನಾದ್ಯತಸ್ತಸ್ಯಾಂ ಪ್ರೇತತ್ವಾನ್ಮುಚ್ಯತೇ ನರಃ ॥ ೧೫ ॥

ಮಹಾನದೀಪ್ರಭಾಸಾದ್ರ್ಯೋಃ ಸಂಗಮೇ ಸ್ನಾನಕೃನ್ನರಃ ।
ರಾಮೋ ದೇವ್ಯಾ ಸಹ ಸ್ನಾತೋ ರಾಮತೀರ್ಥಂ ತತಃ ಸ್ಮೃತಃ ॥ ೧೬ ॥

---

೧೨. ಆ ಗಯಾಸುರನ ಮುಂಡದ ಪೃಷ್ಠಭಾಗದಲ್ಲಿ ಆ ಶಿಲೆಯು ಸ್ಥಾಪಿತವಾಗಿದೆ. ಅದೇ ಮುಂಡಪೃಷ್ಠಾದ್ರಿಯೆಂಬ ನಾಮದಿಂದ ಪಿತೃಗಳಿಗೆ ಮುಕ್ತಿಪ್ರದವಾಗಿದೆ.

೧೩. ಆ ಶಿಲೆಯು ಪಾದಭಾಗವು ಪ್ರಭಾಸಪರ್ವತದಿಂದ ಆಚ್ಛಾದಿತವಾಗಿ ಸೂರ್ಯನಿಂದ ಪ್ರಕಾಶಿಸಲ್ಪಟ್ಟಿರುವುದು. ಆದುದರಿಂದ ಆ ಭಾಗಕ್ಕೆ ಪ್ರಭಾಸಕ್ಷೇತ್ರವೆಂಬ ಪ್ರಖ್ಯಾತಿಯುಂಟಾಗಿದೆ.

೧೪. ಆ ಪ್ರಭಾಸಪರ್ವತವನ್ನು ಭೇದಿಸಿಕೊಂಡು ಶಿಲಾಂಗುಷ್ಠಗಿರಿಯು ಆವಿರ್ಭೂತವಾಗಿದೆ. ಈಶ್ವರನು ತನ್ನ ಅಂಗುಷ್ಠದಿಂದ ಆ ಪರ್ವತವನ್ನು ಎತ್ತಿ ಹಿಡಿದಿರುವುದರಿಂದ ಈಶ್ವರನಿಗೆ ಪ್ರಭಾಸೇಶ್ವರನೆಂದು ಪ್ರಖ್ಯಾತಿಯುಂಟಾಗಿದೆ.

೧೫. ಆ ಶಿಲೆಯು ಬೆರಳಿನ ಏಕದೇಶಕ್ಕೆ ಪ್ರೇತಶಿಲೆಯೆಂದು ನಾಮವು ಸಂಭವಿಸಿದೆ. ಅಲ್ಲಿ ಪಿಂಡದಾನವನ್ನು ಮಾಡಿದರೆ ಪಿತೃಗಳಿಗೆ ಉಂಟಾದ ಪ್ರೇತತನವು ಪರಿಹಾರವಾಗುವುದು.

೧೬. ಮಹಾನದೀ ಪ್ರಭಾಸಕ್ಷೇತ್ರಗಳ ಸಂಗಮದಲ್ಲಿ ಸ್ನಾನವನ್ನು ಮಾಡುವ ಪುರುಷರು ಮುಕ್ತರಾಗುವರು. ಆ ಸಂಗಮದಲ್ಲಿ ಶ್ರೀರಾಮಚಂದ್ರನು ಸೀತೆಯು ಸಂಗಡ ಸ್ನಾನವನ್ನು ಮಾಡಿದ್ದರಿಂದ ಅದಕ್ಕೆ ರಾಮತೀರ್ಥವೆಂದು ಹೆಸರು ಬಂದಿದೆ.

ಪ್ರಾರ್ಥಿತೋಽತ್ರ ಮಹಾನದ್ಯಾ ರಾಮ ಸ್ನಾತೋ ಭವೇತಿ ಚ ।
ರಾಮತೀರ್ಥಂ ತತೋ ಭೂತ್ವಾ ತ್ರಿಷು ಲೋಕೇಷು ವಿಶ್ರುತಂ ॥ ೧೭ ॥

ಜನ್ಮಾಂತರಶತಂ ಸಾಗ್ರಂ ಯತ್ಕೃತಂ ದುಷ್ಕೃತಂ ಮಯಾ ।
ತತ್ಸರ್ವಂ ವಿಲಯಂ ಯಾತು ರಾಮತೀರ್ಥಾಭಿಷೇಚನಾತ್ ॥ ೧೮ ॥

ಮಂತ್ರೇಣಾನೇನ ಯಃ ಸ್ನಾತ್ವಾ ಶ್ರಾದ್ಧಂ ಕುರ್ವೀತ ಮಾನವಃ ।
ರಾಮತೀರ್ಥೇ ಪಿಂಡದಸ್ತು ವಿಷ್ಣುಲೋಕಂ ಪ್ರಯಾತ್ಯಸೌ ॥
ತದೇತ್ಯುಕ್ತ್ವಾ ಸ್ಥಿತೋ ರಾಮಃ ಸೀತಯಾ ಭರತಾಗ್ರಜಃ ॥ ೧೯ ॥

ರಾಮ ರಾಮ ಮಹಾಬಾಹೋ ದೇವಾನಾಮಭಯಂಕರ ।
ತ್ವಾಂ ನಮಸ್ಯೇಽತ್ರ ದೇವೇಶಂ ಮಮ ನಶ್ಯತು ಪಾತಕಂ ॥ ೨೦ ॥

---

೧೭. ಅಲ್ಲಿ ಗಂಗಾದೇವಿಯು ತನ್ನಲ್ಲಿ ಸ್ನಾನವನ್ನು ಮಾಡಿ ಅನುಗ್ರಹಿಸಬೇಕೆಂದು ಶ್ರೀರಾಮನನ್ನು ಬೇಡಿದ್ದರಿಂದ ಅದಕ್ಕೆ ರಾಮತೀರ್ಥವೆಂಬ ನಾಮವು ಸಂಭವಿಸಿ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ.

೧೮. ಆದುದರಿಂದ ಅಂತಹ ರಾಮತೀರ್ಥದಲ್ಲಿ ಸ್ನಾನಜಪತಪಾದಿಗಳನ್ನು ಮಾಡಿದರೆ ನೂರಾರು ಜನ್ಮಗಳಲ್ಲಿ ಮಾಡಿದ್ದ ಪಾಪಗಳೆಲ್ಲವೂ ಪರಿಹೃತವಾಗಿ ಪಿತೃಗಳು ಮುಕ್ತರಾಗುವರು.

೧೯. ಯಾವ ಪುರುಷನು ಈ ಮಂತ್ರೋಚ್ಚಾರಣಪೂರ್ವಕವಾಗಿ ಸ್ನಾನವನ್ನು ಮಾಡಿ ಪಿಂಡದಾನವನ್ನು ಮಾಡುವನೋ ಅವನು ವೈಕುಂಠಲೋಕವನ್ನು ಹೊಂದುವನು. ಶ್ರೀರಾಮನು ಈ ಉದ್ದೇಶದಿಂದಲೇ ಸೀತೆಯೊಡನೆ ಆ ಕ್ಷೇತ್ರದಲ್ಲಿ ಸ್ಥಿರವಾಗಿ ನಿಂತಿರುವನು.

೨೦. ಮಹಾಬಾಹುವೂ, ದೇವತೆಗಳಿಗೆ ಅಭಯಪ್ರದಾತನೂ ಆದ ಶ್ರೀರಾಮಚಂದ್ರನೇ, ದೇವೇಶನಾದ ನಿನಗೆ ಅನಂತ ವಂದನೆಗಳು. ನನ್ನ ಪಾಪಗಳೆಲ್ಲವೂ ಪರಿಹಾರವಾಗಲೆಂದು ಹೇಳಿ ಆ ರಾಮತೀರ್ಥದಲ್ಲಿ ಸ್ನಾನವನ್ನು ಮಾಡಿದರೆ ಪಾಪಗಳಿಂದ ಮುಕ್ತರಾಗಿ ನಿತ್ಯಸುಖವನ್ನು ಪಡೆಯುವರು.

ಮಂತ್ರೇಣಾನೇನ ಯಃ ಸ್ನಾತ್ವಾ ಶ್ರಾದ್ಧಂ ಕುರ್ಯಾತ್ಸಪಿಂಡಕಂ ।
ಪ್ರೇತತ್ವಾತ್ತಸ್ಯ ಪಿತರೋ ವಿಮುಕ್ತಾಃ ಪಿತೃತಾಂ ಯಯುಃ ॥ ೨೦ ॥

ಆಪಸ್ತ್ವಮಸಿ ದೇವೇಶೇ ಜ್ಯೋತಿಷಾಂ ಪತಿರೇವ ಚ ।
ಪಾಪಂ ನಾಶಯ ಮೇ ದೇವ ಮನೋವಾಕ್ಕಾಯಕರ್ಮಜಂ ॥ ೨೨ ॥

ನಮಸ್ಕೃತ್ಯ ಪ್ರಭಾಸೇಶಂ ಭಾಸಮಾನಂ ಶಿವಂ ವ್ರಜೇತ್ ।
ತಂ ಚ ಶಂಭುಂ ನಮಸ್ಕೃತ್ಯ ಕುರ್ಯಾದ್ಯಮಬಲಿಂ ತತಃ ॥ ೨೩ ॥

ರಾಮೇ ವನಂ ಗತೇ ಶೈಲಮಾಗತ್ಯ ಭರತಃ ಸ್ಥಿತಃ ।
ಪಿತೃಪಿಂಡಾದಿಕಂ ಕೃತ್ವಾ ರಾಮಂ ಸಂಸ್ಥಾಪ್ಯ ತತ್ರ ಚ ॥ ೨೪ ॥

---

೨೧. ಯಾವ ಪುರುಷನು ರಾಮತೀರ್ಥದಲ್ಲಿ ಸ್ನಾನವನ್ನು ಮಾಡಿ ಪೂರ್ವೋಕ್ತವಾದ ಮಂತ್ರಸಹಿತವಾಗಿ ಶ್ರಾದ್ಧಪಿಂಡದಾನವನ್ನು ಮಾಡುವನೋ ಅವನ ಪಿತೃಗಳು ಪ್ರೇತತ್ವದಿಂದ ಮುಕ್ತರಾಗಿ ಪಿತೃಗಳ ಸಂಗಡ ಸೇರಿ ಸುಖಿಯಾಗುವರು.

೨೨. ಎಲೈ ದೇವೇಶನಾದ ಸ್ವಾಮಿಯೇ, ನೀನು ಜಲರೂಪಿಯಾಗಿಯೂ, ಜ್ಯೋತಿರ್ಗಣಗಳಿಗೆ ಪತಿಯಾಗಿಯೂ ಆಗಿರುತ್ತೀಯೆ. ಆದುದರಿಂದ ಮನೋವಾಕ್ಕಾಯಕರ್ಮಜನ್ಯವಾದ ನನ್ನ ಪಾಪಗಳನ್ನು ಪರಿಹರಿಸೆಂದು ಪ್ರಾರ್ಥಿಸಬೇಕು.

೨೩. ಯಾವನು ಪ್ರಭಾಸೇಶ್ವರನಿಗೆ ನಮಸ್ಕಾರಾದಿಗಳನ್ನು ಮಾಡುವನೋ ಅವನು ಶಿವಪದವಿಯನ್ನು ಹೊಂದುವನು. ಮೊದಲು ಈಶ್ವರನಿಗೆ ವಂದನೆಗಳನ್ನು ಮಾಡಿ ಬಳಿಕ ಯಮಬಲಿಯನ್ನು ಕೊಡಬೇಕು.

೨೪. ಶ್ರೀರಾಮನು ಪಿತೃವಾಕ್ಯಪರಿಪಾಲನೆಗಾಗಿ ದಂಡಕಾರಣ್ಯಕ್ಕೆ ಹೋಗಲು ಭರತನು ಅಲ್ಲಿಗೆ ಬಂದು ಮೃತನಾದ ದಶರಥನಿಗಾಗಿ ಶ್ರಾದ್ಧಪಿಂಡದಾನಾದಿಗಳನ್ನು ಮಾಡಿ ಅಲ್ಲಿ ಶ್ರೀರಾಮನನ್ನು ಸ್ಥಾಪಿಸಿದನು.

ರಾಮಂ ಸೀತಾಂ ಲಕ್ಷ್ಮಣಂ ಚ ಮುನೀನ್ ಸ್ಥಾಪಿತವಾನ್ ಪ್ರಭುಃ ।
ಭರತಸ್ಯಾಶ್ರಮೇ ಪುಣ್ಯೇ ನಿತ್ಯಂ ಪುಣ್ಯತಮೈರ್ವೃತಂ ।
ಮತಂಗಸ್ಯ ಪದಂ ತತ್ರ ದೃಶ್ಯತೇ ಸರ್ವಮಾನುಷೈಃ ॥ ೨೫ ॥

ಸ್ಥಾಪಿತಂ ಧರ್ಮಸರ್ವಸ್ವಂ ಲೋಕಸ್ಯಾಸ್ಯ ನಿದರ್ಶನಾತ್ ।
ಮತಂಗಸ್ಯ ಪದೇ ಶ್ರಾದ್ಧೀ ಸರ್ವಾಂಸ್ತಾರಯತೇ ಪಿತೄನ್ ॥ ೨೬ ॥

ರಾಮತೀರ್ಥೇ ನರಃ ಸ್ನಾತ್ವಾ ರಾಮಂ ಸೀತಾಂ ಸಮರ್ಚ್ಯ ಚ ।
ರಾಮೇಶ್ವರಂ ಪ್ರಣಮ್ಯಾಥ ನ ದೇಹೀ ಜಾಯತೇ ಪುನಃ ॥ ೨೭ ॥

ಶಿಲಾಯಾ ಜಘನಂ ಭೂಯಂ ಸಮಾಕ್ರಾಂತಂ ನಗೇನ ತು ।
ಧರ್ಮರಾಜೇನ ಸಂಪ್ರೋಕ್ತೋ ನ ಗಚ್ಛೇತಿ ನಗಃ ಸ್ಮೃತಃ ॥ ೨೮ ॥

---

೨೫. ಭರತನು ಆ ಆಶ್ರಮದಲ್ಲಿ ರಾಮನನ್ನೂ, ಸೀತೆಯನ್ನೂ, ಲಕ್ಷ್ಮಣನನ್ನೂ ಮತ್ತು ಮುನಿಗಳನ್ನೂ ಪ್ರತಿಷ್ಠೆಮಾಡಿದನು. ಅಂತಹ ಅತ್ಯಂತ ಪುಣ್ಯಾತ್ಮರಾದ ಮಹರ್ಷಿಗಳಿಂದ ಅತಿಪಾವನವಾದ ಭರತಾಶ್ರಮದಲ್ಲಿ ಮತಂಗಮುನಿಗಳ ಪದವು ಸಮಸ್ತರಾದ ಪುರುಷರಿಂದಲೂ ದೃಶ್ಯವಾಗಿದೆ.

೨೬. ಅಂತಹ ಮತಂಗಾಶ್ರಮದಲ್ಲಿ ಧರ್ಮಸ್ಥಾಪನೆಯು ಆಗಿರುವುದು ಸರ್ವರಿಗೂ ವ್ಯಕ್ತವಾಗಿ ಕಾಣುವುದು. ಇಂತಹ ಧರ್ಮಗಳಿಗೆ ಆಶ್ರಯವಾದ ಮತಂಗಾಶ್ರಮದಲ್ಲಿ ಶ್ರಾದ್ಧವನ್ನು ಮಾಡಿದರೆ ಸಮಸ್ತರಾದ ಪಿತೃಗಳೂ, ಖಂಡಿತವಾಗಿಯೂ ಉದ್ಧೃತರಾಗುವರು.

೨೭. ಯಾವ ಮನುಜನು ರಾಮತೀರ್ಥದಲ್ಲಿ ಸ್ನಾನವನ್ನು ಮಾಡಿ ಶ್ರೀರಾಮಸೀತೆಯರಿಗೆ ಪೂಜೆಯನ್ನು ಮಾಡಿ ವಂದನೆಗಳನ್ನು ಅರ್ಪಿಸುವನೋ ಅವನು ಪುನಃ ಜನನಮರಣಗಳನ್ನು ಹೊಂದದೆಯೇ ಮುಕ್ತನಾಗುವನು.

೨೮. ಪರ್ವತವು ಅಲ್ಲಿರುವ ಶಿಲೆಯ ಪೃಷ್ಠಭಾಗವನ್ನು ಆಶ್ರಯಿಸಿಕೊಂಡಿದೆ. ಧರ್ಮರಾಯನು ಮುಂದಕ್ಕೆ ಸರಿಯಬಾರದೆಂದು ಗಿರಿಗಳಿಗೆ ಹೇಳಿದ್ದರಿಂದ ಅವುಗಳಿಗೆ ನಗವೆಂಬ ನಾಮವು ಪ್ರಾಪ್ತವಾಗಿದೆ.

ಯಮರಾಜಧರ್ಮರಾಜೌ ನಿಶ್ಚಲಾರ್ಥಂ ವ್ಯವಸ್ಥಿತೌ ।
ತಾಭ್ಯಾಂ ಬಲಿಂ ಪ್ರಯಚ್ಛಾಮಿ ಪಿತೄಣಾಂ ಮುಕ್ತಿಹೇತವೇ ॥ ೨೯ ॥

ದ್ವೌ ಶ್ವಾನೌ ಶ್ಯಾಮಶಬಲೌ ವೈವಸ್ವತಕುಲೋದ್ಭವೌ ।
ತಾಭ್ಯಾಂ ಬಲಿಂ ಪ್ರಯಚ್ಛಾಮಿ ಸ್ಯಾತಮೇತಾವಹಿಂಸಕೌ ॥ ೩೦ ॥

ಐಂದ್ರವಾರುಣವಾಯವ್ಯಯಾಮ್ಯನೈಋತ್ಯಸಂಸ್ಥಿತಾಃ ।
ವಾಯಸಾಃ ಪ್ರತಿಗೃಹ್ಣಂತು ಭೂಮೌ ಪಿಂಡಂ ಮಯಾ ಸ್ಥಿತಾಂ ॥ ೩೧ ॥

ಯಮೋಽಸಿ ಯಮದೂತೋಽಸಿ ವಾಯಸೋಽಸಿ ಮಹಾಬಲ ।
ಸಪ್ತಜನ್ಮಕೃತಂ ಪಾಪಂ ಬಲಿಂ ಭುಕ್ತ್ವಾ ವಿನಾಶಯ ॥ ೩೨ ॥

---

೨೯. ಯಮರಾಜಧರ್ಮರಾಜರು ಆ ಶಿಲೆಯು ಚಲಿಸದೇ ಇರುವುದಕ್ಕಾಗಿ ಅದರಮೇಲೆ ನಿಂತಿರುವರು. ಅವರಿಗೆ ಬಲಿದಾನವನ್ನು ಮಾಡಿದರೆ ಪಿತೃಗಳಿಗೆ ಮುಕ್ತಿಯುಂಟಾಗುವುದು.

೩೦. ವೈವಸ್ವತಕುಲೋತ್ಪನ್ನಗಳೂ ಕರಿಯ ಮತ್ತು ಚಿತ್ರ ವರ್ಣಗಳುಳ್ಳವುಗಳೂ ಆದ ಎರಡು ನಾಯಿಗಳು ಅಲ್ಲಿ ಸ್ಥಾಪಿತಗಳಾಗಿವೆ. ಆ ನಾಯಿಗಳಿಗೆ ಬಲಿದಾನ ಮಾಡಿದರೆ ದುಷ್ಟಸ್ವಪ್ನಗಳಿಂದ ಯಾವವಿಧವಾದ ಹಿಂಸೆಗಳೂ ಉಂಟಾಗುವುದಿಲ್ಲ.

೩೧. ಪೂರ್ವ, ಪಶ್ಚಿಮ, ವಾಯುವ್ಯ, ದಕ್ಷಿಣ ಮತ್ತು ನೈರುತ್ಯ ಈ ದಿಕ್ಕುಗಳಲ್ಲಿರುವ ಕಾಗೆಗಳೆಲ್ಲವೂ ಪಿತೃಗಳಿಗೋಸ್ಕರ ಕೊಟ್ಟಿರುವ ಪಿಂಡಗಳನ್ನು ಸ್ವೀಕರಿಸಿ ತೃಪ್ತವಾಗಲೆಂದು ಕೋರಬೇಕು.

೩೨. ಎಲೈ ವಾಯಸವೇ, ನೀನು, ಯಮನೂ, ಯಮಕಿಂಕರನೂ, ಕಾಗೆಯೂ, ಮಹಾಬಲಶಾಲಿಯೂ ಆಗಿರುತ್ತೀಯೆ. ಆದುದರಿಂದ ಈ ಬಲಿಯನ್ನು ಸ್ವೀಕರಿಸಿ, ಏಳು ಜನ್ಮಗಳಲ್ಲಿಯೂ ಮಾಡಿದ ಪಾಪಗಳನ್ನು ಪರಿಹರಿಸೆಂದು ಪ್ರಾರ್ಥಿಸಬೇಕು.

ರಾಮೇ ವನಂ ಗತೇ ಶೈಲಮಾಗತ್ಯ ಭರತೇ ನಹಿ ।
ಪಿತುಃ ಪಿಂಡಾದಿಕಂ ಕೃತ್ವಾ ರಾಮೇಶಃ ಸ್ಥಾಪಿತೋತ್ರ ವೈ ॥ ೩೩ ॥

ಸ್ನಾತ್ವಾ ನತ್ವಾ ಚ ರಾಮೇಶಂ ರಾಮಸೀತಾಸಮನ್ವಿತಂ ।
ತತ್ರ ಶ್ರಾದ್ಧಂ ಸಪಿಂಡಂ ಚ ಕೃತ್ವಾ ವಿಷ್ಣುಪುರಂ ವ್ರಜೇತ್ ॥
ಪಿತೃಭಿಃ ಸಹ ಧರ್ಮಾತ್ಮಾ ಕುಲಾನಾಂ ಚ ಶತೈಃ ಸಹ ॥ ೩೪ ॥

ಶಿಲಾಯಾ ದಕ್ಷಿಣೇ ಹಸ್ತೇ ಸ್ಥಾಪಿತಃ ಕುಂಡಪರ್ವತಃ ।
ತಿಮಿರಾದಿತ್ಯ ಈಶಾನಗಭಾರ್ಗವೇತೇ ಮಹೇಶ್ವರಾಃ ॥ ೩೫ ॥

ವಹ್ನಿರ್ದ್ವೌ ವರುಣೌ ರುದ್ರಾಶ್ಚತ್ವಾರಃ ಪಿತೃಮೋಕ್ಷದಾಃ ।
ಭರತಾಶ್ರಮಮಾಸಾದ್ಯ ತಾನ್ನಮೇತ್ಪೂಜಯೇನ್ನರಃ ॥ ೩೬ ॥

---

೩೩. ಶ್ರೀರಾಮನು ಅರಣ್ಯಕ್ಕೆ ಹೋದ ಮೇಲೆ ಭರತನು ಈ ಪರ್ವತಕ್ಕೆ ಬಂದು ಪಿತೃಗಳಿಗೆ ಪಿಂಡಾದಿಗಳನ್ನು ಕೊಟ್ಟು ಶ್ರೀರಾಮಚಂದ್ರನನ್ನು ಇದರಲ್ಲಿ ಸ್ಥಾಪಿಸಿದನು.

೩೪. ಯಾವ ಪುರುಷನು ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಶ್ರೀರಾಮ ಸೀತಾದಿ ದೇವತೆಗಳಿಗೆ ನಮಸ್ಕರಿಸಿ, ಶ್ರಾದ್ಧಾದಿಗಳನ್ನು ಮಾಡುವನೋ ಅವನು ವೈಕುಂಠಲೋಕವನ್ನು ಹೊಂದುವನು. ಅವನ ಸಪ್ತಕುಲಗಳೂ ಕೂಡ ಪಿತೃಗಳೊಡನೇ ಮುಕ್ತರಾಗುವರು.

೩೫. ಆ ಮಹಾಶಿಲೆಯ ಬಲಭಾಗದಲ್ಲಿ ಕುಂಡವೆಂಬ ಪರ್ವತವು ಸ್ಥಾಪಿತವಾಗಿದೆ. ಆ ಕುಂಡಪರ್ವತಕ್ಕೆ ತಿಮಿರಾದಿತ್ಯನೂ, ಈಶಾನಭಾರ್ಗವರೂ ಪತಿಗಳಾಗಿರುವರು.

೩೬. ಅಗ್ನಿಯೂ, ಇಬ್ಬರು ವರುಣರೂ, ನಾಲ್ವರು ರುದ್ರರೂ, ಇವರು ಪಿತೃಗಳಿಗೆ ಮೋಕ್ಷದಾಯಕರಾಗಿರುವರು. ಆದುದರಿಂದ ಮನುಷ್ಯರು ಭರತಾಶ್ರಮಕ್ಕೆ ಹೋಗಿ ಪೂರ್ವೋಕ್ತರಾದ ದೇವತೆಗಳಿಗೆ ವಂದನ ಪೂಜನಾದಿಗಳನ್ನು ಮಾಡಬೇಕು.

ಪಾಪೇಭ್ಯಶ್ಚೋಽಪಪಾಪೇಭ್ಯೋ ಮುಚ್ಯತೇ ಪಿತೃಭಿಃ ಸಹ |
ಯತ್ರ ಕುತ್ರಾಪಿ ದೇವರ್ಷೇ ಭರತಸ್ಯಾಶ್ರಮೇ ನರಃ ||
ಸ್ನಾತಃ ಶ್ರಾದ್ಧಾದಿಕಂ ಕುರ್ಯಾತ್ತತ್ಕಲ್ಪೇಽಪಿ ನ ಹೀಯತೇ || ೩೭ ||

ಗಯಾಯಾಂ ಚಾಕ್ಷಯಂ ಶ್ರಾದ್ಧಂ ಜಪಹೋಮ ತಪಾಂಸಿ ಚ |
ಸರ್ವಮಾನಂತ್ಯಮಾಹುರ್ವೈ ಯದ್ದತ್ತಂ ಭರತಾಶ್ರಮೇ || ೩೮ ||

ಚತುರ್ಯುಗಸ್ವರೂಪೇಣ ಚತಸ್ರೋ ರವಿಮೂರ್ತಯಃ |
ದೃಷ್ಟಾಃ ಸ್ಪೃಷ್ಟಾಃ ಪೂಜಿತಾಸ್ತಾಃ ಪಿತೄಣಾಂ ಮುಕ್ತಿದಾಯಕಾಃ || ೩೯ ||

ಮುಕ್ತಿರ್ವಾಮನ ಇತ್ಯೇವ ತಾರಕಾಖ್ಯೋ ವಿಧಿಃ ಪರಃ |
ಸಂಸಾರಾರ್ಣವತಪ್ತಾನಾಂ ನಾವಾವೇತೌ ಸುರೇಶ್ವರೌ ||
ತಾರಕಂ ಬ್ರಹ್ಮ ವಿಶ್ವೇಷಾಂ ಮೃತಾನಾಂ ಜೀವಿತಾಮಿದಂ || ೪೦ ||

---

೩೭. ಪುರುಷನು ಭರತಾಶ್ರಮಕ್ಕೆ ಹೋಗಿ ಯಾವ ತೀರ್ಥದಲ್ಲಿಯಾದರೂ, ಸ್ನಾನಾದಿಗಳನ್ನೂ, ಶ್ರಾದ್ಧವನ್ನೂ ಮಾಡಬೇಕು. ಹಾಗೆ ಮಾಡಿದರೆ ಪಾಪಿಗಳು ಪಾಪಶೂನ್ಯರಾದ ಸಮಸ್ತ ಪಿತೃಗಳ ಸಂಗಡ ಮುಕ್ತರಾಗುವರು. ಹೀಗೆ ಭರತಾಶ್ರಮದಲ್ಲಿ ಸ್ನಾನ ಶ್ರಾದ್ಧಾದಿಗಳನ್ನು ಮಾಡಿದರೆ ಒಂದು ಕಲ್ಪದವರೆಗೂ ನಿತ್ಯಸುಖಿಯಾಗುವರು.

೩೮. ಗಯೆಯಲ್ಲಿಯೂ, ಭರತಾಶ್ರಮದಲ್ಲಿಯೂ, ಸ್ನಾನಜಪತಪ ಶ್ರಾದ್ಧಾದಿಗಳನ್ನು ಮಾಡಿದರೆ ಅಕ್ಷಯವಾಗಿಯೂ ನಾಶರಹಿತವಾಗಿಯೂ ಇರುವ ಪರಮಪದವಿಯು ಆಗುವುವೆಂದು ಜ್ಞಾನಿಗಳು ಹೇಳುವರು.

೩೯. ಚತುರ್ಯುಗಸ್ವರೂಪಗಳಾದ ಸೂರ್ಯನ ಚತುರ್ಮೂರ್ತಿಗಳು ಲೋಕಮಾನ್ಯಗಳಾಗಿವೆ. ಅವುಗಳನ್ನು ನೋಡಿದರೂ, ಸ್ಪರ್ಶಮಾಡಿದರೂ, ಪೂಜಿಸಿದರೂ ಕೂಡ ಅವು ಪಿತೃಗಳಿಗೆ ಮುಕ್ತಿಪ್ರದಗಳಾಗಿವೆ

೪೦. ಮುಕ್ತಿ ವಾಮನರೆಂಬ ಇವರಿಬ್ಬರೂ ತಾರಕಬ್ರಹ್ಮವಿಧಿರೂಪರಾಗಿರುವರು. ಈ ರೂಪಗಳೆರಡೂ ಸಂಸಾರವೆಂಬ ಸಮುದ್ರದಲ್ಲಿ ಮಗ್ನರಾದವರಿಗೆ ಹಡಗಿನಂತಿರುವುವು. ಈ ತಾರಕಬ್ರಹ್ಮನೇ ಮೃತರಾದ ಸಮಸ್ತ ಜೀವರಿಗೂ ಸಂಸಾರಮೋಚಕನಾಗಿರುವನು.

ತ್ರಿವಿಕ್ರಮಂ ಚ ಬ್ರಹ್ಮಾಣಂ ಯೇಃ ಪಶ್ಯೇತ್ಪುರುಷೋತ್ತಮಂ ।
ಪಿತೃಭಿಃ ಸಹ ಧರ್ಮಾತ್ಮಾ ಸ ಯಾತಿ ಪರಮಾಂ ಗತಿಂ ॥ ೪೧ ॥

ಶಿಲಾಯಾ ವಾಮಪಾದೇಽಪಿ ತಥಾಭ್ಯುದ್ಯಂತಕೋ ಗಿರಿಃ ।
ಸ್ಥಾಪಿತಃ ಪಿಂಡದಸ್ತತ್ರ ಪಿತೄನ್ ಬ್ರಹ್ಮಪುರಂ ನಯೇತ್ ॥ ೪೨ ॥

ನೈಮಿಷಾರಣ್ಯಪಾರ್ಶ್ವೇ ತು ಈಜೇ ಬ್ರಹ್ಮಾ ಸುರೈಃ ಸಹ ।
ಮುಖ್ಯಸಂಜ್ಞಂ ಹಿ ತತ್ತೀರ್ಥಂ ದೇವಾಸ್ತತ್ರ ಪದೇ ಸ್ಥಿತಾಃ ॥ ೪೩ ॥

ತ್ರಿಷು ತೇಷು ಪದೇಷ್ವೇವ ತೀರ್ಥೇಷು ಮುನಿಸತ್ತಮ ।
ಯತ್ಕಿಂಚಿದಶುಭಂ ಕರ್ಮ ತತ್ಪ್ರಣಶ್ಯತಿ ನಾರದ ॥ ೪೪ ॥

---

೪೧. ಯಾವ ಮಹಾತ್ಮರು ತ್ರಿವಿಕ್ರಮ, ಪರಬ್ರಹ್ಮ, ಪುರುಷೋತ್ತಮ ಇವರನ್ನು ದರ್ಶನಮಾಡುವರೋ ಅಂತಹ ಪುಣ್ಯಾತ್ಮರು ಪಿತೃಗಳೊಡನೇ ಪರಮ ಪದವಿಯನ್ನು ಹೊಂದುವರು.

೪೨. ಆ ಬಂಡೆಯ ಎಡಗಾಲಿನ ಮೇಲೆ ಅಭ್ಯುದ್ಯಂತಕವೆಂಬ ಪರ್ವತವು ಸ್ಥಾಪಿತವಾಗಿದೆ. ಅದರಲ್ಲಿ ಶ್ರಾದ್ಧವನ್ನು ಮಾಡಿದರೆ ಅದು ಪಿತೃಗಳಿಗೆ ಬ್ರಹ್ಮಪುರಿಯನ್ನು ಕೊಡುವುದು.

೪೩. ನೈಮಿಷಾರಣ್ಯದ ಪಕ್ಕದಲ್ಲಿ ಬ್ರಹ್ಮದೇವನು ದೇವತೆಗಳ ಸಂಗಡ ಯಾಗವನ್ನು ಮಾಡಿದನು. ಅಲ್ಲಿರುವ ತೀರ್ಥಗಳೆಲ್ಲವೂ ಅತಿಮುಖ್ಯವಾಗಿವೆ. ಅವುಗಳಲ್ಲಿ ಶ್ರಾದ್ಧವನ್ನು ಮಾಡಿದರೆ ಪರಮಪದವಿಯು ಸಿಕ್ಕುವುದು. ದೇವತೆಗಳೆಲ್ಲರೂ ಆ ಪಾದದಲ್ಲಿ ಸನ್ನಿಹಿತರಾಗಿರುವರು.

೪೪. ಎಲೈ ಮುನೀಶ್ವರನಾದ ನಾರದನೇ, ಈ ಮೂರು ಪಾದಗಳಲ್ಲಿಯೂ, ತೀರ್ಥಗಳಲ್ಲಿಯೂ ಸತ್ಕರ್ಮಗಳನ್ನು ಮಾಡಿದರೆ ಯಾವ ಪಾಪಗಳಿದ್ದರೂ ಸರ್ವವೂ ಪರಿಹೃತವಾಗುವುವು.

ತನ್ನೈಮಿಷವನಂ ಪುಣ್ಯಂ ಸೇವಿತಂ ಪುಣ್ಯಪೌರುಷೈಃ ।
ತತ್ರ ವ್ಯಾಸಃ ಶುಕಃ ಪೈಲಃ ಕಣ್ವೋ ವೇಧಾಃ ಶಿವೋ ಹರಿಃ ॥ ೪೫ ॥

ತೇಷಾಂ ದರ್ಶನಮಾತ್ರೇಣ ಮುಚ್ಯತೇ ಪಾತಕೈರ್ನರಃ ।
ವಾಮಹಸ್ತೇ ಶಿಲಾಯಾಸ್ತು ತಥಾ ಚೋದ್ಯಂತಕೋ ಗಿರಿಃ ॥ ೪೬ ॥

ಸ ಪರ್ವತಃ ಸಮಾನೀತೋ ಹ್ಯಗಸ್ತ್ಯೇನ ಮಹಾತ್ಮನಾ ।
ತತ್ರ ಬ್ರಹ್ಮಾ ಹರಶ್ಚೈವ ತಪಶ್ಚೋಗ್ರಂ ಚ ಚಕ್ರತುಃ ॥ ೪೭ ॥

ತತ್ರಾಗಸ್ತ್ಯಸ್ಯ ಹಿ ವರಂ ಕುಂಡಂ ತ್ರೈಲೋಕ್ಯದುರ್ಲಭಂ ।
ಯತ್ರ ಮುನ್ಯಷ್ಟಕಂ ಸಿದ್ಧಂ ತಪಸ್ತಪ್ತ್ವಾ ಶಿವಂ ಗತಂ ॥
ಕುಂಡೇ ಮುನ್ಯಷ್ಟಕಂ ನತ್ವಾ ಪಿತೄನ್ಬ್ರಹ್ಮಪುರಂ ನಯೇತ್ ॥ ೪೮ ॥

---

೪೫. ಪುಣ್ಯಾತ್ಮರೂ, ಅತಿಮುಖ್ಯರೂ ಆದ ವ್ಯಾಸ, ಶುಕ, ಪೈಲ, ಕಣ್ವ, ಬ್ರಹ್ಮ, ಶಿವ, ವಿಷ್ಣು ಇವರೇ ಮೊದಲಾದವರಿಂದ ಸೇವಿಸಲ್ಪಟ್ಟ ಆ ನೈಮಿಷಾರಣ್ಯವು ಅತಿಪವಿತ್ರವಾಗಿದೆ.

೪೬. ನೈಮಿಷಾರಣ್ಯವಾಸಿಗಳಾದ ಮಹಾತ್ಮರ ದರ್ಶನಮಾತ್ರದಿಂದಲೇ ಮನುಷ್ಯರು ಮಾಡಿರುವ ಸರ್ವಪಾಪಗಳೂ ನಷ್ಟವಾಗುವುವು. ಆ ಶಿಲೆಯ ವಾಮ ಹಸ್ತದಲ್ಲಿ ಉದ್ಯಂತಕವೆಂಬ ಪರ್ವತವು ಸ್ಥಾಪಿತವಾಗಿರುವುದು.

೪೭. ಮಹಾತ್ಮರಾದ ಅಗಸ್ತ್ಯಮುನಿಗಳು ಸ್ವಹಸ್ತದಿಂದಲೇ ಆ ಪರ್ವತವನ್ನು ತಂದು ಸ್ಥಾಪಿಸಿದರು. ಅದರಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರು ಘೋರವಾದ ತಪಸ್ಸನ್ನು ಮಾಡಿರುವರು.

೪೮. ಅದರಲ್ಲಿ ಅಗಸ್ತ್ಯಮುನಿಗಳ ಅತ್ಯುತ್ತಮವಾದ ಅಗ್ನಿಕುಂಡವು ಮೂರು ಲೋಕವಿಖ್ಯಾತವೂ, ಅತಿದುರ್ಲಭವೂ ಆಗಿರುವುದು. ಅದರಲ್ಲಿ ಅಷ್ಟಮಹರ್ಷಿಗಳು ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದಿರುವರು. ಅಲ್ಲಿರುವ ಸಮಸ್ತ ಮುನಿಗಳಿಗೂ ವಂದಿಸಿದರೆ ಪಿತೃಗಳು ಸ್ವರ್ಗಕ್ಕೆ ಹೋಗುವರು.

ಅಗಸ್ತ್ಯೇನಾಥ ದೇವರ್ಷೇ ಹ್ಯುದಯೋದ್ರೇರ್ಮಹಾತ್ಮನಾ ।
ಶಿಲಾಯಾ ವಾಮಹಸ್ತೇಽಪಿ ಸ್ಥಾಪಿತೋ ಗಿರಿರಾಟ್ ಶುಭಃ ॥
ವಾದಿತ್ರಾದ್ಯೈರ್ದಿವ್ಯಗೀತೈರಾಢ್ಯೋ ವಾದಿತ್ರಕೋ ಗಿರಿಃ ॥ ೪೯ ॥

ತತ್ರ ವಿದ್ಯಾಧರೋ ನಾಮ ಗಂಧರ್ವಾಪ್ಸರಸಾಂಗಣೈಃ ।
ಸಮೇತೋಽದ್ಯಾಪಿ ಗೀತಾನಿ ದಿವ್ಯಾನಿ ಸಹ ಗೀಯತೇ ॥ ೫೦ ॥

ಮೋಹನಶ್ಚ ಸುನೀಥಶ್ಚ ಶೈಲೂಷೋ ಮೋಹನೋತ್ತಮಃ ।
ಪರ್ವತೋ ನಾರದಧ್ಯಾನೀ ಸಂಗೀತೀ ಪುಷ್ಪದಂತಕಃ ॥
ಹಾಹಾಹೂಹೂ ಪ್ರಭೃತಯೋ ಗೀತದಾನಂ ಪ್ರಚಕ್ರಿರೇ ॥ ೫೧ ॥

ತಥಾ ಚಿತ್ರರಥೋ ನಾಮ ಸರ್ವಗಂಧರ್ವಸಂವೃತಃ ।
ಗಾಯತಿ ಮಧುರಾಣ್ಯೇವ ಗೀತಾನ್ಯದ್ರೌ ಮಹೋತ್ಸವಂ ॥ ೫೨ ॥

ಅತಃ ಸ ಪರ್ವತೋ ದೇವೈಃ ಸೇವ್ಯತೇಽದ್ಯಾಪಿ ನಿತ್ಯಶಃ ।
ಧರ್ಮಜಾಸ್ತತ್ರ ದೇವೇಶೋ ಹರೋ ಭಸ್ಮಾಂಗರಾಗವಾನ್ ॥ ೫೩ ॥

---

೪೯. ಆ ಅಗಸ್ತ್ಯಮಹರ್ಷಿಗಳು ಮಂಗಳಕರವೂ, ಸರ್ವೋತ್ತಮವೂ ಆದ ಉದಯಗಿರಿಯನ್ನು ಆ ಶಿಲೆಯ ವಾಮಹಸ್ತದಲ್ಲಿ ಸ್ಥಾಪಿಸಿರುವರು. ಆ ಗಿರಿಯು ನೃತ್ಯಗೀತ, ವಾದ್ಯಗಳಿಂದಲೂ, ದಿವ್ಯಗಾನದಿಂದಲೂ ಪೂರ್ಣವಾಗಿರುವುದು.

೫೦. ಆ ಗಿರಿಯಲ್ಲಿ ವಿದ್ಯಾಧರ ಚಕ್ರವರ್ತಿಯು, ಗಂಧರ್ವರು, ವಿದ್ಯಾಧರರು, ಅಪ್ಸರಸಿಯರು ಇವರು ಗಣಗಳಿಂದ ಕೂಡಿ ದಿವ್ಯಗಾನವನ್ನು ಮಾಡುವರು.

೫೧. ಮೋಹನ, ಸುನೀಥ, ಶೈಲೂಷ, ಮೋಹನೋತ್ತಮ, ಪರ್ವತ, ನಾರದ, ಧ್ಯಾನಿ, ಸಂಗೀತಿ, ಪುಷ್ಪದಂತಕ, ಹಾಹಾಹೂಹೂ, ಇವರೇ ಮೊದಲಾದ ಗಂಧರ್ವರು ಆ ಪರ್ವತದಲ್ಲಿ ಇಂಪಾಗಿ ಗಾನಮಾಡುವರು.

೫೨. ಮತ್ತು ಚಿತ್ರರಥನು ಸರ್ವಗಂಧರ್ವರಿಂದ ಸಹಿತನಾಗಿ ಆ ಗಿರಿಯಲ್ಲಿ ಗಾನಪೂರ್ವಕವಾಗಿ ಮಹೋತ್ಸವವನ್ನು ಸಂಭ್ರಮದಿಂದ ನೆರವೇರಿಸುವನು.

೫೩. ಆದುದರಿಂದ ಆ ಪರ್ವತವು ಈಗಲೂ ಕೂಡ ಪ್ರತಿದಿವಸವೂ ದೇವತೆಗಳಿಂದ ಸೇವಿಸಲ್ಪಡುತ್ತದೆ. ಆ ಗಿರಿಯಲ್ಲಿ ಧರ್ಮರಾಜರೂ, ದೇವೇಶನೂ, ಭಸ್ಮಧಾರಿಯಾದ ಪರಮೇಶ್ವರನೂ ವಾಸವಾಗಿರುವರು.

ಪಾರ್ವತ್ಯಾ ಸಹಿತೋ ರುದ್ರಃ ಪರ್ವತೇ ಗೀತನಾದಿತೇ ।
ಮೋದತೇ ಪೂಜಿತೋ ಧ್ಯೇಯಃ ಪಿತೄಣಾಂ ಪರಮಾಂಗತಿಂ ॥ ೫೪ ॥

ಗಯಾಯಾಂ ಪರಮಾತ್ಮಾ ಹಿ ಗೋಪತಿರ್ವಾ ಗದಾಧರಃ ।
ಹೀಯತೇ ವೈಷ್ಣವೀ ಮಾಯಾ ತಥಾ ರುದ್ರಾರ್ಚಯಾ ಮುನೇ ॥ ೫೫ ॥

ಶಿಲಾಯಾ ದಕ್ಷಿಣೇ ಹಸ್ತೇ ಭಸ್ಮಕೂಟೋ ಗಿರಿರ್ಧೃತಃ ।
ಧರ್ಮರಾಜೇನ ತತ್ರಾಸ್ತೇ ಹ್ಯಗಸ್ತ್ಯಃ ಸಹ ಭಾರ್ಯಯಾ ॥ ೫೬ ॥

ಅಗಸ್ತ್ಯಸ್ಯ ಪದೇ ಸ್ನಾತಃ ಪಿಂಡದೋ ಬ್ರಹ್ಮಲೋಕಗಃ ।
ಬ್ರಹ್ಮಣಸ್ತು ವರಂ ಲೇಭೇ ಮಾಹಾತ್ಮ್ಯಂ ಭುವಿ ದುರ್ಲಭಂ ॥ ೫೭ ॥

---

೫೪. ಗಂಧರ್ವರ ದಿವ್ಯಗಾನದಿಂದ ಸಹಿತವಾದ ಆ ಪರ್ವತದಲ್ಲಿ ಪಾರ್ವತೀ ದೇವಿಯಿಂದ ಸಹಿತನಾದ ರುದ್ರದೇವನು ಸರ್ವದೇವತೆಗಳಿಂದ ಪೂಜಿತನೂ, ಧ್ಯಾನಿಸಲ್ಪಟ್ಟವನೂ ಆಗಿ ಪಿತೃಗಳಿಗೆ ಪರಮಪದವಿಯನ್ನು ಕೊಡುತ್ತಾ ಸಂತೋಷವಾಗಿ ವಾಸಿಸುವನು.

೫೫. ಗಯಾಕ್ಷೇತ್ರದಲ್ಲಿ ಗೋಪತಿಯಾದ ಪರಮಾತ್ಮನು ಗದಾಧರರೂ ದಿಂದ ಪ್ರಕಾಶಿಸುವನು. ಎಲೈ ನಾರದಮುನಿಯೇ, ಗಯೆಯಲ್ಲಿ ವೈಷ್ಣವಶಕ್ತಿಯೂ, ಶೈವಶಕ್ತಿಯೂ ಮಾನ್ಯವಾಗಿವೆ.

೫೬. ಧರ್ಮರಾಜನು ಆ ಶಿಲೆಯ ದಕ್ಷಿಣ ಹಸ್ತದಲ್ಲಿ ಭಸ್ಮಕೂಟವೆಂಬ ಪರ್ವತವನ್ನು ಸ್ಥಾಪಿಸಿರುವನು. ಆ ಗಿರಿಯಲ್ಲಿ ಅಗಸ್ತ್ಯಮಹರ್ಷಿಯು ಪತ್ನಿಯೊಡನೆ ವಾಸಮಾಡುವನು.

೫೭. ಆ ಅಗಸ್ತ್ಯಾಶ್ರಮದಲ್ಲಿ ದಾನಮಾಡಿ ಅಗಸ್ತ್ಯಮುನಿಯ ಪಾದದಲ್ಲಿ ಪಿಂಡದಾನವನ್ನು ಮಾಡಿದವನು ಬ್ರಹ್ಮಲೋಕವನ್ನು ಪಡೆಯುವನು. ಅಂತಹ ಪುರುಷನು ಭೂಮಿಯಲ್ಲಿ ಪುರುಷರಿಂದ ಪಡೆಯಲು ದುರ್ಲಭವಾದ ವರಗಳನ್ನು ಬ್ರಹ್ಮದೇವನಿಂದ ಹೊಂದುವನು.

ಲೋಪಾಮುದ್ರಾಂ ತಥಾ ಭಾರ್ಯಾಂ ಪಿತೄಣಾಂ ಪರಮಾಂ ಗತಿಂ ।
ತತ್ರಾಗಸ್ತ್ಯೇಶ್ವರಂ ದೃಷ್ಟ್ವಾ ಮುಚ್ಯತೇ ಬ್ರಹ್ಮಹತ್ಯಯಾ ॥ ೫೮ ॥

ಅಗಸ್ತ್ಯಂ ಚ ಸಭಾರ್ಯಂ ಚ ಪಿತೄನ್ ಬ್ರಹ್ಮಪುರಂ ನಯೇತ್ ।
ದಂಡಿನಾಥ ತಪಸ್ತೇಪೇ ಸೀತಾದ್ರೇರ್ದಕ್ಷಿಣೇ ಗಿರೌ ॥ ೫೯ ॥

ವಟೋ ವಟೇಶ್ವರಸ್ತತ್ರ ಸ್ಥಿತಶ್ಚ ಪ್ರಪಿತಾಮಹಃ ।
ತದಗ್ರೇ ರುಕ್ಮಿಣೀಕುಂಡಂ ಪಶ್ಚಿಮೇ ಕಪಿಲಾ ನದೀ ॥
ಕಪಿಲೇಶೋ ನದೀತೀರೇ ಹ್ಯಮಾಸೋಮಸಮಾಗಮೇ ॥ ೬೦ ॥

ಕಪಿಲಾಯಾಂ ನರಃ ಸ್ನಾತ್ವಾ ಕಪಿಲೇಶಂ ಸಮರ್ಚ್ಯ ಚ ।
ಕೃತೇ ಶ್ರಾದ್ಧೇ ಪಿಂಡದಾನೇ ಪಿತರೋ ಮೋಕ್ಷಮಾಪ್ನುಯುಃ ॥ ೬೧ ॥

---

೫೮. ಆ ಆಶ್ರಮದಲ್ಲಿ ಅಗಸ್ತ್ಯಮುನಿಯ ಪತ್ನಿಯಾದ ಲೋಪಾಮುದ್ರೆಯನ್ನೂ ಪಿತೃಗಳಿಗೆ ಪರಮಪದವಿಯನ್ನು ದಾಯಕನೂ, ಅಗಸ್ತ್ಯನಿಂದ ಪೂಜಿತನೂ ಆದ ಈಶ್ವರನನ್ನೂ ದರ್ಶನಾರ್ಚನೆಗಳನ್ನು ಮಾಡುವ ಪುರುಷನು ಬ್ರಹ್ಮಹತ್ಯಾದೋಷದಿಂದ ಮುಕ್ತನಾಗುವನು.

೫೯. ಅಲ್ಲಿರುವ ಪತ್ನಿಯಿಂದ ಸಹಿತನಾದ ಅಗಸ್ತ್ಯಮುನಿಯನ್ನು ಪೂಜಿಸಿದರೆ ಆ ದಂಪತಿಗಳು ಬ್ರಹ್ಮಪದವಿಯನ್ನು ಕೊಡುವರು. ದಂಡಿನಾಥಮುನಿಯು ಸೀತಾದ್ರಿಯ ದಕ್ಷಿಣ ದಿಕ್ಕಿನಲ್ಲಿರುವ ಪರ್ವತದಲ್ಲಿ ತಪಸ್ಸನ್ನು ಮಾಡಿದನು.

೬೦. ಗಯಾಕ್ಷೇತ್ರದಲ್ಲಿ ಅಕ್ಷಯವಟವೃಕ್ಷವೂ, ಅಕ್ಷಯವಟೇಶ್ವರನೂ, ಬ್ರಹ್ಮದೇವನ ತಂದೆಯಾದ ಮಹಾವಿಷ್ಣುವೂ ಸನ್ನಿಹಿತರಾಗಿರುವರು. ಅದರ ಮುಂಭಾಗದಲ್ಲಿ ರುಕ್ಮಿಣೀಕುಂಡವೂ, ಪಶ್ಚಿಮಭಾಗದಲ್ಲಿ ಕಪಿಲಾನದಿಯೂ, ಅದರ ತೀರದಲ್ಲಿ ಕಪಿಲೇಶ್ವರನೂ ಇರುವರು.

೬೧. ಅಮಾವಾಸ್ಯಾ ಸೋಮವಾರಗಳು ಕೂಡಿದ ಪುಣ್ಯದಿನದಲ್ಲಿ ಕಪಿಲಾನದಿಯಲ್ಲಿ ಸ್ನಾನವನ್ನು ಮಾಡಿ ಕಪಿಲೇಶ್ವರನನ್ನು ಪೂಜಿಸಿದ ಪುರುಷನು ಶ್ರಾದ್ಧವನ್ನೂ ಪಿಂಡದಾನವನ್ನೂ ಮಾಡಿದರೆ ಅವನ ಪಿತೃಗಳು ಮುಕ್ತಿಯನ್ನು ಹೊಂದುವರು.

ತತ್ರಾಗ್ನಿ ಧಾರಾ ಗಿರಿಪರ್ವತಾದಾಗತೋದ್ಯಂತಸಾಧನು ।
ತತ್ರ ಸಾರಸ್ವತಂ ಕುಂಡಂ ಸರಸ್ವತ್ಯಾ ಪ್ರಕಲ್ಪಿತಂ ॥ ೬೨ ॥

ಶುಕ್ರಸ್ತತ್ರ ಸುತೈಃ ಸಾರ್ದ್ಧಂ ಷಂಡಾಮರ್ಕಾದಿಭಿಃ ಪ್ರಭುಃ ।
ತತ್ರ ತತ್ರ ಮುನೀಂದ್ರಾಣಾಂ ಪದೇಷು ಮುನಿಸತ್ತಮ ॥
ಶ್ರಾದ್ಧ ಪಿಂಡಾದಿಕೃತ್ಸ್ನಾತಃ ಪಿತ್ರ್ಯಾಂ ಸ್ತಾರಯತೇ ನರಃ ॥ ೬೩ ॥

ಶಿಲಾಯಾ ವಾಮಹಸ್ತೇಽಪಿ ಗೃಧ್ರಕೂಟೇ ಗಿರಿರ್ಧೃತಃ ।
ಗೃಧ್ರರೂಪೇಣ ಸಂಸಿದ್ಧಾಸ್ತಪಸ್ತಪ್ತ್ವಾ ಮಹರ್ಷಯಃ ॥ ೬೪ ॥

ಅತೋ ಗಿರಿರ್ಗೃಧ್ರಕೂಟಸ್ತತ್ರ ಗೃಧ್ರೇಶ್ವರಃ ಸ್ಥಿತಃ ।
ದೃಷ್ಟ್ವಾ ಗೃಧ್ರೇಶ್ವರಂ ನತ್ವಾ ಯಾಯಾಚ್ಛಂಭೋಃ ಪದಂ ನರಃ ॥ ೬೫ ॥

---

೬೨. ಅದರಲ್ಲಿ ಉದ್ಯಂತಕ ಪರ್ವತೋತ್ತಮದಿಂದ ಬಂದಂಥ ಅಗ್ನಿಧಾರೆಯು ಹೊಳೆಯುತ್ತಿರುವುದು. ಆ ಆಶ್ರಮದಲ್ಲಿ ಸರಸ್ವತೀದೇವಿಯಿಂದ ಸ್ಥಾಪಿಸಲ್ಪಟ್ಟ ಸಾರಸ್ವತಕುಂಡವು ಪ್ರಕಾಶಿಸುವುದು.

೬೩. ಪ್ರಭುವಾದ ಶುಕ್ರಾಚಾರ್ಯರು ತಮ್ಮ ಪುತ್ರರಾದ ಷಂಡಾಮರ್ಕರೇ, ಮೊದಲಾದವರೊಡನೆ ವಾಸಿಸುವರು. ಅಲ್ಲಲ್ಲಿ ಅನೇಕ ಮುನೀಶ್ವರರು ವಾಸಿಸುವರು. ಅವುಗಳಲ್ಲಿ ಸ್ನಾನ, ಶ್ರಾದ್ಧ, ಪಿಂಡದಾನ ಇವುಗಳನ್ನು ಮಾಡಿದ ಪುರುಷರು ಪಿತೃಗಳನ್ನು ನರಕದಿಂದ ಉದ್ಧರಿಸುವರು.

೬೪. ಆ ಶಿಲೆಯು ಎಡಗೈಯಲ್ಲಿ ಗೃಧ್ರಕೂಟವೆಂಬ ಗಿರಿಯು ಸ್ಥಾಪಿತವಾಗಿರುವುದು. ಅಲ್ಲಿ ಮಹರ್ಷಿಗಳು ಗೃಧ್ರಗಳ (ಹದ್ದುಗಳ) ರೂಪಗಳಿಂದ ತಪಸ್ಸನ್ನು ಮಾಡಿ ಮಹಾಸಿದ್ಧಿಯನ್ನು ಪಡೆದರು.

೬೫. ಗೃಧ್ರರೂಪದಿಂದ ಋಷಿಗಳು ತಪಸ್ಸನ್ನು ಮಾಡಿದ್ದರಿಂದ ಆ ಗಿರಿಗೆ ಗೃಧ್ರಕೂಟವೆಂಬ ನಾಮವು ಪ್ರಾಪ್ತವಾಗಿದೆ. ಅದರಲ್ಲಿ ಗೃಧ್ರೇಶ್ವರನು ವಾಸಿಸುವನು. ಮನುಷ್ಯನು ಗೃಧ್ರೇಶ್ವರನಿಗೆ ವಂದಿಸಿದರೆ ಶಿವಪದವಿಯನ್ನು ಹೊಂದುವನು.

ತತ್ರ ಗೃಧ್ರೇ ಗುಹಾಯಾಂ ಚ ಪಿಂಡದಃ ಶಿವಲೋಕಭಾಕ್ ।
ತತ್ರ ಗೃಧ್ರೇ ವಟಂ ನತ್ವಾ ಪ್ರಾಪ್ತಕಾಮೋ ದಿವಂ ವ್ರಜೇತ್ ॥ ೬೬ ॥

ಋಣಮೋಕ್ಷಂ ಪಾಪಮೋಕ್ಷಂ ಶಿವಂ ದೃಷ್ಟ್ವಾ ಶಿವಂ ವ್ರಜೇತ್ ।
ಶೂಲಕ್ಷೇತ್ರಂ ಚ ತತ್ರಾಸ್ತೇ ಪಿಂಡದಃ ಸ್ವರ್ಗಯೇತ್ಪಿತೄನ್ ॥ ೬೭ ॥

ಆದಿಪಾಲೇನ ಗಿರಿಣಾ ಸಮಾಕ್ರಾಂತಂ ಶಿಲೋದರಂ ।
ತತ್ರಾಸ್ತೇ ಗಜರೂಪೇಣ ವಿಘ್ನೇಶೋ ವಿಘ್ನನಾಶನಃ ॥
ತಂ ದೃಷ್ಟ್ವಾ ಮುಚ್ಯತೇ ವಿಘ್ನೈಃ ಪಿತೄನ್ಬ್ರಹ್ಮಪುರಂ ನಯೇತ್ ॥ ೬೮ ॥

ನಿತಂಬೇ ಮುಂಡಪೃಷ್ಠಸ್ಯ ದೇವದಾರುವನಂತ್ವಭೂತ್ ।
ಮುಂಡಪೃಷ್ಠಾರವಿಂದಾದ್ರೀ ದೃಷ್ಟ್ವಾ ಪಾಪಂ ವಿನಾಶಯೇತ್ ॥
ಗಯಾನಾಭೌ ಸುಷುಮ್ನಾಯಾಂ ಪಿಂಡದಃ ಸ್ವರ್ಗಯೇತ್ಪಿತೄನ್ ॥ ೬೯ ॥

---

೬೬. ಅಂತಹ ಗೃಧ್ರಕೂಟದಲ್ಲಿಯೂ, ಗವಿಯಲ್ಲಿಯೂ, ಪಿಂಡದಾನಮಾಡಿದರೆ ಪಿತೃಗಳು ಶಿವಲೋಕವನ್ನು ಹೊಂದುವರು. ಆ ಗೃಧ್ರಕೂಟದಲ್ಲಿ ವಟವೃಕ್ಷವನ್ನು ನಮಸ್ಕರಿಸಿದರೆ ಇಹದಲ್ಲಿ ಸಕಲೈಶ್ವರ್ಯಗಳನ್ನೂ ಅನಂತರ ಸ್ವರ್ಗಲೋಕವನ್ನೂ ಹೊಂದುವರು.

೬೭. ಅಲ್ಲಿರುವ ಶಿವದರ್ಶನವನ್ನು ಮಾಡಿದರೆ ಋಣಗಳಿಂದಲೂ, ಪಾಪಗಳಿಂದಲೂ ಮುಕ್ತರಾಗಿ ಪುರುಷರು ಶಿವಪದವಿಯನ್ನು ಹೊಂದುವರು. ಅಲ್ಲಿ ಶೂಲಕ್ಷೇತ್ರವು ಇರುವುದು. ಅಲ್ಲಿ ಪಿಂಡದಾನವನ್ನು ಮಾಡಿದರೆ ಪಿತೃಗಳು ಸ್ವರ್ಗಕ್ಕೆ ಹೋಗುವರು.

೬೮. ಶಿಲೆಯ ಮಧ್ಯಭಾಗದಲ್ಲಿ ಆದಿಪಾಲವೆಂಬ ಗಿರಿಯು ಸ್ಥಾಪಿತವಾಗಿದೆ. ಅದರಲ್ಲಿ ವಿಘ್ನಗಳನ್ನು ಪರಿಹರಿಸುವ ವಿಘ್ನೇಶ್ವರನು ಗಜಾಕಾರನಾಗಿರುವನು. ಅವನ ದರ್ಶನದಿಂದ ಸಕಲ ವಿಘ್ನಗಳೂ ಪರಿಹೃತವಾಗುವುವು. ಪಿತೃಗಳು ಸ್ವರ್ಗಲೋಕವನ್ನು ಪಡೆಯುವರು.

೬೯. ಮುಂಡಪೃಷ್ಠಗಿರಿಯ ನಿತಂಬಪ್ರದೇಶದಲ್ಲಿ ದೇವದಾರುವನವಿರುತ್ತದೆ. ಮುಂಡಪೃಷ್ಠಾರವಿಂದಾದ್ರಿಗಳು ದರ್ಶನಮಾತ್ರದಿಂದಲೇ ಪಾಪಗಳನ್ನು ಪರಿಹರಿಸುತ್ತವೆ. ಗಯಾನಾಭಿಯಲ್ಲಿಯೂ, ಸುಷುಮ್ನಾಕ್ಷೇತ್ರದಲ್ಲಿಯೂ, ಶ್ರಾದ್ಧಮಾಡಿದವನು ಪಿತೃಗಳಿಗೆ ಸ್ವರ್ಗವನ್ನು ಕೊಡಿಸುವನು.

ಶಿಲಾಯಾ ವಾಮಪಾದೇ ತು ಸ್ಥಾಪಿತಃ ಪ್ರೇತಪರ್ವತಃ ।
ಧರ್ಮರಾಜೇನ ಪಾಪೇಭ್ಯೋ ಗಿರಿಃ ಪ್ರೇತಶಿಲಾಹ್ವಯಃ ॥ ೭೦ ॥

ಪಾದೇನ ದೂರೇ ನಿಕ್ಷಿಪ್ತಃ ಶಿಲಾಯಾಃ ಪಾದಭಾರತಃ ।
ಗತಃ ಶಿಲಾಯಾಃ ಸಂಸರ್ಗಾತ್ಪ್ರೇತಕೂಟಃ ಪವಿತ್ರತಾಂ ॥ ೭೧ ॥

ಪ್ರೇತಕುಂಡಂ ಚ ತತ್ರಾಸ್ತೇ ದೇವಾಸ್ತತ್ರ ಪದೇ ಸ್ಥಿತಾಃ ।
ತತ್ರ ಕುಂಡಾದಿಕಂ ಕೃತ್ವಾ ಪ್ರೇತತ್ವಾನ್ಮೋಚಯೇತ್ಪಿತೄನ್ ॥ ೭೨ ॥

ಪೃಥಕ್ ಸ್ಥಿತಾಶ್ಚ ಬಹವೋ ವಿಘ್ನಕಾರಿಣ ಏವ ತೇ ।
ಶ್ರಾದ್ಧಾದಿಕಾರಿಣಾಂ ನೃಣಾಂ ತೀರ್ಥೇ ಪಿತೃವಿಮುಕ್ತಯೇ ॥
ಪ್ರೇತಾ ಧಾನುಷ್ಕರೂಪೇಣ ಕರಗ್ರಹಣಕಾರಕಾಃ ॥ ೭೩ ॥

---

೭೦. ಆ ಶಿಲೆಯು ಎಡದ ಪಾದದ ಮೇಲೆ ಧರ್ಮರಾಜನು ಪ್ರೇತಗಿರಿಯನ್ನು ಸ್ಥಾಪಿಸಿರುವನು. ಅದರ ದರ್ಶನ ಮಾತ್ರದಿಂದಲೇ ಪಾಪಗಳು ಪರಿಹೃತವಾಗಿ ಪಿತೃಗಳು ಸ್ವರ್ಗವನ್ನು ಪಡೆಯುವರು.

೭೧. ಆ ಶಿಲೆಯು ಸ್ವಲ್ಪ ದೂರದಲ್ಲಿಯೇ ಪಾದದ ಮೇಲೆ ಭಾರಕ್ಕಾಗಿ ಸ್ಥಾಪಿತವಾಗಿರುವ ಪ್ರೇತಕೂಟಗಿರಿಯೂ, ಕೂಡ ಅದರ ಸಂಪರ್ಕದಿಂದ ಪವಿತ್ರವಾಗಿದೆ.

೭೨. ಆ ಶಿಲೆಯು ಪಾದಭಾಗದಲ್ಲಿ ಸ್ಥಾಪಿತವಾಗಿರುವ ಪ್ರೇತಕುಂಡವು ದೇವತೆಗಳಿಗೆ ಆಶ್ರಯವಾಗಿದೆ. ಅಲ್ಲಿ ಪಿಂಡದಾನವನ್ನು ಮಾಡಿದರೆ ಪಿತೃಗಳು ಪ್ರೇತತನದಿಂದ ಮುಕ್ತರಾಗುವರು.

೭೩. ಅದರ ಸುತ್ತಮುತ್ತಲೂ ಅನೇಕ ಪರ್ವತಗಳು ಸ್ಥಾಪಿತವಾಗಿವೆ. ಅವುಗಳಲ್ಲಿ ವಿಘ್ನಕಾರಿಗಳಾದ ಅನೇಕ ದೇವತೆಗಳಿರುವರು. ಅವುಗಳಲ್ಲಿ ಶ್ರಾದ್ಧಾದಿಗಳನ್ನು ಮಾಡಿದರೆ ವಿಘ್ನಗಳು ಪರಿಹೃತವಾಗಿ ಪಿತೃಗಳು ಮುಕ್ತಿಯನ್ನು ಹೊಂದುವರು.

ಪಾದಾಂಕಿತಾಂ ಮುಂಡಪೃಷ್ಠಾಂ ಮಹಾದೇವನಿವಾಸಿನೀಂ ।
ತಾಂ ದೃಷ್ಟ್ವಾ ಸರ್ವಲೋಕಶ್ಚ ಮುಕ್ತಃ ಪಾಪೋಪಪಾತಕೈಃ ॥ ೭೪ ॥

ಗಯಾಶಿರಸಿ ಪುಣ್ಯೇ ಚ ಸರ್ವಪಾಪೈರ್ವಿವರ್ಜಿತೇ ।
ಪ್ರೇತಾದಿವರ್ಜಿತಂ ಯಸ್ಮಾತ್ ತೀರ್ಥತೋಪಾವನಂ ವರಂ ॥ ೭೫ ॥

ಕೀಕಟೇಷು ಗಯಾ ಪುಣ್ಯಾ ಪುಣ್ಯಂ ರಾಜಗೃಹಂ ವನಂ ।
ಚ್ಯವನಸ್ಯಾಶ್ರಮಂ ಪುಣ್ಯಂ ನದೀ ಪುಣ್ಯಾ ಪುನಃ ಪುನಃ ॥ ೭೬ ॥

ವೈಕುಂಠೋ ಲೋಹದಂಡಶ್ಚ ಗೃಧ್ರಕೂಟಶ್ಚ ಶೋಣಕಃ ।
ಅತ್ರ ಶ್ರಾದ್ಧಾದಿನಾ ಸರ್ವಾನ್ ಪಿತೄನ್ ಬ್ರಹ್ಮಪುರಂ ನಯೇತ್ ॥ ೭೭ ॥

---

೭೪. ಆ ಶಿಲೆಯ ಪಾದಭಾಗದಲ್ಲಿ ಮಹಾದೇವನು ವಾಸಿಸುವ ಮುಂಡಪೃಷ್ಠವು ಸ್ಥಾಪಿತವಾಗಿರುವುದು. ಅದರ ದರ್ಶನಮಾತ್ರದಿಂದ ಮಹಾಪಾತಕಗಳೂ, ಉಪಪಾಪಗಳೂ ಪರಿಹಾರವಾಗಿ ಮುಕ್ತರಾಗುವರು.

೭೫. ಗಯಾಸುರನ ಶಿರೋಭಾಗದಲ್ಲಿ ಅತಿಪವಿತ್ರವೂ, ಸರ್ವವಿಧವಾದ ಪಾಪಗಳಿಂದ ವರ್ಜಿತವೂ, ಅತಿಪುಣ್ಯಕರವೂ, ಅತ್ಯುತ್ತಮವೂ ಆದ ಕ್ಷೇತ್ರವಿರುವುದು. ಅಲ್ಲಿ ಮಾಡಿದ ಶ್ರಾದ್ಧಾದಿಕರ್ಮಗಳು ಪಿತೃಗಳಿಗೆ ಮುಕ್ತಿಪ್ರದವಾಗುವುವು.

೭೬. ಕೀಕಟದೇಶದಲ್ಲಿ ಗಯಾಕ್ಷೇತ್ರವು ಅತಿಪುಣ್ಯಪ್ರದವಾಗಿದೆ. ಅದಕ್ಕಿಂತಲೂ ರಾಜಗೃಹವೆಂಬ ವನವು ಅತ್ಯಂತ ಪವಿತ್ರವಾಗಿದೆ. ಅದಕ್ಕಿಂತ ಚ್ಯವನ ಮುನಿಯ ಆಶ್ರಮವು ಪುಣ್ಯಕರವಾಗಿರುವುದು. ಆ ಆಶ್ರಮದಲ್ಲಿರುವ ನದಿಯೂ ಕೂಡ ಮಹಾಪವಿತ್ರವಾಗಿದೆ.

೭೭. ವೈಕುಂಠ, ಲೋಹದಂಡ, ಗೃಧ್ರಕೂಟ, ಶೋಣಕವೆಂಬ ಕ್ಷೇತ್ರಗಳು ಪವಿತ್ರವಾಗಿವೆ. ಅವುಗಳಲ್ಲಿ ಶ್ರಾದ್ಧಾದಿಗಳನ್ನು ಮಾಡಿದರೆ ಸಮಸ್ತರಾದ ಪಿತೃಗಳಿಗೂ ಮುಕ್ತಿಯುಂಟಾಗುವುದು.

ಕ್ರೌಂಚರೂಪೇಣ ಹಿ ಮುನಿರ್ಮುಂಡಪೃಷ್ಠೇ ತಪೋಽಕರೋತ್ ।
ತಸ್ಯ ಪಾದಾಂಕಿತೋ ಯಸ್ಮಾತ್ ಕ್ರೌಂಚಪಾದಸ್ತತಃ ಸ್ಮೃತಃ ॥ ೭೮ ॥

ಸ್ನಾತೋ ಜಲಾಶಯೇ ತತ್ರ ನಯೇತ್ ಸ್ವರ್ಗಂ ಸ್ವಕಂ ಕುಲಂ ।
ಬಲಿಃ ಕಾಕಶಿಲಾಯಾಂ ಚ ಕಾಕೇಭ್ಯ ಋಣಮೋಕ್ಷದಃ ॥ ೭೯ ॥

ಮುಂಡಪೃಷ್ಠಸ್ಯ ಸಾನೌ ಹಿ ಲೋಮಶೋ ಲೋಮಹರ್ಷಣಃ ।
ದ್ವಾವೇತೌ ಪರಮಂ ತಪ್ತ್ವಾ ತಪಃ ಸಿದ್ಧಿಂ ಪರಾಂ ಗತೌ ॥ ೮೦ ॥

ಆಹೂತಾಸ್ತು ಸರಿಚ್ಛ್ರೇಷ್ಠಾ ಲೋಮಶೇನ ಮಹಾನದೀ ।
ಶರಾವತೀ ವೇತ್ರವತೀ ಚಂದ್ರಭಾಗಾ ಸರಸ್ವತೀ ॥ ೮೧ ॥

ಕಾವೇರೀ ಸಿಂಧುರೀರಾಚ ಚಂದ್ರನಾ ಚ ಸರಿದ್ವರಾ ।
ವಾಸಿಷ್ಠೀ ಸರಯೂರ್ಗಂಗಾ ಯಮುನಾ ಗಂಡಕೀಂದಿರಾ ॥ ೮೨ ॥

---

೭೮. ಮುಂಡಪೃಷ್ಠದಲ್ಲಿ ಮಹರ್ಷಿಯು ಕ್ರೌಂಚಪಕ್ಷಿಯ ರೂಪದಿಂದ ತಪಸ್ಸನ್ನು ಮಾಡಿದನು. ಆ ಮುನಿಯ ಪಾದಗಳ ಗುರುತುಗಳಿರುವುದರಿಂದ ಅದು ಕ್ರೌಂಚಪಾದವೆಂದು ಲೋಕಗಳಲ್ಲಿ ಪ್ರಖ್ಯಾತವಾಗಿದೆ.

೭೯. ಅಲ್ಲಿರುವ ಜಲಾಶಯಗಳಲ್ಲಿ ಸ್ನಾನವನ್ನು ಮಾಡಿದ ಪುರುಷನು ತನ್ನ ಪಿತೃಗಳನ್ನು ಸ್ವರ್ಗಕ್ಕೆ ಕಳುಹಿಸುವನು. ಅಲ್ಲಿರುವ ಕಾಕಶಿಲೆಯಲ್ಲಿ ಕಾಗೆಗಳಿಗೆ ಬಲಿದಾನವನ್ನು ಮಾಡಿದರೆ ಋಣಮುಕ್ತರಾಗಿ ಪಿತೃಗಳು ಮುಕ್ತಿಯನ್ನು ಪಡೆಯುವರು.

೮೦. ಆ ಮುಂಡಪೃಷ್ಠಗಿರಿಯ ತಪ್ಪಲು ಪ್ರದೇಶಗಳಲ್ಲಿ ಲೋಮಶ ಮತ್ತು ಲೋಮಹರ್ಷಣರೆಂಬ ಇಬ್ಬರು ಮುನಿಗಳು ಘೋರ ತಪಸ್ಸನ್ನು ಮಾಡಿ ಮಹಾ ಸಿದ್ಧಿಯನ್ನು ಪಡೆದರು.

೮೧–೮೪. ಅದರಲ್ಲಿ ತಪಸ್ಸನ್ನು ಮಾಡಿದ ಲೋಮಶಮುನಿಯು ನದಿಗಳಲ್ಲಿ ಶ್ರೇಷ್ಠವೂ, ಮಹಾನದಿಯೂ ಆದ ಶರಾವತೀ, ವೇತ್ರವತೀ, ಚಂದ್ರಭಾಗ, ಸರಸ್ವತೀ, ಕಾವೇರೀ, ಸಿಂಧು, ಈರಾ, ಚಂದ್ರನಾ, ಉತ್ತಮವಾದ ವಾಸಿಷ್ಠೀ, ಸರಯೂ, ಗಂಗಾ, ಯಮುನಾ, ಗಂಡಕೀ, ಇಂದಿರಾ, ಮಹಾವೈತರಣಿ, ದೇವತೆಗಳ ನಿಕ್ಷರಾ, ಪಾವನೀ, ಅಲಕನಂದಾ, ಉದೀಚೀ, ಕನಕಾವತೀ, ಕೌಶಿಕೀ, ಬ್ರಹ್ಮದಾ, ಜ್ಯೇಷ್ಠಾ,

ಮಹಾವೈತರಣೀ ನಾಮ್ನಾ ನಿಕ್ಷರಾ ಚ ದಿವೌಕಸಃ ।
ಸಾವವ್ಯಲಕನಂದಾ ಚ ಹ್ಯುದೀಚೀ ಕನಕಾಹ್ವಯಾ ॥ ೭೩ ॥

ಕೌಶಿಕೀ ಬ್ರಹ್ಮದಾ ಜ್ಯೇಷ್ಠಾ ಸರ್ವಸ್ಯಾಘವಿಮೋಚಿನೀ ।
ಕೃಷ್ಣವಲ್ವಾ ಚರ್ಮಣ್ವತೀ ದ್ವೇ ನದ್ಯೌ ಮುಕ್ತಿದಾಯಿಕೇ ॥ ೭೪ ॥

ಆಹೂತೇ ಸರಿತಾಂ ಶ್ರೇಷ್ಠೇ ಲೋಮಹರ್ಷೇಣ ಸಾಹಸಾತ್ ।
ತಪಸಸ್ತು ಪ್ರಭಾವೇಣ ನರ್ಮದಾ ಮುನಿಪುಂಗವ ।
ತಾಸು ಸರ್ವಾಸು ಯಃ ಸ್ನಾತ್ವಾ ಪಿಂಡದಃ ಸ್ವರ್ಗಯೇತ್ ಪಿತ್ರ್ನ್ ॥ ೭೫ ॥

ಬ್ರಹ್ಮಯೋನಿಂ ಪ್ರವಿಶ್ಯಾಥ ನಿರ್ಗಚ್ಛೇದ್ಯಸ್ತು ಮಾನವಃ ।
ಪರಂ ಬ್ರಹ್ಮ ಸ ಯಾತೀಹ ವಿಮುಕ್ತೋ ಯೋನಿಸಂಕಟಾತ್ ॥ ೭೬ ॥

---

ಸರ್ವಪಾಪಪರಿಹಾರಕವಾದ ಕೃಷ್ಣ, ವಲ್ವಾ, ಚರ್ಮವತೀ, ಮುಕ್ತಿದಾಯಕವಾದ ಮಹಾನದಿಗಳು ಇವುಗಳನ್ನು ಆಹ್ವಾನಮಾಡಿ ಸ್ನಾನಪಾನಾದಿಗಳನ್ನು ಮಾಡಿದನು. ಆದುದರಿಂದ ಅವುಗಳಲ್ಲಿ ಮಾಡಿದ ಪಿತೃಕಾರ್ಯಗಳು ಭುಕ್ತಿಮುಕ್ತಿಪ್ರದಗಳಾಗಿವೆ.

೭೫. ಲೋಮಹರ್ಷಣ ಋಷಿಯು ತನ್ನ ತಪಃಪ್ರಭಾವದಿಂದ ಆ ಮಹಾನದಿಗಳನ್ನು ಕರೆತರಿಸಿ ಅವುಗಳಲ್ಲಿ ಸ್ನಾನವನ್ನೂ ತರ್ಪಣಾದಿಗಳನ್ನೂ ಮಾಡಿರುವನು. ಅವುಗಳಲ್ಲಿ ನರ್ಮದಾನದಿಯು ಪವಿತ್ರವಾಗಿರುವುದು. ಆ ಸಮಸ್ತವಾದ ನದಿಗಳಲ್ಲಿಯೂ ಯಾವನು ಸ್ನಾನವನ್ನು ಮಾಡಿ ಪಿಂಡದಾನವನ್ನು ಮಾಡುವನೋ ಅವನು ತನ್ನ ಪಿತೃಗಳನ್ನು ಸ್ವರ್ಗಲೋಕಕ್ಕೆ ಕಳುಹಿಸುವನು.

೭೬. ಯಾವನು ಬ್ರಹ್ಮಯೋನಿಯೆಂಬ ಕ್ಷೇತ್ರದಲ್ಲಿ ಸ್ನಾನಮಾಡಿ ಮೇಲಕ್ಕೆ ಸೇರುವನೋ ಅವನು ಜನನಮರಣಗಳಿಂದ ಮುಕ್ತನಾಗಿ ಬ್ರಹ್ಮಪದವಿಯನ್ನು ಹೊಂದುವನು. ಅಂದರೆ ಮುಕ್ತನಾಗುವನು.

ನಿಕ್ಷರಾಯಾಂ ಪುಷ್ಕರಿಣ್ಯಾಂ ಸ್ನಾತಃ ಶ್ರಾದ್ಧಾದಿಕಂ ನರಃ ।
ಕುರ್ಯಾತ್ಕ್ರೌಂಚಪದೇ ದಿವ್ಯೇ ನಿಯಮಾದ್ವಾಸರತ್ರಯಂ ॥
ಸರ್ವಾನ್ ಪಿತೄನ್ನಯೇತ್ಸರ್ವಂ ಪಂಚಪಾಪಿನ ಏವ ಚ ॥ ೮೭ ॥

ಜನಾರ್ದನೋ ಭಸ್ಮಕೂಟೇ ತಸ್ಯ ಹಸ್ತೇ ತು ಪಿಂಡದಃ ।
ಆತ್ಮನೋಽಪ್ಯಥವಾನ್ಯೇಷಾಂ ಸವ್ಯೇನಾಪಿ ತಿಲೈರ್ವಿನಾ ॥
ಜೀವತಾಂ ದಧಿ ಸಂಮಿಶ್ರಂ ಸರ್ವೇ ತೇ ವಿಷ್ಣುಲೋಕಗಾಃ ॥ ೮೮ ॥

ಯಸ್ತು ಪಿಂಡೋ ಮಯಾ ದತ್ತಸ್ತವ ಹಸ್ತೇ ಜನಾರ್ದನ ।
ಯಮುದ್ದಿಶ್ಯ ತ್ವಯಾ ದೇಯಸ್ತಸ್ಮಿನ್ಪಿಂಡೋ ಮೃತೇ ಪ್ರಭೋ ॥ ೮೯ ॥

ಏಷ ಪಿಂಡೋ ಮಯಾ ದತ್ತಸ್ತವ ಹಸ್ತೇ ಜನಾರ್ದನ ।
ಅಂತಕಾಲೇ ಗತೇ ಮಹ್ಯಂ ತ್ವಯಾ ದೇಯೋ ಗಯಾಶಿರೇ ॥ ೯೦ ॥

---

೮೭. ಯಾವ ಪುರುಷನು ನಿಕ್ಷುರಾನಾಮಕವಾದ ಪುಷ್ಕರಿಣಿಯಲ್ಲಿ ಸ್ನಾನ, ತರ್ಪಣ, ಶ್ರಾದ್ಧಾದಿಗಳನ್ನು ಮಾಡಿ, ಕ್ರೌಂಚಪದವೆಂಬ ಕ್ಷೇತ್ರದಲ್ಲಿ ನಿಯಮದಿಂದ ಮೂರು ದಿವಸಗಳು ವಾಸಮಾಡುವನೋ ಅವನ ಸಮಸ್ತ ಪಿತೃಗಳೂ ಪಂಚಮಹಾ ಪಾತಕವುಳ್ಳವರಾದರೂ ಅವುಗಳಿಂದ ಮುಕ್ತರಾಗಿ ಸ್ವರ್ಗವನ್ನು ಹೊಂದುವರು.

೮೮. ಭಸ್ಮಕೂಟದಲ್ಲಿ ಜನಾರ್ದನನು ವಾಸಿಸುವನು. ಹಸ್ತದಲ್ಲಿ ಯಾವನು ಪಿತೃಗಳಿಗಾಗಲೀ ತನ್ನ ಉದ್ದೇಶ್ಯಕವಾಗಲೀ, ಸವ್ಯದಿಂದ ಎಳ್ಳು ಇಲ್ಲದೆಯೇ ದಧಿ ಮಿಶ್ರವಾದ ಪಿಂಡದಾನವನ್ನು ಮಾಡುವನೋ, ಅವನೂ ಅವನ ಪಿತೃಗಳೂ ಮುಕ್ತಿ ಯನ್ನು ಹೊಂದುವರು. ಪಿತೃಗಳಿಗೆ ತಿಲಸಹಿತವಾಗಿಯೂ, ಆತ್ಮೋದ್ದೇಶ್ಯಕವಾಗಿ ದಧಿಮಿಶ್ರವಾಗಿಯೂ ಇರುವ ಪಿಂಡಗಳನ್ನು ಕೊಡಬೇಕು.

೮೯. ಎಲೈ ಜನಾರ್ದನನೇ, ನಾನು ಯಾರ ಉದ್ದೇಶ್ಯವಾಗಿ ನಿನ್ನ ಹಸ್ತದಲ್ಲಿ ಪಿಂಡದಾನವನ್ನು ಮಾಡುವೆನೋ, ಎಲೈ ಪ್ರಭುವೇ, ಅಂತಹ ಪಿಂಡವನ್ನು ನೀನು ಅವರ ಅಂತ್ಯಕಾಲದಲ್ಲಿ ಅವರಿಗೆ ಕೊಡಬೇಕೆಂದು ಪ್ರಾರ್ಥಿಸಬೇಕು.

೯೦. ಎಲೈ ಜನಾರ್ದನನೇ, ನಿನ್ನ ಹಸ್ತದಲ್ಲಿ ಈ ಪಿಂಡವನ್ನು ಕೊಟ್ಟಿರುವೆನು. ಇದನ್ನು ಅಂತ್ಯಕಾಲದಲ್ಲಿ ಗಯಾಶಿರಸ್ಸಿನಲ್ಲಿ ನೀನು ನನಗೆ ಕೊಡಬೇಕೆಂದು ಪ್ರಾರ್ಥಿಸಿ ಪಿಂಡದಾನವನ್ನು ಮಾಡಬೇಕು.

ಜನಾರ್ದನ ನಮಸ್ತುಭ್ಯಂ ನಮಸ್ತೇ ಪಿತೃಮೋಕ್ಷದ ।
ಪಿತೃಪತೇ ನಮಸ್ತೇ ತು ನಮಸ್ತೇ ಪಿತೃರೂಪಿಣೇ ॥ ೯೧ ॥

ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।
ತಂ ದೃಷ್ಟ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ ॥ ೯೨ ॥

ನಮಸ್ತೇ ಪುಂಡರೀಕಾಕ್ಷ ಋಣತ್ರಯವಿಮೋಚಕ ।
ಲಕ್ಷ್ಮೀಕಾಂತ ನಮಸ್ತೇಽಸ್ತು ಪಿತೄಣಾಂ ಮೋಕ್ಷದೋ ಭವ ॥ ೯೩ ॥

ವಾಮಜಾನು ಸುಸಂಪಾತ್ಯ ನತ್ವಾ ಭೀಮೋ ಜನಾರ್ದನಂ ।
ಶ್ರಾದ್ಧಂ ಸಪಿಂಡಕಂ ಕೃತ್ವಾ ಭ್ರಾತೃಭಿರ್ಬ್ರಹ್ಮಲೋಕಭಾಕ್ ॥
ಪಿತೃಭಿಃ ಸಹ ಧರ್ಮಾತ್ಮಾ ಕುಲಾನಾಂ ಚ ಶತೇ ನ ಚ ॥ ೯೪ ॥

೯೧. ಎಲೈ ಮೋಕ್ಷದಾತನಾದ ಜನಾರ್ದನನೇ, ನಿನಗೆ ಅನಂತಾನಂತ ವಂದನೆಗಳು. ಪಿತೃಗಳಿಗೆ ಪತಿಯೂ ಪಿತೃರೂಪಿಯೂ ಆದ ನಿನಗೆ ಅನಂತ ನಮಸ್ಕಾರಗಳು.

೯೨. ಜನಾರ್ದನನು ಪಿತೃಸ್ವರೂಪನಾಗಿ ಗಯಾಕ್ಷೇತ್ರದಲ್ಲಿ ವಾಸಿಸುವನು. ಅಂತಹ ಜನಾರ್ದನನಾದ ಪುಂಡರೀಕಾಕ್ಷನ ದರ್ಶನಮಾತ್ರದಿಂದ ಪಿತೃಗಳು ಋಣತ್ರಯಗಳಿಂದ ಮುಕ್ತರಾಗಿ ಪರಮಪದವಿಯನ್ನು ಹೊಂದುವರು.

೯೩. ದೇವಋಣ, ಪಿತೃಋಣ, ಋಷಿಋಣಗಳೆಂಬ ಋಣತ್ರಯಮೋಚಕನಾದ ಎಲೈ ಕಮಲಾಕ್ಷನಾದ ಶ್ರೀಮನ್ನಾರಾಯಣನೇ, ನಿನಗೆ ಅನಂತಾನಂತ ವಂದನೆಗಳು. ಎಲೈ ಲಕ್ಷ್ಮೀಪತಿಯಾದ ದೇವೇಶನೇ ನಿನಗೆ ನಮಸ್ಕಾರಗಳು. ನೀನು ಪಿತೃಗಳಿಗೆ ಮೋಕ್ಷಪ್ರದನಾಗೆಂದು ಪ್ರಾರ್ಥಿಸಬೇಕು.

೯೪. ಪೂರ್ವದಲ್ಲಿ ಭೀಮಸೇನನು ಎಡಗಾಲನ್ನು ಕೆಳಗೆ ಊರಿ, ಜನಾರ್ದನನಿಗೆ ನಮಸ್ಕರಿಸಿ, ಶ್ರಾದ್ಧವನ್ನೂ ಪಿಂಡದಾನವನ್ನೂ ಮಾಡಿ ಪಿತೃಗಳೊಡನೆ ಬ್ರಹ್ಮದೇವನ ಸತ್ಯಲೋಕವನ್ನು ಹೊಂದಿದನು (ಮುಕ್ತನಾದನು). ಧರ್ಮಾತ್ಮನಾದ ಭೀಮಸೇನನು ತಮ್ಮ ಪಿತೃಗಳು, ನೂರಾರು ಕುಲಗಳು ಇವುಗಳೊಡನೆ ಬ್ರಹ್ಮಲೋಕವನ್ನು ಹೊಂದಿದನು.

**ಶಿಲಾಯಾಂ ವ್ಯಕ್ತರೂಪೇಣ ವ್ಯಕ್ತಾವ್ಯಕ್ತಾತ್ಮನಾ ಸ್ಥಿತಃ ।**
**ಲಕ್ಷ್ಮೀಶೋ ವಿಬುಧೈಃ ಸಾರ್ಧಂ ತಸ್ಮಾದ್ದೇವಮಯೀ ಶಿಲಾ ॥ ೯೫ ॥**

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ "ಗಯಾಮಾಹಾತ್ಮ್ಯಂ" ನಾಮ ಷಟ್‌ಚತ್ವಾರಿಂಶೋಧ್ಯಾಯಃ**

---

೯೫. ಲಕ್ಷ್ಮೀಪತಿಯಾದ ಶ್ರೀಹರಿಯು ದೇವತೆಗಳೊಡನೆ ವ್ಯಕ್ತರೂಪದಿಂದಲೂ, ವ್ಯಕ್ತಾವ್ಯಕ್ತಸ್ವರೂಪದಿಂದಲೂ ಆ ಶಿಲೆಯಲ್ಲಿ ಸನ್ನಿಹಿತನಾಗಿರುವನು. ಆದುದರಿಂದ ಆ ಶಿಲೆಯು ದೇವಮಯವಾಗಿದೆ. ಅಲ್ಲಿಗೆ ಹೋದವನು ಪರಮಪದವಿಯನ್ನು ಹೊಂದುವನೆಂದು ಸೂತಮುನಿಯು ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಗಯಾಮಾಹಾತ್ಮ್ಯ"ವೆಂಬ ನಲವತ್ತಾರನೆಯ ಅಧ್ಯಾಯವು ಸಮಾಪ್ತವಾದುದು.



## ನಲವತ್ತಾರನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಗಯಾಮಾಹಾತ್ಮ್ಯೆಯು ವರ್ಣಿತವಾಗಿದೆ. ಬ್ರಹ್ಮಾಂಡದಲ್ಲಿ ಮೇರುಗಿರಿಯು ಪ್ರಕಾಶಿಸುವಂತೆ, ಈ ಭರತವರ್ಷದಲ್ಲಿ ಗಯಾಶಿಲೆಯು ಬಹಳ ಪ್ರಖ್ಯಾತವಾಗಿರುವುದು. ಆ ಶಿಲೆಯಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಇವರೇ ಮೊದಲಾದ ದೇವತೆಗಳೂ, ಗಂಗಾಯಮುನಾದಿ ಮಹಾನದಿಗಳೂ, ಕಶ್ಯಪಾದಿ ಮಹರ್ಷಿಗಳೂ, ಸಮಸ್ತವಾದ ತೀರ್ಥಗಳೂ, ಕ್ಷೇತ್ರಗಳೂ ಸನ್ನಿಹಿತವಾಗಿರುವುವು. ಇದರಲ್ಲಿ ಶ್ರಾದ್ಧವನ್ನೂ ಪಿಂಡದಾನವನ್ನೂ ಮಾಡುವುದರಿಂದ ಪಂಚಮಹಾಪಾತಕಗಳು ಪರಿಹೃತವಾಗಿ, ಪಿತೃಗಳು ಮುಕ್ತರಾಗುವರು. ಸಪ್ತವಂಶದವರೂ ಉದ್ಧೃತರಾಗುವರು. ಆ ಗಯಾಶಿಲೆಯ ಸರ್ವಭಾಗಗಳಲ್ಲಿಯೂ ರಾಮತೀರ್ಥ, ಗೃಧ್ರಕೂಟ, ನೈಮಿಷಾರಣ್ಯ, ಮುಂಡಪೃಷ್ಠ, ಪ್ರೇತಕುಂಡ, ಕಾಕಶಿಲೆ ಇವೇ ಮೊದಲಾದ ಕ್ಷೇತ್ರಗಳು ಪ್ರಖ್ಯಾತವಾಗಿವೆ. ಅವುಗಳಲ್ಲಿ ಸ್ನಾನ, ಜಪ, ತಪ, ಹೋಮಾದಿಗಳನ್ನು ಮಾಡಿದರೆ ಮಹಾಫಲಪ್ರಾಪ್ತಿಯಾಗುವುದು.

ಗಯಾಸುರನ ಶಿರಸ್ಸಿನಮೇಲೆ ಜನಾರ್ದನನಾಮಕನಾದ ಶ್ರೀಮನ್ನಾರಾಯಣನು ಮಹಾಲಕ್ಷ್ಮಿಯಿಂದಲೂ, ಬ್ರಹ್ಮಾದಿ ದೇವತೆಗಳಿಂದಲೂ ಸಹಿತನಾಗಿ ಸನ್ನಿಹಿತನಾಗಿರುವನು. ದ್ವಾಪರದಲ್ಲಿ ಭೀಮಾದಿಗಳೂ ಕೂಡ ಇದರಲ್ಲಿ ಸ್ನಾನ ಜಪ ತಪ ಶ್ರಾದ್ಧಾದಿಗಳನ್ನು ಮಾಡಿ, ತಮ್ಮ ಪಿತೃಗಳೊಡನೆ ಮುಕ್ತಿಯನ್ನು ಪಡೆದರೆಂಬ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.



—: ಹರಿಃ ಓಂ :—

— ಶ್ರೀ ವೇದವ್ಯಾಸಾಯ ನಮಃ —

# ಶ್ರೀಮದ್ವಾಯು ಮಹಾಪುರಾಣಂ

## ಸಪ್ತಚತ್ವಾರಿಂಶೋಽಧ್ಯಾಯಃ

|| ನಾರದ ಉವಾಚ ||

ಕಥಂ ವ್ಯಕ್ತಸ್ವರೂಪೇಣ ಸ್ಥಿತಶ್ಚಾದಿಗದಾಧರಃ ।
ಕಥಂ ವ್ಯಕ್ತಸ್ವರೂಪೇಣ ವ್ಯಕ್ತಾವ್ಯಕ್ತಾತ್ಮನಾ ಸ್ಥಿತಃ || ೧ ||

ಕಥಂ ಗದಾ ಸಮುತ್ಪನ್ನಾ ಯಥಾ ಹ್ಯಾದಿ ಗದಾಧರಃ ।
ಗದಾಲೋಲಂ ಕಥಂ ಚಾಸೀತ್ಸರ್ವಪಾಪಕ್ಷಯಂಕರಾ || ೨ ||

---

## ನಲವತ್ತೇಳನೆಯ ಅಧ್ಯಾಯವು

೧. ನಾರದಮುನಿಯು ಹೇಳಿದನು:—ಎಲೈ ಸನತ್ಕುಮಾರನೇ, ಆದಿ ಗದಾಧರನು ವ್ಯಕ್ತಸ್ವರೂಪದಿಂದ ಹೇಗೆ ಪ್ರಕಾಶಿಸಿದನು. ಒಬ್ಬನೇ ಶ್ರೀಹರಿಯು ವ್ಯಕ್ತಸ್ವರೂಪನೂ, ವ್ಯಕ್ತಾವ್ಯಕ್ತಸ್ವರೂಪನೂ ಹೇಗಾದನು ತಿಳಿಸಬೇಕೆಂದು ನಾರದ ಮುನಿಯು ಕೇಳಿದನು.

೨. ಎಲೈ ಸನತ್ಕುಮಾರನೇ, ವಿಷ್ಣುವಿನ ಗದಾಯುಧವು ಹೇಗೆ ಉತ್ಪನ್ನ ವಾಯಿತು ? ಶ್ರೀಹರಿಯು ಆದಿಗದಾಧರನು ಹೇಗೆ ಆದನು ? ಸಕಲ ಪಾಪಪರಿಹಾರಕ ವಾದ ಆ ಗದಾಯುಧವು ಚಂಚಲವಾಗಲು ಕಾರಣವೇನೆಂದು ಕೇಳಿದನು ?

|| ಸನತ್ಕುಮಾರ ಉವಾಚ ||

ಗದೋ ನಾಮಾಸುರೋ ಹ್ಯಾಸೀದ್ವಜ್ರಾದ್ವಜ್ರತರೋ ಧೃಢಃ |
ತಪಸಾ ದಾರುಣೇನಾಸೌ ಬ್ರಹ್ಮಲಬ್ಧವರಃ ಪುರಾ ||
ಪ್ರಾರ್ಥಿತೋ ಬ್ರಹ್ಮಣೇ ಪ್ರಾದಾತ್ಸ್ವಶರೀರಾಸ್ಥಿ ದುಸ್ತ್ಯಜಂ || ೩ ||

ಬ್ರಹ್ಮೋಕ್ತೋ ವಿಶ್ವಕರ್ಮಾಪಿ ಗದಾ ಚಕ್ರೇಽದ್ಭುತಾಂ ತದಾ |
ತದಸ್ಥಿ ವಜ್ರನಿಷ್ಪೇಷೈಃ ಕುಂದ್ಯೈಃ ಸ್ವರ್ಗೇ ಹ್ಯಧಾರಯತ್ || ೪ ||

ಅಥ ಕಾಲೇನ ಮಹತಾ ಮನೌ ಸ್ವಾಯಂಭುವೇ ಕ್ವಚಿತ್ |
ಹೇತೀ ರಕ್ಷೋ ಬ್ರಹ್ಮಪುತ್ರಃ ತಪಸ್ತೇಪೇ ಸುದಾರುಣಂ || ೫ ||

---

೩. ಸನತ್ಕುಮಾರನು ಹೇಳಿದನು :—ಎಲೈ ನಾರದಮುನಿಯೇ, ಪೂರ್ವದಲ್ಲಿ ಅತ್ಯಂತ ದೃಢಕಾಯನೂ, ಗದಾನಾಮಕನೂ ಆದ ಅಸುರನೊಬ್ಬನಿದ್ದನು. ಅವನು ಅತಿಘೋರವಾದ ತಪಸ್ಸನ್ನು ಮಾಡಿ ಬ್ರಹ್ಮದೇವನಿಂದ ವರವನ್ನು ಪಡೆದನು. ತರುವಾಯ ಬ್ರಹ್ಮದೇವನು ಬಂದು ಎಲೈ ಅಸುರನೇ, ನಿನ್ನ ಮೂಳೆಯನ್ನು ಕೊಡೆಂದು ಕೇಳಿದನು. ಅನಂತರ ಕೊಡಲಶಕ್ಯವಾದ ತನ್ನ ಶರೀರದ ಮೂಳೆಯನ್ನು ಬ್ರಹ್ಮನಿಗೆ ಕೊಟ್ಟನು.

೪. ಅನಂತರ ಬ್ರಹ್ಮದೇವನು ಆ ಮೂಳೆಯನ್ನು ವಿಶ್ವಕರ್ಮನಿಗೆ ಕೊಟ್ಟು ಅದರಿಂದ ದಿವ್ಯವಾದ ಗದಾಯುಧವನ್ನು ಮಾಡಿಸಿದನು. ಆ ಮೂಳೆಯೇ ವಜ್ರಾಯುಧದ ಘರ್ಷಣೆಯಿಂದ ದಿವ್ಯಾಯುಧವಾಗಿ ಪರಿಣಮಿಸಿ ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತಿತ್ತು.

೫. ಹೀಗೆ ಕೆಲವು ಕಾಲವು ಕಳೆಯಲಾಗಿ ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಪುತ್ರನೂ, ಹೇತಿನಾಮಕನೂ ಆದ ಒಬ್ಬ ರಾಕ್ಷಸನು ಅತಿಭಯಂಕರವಾಗಿ ತಪಸ್ಸನ್ನು ಮಾಡಿದನು.

ದಿವ್ಯವರ್ಷಸಹಸ್ರಾಣಾಂ ಶತಂ ವಾಯುಮಭಕ್ಷಯತ್ |
ಉನ್ಮುಖಶ್ಚೋರ್ಧ್ವಬಾಹುಶ್ಚ ಪಾದಾಂಗುಷ್ಠಭರೇಣ ಚ ||೬||

ಏಕೇನಾತಿಷ್ಠದವ್ಯಗ್ರಃ ಶೀರ್ಣಪರ್ಣಾನಿಲಾಶನಃ |
ಬ್ರಹ್ಮಾದೀಂಸ್ತಪಸಾ ತುಷ್ಟಾನ್ವರಂ ವವ್ರೇ ವರಪ್ರದಾನ್ ||೭||

ದೇವೈರ್ದೈತ್ಯೈರ್ನರೈಶ್ಚ ಶಸ್ತ್ರಾಸ್ತ್ರೈರ್ವಿವಿಧೈರ್ಮನುಜಾದಿಭಿಃ |
ಕೃಷ್ಣೇಶಾನಾದಿಚಕ್ರಾದ್ಯೈರಬಧ್ಯಃ ಸ್ಯಾಂ ಮಹಾಬಲಃ ||೮||

ತಥೇತ್ಯುಕ್ತ್ವಾಂತರ್ಹಿತಾಸ್ತೇ ಹೇತಿರ್ದೇವಾನಥಾಜಯತ್ |
ಇಂದ್ರತ್ವಮಕರೋದ್ಧೇತಿರ್ಭೀತಾ ಬ್ರಹ್ಮಹರಾದಯಃ ||೯||

---

೬. ಆ ಅಸುರನು ವಾಯುಭಕ್ಷಕನೂ, ಊರ್ಧ್ವಮುಖಿಯೂ, ಊರ್ಧ್ವಬಾಹುವೂ ಆಗಿ ಬಲಗಾಲಿನ ಹೆಬ್ಬೆರಳನ್ನು ನೆಲದಲ್ಲಿ ಊರಿಕೊಂಡು ಅತಿಭಯಂಕರನಾಗಿ ಒಂದು ಲಕ್ಷ ವರ್ಷಗಳಕಾಲ ತಪಸ್ಸನ್ನು ಮಾಡಿದನು.

೭. ಆ ಅಸುರನು ಒಣಗಿದ ಎಲೆಗಳನ್ನೂ, ವಾಯುವನ್ನೂ, ಭಕ್ಷಣಮಾಡುತ್ತಾ ಜಾಗರೂಕನಾಗಿ ಒಂದು ಹೆಬ್ಬೆರಳಿನ ಮೇಲೆ ನಿಂತು ತಪಸ್ಸನ್ನು ಮಾಡಿದನು. ಆಗ ಸಂತುಷ್ಟರಾದ ಬ್ರಹ್ಮಾದಿದೇವತೆಗಳು ಅವನ ತಪಸ್ಸಿಗೆ ಮೆಚ್ಚಿ ಅವನಿಗೆ ಬೇಕಾದ ವರಗಳನ್ನು ಕೊಟ್ಟರು.

೮. ಎಲೈ ದೇವತೆಗಳಿರಾ, ನೀವು ನಿಜವಾಗಿಯೂ ಪ್ರೀತರಾಗಿದ್ದರೆ ನಾನು ದೇವತೆಗಳು, ದೈತ್ಯರು, ಮನುಷ್ಯರೇ ಮೊದಲಾದವರಿಂದಲೂ ಇವರ ವಿವಿಧಗಳಾದ ಶಸ್ತ್ರಾಸ್ತ್ರಗಳಿಂದಲೂ, ಶ್ರೀಕೃಷ್ಣ, ಪರಮೇಶ್ವರ ಇವರ ಚಕ್ರಾದಿ ದಿವ್ಯಾಯುಧಗಳಿಂದಲೂ, ಕೊಲ್ಲಲ್ಪಡದವನಾಗಿಯೂ, (ಅವಧ್ಯನಾಗಿಯೂ) ಮಹಾಬಲಶಾಲಿಯಾಗಿಯೂ ಆಗಬೇಕೆಂಬ ವರಗಳನ್ನು ದಯಪಾಲಿಸಿರೆಂದು ಪ್ರಾರ್ಥಿಸಿದರು.

೯. ತರುವಾಯ ದೇವತೆಗಳು ಹಾಗೆಯೇ ಆಗಲೆಂದು ಅಸುರನಿಗೆ ವರಗಳನ್ನು ಕೊಟ್ಟು ಮಾಯವಾದರು. ಅನಂತರ ಹೇತಿರಾಕ್ಷಸನು ದೇವತೆಗಳ ಸಂಗಡ ಹೋರಾಡಿ ಅವರನ್ನು ಜಯಿಸಿ, ಇಂದ್ರಪದವಿಯನ್ನು ಪಡೆದನು. ಆಗ ಬ್ರಹ್ಮ, ಮಹೇಶ್ವರಾದಿ ದೇವತೆಗಳು ಭೀತರಾದರು.

ಹರಿಂ ತೇ ಶರಣಂ ಜಗ್ಮುರೂಚುರ್ಹೇತಿಂ ಜಹೀತಿ ತಾನ್ ।
ಊಚೇ ಹರಿರವಧ್ಯೋಽಯಂ ಹೇತಿರ್ದೇವಾಸುರೈಃ ಸುರಾಃ ॥ ೧೦ ॥

ಮಹಾಸ್ತ್ರಂ ಮೇ ಪ್ರಯಚ್ಛಧ್ವಂ ಹೇತಿಂ ಹನ್ಮಿ ಹಿ ಯೇನ ತಂ ।
ಇತ್ಯುಕ್ತಾಸ್ತೇ ತತೋ ದೇವಾ ಗದಾಂ ತಾಂ ಹರಯೇ ದದುಃ ॥ ೧೧ ॥

ದಧಾರ ತಾಂ ಗದಾಮಾದೌ ದೇವೈರುಕ್ತೋ ಗದಾಧರಃ ।
ಗದಯಾ ಹೇತಿಮಾಹತ್ಯ ದೇವೈಃ ಸ ತ್ರಿದಿವಂ ಯಯೌ ॥ ೧೨ ॥

ಗದಾಮಾದಾವವಷ್ಟಭ್ಯ ಗಯಾಸುರಶಿರಃಶಿಲಾಂ ।
ನಿಶ್ಚಲಾರ್ಥಂ ಸ್ಥಿತೋ ಯಸ್ಮಾತ್ತಸ್ಮಾದಾದಿಗದಾಧರಃ ॥ ೧೩ ॥

---

೧೦. ಅನಂತರ ಬ್ರಹ್ಮಾದಿ ದೇವತೆಗಳು ಶ್ರೀಮನ್ನಾರಾಯಣನನ್ನು ಹೊಂದಿ ಶರಣಾಗತರಾಗಿ ಆ ರಾಕ್ಷಸನನ್ನು ಸಂಹಾರಮಾಡಬೇಕೆಂದು ಪ್ರಾರ್ಥಿಸಿದರು. ಆಗ ಶ್ರೀಹರಿಯು ಬ್ರಹ್ಮದೇವನ ವರದಿಂದ ಆ ರಾಕ್ಷಸನು ಸರ್ವರಿಂದಲೂ ಅವಧ್ಯನಾಗಿರುವನು ಎಂದು ತಿಳಿದನು.

೧೧. ಆದುದರಿಂದ ನಿಮ್ಮಲ್ಲಿರುವ ಮಹಾಗದಾಯುಧವನ್ನು ಕೊಡಿ ಅದರಿಂದ ಅವನನ್ನು ಸಂಹರಿಸುವೆನೆಂದು ಹೇಳಿದನು. ಅದರಂತೆ ದೇವತೆಗಳು ತಮ್ಮಲ್ಲಿದ್ದ ಗದಾಯುಧವನ್ನು ವಿಷ್ಣುವಿಗೆ ಕೊಟ್ಟರು.

೧೨. ಹೀಗೆ ಶ್ರೀಹರಿಯು ದೇವತೆಗಳಿಂದ ಆ ಗದಾಯುಧವನ್ನು ಪಡೆದು ಆದಿಯಲ್ಲಿ ಗದೆಯನ್ನು ಧರಿಸಿದ್ದರಿಂದ ಆದಿಗದಾಧರನಾದನು. ಅನಂತರ ಹೇತಿಯೆಂಬ ರಾಕ್ಷಸನನ್ನು ಸಂಹರಿಸಿ, ದೇವತೆಗಳೊಡನೇ ಶ್ರೀಹರಿಯು ಸ್ವರ್ಗಲೋಕಕ್ಕೆ ಹೋದನು.

೧೩. ಶ್ರೀಹರಿಯು ಹೇತಿರಾಕ್ಷಸನ ಸಂಹಾರಕ್ಕಾಗಿ ಮೊದಲು ಮಹಾ ಗದಾಯುಧವನ್ನು ಧರಿಸಿ, ಗಯಾಸುರನ ಶಿರಸ್ಸು ಚಲಿಸದೇ ಇರುವುದಕ್ಕಾಗಿ ಆ ಶಿಲೆಯ ಮೇಲೆ ನಿಂತಕಾರಣ ಆದಿಗದಾಧರನಾದನು.

**ಶಿಲಾಪರ್ವತರೂಪೇಣ ವ್ಯಕ್ತ ಆದಿಗದಾಧರಃ ।**
**ಶಿಲಾಸೌ ಮುಂಡಪೃಷ್ಠಾದ್ರಿಃ ಪ್ರಭಾಸೋ ನಾಮಪರ್ವತಃ ॥ ೧೪ ॥**

**ಉದ್ಯಂತೋ ಗೀತನಾದಶ್ಚ ಭಸ್ಮಕೂಟೋ ಗಿರಿರ್ಮಹಾನ್ ।**
**ಗೃಧ್ರಕೂಟಃ ಪ್ರೇತಕೂಟಶ್ಚಾದಿಪಾಲೋಽರವಿಂದಕಃ ॥ ೧೫ ॥**

**ಪಂಚಲೋಕಃ ಸಪ್ತಲೋಕೋ ವೈಕುಂಠೋ ಲೋಹದಂಡಕಃ ।**
**ಕ್ರೌಂಚಪಾದೋಽಕ್ಷಯವಟಃ ಫಲ್ಗುತೀರ್ಥಂ ಮಧುಶ್ರವಾ ॥ ೧೬ ॥**

**ದಧಿಕುಲ್ಯಾ ಮಧುಕುಲ್ಯಾ ದೇವಿಕಾ ಚ ಮಹಾನದೀ ।**
**ವೈತರಣ್ಯಾದಿರೂಪೇಣ ವ್ಯಕ್ತ ಆದಿಗದಾಧರಃ ॥ ೧೭ ॥**

**ವಿಷ್ಣೋಃ ಪದಂ ರುದ್ರಪದಂ ಬ್ರಹ್ಮಣಃ ಪದಮುತ್ತಮಂ ।**
**ಕಾಶ್ಯಪಸ್ಯ ಪದಂ ದಿವ್ಯಂ ದ್ವೌ ಹಸ್ತೌ ಯತ್ರ ನಿರ್ಗತೌ ॥ ೧೮ ॥**

**ಪಂಚಾಗ್ನೀನಾಂ ಪದಾನ್ಯತ್ರ ಇಂದ್ರಾಗಸ್ತ್ಯಪದೇ ಪರೇ ।**
**ರವೇಶ್ಚ ಕಾರ್ತಿಕೇಯಸ್ಯ ಕ್ರೌಂಚಮಾತಂಗಯೋರಪಿ ॥ ೧೯ ॥**

---

೧೪–೧೭. ಆದಿಗದಾಧರನು ಶಿಲಾಪರ್ವತರೂಪಗಳಿಂದ ವ್ಯಕ್ತನಾಗಿರುವನು. ವ್ಯಕ್ತವಾದ ಶಿಲಾರೂಪಗಳು ಯಾವುವೆಂದರೆ—ಮುಂಡಪೃಷ್ಠಾದ್ರಿ, ಪ್ರಭಾಸ, ಉದ್ಯಂತ, ಗೀತನಾದ, ಭಸ್ಮಕೂಟ, ಮಹಾಗಿರಿ, ಗೃಧ್ರಕೂಟ, ಪ್ರೇತಕೂಟ, ಆದಿಪಾಲ, ಅರವಿಂದಕ, ಪಂಚಲೋಕ, ಸಪ್ತಲೋಕ, ವೈಕುಂಠ, ಲೋಹದಂಡಕ, ಕ್ರೌಂಚಪಾದ ಇವುಗಳೇ ವ್ಯಕ್ತವಾದ ಪರ್ವತಗಳಾಗಿವೆ. ಈ ರೂಪಗಳಿಂದಲೂ ಅಕ್ಷಯವಟ, ಫಲ್ಗುತೀರ್ಥ, ಮಧುಶ್ರವಸ, ದಧಿಕುಲ್ಯ, ಮಧುಕುಲ್ಯ, ದೇವಿಕಾ, ಮಹಾನದಿ ಮತ್ತು ವೈತರಣೀ ಈ ರೂಪಗಳಿಂದಲೂ, ಆದಿಗಧಾಗರನು ವ್ಯಕ್ತನಾಗಿರುವನು.

೧೮–೨೦. ವಿಷ್ಣುಪದ, ರುದ್ರಪದ, ಬ್ರಹ್ಮಪದ, ಕಶ್ಯಪಪದ, ಹೊರಗೆ ಹೊರಟ ಎರಡು ಹಸ್ತಗಳು, ಪಂಚಾಗ್ನಿಪದಗಳು, ಇಂದ್ರಾಗಸ್ತ್ಯಪದಗಳು, ರವಿ, ಕಾರ್ತಿಕೇಯ, ಕ್ರೌಂಚ, ಮಾತಂಗ ಇವುಗಳ ಪದಗಳು ಇವೇ ಮೊದಲಾದ ಸಮಸ್ತ

**ಮುಖ್ಯಲಿಂಗಾನಿ ಸರ್ವಾಣಿ ವ್ಯಕ್ತಾವ್ಯಕ್ತಾತ್ಮನಾ ಸ್ಥಿತಃ ।**
**ಆದ್ಯೋ ಗದಾಧರಶ್ಚೈವ ವ್ಯಕ್ತಃ ಶ್ರೀಮಾ ಗದಾಧರಃ ॥ ೨೦ ॥**

**ಗಾಯತ್ರೀ ಚೈವ ಸಾವಿತ್ರೀ ಸಂಧ್ಯಾ ಚೈವ ಸರಸ್ವತೀ ।**
**ಗಯೋದಿತ್ಯಶ್ಚೋತ್ತರಾರ್ಕೋ ದಕ್ಷಿಣಾರ್ಕೋಽಪಿ ನೈಮಿಷಃ ॥ ೨೧ ॥**

**ಶ್ವೇತಾರ್ಕೋ ಗಣನಾಥಶ್ಚ ವಸವೋಽಷ್ಟೌ ಮುನೀಶ್ವರಾಃ ।**
**ರುದ್ರಾಶ್ಚೈಕಾದಶೈವಾಥ ತಥಾ ಸಪ್ತರ್ಷಯೋಽಪರೇ ॥ ೨೨ ॥**

**ಸೋಮನಾಥಶ್ಚ ಸಿದ್ಧೇಶಃ ಕಪರ್ದಿಶೋ ವಿನಾಯಕಃ ।**
**ನಾರಾಯಣೋ ಮಹಾಲಕ್ಷ್ಮೀರ್ಬ್ರಹ್ಮಾ ಶ್ರೀಪುರುಷೋತ್ತಮಃ ॥ ೨೩ ॥**

**ಮಾರ್ಕಂಡೇಯೇಶಃ ಕೌಟೇಶೋ ಹ್ಯಂಗಿರೇಶಃ ಪಿತಾಮಹಃ ।**
**ಜನಾರ್ದನೋ ಮಂಗಲಾ ಚ ಪುಂಡರೀಕಾಕ್ಷ ಉತ್ತಮಃ ॥ ೨೪ ॥**

---

ಮುಖ್ಯ ಅಂಗಗಳಿಂದಲೂ, ಆದಿಗದಾಧರನು ವ್ಯಕ್ತಾವ್ಯಕ್ತರೂಪನಾಗಿರುವನು ಮಹದೈಶ್ವರ್ಯಸಂಪನ್ನನಾದ ಆ ಶ್ರೀಮನ್ನಾರಾಯಣನು ಆದಿಗದಾಧರನೆಂದೂ, ವ್ಯಕ್ತರೂಪನೆಂದೂ ಪ್ರಖ್ಯಾತನಾಗಿರುವನು.

೨೧-೨೪. ಗಾಯತ್ರೀ, ಸಾವಿತ್ರೀ, ಸಂಧ್ಯಾ, ಸರಸ್ವತೀ. ಗಯಾದಿತ್ಯ, ಉತ್ತರಾರ್ಕ, ದಕ್ಷಿಣಾರ್ಕ, ನೈಮಿಷ, ಶ್ವೇತಾರ್ಕ, ಗಣನಾಥ, ಅಷ್ಟವಸುಗಳು, ಮುನೀಶ್ವರರು, ಏಕಾದಶರುದ್ರರು, ಸಪ್ತರ್ಷಿಗಳು, ಸೋಮನಾಥ, ಸಿದ್ಧೇಶ, ಕಪರ್ದೀಶ, ವಿನಾಯಕ, ನಾರಾಯಣ, ಮಹಾಲಕ್ಷ್ಮೀ, ಬ್ರಹ್ಮ, ಪುರುಷೋತ್ತಮ, ಮಾರ್ಕಂಡೇಶ, ಕೋಟೇಶ, ಅಂಗಿರೇಶ, ಪಿತಾಮಹ, ಜನಾರ್ದನ, ಮಂಗಳೆ, ಪುಂಡರೀಕಾಕ್ಷ, ಉತ್ತಮ ಇವರೇ ಮೊದಲಾದವರ ರೂಪಗಳಿಂದ ಆದಿಗದಾಧರನು ವ್ಯಕ್ತರೂಪನಾಗಿರುವನು.

ಇತ್ಯಾದಿವ್ಯಕ್ತರೂಪೇಣ ಸ್ಥಿತಸ್ತ್ವಾದಿಗದಾಧರಃ ।
ಹೇತಿಯೋರ್ ರಾಕ್ಷಸಸ್ಯಾಸ್ಯ ಹತೋ ಧರ್ಮಪ್ರತಿಷ್ಠಿತಃ ॥ ೨೫ ॥

ಬ್ರಹ್ಮಣಾ ಸಹ ರುದ್ರಾದ್ಯೈಃ ಕಾರಿತೋ ನಿಶ್ಚಲಃ ಸುರೈಃ ।
ತುಷ್ಟುವಾದ್ಯಗದಾಪಾಣಿಂ ಬ್ರಹ್ಮಾ ಹರ್ಷೇಣ ನಿರ್ವೃತಃ ॥ ೨೬ ॥

॥ ಬ್ರಹ್ಮೋವಾಚ ॥

ಗದಾಧರಂ ವ್ಯಪಗತಕಾಲಿಕಲ್ಮಷಂ ।
ಗಯಾಗತಂ ವಿದಿತಗುಣಂ ಗುಣಾತಿಗಂ ॥
ಗುಹಾಗತಂ ಗಿರಿವರಗೌರಗೇಹಗಂ
ಗಣಾರ್ಚಿತಂ ವರದಮಹಂ ನಮಾಮಿ ॥ ೨೭ ॥

ಅಹಃ ಶ್ರಿಯಂ ತ್ರಿದಶಗಣಾದಿಸುಶ್ರಿಯಂ ।
ಭವಶ್ರಿಯಂ ದಿತಿಭವದಾರಣಶ್ರಿಯಂ ॥
ಕಲಿಶ್ರಿಯಂ ಕಲಿಮಲಮರ್ದನಾಶ್ರಿಯಂ ।
ಗದಾಧರಂ ನೌಮಿ ಸಮಾಶ್ರಿತಾಶ್ರಿಯಂ ॥ ೨೮ ॥

---

೨೫–೨೬. ಶ್ರೀಹರಿಯು ಹೇತಿಯೆಂಬ ರಾಕ್ಷಸನನ್ನು ಸಂಹರಿಸಿ, ಧರ್ಮವನ್ನು ಸ್ಥಾಪಿಸಿ, ವೈಕುಂಠವನ್ನು ಹೊಂದಿದನು. ಹೀಗೆ ಬ್ರಹ್ಮಾದಿ ದೇವತೆಗಳು ಗಯಾಸುರನನ್ನು ಚಲಿಸದಂತೆ ಮಾಡಿದರು. ಆಗ ಸಂತುಷ್ಟನಾದ ಬ್ರಹ್ಮದೇವನು ಸಂತೋಷದಿಂದ ನಿಶ್ಚಿಂತನಾಗಿ ಆದಿಗದಾಧರನಾದ ಶ್ರೀಹರಿಯನ್ನು ಬಹಳವಾಗಿ ಹೊಗಳಿದನು.

೨೭. ಬ್ರಹ್ಮದೇವನು ಹೇಳಿದನು:—ಗದಾಧರನೂ ಸಮಸ್ತವಾದ ಕಲಿದೋಷಗಳಿಂದ ವಿದೂರನೂ, ಗಯಾಕ್ಷೇತ್ರಗತನೂ, ಪ್ರಖ್ಯಾತವಾದ ಗುಣವಂತನೂ, ಅಗಣಿತಮಹಿಮನೂ, ಗುಹಾಗತನೂ, ಪರ್ವತೋತ್ತಮವಾದ ಕೈಲಾಸದಂತೆ ಶುಭ್ರವಾದ ಗೃಹಗತನೂ, ಗಣಾರ್ಚಿತನೂ, ವರಪ್ರದನೂ ಆದ ಶ್ರೀಹರಿಗೆ ಅನಂತಾನಂತ ವಂದನೆಗಳು.

೨೮. ಅಹಸ್ಸಿನಂತೆ ದಿವ್ಯಕಾಂತಿವಂತನೂ, ದೇವತೆಗಳಿಗೆ ಮಹದೈಶ್ವರ್ಯಪ್ರದನೂ, ಈಶ್ವರನಿಗೆ ಸಂಪತ್ಪ್ರದನೂ, ದೈತ್ಯಗಣನಾಶಕನೂ, ಕಲಿಮಲವಿದೂರನೂ, ಕಲಿಗೆ ಸಂಪತ್ಪ್ರದನೂ, ಭಕ್ತವತ್ಸಲನೂ ಆದ ಗದಾಧರನಿಗೆ ಅನಂತ ವಂದನೆಗಳೆಂದು ಬ್ರಹ್ಮನು ಹೇಳಿದನು.

ದೃಢಾದ್ದೃಢಂ ಪರಿವೃಢಗಾಢಸಂಸ್ತುತಂ |
ಕಾಮಾದ್ಭುತಂ ಸದೃಢಮರೂಢಿರೂಢಿಗಂ ||
ತಮಾಢ್ಯಗಂ ದೃಢದುರಿತಾದ್ಯಢೌಕಿತಂ |
ಸ್ವಢೌಕೃತಂ ದೃಢತರಗೋತ್ರಸೂಕ್ತಿಭಂ || ೨೯ ||

ವಿದೇಹಕಂ ಕರಣಕಲಾವಿವರ್ಜಿತಂ |
ವಿಜನ್ಮಕಂ ದಿನಕರವೇದಿಭೂಷಿತಂ ||
ಗದಾಧರಂ ಧ್ವನಿಮುಖವರ್ಜಿತಂ ಪರಂ |
ನಮಾಮ್ಯಹಂ ಸತತಮನಾದಿಮೀಶ್ವರಂ ಹರಿಂ || ೩೦ ||

ಮನೋಽತಿಗಂ ಮತಿಗತಿವರ್ಜಿತಂ ಪರಂ |
ಸದಾದ್ವಯಂ ಶ್ರುತಿಶಿರಸಿ ಸಂಸ್ತುತಂ ಬುಧೈಃ ||
ಚಿದಾತ್ಮಕಂ ಕಲಿಗತ ಕಾರಣಾತಿಗಂ |
ಗದಾಧರಂ ಹೃದಯಗತಂ ನಮಾಮಿ ತಂ || ೩೧ ||

---

೨೯. ಅತ್ಯಂತ ದೃಢಕಾಯನೂ, ದೇವತೆಗಳಿಂದ ಬಹಳವಾಗಿ ವಂದಿತನೂ, ಮನ್ಮಥನಿಗಿಂತಲೂ ಅತಿಸುಂದರನೂ, ದೃಢಚಿತ್ತನೂ, ರೂಢಿಯಾಗಿ ಪ್ರಖ್ಯಾತನೂ, ಅತ್ಯಂತ ಬಲಿಷ್ಠನೂ, ಮಹಾಪಾತಕನಾಶಕನೂ, ಅತಿಪ್ರಕಾಶನೂ, ದೃಢತರವಾದ ಗಿರಿಯಂತೆ ಅಭೇದ್ಯನೂ, ದಿವ್ಯಭಾಷಾಯುಕ್ತನೂ ಆದ ಹರಿಗೆ ವಂದನೆಗಳು.

೩೦. ಪ್ರಾಕೃತದೇಹರಹಿತನೂ, ಪ್ರಾಕೃತೇಂದ್ರಿಯರಹಿತನೂ, ಜನನಮರಣ ವರ್ಜಿತನೂ, ಸೂರ್ಯಮಂಡಲಕ್ಕೆ ಕಾಂತಿಪ್ರದನೂ, ಕೆಟ್ಟಭಾಷಣವನ್ನು ಮಾಡದವನೂ, ಸರ್ವೋತ್ತಮನೂ, ಸರ್ವಗತನೂ, ಅನಾದಿಯೂ, ಸ್ವಾಮಿಯೂ ಸರ್ವೇಶ್ವರನೂ ಆದ ಶ್ರೀಹರಿಗೆ ಅನಂತವಂದನೆಗಳನ್ನು ಮಾಡುವೆನೆಂದನು.

೩೧. ಮನೋವೇಗವುಳ್ಳವನೂ, ದುರ್ಮತಿದುರ್ಗತಿರಹಿತನೂ, ಉತ್ತಮನೂ, ಸರ್ವದಾ ಅಸದೃಶನೂ, ವೇದವೇದ್ಯನೂ, ಜ್ಞಾನಿಗಮ್ಯನೂ, ಜ್ಞಾನಸ್ವರೂಪನೂ, ಕಲಿಕಲ್ಮಷರಹಿತನೂ, ಗದಾಧರನೂ, ಸರ್ವಾಂತರ್ಯಾಮಿಯೂ ಆದ ಶ್ರೀಹರಿಗೆ ವಂದನೆಗಳೆಂದು ಬ್ರಹ್ಮದೇವನು ಶ್ರೀಹರಿಯನ್ನು ಸ್ತೋತ್ರಮಾಡಿದನು.

॥ ಸನತ್ಕುಮಾರ ಉವಾಚ ॥

ದೇವೈಃ ಸಾರ್ದ್ಧಂ ಬ್ರಹ್ಮಣೈವಂ ಸ್ತುತಶ್ಚಾದಿ ಗದಾಧರಃ ।
ಊಚೇ ವರಂ ವೃಣೀಷ್ವ ತ್ವಂ ಪರಂ ಬ್ರಹ್ಮಾ ತಮಬ್ರವೀತ್ ॥ ೩೨ ॥

ಶಿಲಾಯಾಂ ದೇವರೂಪಿಣ್ಯಾಂ ನ ತಿಷ್ಠಾಮಸ್ತ್ವಯಾ ವಿನಾ ।
ಸ್ಥಾಸ್ಯಾಮೋಽತ್ರ ತ್ವಯಾ ಸಾರ್ದ್ಧಂ ನಿತ್ಯಂ ವ್ಯಕ್ತಾದಿರೂಪಿಣಾ ॥ ೩೩ ॥

ಏವಮುಸ್ತು ಶ್ರಿಯಾ ಸಾರ್ದ್ಧಂ ಸ್ಥಿತಶ್ಚಾದಿ ಗದಾಧರಃ ।
ಲೋಕಾನಾಂ ರಕ್ಷಣಾರ್ಥಾಯ ಜಗತಾಂ ಮುಕ್ತಿಹೇತವೇ ॥
ಸುವ್ಯಕ್ತಃ ಪುಂಡರೀಕಾಕ್ಷೋ ಜನಾರ್ದನ ಇತಿ ಶ್ರುತಃ ॥ ೩೪ ॥

ವೇದೈರಗಮ್ಯಾ ಯಾ ಮೂರ್ತಿರಾದಿಭೂತಾ ಸನಾತನೀ ।
ಸುವ್ಯಕ್ತಾ ಶ್ವೇತಕಲ್ಪೇ ಸಾ ಭವಿಷ್ಯತಿ ತಥಾ ಪುನಃ ॥
ವಾರಾಹಕಲ್ಪೇ ಹ್ಯವ್ಯಕ್ತಾ ವ್ಯಕ್ತಿಮುಷ್ಯಗಮತ್ಪುರಾ ॥ ೩೫ ॥

---

೩೨. ಸನತ್ಕುಮಾರನು ಹೇಳಿದನು :—ಹೀಗೆ ಬ್ರಹ್ಮದೇವನು ದೇವತೆಗಳೊಡ ಗೂಡಿ ಆದಿಗದಾಧರಸ್ವಾಮಿಯನ್ನು ಹೊಗಳಲಾಗಿ ಪ್ರೀತನಾದ ಶ್ರೀಗದಾಧರನು ಎಲೈ ಬ್ರಹ್ಮದೇವನೇ ವರವನ್ನು ಬೇಡಿಕೋ ಎಂದು ಹೇಳಿದನು. ಆಗ ಬ್ರಹ್ಮದೇವನು ಶ್ರೀಹರಿಯನ್ನು ಕುರಿತು ವರಗಳನ್ನು ಪ್ರಾರ್ಥಿಸಿದನು.

೩೩. ಅನಂತರ ಬ್ರಹ್ಮದೇವನು ಎಲೈ ಸ್ವಾಮಿಯಾದ ಶ್ರೀಹರಿಯೇ ದೇವ ರೂಪಿಣಿಯಾದ ಈ ಶಿಲೆಯಲ್ಲಿ ನಿನ್ನ ಸಂಗಡ ನಾನು ಸರ್ವಕಾಲದಲ್ಲಿಯೂ ವಾಸಿಸು ವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು.

೩೪. ಎಲೈ ಬ್ರಹ್ಮದೇವನೇ ಹಾಗೆಯೇ ಹಾಗಲೆಂದು ಹೇಳಿ, ಶ್ರೀಹರಿಯು ಲಕ್ಷ್ಮೀದೇವಿಯು ಸಂಗಡ ಲೋಕರಕ್ಷಣೆಗಾಗಿಯೂ, ಜಗತ್ತಿಗೆ ಮುಕ್ತಿಯನ್ನು ಕೊಡುವುದಕ್ಕಾಗಿಯೂ, ಸುವ್ಯಕ್ತನೂ, ಆದಿಗದಾಧರನೂ, ಪುಂಡರೀಕಾಕ್ಷನೂ, ಜನಾರ್ದನನೂ ಎಂದು ಪ್ರಖ್ಯಾತನೂ ಆಗಿ ಬ್ರಹ್ಮಾದಿಗಳೊಡನೆ ವಾಸಿಸಿದನು.

೩೫. ಸನಾತನವೂ, ಅನಾದಿಯೂ ಆದ ಯಾವ ಭಗವನ್ಮೂರ್ತಿಯು ವೇದ ಗಳಿಂದ ಅಗಮ್ಯವಾಗಿದೆಯೋ ಅಂತಹ ಗದಾಧರಮೂರ್ತಿಯು ಶ್ವೇತವರಾಹಕಲ್ಪದಲ್ಲಿ ಪುನಃ ಸುವ್ಯಕ್ತವಾಗುವುದು. ವರಾಹಕಲ್ಪದಲ್ಲಿ ಅವ್ಯಕ್ತವಾದ ಮೂರ್ತಿಯು ಆಗ ಪುನಃ ಸುವ್ಯಕ್ತಿಯನ್ನು ಹೊಂದುವುದು ಎಂದು ಹೇಳಿದನು.

ಸಂತಾರಣಾಯ ಲೋಕಾನಾಂ ದೇವಾನಾಂ ರಕ್ಷಣಾಯ ಚ ।
ಗಯಾಶಿರಸಿ ಸುವ್ಯಕ್ತೋ ಭವಿಷ್ಯತಿ ನ ಸಂಶಯಃ ॥ ೩೬ ॥

ಯೇ ದ್ರಕ್ಷ್ಯಂತಿ ಸದಾ ಭಕ್ತ್ಯಾ ದೇವಮಾದಿ ಗದಾಧರಂ ।
ಕುಷ್ಠ ರೋಗಾದಿನಿರ್ಮುಕ್ತಾ ಯಾಸ್ಯಂತಿ ಹರಿಮಂದಿರಂ ॥ ೩೭ ॥

ಯೇ ದ್ರಕ್ಷ್ಯಂತಿ ಸದಾ ಭಕ್ತ್ಯಾ ದೇವಮಾದಿ ಗದಾಧರಂ ।
ತೇ ಪ್ರಾಪ್ಸ್ಯಂತಿ ಧನಂ ಧನ್ಯಮಾಯುರಾರೋಗ್ಯಮೇವ ಚ ॥ ೩೮ ॥

ಕಲತ್ರಪುತ್ರಪೌತ್ರಾದಿಗುಣಕೀರ್ತಿಸುಖಾನಿ ಚ ।
ಶ್ರದ್ಧಯಾ ಯೇ ನಮಸ್ಯಂತಿ ರಾಜ್ಯಂ ಬ್ರಹ್ಮಪುರಂ ತಥಾ ॥
ಭುಕ್ತ್ವಾ ವ್ರಜೇಯುಃ ಸತತಂ ಪುಣ್ಯಪುಂಜಫಲಂ ನರಾಃ ॥ ೩೯ ॥

---

೩೬. ಶ್ರೀಹರಿಯು ಲೋಕೋದ್ಧಾರಕ್ಕಾಗಿಯೂ, ದೇವತೆಗಳನ್ನು ರಕ್ಷಣೆ ಮಾಡುವುದಕ್ಕಾಗಿಯೂ, ಗಯಾಸುರನ ಶಿರಸ್ಸಿನಲ್ಲಿ ವ್ಯಕ್ತರೂಪನಾಗಿ ವಾಸಿಸುವನು. ಈ ವಿಷಯದಲ್ಲಿ ಸಂದೇಹವಿಲ್ಲವೆಂದನು.

೩೭. ಯಾವ ಪುರುಷನು ಆದಿಗದಾಧರನಾದ ಸ್ವಾಮಿಯನ್ನು ಭಕ್ತಿಯಿಂದ ಸರ್ವಕಾಲದಲ್ಲಿಯೂ ದರ್ಶನಮಾಡುತ್ತಾನೆಯೋ ಅವನು ಕುಷ್ಠರೋಗಾದಿಗಳಿಂದ ಮುಕ್ತನಾಗಿ ಹರಿಯ ಮಂದಿರವಿರುವ ಮೋಕ್ಷವನ್ನು ಹೊಂದುವನು.

೩೮. ಯಾವ ಮನುಜನು ಸರ್ವಕಾಲದಲ್ಲಿಯೂ ಭಕ್ತಿಯಿಂದ ಆದಿಗದಾಧರನಾದ ಶ್ರೀಹರಿಯನ್ನು ದರ್ಶನಮಾಡುವನೋ ಅವನು ಆಯುರಾರೋಗ್ಯೈಶ್ವರ್ಯಾದಿ ಸಕಲಾಭೀಷ್ಟಗಳನ್ನೂ ಹೊಂದಿ ಸುಖಿಯಾಗುವನು.

೩೯. ಯಾವ ಪುರುಷರು ಭಕ್ತಿಯಿಂದ ಆದಿಗದಾಧರನನ್ನು ಪೂಜಿಸುವರೋ ಅವರು ಪುತ್ರಪೌತ್ರಕಲತ್ರಗುಣಕೀರ್ತಿಸುಖಾದಿಗಳನ್ನೂ, ರಾಜ್ಯಭೋಗವನ್ನೂ ಹೊಂದಿ, ಮಹಾಪುಣ್ಯಕ್ಕೆ ಫಲಭೂತವಾದ ಬ್ರಹ್ಮಲೋಕವನ್ನು ಹೊಂದುವರು.

ಗಂಧದಾನೇನ ಗಂಧಾಢ್ಯ ಸೌಭಾಗ್ಯಂ ಪುಷ್ಪದಾನತಃ ।
ಧೂಪದಾನೇನ ರಾಜ್ಯಾಪ್ತಿರ್ದೀಪ್ತಿರ್ದೀಪೈರ್ಭವಿಷ್ಯತಿ ॥ ೪೦ ॥

ಧ್ವಜದಾನಾತ್ಪಾಪಹಾನಿರ್ಯಾತ್ರಾಕೃದ್ಬ್ರಹ್ಮಲೋಕಭಾಕ್ ।
ಶ್ರಾದ್ಧಪಿಂಡಪ್ರದೋ ಯಸ್ತು ವಿಷ್ಣುಂ ನೇಷ್ಯತಿ ವೈ ಪಿತೄನ್ ॥ ೪೧ ॥

ಶ್ರದ್ಧಯಾ ಯೇ ನಮಸ್ಯಂತಿ ಸ್ತೋತ್ರೇಣಾದಿ ಗದಾಧರಂ ।
ಸ್ತೋಷ್ಯಂತಿ ಚ ಸಮಭ್ಯರ್ಚ್ಯ ಪಿತೄನ್ನೇಷ್ಯಂತಿ ಮಾಧವಂ ॥
ಶಿವೋಽಪಿ ಪರಯಾ ಪ್ರೀತ್ಯಾ ತುಷ್ಟಾವಾದಿ ಗದಾಧರಂ ॥ ೪೨ ॥

॥ ಶಿವ ಉವಾಚ ॥

ಅವ್ಯಕ್ತರೂಪೋ ಯೋ ದೇವೋ ಮುಂಡಪೃಷ್ಟಾದ್ರಿರೂಪತಃ ।
ಫಲ್ಗುತೀರ್ಥಾದಿರೂಪೇಣ ನಮಾಮ್ಯಾದಿ ಗದಾಧರಂ ॥ ೪೩ ॥

---

೪೦. ಆ ಗದಾಧರನಾದ ಸ್ವಾಮಿಗೆ ಗಂಧವನ್ನು ಕೊಡುವದರಿಂದ ಪುರುಷನು ಗಂಧದಿಂದ ಪೂರ್ಣನೂ, ಪುಷ್ಪದಾನದಿಂದ ಸೌಭಾಗ್ಯವಂತನೂ, ಧೂಪದಾನದಿಂದ ಮಹಾರಾಜ್ಯವುಳ್ಳವನೂ, ದೀಪದಾನದಿಂದ ಕಾಂತಿವಂತನೂ ಆಗುವನು.

೪೧. ಗದಾಧರನಾದ ಜನಾರ್ದನನಿಗೆ ಧ್ವಜದಾನದಿಂದ ಪಾಪಹಾನಿಯೂ. ಯಾತ್ರೆಯಿಂದ ಸ್ವರ್ಗಪ್ರಾಪ್ತಿಯೂ, ಪಿತೃಗಳಿಗೆ ಶ್ರಾದ್ಧದಲ್ಲಿ ಪಿಂಡದಾನ ಮಾಡುವುದರಿಂದ ಪಿತೃಗಳಿಗೆ ವಿಷ್ಣುಲೋಕಪ್ರಾಪ್ತಿಯೂ ಉಂಟಾಗುವುದು.

೪೨. ಯಾವ ಪುರುಷರು ಶ್ರದ್ಧೆಯಿಂದ ಸ್ತೋತ್ರಪೂರ್ವಕವಾಗಿ ಆದಿಗದಾಧರನಿಗೆ ನಮಸ್ಕಾರವನ್ನು ಮಾಡುತ್ತಾರೋ ಮತ್ತು ಅರ್ಚನಾದಿಗಳಿಂದ ಗದಾಧರನಿಗೆ ತೃಪ್ತಿಗೊಳಿಸುವರೋ ಅವರು ತಮ್ಮ ಪಿತೃಗಳಿಗೆ ಮೋಕ್ಷವನ್ನು ಕೊಡಿಸುವರು. ಪರಮೇಶ್ವರನೂ ಕೂಡ ಪರಮಭಕ್ತಿಯಿಂದ ಆದಿಗದಾಧರನನ್ನು ಸ್ತೋತ್ರಗಳಿಂದ ಸಂತೋಷಪಡಿಸಿದನು.

೪೩. ಈಶ್ವರನು ಹೇಳಿದನು :—ಯಾವ ಜನಾರ್ದನ ನಾಮಕನಾದ ಗದಾಧರನು, ಮುಂಡಪೃಷ್ಟಾದ್ರಿರೂಪಗಳಿಂದಲೂ, ಅವ್ಯಕ್ತರೂಪಗಳಿಂದಲೂ ಪ್ರಖ್ಯಾತನಾಗಿರುವನೋ, ಅಂತಹ ಆದಿಗದಾಧರ ಸ್ವಾಮಿಗೆ ಅನಂತ ವಂದನೆಗಳು.

ವ್ಯಕ್ತಾವ್ಯಕ್ತಸ್ವರೂಪೇಣ ಪದರೂಪೇಣ ಸಂಸ್ಥಿತಃ ।
ಮುಖಲಿಂಗಾದಿರೂಪೇಣ ನಮಾಮ್ಯಾದಿ ಗದಾಧರಂ ॥ ೪೪ ॥

ಅವ್ಯಕ್ತರೂಪೋ ಯೋ ದೇವೋ ಜನಾರ್ದನಸ್ವರೂಪತಃ ।
ಮುಂಡಪೃಷ್ಠೇ ಸ್ವಯಂ ಜಾತೋ ನಮಾಮ್ಯಾದಿ ಗದಾಧರಂ ॥ ೪೫ ॥

ಶಿಲಾಯಾಂ ದೇವರೂಪಿಣ್ಯಾಂ ಸ್ಥಿತಂ ಬ್ರಹ್ಮಾದಿಭಿಃ ಸುರೈಃ ।
ಪೂಜಿತಂ ಸತ್ಕೃತಂ ದೇವೈಸ್ತಂ ನಮಾಮಿ ಗದಾಧರಂ ॥ ೪೬ ॥

ಯಂ ಚ ದೃಷ್ಟ್ವಾ ತತಃ ಸ್ಪೃಷ್ಟ್ವಾ ಪೂಜಯಿತ್ವಾ ಪ್ರಣಮ್ಯ ಚ ।
ಶ್ರಾದ್ಧಾದೌ ಬ್ರಹ್ಮಲೋಕಾಪ್ತಿರ್ನಮಾಮ್ಯಾದಿ ಗದಾಧರಂ ॥ ೪೭ ॥

ಮಹದಾದೇಶ್ಚ ಜಗತೋ ವ್ಯಕ್ತಸ್ಯೈಕಂ ಹಿ ಕಾರಣಂ ।
ಅವ್ಯಕ್ತಜ್ಞಾನರೂಪಂ ತಂ ನಮಾಮ್ಯಾದಿ ಗದಾಧರಂ ॥ ೪೮ ॥

---

೪೪. ಯಾವ ಗದಾಧರ ಸ್ವಾಮಿಯು ಪಾದರೂಪದಿಂದ ವ್ಯಕ್ತನಾಗಿಯೂ ಮುಖಾದ್ಯಂಗಗಳಿಂದ ಅವ್ಯಕ್ತನಾಗಿಯೂ, ಹೀಗೆ ವ್ಯಕ್ತಾವ್ಯಕ್ತರೂಪಗಳಿಂದ ಪ್ರಸಿದ್ಧನಾಗಿಯೂ ಇರುವನೋ, ಅಂತಹ ಸ್ವಾಮಿಗೆ ಅನಂತ ವಂದನೆಗಳು.

೪೫. ಅವ್ಯಕ್ತಸ್ವರೂಪಿಯಾದ ಯಾವ ಭಗವಂತನು, ಮುಂಡ ಪೃಷ್ಠಾದ್ರಿಯಲ್ಲಿ ಜನಾರ್ದನ ಸ್ವರೂಪಿದಿಂದ ಪ್ರಖ್ಯಾತನಾಗಿರುವನೋ, ಅಂತಹ ಆದಿಗದಾಧರನಿಗೆ ಅನಂತಾನಂತ ವಂದನೆಗಳು.

೪೬. ಯಾವ ಭಗವಂತನು ಶಿಲಾರೂಪಿಣಿಯಾದ ದೇವರೂಪಿಣಿಯಲ್ಲಿ ವಾಸಿಸುತ್ತಾ ಬ್ರಹ್ಮಾದಿಗಳಿಂದ ಪೂಜಿತನೂ, ದೇವದಾನವಾದಿಗಳಿಂದ ಸತ್ಕೃತನೂ ಆಗಿರುವನೋ ಅಂತಹ ಗದಾಧರನಿಗೆ ವಂದನೆಗಳು.

೪೭. ಯಾವ ಗದಾಧರನಾದ ಭಗವಂತನ ದರ್ಶನ, ಸ್ಪರ್ಶನ, ಅರ್ಚನ ವಂದನಾದಿಗಳಿಂದಲೂ, ಶ್ರಾದ್ಧಾದಿಗಳಿಂದಲೂ ಪುರುಷರಿಗೆ ಬ್ರಹ್ಮಲೋಕಪ್ರಾಪ್ತಿಯಾಗುವುದೋ ಅಂತಹ ಆದಿಗದಾಧರನಿಗೆ ನಮಸ್ಕಾರಗಳು.

೪೮. ಯಾವ ಸ್ವಾಮಿಯು ಮಹತ್ತತ್ತ್ವಾದಿಗಳಿಗೂ, ಅವ್ಯಕ್ತವಾದ ಪ್ರಕೃತ್ಯಾದಿಗಳಿಗೂ ಮುಖ್ಯಕಾರಣನಾಗಿರುವನೋ, ಅಂತಹ ಅವ್ಯಕ್ತರೂಪಿಯೂ, ಜ್ಞಾನಸ್ವರೂಪನೂ ಆದ ಗದಾಧರನಿಗೆ ಅನಂತವಂದನೆಗಳು.

ದೇಹೇಂದ್ರಿಯಮನೋಬುದ್ಧಿ ಪ್ರಾಣಾಹಂಕಾರವರ್ಜಿತಂ ।
ಜಾಗ್ರತ್ಸ್ವಪ್ನವಿನಿರ್ಮುಕ್ತಂ ನಮಾಮ್ಯಾದಿ ಗದಾಧರಂ ॥ ೪೯ ॥

ನಿತ್ಯಾನಿತ್ಯವಿನಿರ್ಮುಕ್ತಂ ಸತ್ಯಮಾನಂದಮವ್ಯಯಂ ।
ತುರೀಯಂ ಜ್ಯೋತಿರಾತ್ಮಾನಂ ನಮಾಮ್ಯಾದಿ ಗದಾಧರಂ ॥ ೫೦ ॥

॥ ಸನತ್ಕುಮಾರ ಉವಾಚ ॥

ಏವಂ ಸ್ತುತೋ ಮಹೇಶೇನ ಪ್ರೀತೋ ಹ್ಯಾದಿಗದಾಧರಃ ।
ಸ್ಥಿತೋ ದೇವಃ ಶಿಲಾಯಾಂ ಸ ಬ್ರಹ್ಮಾದ್ಯೈರ್ದೇವತೈಃ ಸಹ ॥ ೫೧ ॥

ಸಂಸ್ಥಿತಂ ಮುಂಡಪೃಷ್ಠಾದ್ರೌ ದೇವಮಾದಿ ಗದಾಧರಂ ।
ಸ್ತುವಂತಿ ಪೂಜಯಂತೀಹ ಬ್ರಹ್ಮಲೋಕಂ ಪ್ರಯಾಂತು ತೇ ॥ ೫೨ ॥

---

೪೯. ಪ್ರಾಕೃತವಾದ ದೇಹ, ಇಂದ್ರಿಯ, ಬುದ್ಧಿ, ಪ್ರಾಣ, ಅಹಂಕಾರ ಇವುಗಳಿಂದ ರಹಿತನೂ, ಜಾಗ್ರತ್ಸ್ವಪ್ನನಿದ್ರಾದಿಗಳಿಂದ ರಹಿತನೂ ಆದ ಗದಾಧರ ಮೂರ್ತಿಗೆ ನಮಸ್ಕಾರಗಳು.

೫೦. ನಿತ್ಯಾನಿತ್ಯರಹಿತನೂ, ಸತ್ಯರೂಪಿಯೂ, ಆನಂದಸ್ವರೂಪಿಯೂ, ಅವ್ಯಯನೂ, ತ್ರಿಗುಣಾತೀತನೂ, ತೇಜೋಮಯನೂ, ಸರ್ವಾಂತರ್ಯಾಮಿಯೂ ಆದ ಗದಾಧರಸ್ವಾಮಿಗೆ ಅನಂತವಂದನೆಗಳಿಂದು ಪರಮೇಶ್ವರನು ಸ್ತೋತ್ರ ಮಾಡಿದನು.

೫೧. ಸನತ್ಕುಮಾರಮುನಿಯು ಹೇಳಿದನು :— ಈ ರೀತಿಯಲ್ಲಿ ಈಶ್ವರನಿಂದ ಸ್ತೋತ್ರಮಾಡಲ್ಪಟ್ಟು ಪ್ರೀತನಾದ ಗದಾಧರನು ಬ್ರಹ್ಮಾದಿದೇವತೆಗಳೊಡನೇ ಆ ದೇವ ಶಿಲೆಯಲ್ಲಿ ನಿಂತು ಭಕ್ತರಿಗೆ ಮಹಾಫಲವನ್ನು ಕೊಡುತ್ತಾ ಇರುವನು.

೫೨. ಮುಂಡಪೃಷ್ಠಾದ್ರಿಯಲ್ಲಿರತಕ್ಕ ಆದಿಗದಾಧರನಾದ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸುವ ಪುರುಷನು ಬ್ರಹ್ಮಲೋಕವನ್ನು ಪಡೆಯುವನು. ಇದರಂತೆ ಸೇವೆಯನ್ನು ಮಾಡುವ ನರನೂ ಸಹ ಬ್ರಹ್ಮಲೋಕವನ್ನು ಹೊಂದುವನು.

ಧರ್ಮಾರ್ಥೀ ಪ್ರಾಪ್ನುಯಾದ್ಧರ್ಮಮರ್ಥಾರ್ಥೀ ಚಾರ್ಥಮಾಪ್ನುಯಾತ್।
ಕಾಮಾನವಾಪ್ನುಯಾತ್ಕಾಮೀ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ॥

ವಂಧ್ಯಾ ಚ ಲಭತೇ ಪುತ್ರಂ ವೇದವೇದಾಂಗಪಾರಗಂ ।
ರಾಜಾ ವಿಜಯಮಾಪ್ನೋತಿ ಶೂದ್ರಶ್ಚ ಸುಖಮಾಪ್ನುಯಾತ್ ॥ ೫೪ ॥

ಪುತ್ರಾರ್ಥೀ ಲಭತೇ ಪುತ್ರಾನಭ್ಯರ್ಚ್ಯಾದಿ ಗದಾಧರಂ ।
ಮನಸಾ ಪ್ರಾರ್ಥಿತಂ ಸರ್ವಂ ಪೂಜಾದ್ಯೈಃ ಪ್ರಾಪ್ನುಯಾದ್ಧರೇಃ ॥ ೫೫ ॥

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ "ಗಯಾಮಾಹಾತ್ಮ್ಯಂ"**
**ನಾಮ ಸಪ್ತಚತ್ವಾರಿಂಶೋಽಧ್ಯಾಯಃ**

---

೫೩. ಯಾವ ಪುರುಷರು ಧರ್ಮಾಪೇಕ್ಷೆಯಿಂದ ಆದಿಗದಾಧರಮೂರ್ತಿಯನ್ನು ಭಕ್ತಿಯಿಂದ ಆರಾಧಿಸುವರೋ ಅಂತಹ ಮನುಜರು ಧರ್ಮವನ್ನು ಪಡೆಯುವರು. ಅರ್ಥಾಪೇಕ್ಷಿಯಾದ ಪುರುಷರು ದ್ರವ್ಯವನ್ನೂ, ಕಾಮಿಯಾದ ನರನು ಸಕಲವಾದ ಈಪ್ಸಿತಗಳಾದ ಕಾಮಗಳನ್ನೂ, ಮೋಕ್ಷದಲ್ಲಿ ಇಚ್ಛೆಯುಳ್ಳವನು ಮುಕ್ತಿಯನ್ನೂ ಪಡೆಯುವರು.

೫೪. ಬಂಜೆಯಾದ ನಾರೀಮಣಿಯೂ ಕೂಡ, ಆದಿಗದಾಧರಮೂರ್ತಿಯನ್ನು ಸೇವಿಸಿದರೆ ವೇದವೇದಾಂಗಪಾರಂಗತನಾದ ಪುತ್ರರತ್ನವನ್ನು ಪಡೆಯುವಳು. ರಾಜನಾದ ಪುರುಷನು ಗದಾಧರನ ಸೇವೆಯಿಂದ ವಿಜಯವನ್ನು ಹೊಂದುವನು. ಶೂದ್ರನು ಭಗವದಾರಾಧನೆಯಿಂದ ದಿವ್ಯಸುಖವನ್ನು ಪಡೆಯುವನು.

೫೫. ಆದಿ ಗದಾಧರನ ಅರ್ಚನಾದಿಗಳಿಂದ ಪುತ್ರಾಪೇಕ್ಷೆಯುಳ್ಳ ಪುರುಷನು ದಿವ್ಯಪುತ್ರಸಂತಾನವನ್ನು ಪಡೆಯುವನು. ಅಂತಹ ಆದಿಗದಾಧರನೂ, ಜನಾರ್ಧನ ನಾಮಕನೂ ಆದ ಶ್ರೀಹರಿಯ ಪೂಜಾದಿಗಳಿಂದ ಸಕಲವಾದ ಮನೋಭೀಷ್ಟಗಳೂ ನೆರವೇರುತ್ತವೆ ಸಂದೇಹವಿಲ್ಲವೆಂದು ಸನತ್ಕುಮಾರನು ನಾರದನಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಗಯಾಮಹಾತ್ಮ್ಯ"ವೆಂಬ
ನಲವತ್ತೇಳನೆಯ ಅಧ್ಯಾಯವು ಸಮಾಪ್ತವಾದುದು.



## ನಲವತ್ತೇಳನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಶ್ರೀಹರಿಗೆ ಗದಾಪ್ರಾಪ್ತಿಯೂ, ಈಶ್ವರಕೃತಸ್ತೋತ್ರವೂ, ಶಿಲಾಮಹಿಮೆಯೂ, ಶ್ರೀಹರಿಯಸನ್ನಿಧಾನವೂ, ವರ್ಣಿತವಾಗಿವೆ.

ವಿಶ್ವಕರ್ಮನು ಗದಾನಾಮಕ ಅಸುರನ ಮೂಳೆಯಿಂದ ಗದಾಯುಧವನ್ನು ನಿರ್ಮಿಸಿದನು. ಹೇತಿಯೆಂಬ ಅಸುರನು ಘೋರತಪಸ್ಸನ್ನು ಮಾಡಿ ಬ್ರಹ್ಮನಿಂದ ವರವನ್ನು ಪಡೆದು ದೇವತೆಗಳನ್ನು ಪೀಡಿಸಲಾಗಿ ದೇವತೆಗಳ ಪ್ರಾರ್ಥನೆಯಂತೆ ಶ್ರೀಹರಿಯು ಆ ಗದಾಯುಧವನ್ನು ಸ್ವೀಕರಿಸಿ ಆ ಅಸುರನನ್ನು ಸಂಹರಿಸಿದನು. ಪುನಃ ದೇವತೆಗಳ ಪ್ರಾರ್ಥನೆಯಂತೆ ಗದಾಧರನಾಗಿ ಗಯಾಶಿಲೆಯ ಮೇಲೆ ಸ್ಥಿರವಾಗಿ ನಿಂತನು. ಶ್ರೀಹರಿಯು ಗಯಾಕ್ಷೇತ್ರದಲ್ಲಿ ವ್ಯಕ್ತಾವ್ಯಕ್ತಸ್ವರೂಪದಿಂದ ಇರುವನು. ಆ ಕ್ಷೇತ್ರದಲ್ಲಿ ಸ್ನಾನಜಪಾದಿಗಳನ್ನು, ಶ್ರಾದ್ಧಪಿಂಡದಾನಾದಿಗಳನ್ನೂ ಮಾಡಿದರೆ, ಪಿತೃಗಳು ಮುಕ್ತಿಯನ್ನು ಹೊಂದುವರು. ಆ ಗದಾಧರನಾದ ಶ್ರೀಹರಿಯು ಸೃಷ್ಟಿ ಸ್ಥಿತಿಸಂಹಾರಕರ್ತನೂ, ಸಕಲ ವೇದವೇದ್ಯನೂ, ಸರ್ವಾಂತರ್ಯಾಮಿಯೂ, ಸಕಲಾಭೀಷ್ಟಪ್ರದನೂ ಆಗಿರುವನೆಂದು ಪರಮೇಶ್ವರನು ಗದಾಧರನನ್ನು ಬಹಳವಾಗಿ ಸ್ತೋತ್ರಗಳನ್ನು ಮಾಡಿರುವನು. ಎಂಬ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿಸಲ್ಪಟ್ಟಿವೆ.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀ ಮ ದ್ವಾ ಯು ಮ ಹಾ ಪು ರಾ ಣ ಂ

## ಅಷ್ಟಚತ್ವಾರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

**ಗಯಾಯಾತ್ರಾಂ ಪ್ರವಕ್ಷ್ಯಾಮಿ ಶೃಣು ನಾರದ ಮುಕ್ತಿದಾಂ ।**
**ನಿಷ್ಕೃತಿಃ ಶ್ರಾದ್ಧಕರ್ತೄಣಾಂ ಬ್ರಹ್ಮಣಾ ಗೀಯತೇ ಪುರಾ ॥ ೧ ॥**

**ಉದ್ಯತಶ್ಚೇದ್ಗಯಾಂ ಗಂತುಂ ಶ್ರಾದ್ಧಂ ಕೃತ್ವಾ ವಿಧಾನತಃ ।**
**ವಿಧಾಯ ಕಾರ್ಪಟೀವೇಷಂ ಕೃತ್ವಾ ಗ್ರಾಮಂ ಪ್ರದಕ್ಷಿಣಂ ॥ ೨ ॥**

---

### ನಲವತ್ತೆಂಟನೆಯ ಅಧ್ಯಾಯ ಪ್ರಾರಂಭವು

೧. ಸನತ್ಕುಮಾರಮುನಿಯು ಹೇಳಿದನು:—ಎಲೈ ನಾರದನೇ, ಗಯಾ ಕ್ಷೇತ್ರದ ಯಾತ್ರಾಫಲವನ್ನು ನಿರೂಪಿಸುವೆನು ಕೇಳು. ಅದು ಕೇವಲ ಮುಕ್ತಿ ಪ್ರದವಾಗಿದೆ. ಗಯೆಯಲ್ಲಿ ಪಿತೃಗಳ ಉದ್ದೇಶ್ಯಕವಾಗಿ ಶ್ರಾದ್ಧಾದಿಗಳನ್ನು ಮಾಡುವವರು ಋಣತ್ರಯಗಳಿಂದ ಮುಕ್ತರಾಗುವರೆಂಬುದಾಗಿ ಬ್ರಹ್ಮದೇವನು ಪೂರ್ವದಲ್ಲಿ ನಿರೂಪಿಸಿರುವನು.

೨. ಗಯಾಕ್ಷೇತ್ರಕ್ಕೆ ಹೋಗಲು ಬಯಿಸುವ ಪುರುಷನು ಶಾಸ್ತ್ರೋಕ್ತ ಕ್ರಮದಿಂದ ಶ್ರಾದ್ಧವನ್ನು ಮಾಡಿ ವಿದ್ಯಾರ್ಥಿಯ ವೇಷದಿಂದ ಗ್ರಾಮಪ್ರದಕ್ಷಿಣೆಯನ್ನು ಮಾಡಿ ಭಕ್ತಿಯಿಂದ ಹೊರಡಬೇಕು.

ತತೋ ಗ್ರಾಮಾಂತರಂ ಗತ್ವಾ ಶ್ರಾದ್ಧಶೇಷಸ್ಯ ಭೋಜನಂ ।
ತತಃ ಪ್ರತಿದಿನಂ ಗಚ್ಛೇತ್ಪ್ರತಿಗ್ರಹವಿವರ್ಜಿತಃ ॥ ೩ ॥

ಪ್ರತಿಗ್ರಹಾದುಪಾವೃತ್ತಃ ಸಂತುಷ್ಟೋ ನಿಯತಃ ಶುಚಿಃ ।
ಅಹಂಕಾರವಿಮುಕ್ತೋ ಯಃ ಸ ತೀರ್ಥಫಲಮಶ್ನುತೇ ॥ ೪ ॥

ಯಸ್ಯ ಹಸ್ತೌ ಚ ಪಾದೌ ಚ ಮನಶ್ಚಾಪಿ ಸುಸಂಯತಂ ।
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥ ೫ ॥

ತತೋ ಗಯಾಪ್ರವೇಶೇ ಚ ಪೂರ್ವತೋಽಸ್ತಿ ಮಹಾನದೀ ।
ತತ್ರ ತೋಯಂ ಸಮುತ್ಪಾಟ್ಯ ಸ್ನಾತವ್ಯಂ ನಿರ್ಮಲೇ ಜಲೇ ॥ ೬ ॥

---

೩. ತರುವಾಯ ಗ್ರಾಮಾಂತರಕ್ಕೆ ಹೋಗಿ ಶ್ರಾದ್ಧಶೇಷವನ್ನು ಭುಂಜಿಸಿ, ಅಲ್ಲಿಂದ ಮುಂದಕ್ಕೆ ಕಾಲ್ನಡೆಯಿಂದಲೇ ಬೇರೊಂದು ಗ್ರಾಮಕ್ಕೆ ಹೋಗಬೇಕು. ಈ ಕ್ರಮದಲ್ಲಿ ಪ್ರಯಾಣವನ್ನು ಮಾಡುವಾಗ ಮಾರ್ಗದಲ್ಲಿ ಪರರು ಕೊಟ್ಟ ದಾನವನ್ನು ಸ್ವೀಕರಿಸಬಾರದು.

೪. ಪುರುಷನು ಪ್ರತಿಗ್ರಹವನ್ನು ಸ್ವೀಕರಿಸದೆ ಸಂತುಷ್ಟನೂ, ಜಿತೇಂದ್ರಿಯನೂ, ಶುಚಿಯೂ, ಅಹಂಕಾರವರ್ಜಿತನೂ ಆಗಿ ಗಯಾಕ್ಷೇತ್ರಕ್ಕೆ ಪ್ರಯಾಣವನ್ನು ಮಾಡಿದರೆ, ತೀರ್ಥಯಾತ್ರೆಯ ಸಂಪೂರ್ಣಫಲವನ್ನು ಹೊಂದುವನು.

೫. ಯಾವನ ಹಸ್ತಪಾದಗಳೂ, ಮನಸ್ಸೂ, ನಿರ್ಮಲವಾಗಿಯೂ, ಶಾಂತವಾಗಿಯೂ ಇರುವುವೋ ಮತ್ತು ಯಾವನಿಗೆ ವಿದ್ಯಾ, ಕೀರ್ತಿ ತಪಸ್ಸು ಇವುಗಳು ಇರುವುವೋ ಅಂತಹ ಪುರುಷನು ತೀರ್ಥಯಾತ್ರೆಯ ಸಂಪೂರ್ಣ ಫಲವನ್ನು ಹೊಂದುವನು.

೬. ತರುವಾಯ ಗಯಾಕ್ಷೇತ್ರವನ್ನು ಹೊಂದಿ ಅದರ ಪೂರ್ವದಿಕ್ಕಿನಲ್ಲಿರುವ ಮಹಾನದಿಯ ಪವಿತ್ರವಾದ ಜಲದಲ್ಲಿ ಸ್ನಾನಜಪತಪಾದಿಗಳನ್ನು ಮಾಡುವುದರಿಂದ ಮಹಾಫಲಪ್ರಾಪ್ತಿಯಾಗುವುದು.

ದೇವಾದೀಂಸ್ತರ್ಪಯಿತ್ವಾಥ ಶ್ರಾದ್ಧಂ ಕೃತ್ವಾ ಯಥಾವಿಧಿ ।
ಸ್ವವೇದಶಾಖಾಗದಿತಮರ್ಘ್ಯಾವಾಹನವರ್ಜಿತಂ ॥ ೭ ॥

ಅಪರೇಽಹ್ನಿ ಶುಚಿರ್ಭೂತ್ವಾ ಗಚ್ಛೇದ್ವೈ ಪ್ರೇತಪರ್ವತೇ ।
ಬ್ರಹ್ಮಕುಂಡೇ ತತಃ ಸ್ನಾತ್ವಾ ದೇವಾದೀಂಸ್ತರ್ಪಯೇತ್ಸುಧೀಃ ॥ ೮ ॥

ಕುರ್ಯಾಚ್ಛ್ರಾದ್ಧಂ ಸಪಿಂಡಾನಾಂ ಪ್ರಯತಃ ಪ್ರೇತಪರ್ವತೇ ।
ಪ್ರಾಚೀನಾವೀತಿನಾ ಭಾವ್ಯಂ ದಕ್ಷಿಣಾಭಿಮುಖಃ ಸುಧೀಃ ॥ ೯ ॥

ಕವ್ಯಬಾಲೋಽನಲಃ ಸೋಮೋ ಯಮಶ್ಚೈವಾರ್ಯಮಾ ತಥಾ ।
ಅಗ್ನಿಷ್ವಾತ್ತಾ ಬರ್ಹಿಷದಃ ಸೋಮಪಾಃ ಪಿತೃದೇವತಾಃ ॥ ೧೦ ॥

---

೭. ಅನಂತರ ಜ್ಞಾನಿಯಾದ ಪುರುಷರು ದೇವಪಿತೃಗಳಿಗೆ ತರ್ಪಣವನ್ನು ವಿಧಿವತ್ತಾಗಿ ಶ್ರಾದ್ಧಾದಿಕರ್ಮಗಳನ್ನೂ ತಮ್ಮ ತಮ್ಮ ಶಾಸ್ತ್ರೋಕ್ತರೀತಿಯಾಗಿ ಅರ್ಘ್ಯ ಆವಾಹನವಿಲ್ಲದೆಯೇ ಮಾಡಿದರೆ ಸಂಪೂರ್ಣವಾದ ಫಲವು ದೊರುಕುವುದು.

೮. ವಿವೇಕಿಯಾದ ಪುರುಷರು ಶುಚಿಯಾಗಿ ಅ ರಾಹ್ನಕಾಲದಲ್ಲಿ ಪ್ರೇತಪರ್ವತಕ್ಕೆ ಹೋಗಬೇಕು. ಅಲ್ಲಿರುವ ಬ್ರಹ್ಮಕುಂಡದಲ್ಲಿ ಸ್ನಾನಜಪತಪಾದಿಗಳನ್ನು ಮಾಡಿ ದೇವಪಿತೃಗಳಿಗೆ ತರ್ಪಣವನ್ನು ಕೊಟ್ಟರೆ ಮುಕ್ತಿಯು ದೊರುಕುವುದು.

೯. ಜ್ಞಾನಿಯಾವ ಪುರುಷನು ಆ ಪ್ರೇತಗಿರಿಯಲ್ಲಿ ನಿಯಮದಿಂದ ತಮ್ಮ ಬಂಧುಗಳಿಗೋಸ್ಕರ ದಕ್ಷಿಣಾಭಿಮುಖನಾಗಿ ಕುಳಿತು ಅಪಸವ್ಯದಿಂದ ಶ್ರಾದ್ಧಪಿಂಡಗಳ ದಾನವನ್ನು ಮಾಡಿದರೆ ಅವನಿಗೆ ಸಂಪೂರ್ಣಫಲವು ಪ್ರಾಪ್ತಿಯಾಗುವುದು.

೧೦. ಕವಿ, ಆಬಾಲ, ಅನಲ, ಸೋಮ, ಯಮ, ಅರ್ಯಮಾ, ಅಗ್ನಿಷ್ವಾತ್ತ, ಬರ್ಹಿಷದ, ಸೋಮಪ ಎಂಬ ಇವರು ಪಿತೃದೇವತೆಗಳಾಗಿರುವರು. ಇವರು ತೃಪ್ತರಾಗಿ ಮಹಾಫಲಗಳನ್ನು ಕೊಡುವರು.

ಆಗಚ್ಛಂತು ಮಹಾಭಾಗಾ ಯುಷ್ಮಾಭೀ ರಕ್ಷಿತಾಸ್ತ್ವಿಹ ।
ಮದೀಯಾಃ ಪಿತರೋ ಯೇ ಚ ಕುಲೇ ಜಾತಾಃ ಸನಾಭಯಃ ॥ ೧೧ ॥

ತೇಷಾಂ ಪಿಂಡಪ್ರದಾನಾರ್ಥಂ ಆಗತೋಸ್ಮಿ ಗಯಾಮಿಮಾಂ ।
ತೇ ಸರ್ವೇ ತೃಪ್ತಿಮಾಯಾಂತು ಶ್ರಾದ್ಧೇನಾನೇನ ಶಾಶ್ವತೀಂ ॥ ೧೨ ॥

ಆಚಮ್ಯೋಕ್ತ್ವಾ ಚ ಪಂಚಾಂಗಂ ಪ್ರಾಣಾಯಾಮಂ ಪ್ರಯತ್ನತಃ ।
ಪುನರಾವೃತ್ತಿರಹಿತ ಬ್ರಹ್ಮಲೋಕಾಪ್ತಿಹೇತವೇ ॥ ೧೩ ॥

ಏವಂ ಚ ವಿಧಿವಚ್ಛ್ರಾದ್ಧಂ ಕೃತ್ವಾ ಪೂರ್ವಂ ಯಥಾಕ್ರಮಂ ।
ಪಿತೄನಾವಾಹ್ಯ ಚಾಭ್ಯರ್ಚ್ಯ ಮಂತ್ರೈಃ ಪಿಂಡಪ್ರದೋ ಭವೇತ್ ॥ ೧೪ ॥

---

೧೧-೧೨. ಎಲೈ ಮಹಾನುಭಾವರಾದ ಪಿತೃದೇವತೆಗಳಿರಾ, ನೀವು ಈ ಕ್ಷೇತ್ರಗಳಿಗೆ ಅಭಿಮಾನಿಗಳಾಗಿಯೂ, ಯಜಮಾನರಾಗಿಯೂ, ಇರುವಿರಿ. ನಾವು ಅಲ್ಲಿ ನಮ್ಮ ಪಿತೃಗಳಿಗಾಗಿಯೂ, ವಂಶದಲ್ಲಿ ಜನಿಸಿ ಸಪಿಂಡರಾಗಿಯೂ ಯಾರು ಇರುವರೋ ಅವರಿಗೆ ಪಿಂಡದಾನವನ್ನು ಮಾಡುವುದಕ್ಕಾಗಿ ಈ ಕ್ಷೇತ್ರಕ್ಕೆ ಬಂದಿರುತ್ತೇವೆ. ನಾವು ಈ ಗಯಾಕ್ಷೇತ್ರದಲ್ಲಿ ಶ್ರಾದ್ಧವನ್ನು ಮಾಡುವುದರಿಂದ ಪಿತೃಗಳಿಗೆ ತೃಪ್ತಿಯಾಗುವಂತೆ ನೀವು ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಳ್ಳಬೇಕು.

೧೩. ತರುವಾಯ ಆಚಮನಮಾಡಿ ಪ್ರಯತ್ನಪೂರ್ವಕವಾಗಿ ಪಂಚಾಂಗಸಹಿತ ಪ್ರಾಣಾಯಾಮವನ್ನು ಮಾಡಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಪುನರಾವೃತ್ತಿ ಶೂನ್ಯವಾದ ಬ್ರಹ್ಮಲೋಕಪ್ರಾಪ್ತಿಯಾಗುವುದು.

೧೪. ಹೀಗೆ ವಿಧಿವತ್ತಾಗಿಯೂ, ಯಥಾಕ್ರಮವಾಗಿಯೂ ಪಿತೃಗಳನ್ನು ಆವಾಹನೆಮಾಡಿ ಮಂತ್ರಸಹಿತವಾಗಿ ಅರ್ಚನೆ ಪಿಂಡದಾನಗಳನ್ನು ಮಾಡಿದರೆ ಪಿತೃಗಳಿಗೆ ಮುಕ್ತಿಯುಂಟಾಗುವುದು.

ತೀರ್ಥೇ ಪ್ರೇತಶಿಲಾದೌ ಚ ಚರುಣಾ ಸಘೃತೇನ ವಾ ।
ಪ್ರಕ್ಷಾಲ್ಯ ಪೂರ್ವಂ ತತ್ಸ್ಥಾನಂ ಪಂಚಗವ್ಯೈಃ ಪೃಥಕ್ ಪೃಥಕ್ ॥
ತೈರ್ಮಂತ್ರೈರಥ ಸಂಪೂಜ್ಯ ಪಂಚಗವ್ಯೈಶ್ಚ ದೇವತಾಃ ॥ ೧೫ ॥

ಯಾವತ್ತಿಲಾ ಮನುಷ್ಯೈಶ್ಚ ಗೃಹೀತಾ ಪಿತೃಕರ್ಮಸು ।
ಗಚ್ಛಂತಿ ತಾವದಸುರಾಃ ಸಿಂಹತ್ರಸ್ತಾ ಯಥಾ ಮೃಗಾಃ ॥ ೧೬ ॥

ಅಷ್ಟಕಾಸು ಚ ವೃದ್ಧೌ ಚ ಗಯಾಯಾಂ ಚ ಮೃತೇಽಹನಿ ।
ಮಾತುಃ ಶ್ರಾದ್ಧಂ ಪೃಥಕ್ಕುರ್ಯಾದನ್ಯತ್ರ ಪತಿನಾ ಸಹ ॥ ೧೭ ॥

ವೃದ್ಧಿ ಶ್ರಾದ್ಧೇ ತು ಮಾತ್ರಾದಿ ಗಯಾಯಾಂ ಪಿತೃಪೂರ್ವಕಂ ।
ಪಾದ್ಯಪೂರ್ವಂ ಸಮಾರಭ್ಯ ದಕ್ಷಿಣಾಗ್ರಕುಶೈಃ ಕ್ರಮಾತ್ ॥
ಪಿತ್ರಾದೀನಾಂ ಸಮಾಸ್ತೀರ್ಯ ಶೇಷಂ ಗೃಹ್ಯೋಕ್ತಮಾಚರೇತ್ ॥ ೧೮ ॥

---

೧೫. ತೀರ್ಥಕ್ಷೇತ್ರಗಳಲ್ಲಿಯೂ, ಪ್ರೇತಶಿಲಾದಿಗಳಲ್ಲಿಯೂ, ಮೊದಲು ಜಲ ಪಂಚಗವ್ಯಗಳಿಂದ ಪ್ರೋಕ್ಷಿಸಿ, ಸ್ಥಳವನ್ನು ಶುದ್ಧಿಮಾಡಿ ಮಂತ್ರಗಳಿಂದಲೂ, ಪಂಚಗವ್ಯಗಳಿಂದಲೂ, ದೇವತೆಗಳನ್ನು ಪೂಜಿಸಬೇಕು. ಮತ್ತು ತೀರ್ಥಗಳಲ್ಲಿಯೂ, ಪ್ರೇತಶಿಲೆಗಳಲ್ಲಿಯೂ, ಘೃತಸಹಿತವಾದ ಚರುವಿನಿಂದ ಪಿತೃಗಳಿಗೂ, ದೇವತೆಗಳಿಗೂ, ಹೋಮವನ್ನು ಮಾಡಬೇಕು.

೧೬. ಮನುಷ್ಯರು ಪಿತೃಕಾರ್ಯಗಳನ್ನು ಪಕ್ರವಿಸುವ ಯಾವ ಕಾಲದಲ್ಲಿ ಎಳ್ಳನ್ನು ಸ್ವೀಕರಿಸುವರೋ, ಆ ಕ್ಷಣದಲ್ಲಿಯೇ ಅಸುರರೆಲ್ಲರೂ ಸಿಂಹದಿಂದ ಭಯಪಟ್ಟ ಮೃಗಗಳು ಓಡುವಂತೆ ಪಲಾಯನಮಾಡುವರು.

೧೭. ಅಷ್ಟಕಗಳು, ವೃದ್ಧಾಚಲ, ಗಯಾ, ಮೃತದಿನ ಇವುಗಳಲ್ಲಿ ಮಾತೃ ಶ್ರಾದ್ಧವನ್ನು ಪ್ರತ್ಯೇಕವಾಗಿ ಮಾಡಬೇಕು. ಇತರ ಕ್ಷೇತ್ರಗಳಲ್ಲಿ ಮಾತೃಶ್ರಾದ್ಧವನ್ನು ತಂದೆಯ ಶ್ರಾದ್ಧದೊಡನೆಯೇ ಮಾಡಬೇಕು.

೧೮. ಗಯಾದಿಕ್ಷೇತ್ರಗಳಲ್ಲಿ ಅಧಿಕಶ್ರಾದ್ಧವನ್ನು ಮಾಡುವಾಗ ಮಾತ್ರಾದಿ ಶ್ರಾದ್ಧಾದಿಗಳನ್ನು ಪಿತೃಗಳ ಸಂಗಡವೇ ಮಾಡಬೇಕು. ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ದರ್ಭೆಗಳನ್ನು ದಕ್ಷಿಣಾಭಿಮುಖವಾಗಿ ಭೂಮಿಯಲ್ಲಿ ಹರಡಿ, ಗೃಹ್ಯಸೂಕ್ತೋಕ್ತಕ್ರಮವಾಗಿ ತಿಲೋದಕ ಪಿಂಡಪ್ರದಾನಾದಿಗಳನ್ನು ಮಾಡಬೇಕು.

ದದ್ಯುಃ ಶ್ರಾದ್ಧಂ ಸಪಿಂಡಾನಾಂ ತೇಷಾಂ ದಕ್ಷಿಣಭಾಗತಃ ।
ಕುಶಾನಾಸ್ತೀರ್ಯ ವಿಧಿನಾ ಸಕೃದ್ದತ್ವಾ ತಿಲೋದಕಂ ॥ ೧೯ ॥
ಗೃಹೀತ್ವಾಂಜಲಿನಾ ತೇಭ್ಯಃ ಪಿತೃತೀರ್ಥೇನ ಯತ್ನತಃ ।

ಸಕ್ತುನಾ ಮುಷ್ಟಿಮಾತ್ರೇಣ ದದ್ಯಾದಕ್ಷಯ್ಯಪಿಂಡಕಂ ॥
ಸಂಬಂಧಿನಸ್ತಿಲಾದ್ಭಿಶ್ಚ ಕುಶೇಷ್ವಾವಾಹಯೇತ್ತತಃ ॥ ೨೦ ॥

ಆಬ್ರಹ್ಮಸ್ತಂಬಪರ್ಯಂತಂ ದೇವರ್ಷಿ ಪಿತೃಮಾನವಾಃ ।
ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ ॥ ೨೧ ॥

ಅತೀತಕುಲಕೋಟೀನಾಂ ಸಪ್ತದ್ವೀಪನಿವಾಸಿನಾಂ ।
ಆಬ್ರಹ್ಮಭುವನಾಲ್ಲೋಕಾದಿದಮಸ್ತು ತಿಲೋದಕಂ ॥ ೨೨ ॥

---

೧೯. ಸಪಿಂಡೀಕರಿಗೆ ಶ್ರಾದ್ಧವನ್ನು ಮಾಡುವಾಗ ಪಿತೃಗಳಿಗೆ ದಕ್ಷಿಣಭಾಗದಲ್ಲಿ ಹರಡಿರುವ ದರ್ಭೆಗಳ ಮೇಲೆ ಶಾಸ್ತ್ರೋಕ್ತಕ್ರಮವಾಗಿ ತಿಲೋದಕ ಪಿಂಡಪ್ರದಾನಗಳನ್ನು ಮಾಡಬೇಕು.

೨೦. ಪ್ರಸಿದ್ಧವಾದ ಕ್ಷೇತ್ರಗಳಲ್ಲಿ ಯತ್ನಪೂರ್ವಕವಾಗಿ ಅಂಜಲಿಯಿಂದ ತಿಲೋದಕವನ್ನು ಕೊಡಬೇಕು. ಮುಷ್ಟಿಮಾತ್ರಪ್ರಮಾಣವಿರುವ ಹಿಟ್ಟಿನಿಂದ ಮಾಡಿದ ಉಚ್ಛಿಷ್ಟಪಿಂಡವನ್ನೂ, ತಿಲೋದಕವನ್ನೂ ಕೊಡಬೇಕು. ತರುವಾಯ ತೀರ್ಥಗಳಲ್ಲಿ ಬಂಧುಗಳ ಉದ್ದೇಶ್ಯವಾಗಿ ಕುಶಗಳನ್ನೂ ಹರಡಿ ತಿಲೋದಕಾದಿಗಳನ್ನೂ ಕೊಡಬೇಕು.

೨೧. ಬ್ರಹ್ಮದೇವನು ಮೊದಲುಗೊಂಡು ತೃಣಜೀವ ಪರ್ಯಂತವಾಗಿರುವ ಜೀವರಾಶಿಗಳು, ದೇವ, ಋಷಿ, ಪಿತೃ, ಮಾನವರು, ಪಿತೃಗಳು, ಮಾತೆ, ಮಾತಾಮಹ ಇವರೇ ಮೊದಲಾದ ಸಮಸ್ತ ಪಿತೃಗಳು ಇವರೆಲ್ಲರೂ ನಮ್ಮ ತಿಲೋದಕದಿಂದ ತೃಪ್ತರಾಗಲೆಂದು ಪ್ರಾರ್ಥಿಸಬೇಕು.

೨೨. ಅತೀತವಾದ ಕೋಟ್ಯಂತರಕುಲದವರೂ, ಸಪ್ತದ್ವೀಪನಿವಾಸಿಗಳೂ, ಬ್ರಹ್ಮಾದಿಯಾಗಿ ಸಮಸ್ತ ಲೋಕನಿವಾಸಿಗಳೂ ಆದ ಸಮಸ್ತರಾದ ಜನರಿಗೂ ಈ ತಿಲೋದಕವು ತೃಪ್ತಿಯನ್ನುಂಟುಮಾಡಲೆಂದು ಪ್ರಾರ್ಥಿಸಬೇಕು.

ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ಮಾತಾ ಪಿತಾಮಹೀ ಚೈವ ತಥೈವ ಪ್ರಪಿತಾಮಹೀ ॥ ೨೩ ॥

ಮಾತಾಮಹಸ್ತತ್ಪಿತಾ ಚ ಪ್ರಮಾತಾಮಹಕಾದಯಃ ।
ತೇಷಾಂ ಪಿಂಡೋ ಮಯಾ ದತ್ತೋ ಹ್ಯಕ್ಷಯ್ಯಮುಪತಿಷ್ಠತಾಂ ॥ ೨೪ ॥

ಮುಷ್ಟಿಮಾತ್ರಪ್ರಮಾಣಂ ಚ ಹ್ಯಾರ್ದ್ರಾಮಲಕಮಾತ್ರಕಂ ।
ಶಮೀಪತ್ರಪ್ರಮಾಣಂ ವಾ ಪಿಂಡಂ ದದ್ಯಾದ್ಗಯಾಶಿರೇ ॥
ಉದ್ಧರೇತ್ಸಪ್ತಗೋತ್ರಾಣಿ ಕುಲಾನಿ ಶತಮುದ್ಧರೇತ್ ॥ ೨೫ ॥

ಪಿತುರ್ಮಾತುಃ ಸ್ವಭಾರ್ಯಾಯಾ ಭಗಿನ್ಯಾ ದುಹಿತುಸ್ತಥಾ ।
ಪಿತೃಷ್ವಸುರ್ಮಾತೃಷ್ವಸುಃ ಸಪ್ತಗೋತ್ರಾಃ ಪ್ರಕೀರ್ತಿತಾಃ ॥ ೨೬ ॥

ಚತುರ್ವಿಂಶತಿವಿಂಶಚ್ಚ ಷೋಡಶ ದ್ವಾದಶೈವ ಹಿ ।
ರುದ್ರಾದಿವಸವಶ್ಚೈವ ಕುಲಾನ್ಯೇಕೋತ್ತರಂ ಶತಂ ॥ ೨೭ ॥

---

೨೩-೨೪. ಪಿತೃ, ಪಿತಾಮಹ, ಪ್ರಪಿತಾಮಹಂದಿರು ಅಂದರೆ ತಂದೆ, ತಾತ, ಮುತ್ತಜ್ಜಂದಿರು, ಮಾತೃ, ಪಿತಾಮಹಿ, ಪ್ರಪಿತಾಮಹಿಯರು (ತಾಯಿ, ಅಜ್ಜಿ, ಮುತ್ತಜ್ಜಿಯರು) ಮಾತಾಮಹ ಮಾತುಃಪಿತಾಮಹ, ಮಾತುಃಪ್ರಪಿತಾಮಹ, ತಾಯಿಯ ತಂದೆ ಮೊದಲಾದವರೂ ಇವರಿಗೆ ನಾನು ಕೊಟ್ಟ ಪಿಂಡೋದಕಗಳು ಅಕ್ಷಯವಾಗಲೆಂದು ಪ್ರಾರ್ಥಿಸಿ ಕೊಡಬೇಕು.

೨೫. ಗಯಾಶಿರಸ್ಸಿನಲ್ಲಿ ಮುಷ್ಟಿಮಾತ್ರಪ್ರಮಾಣವೂ ಅಥವಾ ಹಸಿಯ ನಲ್ಲಿಯ ಕಾಯಿಯಷ್ಟು ಪ್ರಮಾಣವೂ ಅಥವಾ ಶಮೀಪತ್ರಪ್ರಮಾಣವೂ ಇರುವ ಪಿಂಡವನ್ನು ಕೊಟ್ಟರೆ ಸಪ್ತವಂಶಗಳೂ, ನೂರಾರು ಕುಲಗಳೂ ಉದ್ಧೃತವಾಗುವುವು.

೨೬. ಪಿತೃ, ಮಾತೃ, ಸ್ವಪತ್ನೀ, ಸಹೋದರಿ, ಕುಮಾರಿ, ತಂದೆಯತಂಗಿ (ಸೋದರತ್ತೆ) ತಾಯಿಯತಂಗಿ (ಚಿಕ್ಕಮ್ಮ) ಇವರ ವಂಶದವರು ಸಪ್ತಗೋತ್ರಜರಾಗಿರುವರು.

೨೭. ಇಪ್ಪತ್ತುನಾಲ್ಕು, ಇಪ್ಪತ್ತು, ಹದಿನಾರು, ಹನ್ನೆರಡು, ಹನ್ನೊಂದು ಮತ್ತು ಹದಿನೆಂಟು ಇವೇ ಮೊದಲಾದುವನ್ನು ಕೂಡಿದರೆ ನೂರೆಂಟು ವಂಶಗಳಾಗುವುವು.

ನಾವಾಹನಂ ನ ದಿಗ್ಬಂಧೋ ನ ದೋಷೋ ದೃಷ್ಟಿಸಂಭವಃ ।
ನ ಕಾರುಣ್ಯೇನ ಕರ್ತವ್ಯಂ ತೀರ್ಥಶ್ರಾದ್ಧಂ ವಿಚಕ್ಷಣೈಃ ॥ ೨೮ ॥

ಪಿಂಡಾಸನಂ ಪಿಂಡದಾನಂ ಪುನಃ ಪ್ರತ್ಯವನೇಜನಂ ।
ದಕ್ಷಿಣಾ ಚಾನ್ನಸಂಕಲ್ಪಂ ತೀರ್ಥಶ್ರಾದ್ಧೇಷ್ವಯಂ ವಿಧಿಃ ॥ ೨೯ ॥

ಅಸ್ಮತ್ಕುಲೇ ಮೃತಾ ಯೇ ಚ ಗತಿರ್ಯೇಷಾಂ ನ ವಿದ್ಯತೇ ।
ಆವಾಹಯಿಷ್ಯೇ ತಾನ್ಸರ್ವಾನ್ ದರ್ಭಪೃಷ್ಠೇ ತಿಲೋದಕೈಃ ॥ ೩೦ ॥

ಬಂಧುವರ್ಗಕುಲೇ ಯೇ ಚ ಗತಿರ್ಯೇಷಾಂ ನ ವಿದ್ಯತೇ ।
ಆವಾಹಯಿಷ್ಯೇ ತಾನ್ ಸರ್ವಾನ್ ದರ್ಭಪೃಷ್ಠೇ ತಿಲೋದಕೈಃ ॥ ೩೧ ॥

ಇತ್ಯೇತೈರ್ಮಂತ್ರೈಃ ಸಜಲೈಸ್ತಿಲೈರ್ದರ್ಭೇಷು ಧ್ಯಾನವಾನ್ ।
ಆವಾಹ್ಯಾಭ್ಯರ್ಚ್ಯ ತೇಭ್ಯಶ್ಚ ಪಿಂಡಾನ್ ದದ್ಯಾದ್ಯಥಾಕ್ರಮಂ ॥ ೩೨ ॥

---

೨೮. ಗಯಾದಿತೀರ್ಥ ಶ್ರಾದ್ಧದಲ್ಲಿ ಆವಾಹನೆಯೂ ಇಲ್ಲ, ದಿಗ್ಬಂಧವೂ ಇಲ್ಲ, ಇತರ ದೋಷಗಳೂ ಇಲ್ಲ, ದೃಷ್ಟಿದೋಷಗಳೂ ಇಲ್ಲ, ಪಂಡಿತರು ತೀರ್ಥಶ್ರಾದ್ಧವನ್ನು ಕಾರುಣ್ಯದಿಂದ ಮಾಡಬಾರದು.

೨೯. ಪಿಂಡದಾನ, ಪಿಂಡಾಸನ(ಗರ್ಭಾಸನ) ಪುನಃ ಪ್ರೋಕ್ಷಣ ಸಂಮಾರ್ಜನ, ದಕ್ಷಿಣಾ, ಅನ್ನದಾನಮಾಡುವ ಸಂಕಲ್ಪ ಇವುಗಳು ತೀರ್ಥಶ್ರಾದ್ಧದಲ್ಲಿ ಮಾಡಬೇಕಾದ ವಿಧಿಗಳಾಗಿವೆ.

೩೦. ನಮ್ಮ ಕುಲದಲ್ಲಿ ಯಾರು ಮೃತರಾಗಿರುವರೊ, ಯಾರಿಗೆ ಸಂತಾನ ವಿಲ್ಲದೆ ದಿಕ್ಕಿರುವುದಿಲ್ಲವೋ, ಅವರೆಲ್ಲರನ್ನೂ ತಿಲೋದಕಗಳಿಂದ ದರ್ಭೆಗಳ ಮೇಲೆ ಆವಾಹನೆಯನ್ನು ಮಾಡುವೆನೆಂದು ಸಂಕಲ್ಪಮಾಡಬೇಕು.

೩೧. ಯಾರು ಬಂಧುಗಳ ವಂಶದಲ್ಲಿ ಮೃತರಾಗಿರುವರೋ, ಯಾರಿಗೆ ಮಕ್ಕಳಿಲ್ಲದೇ ದಿಕ್ಕಿರುವುದಿಲ್ಲವೋ ಅಂತಹ ಸಮಸ್ತ ಬಂಧುಗಳನ್ನೂ ತಿಲೋದಕ ಗಳಿಂದ ದರ್ಭೆಗಳಲ್ಲಿ ಆವಾಹನೆಯನ್ನು ಮಾಡುತ್ತೇನೆಂದು ಹೇಳಬೇಕು.

೩೨. ಈ ಪೂರ್ವೋಕ್ತಗಳಾದ ಮಂತ್ರಗಳಿಂದಲೂ, ತಿಲೋದಕಗಳಿಂದಲೂ, ದರ್ಭಾಸನಗಳಲ್ಲಿ ಪಿತೃಗಳನ್ನು ಧ್ಯಾನಿಸಿ, ಆವಾಹನೆ ಅರ್ಚನೆ ಇವೇ ಮೊದಲಾದವನ್ನು ಮಾಡಿ ಕ್ರಮವಾಗಿ ಪಿಂಡಗಳನ್ನೂ ದಾನಮಾಡಬೇಕು.

**ಅಸ್ಮತ್ಕುಲೇ ಮೃತಾ ಯೇ ಚ ಗತಿರ್ಯೇಷಾಂ ನ ವಿದ್ಯತೇ ।**
**ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ || ೩೩ ||**

**ಅಗ್ನಿದಗ್ಧಾಶ್ಚ ಯೇ ಕೇಚಿನ್ನಾಗ್ನಿದಗ್ಧಾಸ್ತಥಾ ಪರೇ ।**
**ವಿದ್ಯುಚ್ಚೋರಹತಾ ಯೇ ಚ ತೇಭ್ಯಃ ಪಿಂಡಂ ದದಾಮ್ಯಹಂ || ೩೪ ||**

**ಬಂಧುವರ್ಗಕುಲೇ ಯೇ ಚ ಗತಿರ್ಯೇಷಾಂ ನ ವಿದ್ಯತೇ ।**
**ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ || ೩೫ ||**

**ಅಜಾತದಂತಾ ಯೇ ಕೇಚಿದ್ಯೇ ಚ ಗರ್ಭೇ ಪ್ರಪೀಡಿತಾಃ ।**
**ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ || ೩೬ ||**

---

೩೩. ಯಾರು ನಮ್ಮ ವಂಶದಲ್ಲಿ ಮೃತರಾಗಿರುವರೋ, ಯಾರಿಗೆ ದಿಕ್ಕಿಲ್ಲವೋ, ಅವರನ್ನು ಉದ್ಧಾರಮಾಡುವುದಕ್ಕಾಗಿ ಈ ಪಿಂಡವನ್ನು ಕೊಡುತ್ತೇನೆಂದು ಹೇಳಿ, ಪಿಂಡದಾನವನ್ನು ಮಾಡಬೇಕು.

೩೪. ಯಾವ ಪುರುಷನು ತಾಯಿಯ ತಂದೆಯ ವಂಶದಲ್ಲಿ ಹುಟ್ಟಿ ದಿಕ್ಕಿಲ್ಲದೇ ಮೃತರಾಗಿರುವರೋ, ಅಂ ಹವರನ್ನು ಉದ್ಧಾರಮಾಡುವುದಕ್ಕಾಗಿ ಈ ಪಿಂಡವನ್ನು ಕೊಡುತ್ತೇನೆಂದು ಹೇಳಿ ಪಿಂಡದಾನವನ್ನು ಮಾಡಬೇಕು.

೩೫. ಯಾರು ಬಂಧುವರ್ಗಕುಲದಲ್ಲಿ ಹುಟ್ಟಿ ಯಾರೂ ದಿಕ್ಕಿಲ್ಲದೆಯೇ ಮೃತರಾಗಿರುವರೋ ಅಂತಹವರನ್ನು ಉದ್ಧರಿಸುವುದಕ್ಕಾಗಿ ಈ ಪಿಂಡವನ್ನು ಕೊಡುತ್ತೇನೆಂದು ಹೇಳಿ ದಾನಮಾಡಬೇಕು.

೩೬. ಯಾರು ದಂತೋತ್ಪತ್ತಿಗೆ ಪೂರ್ವದಲ್ಲಿಯೇ ಮೃತರಾಗಿರುವರೋ, ಯಾರು ಗರ್ಭದಲ್ಲೇ ಮೃತರಾಗಿರುವರೋ ಅವರನ್ನು ನರಕದಿಂದ ಉದ್ಧರಿಸುವುದಕ್ಕಾಗಿ ಈ ಪಿಂಡವನ್ನು ಕೊಡುತ್ತೇನೆಂದು ಹೇಳಿ ದಾನವನ್ನು ಮಾಡಬೇಕು.

ಅಗ್ನಿದಗ್ಧಾಶ್ಚ ಯೇ ಕೇಚಿನ್ನಾಗ್ನಿದಗ್ಧಾಸ್ತಥಾ ಪರೇ ।
ವಿದ್ಯುಚ್ಚೋರಹತಾ ಯೇ ಚ ತೇಭ್ಯಃ ಪಿಂಡಂ ದದಾಮ್ಯಹಂ ॥ ೩೭ ॥

ದಾವದಾಹೇ ಮೃತಾ ಯೇ ಚ ಸಿಂಹವ್ಯಾಘ್ರಹತಾಶ್ಚ ಯೇ ।
ದಂಷ್ಟ್ರಿಭಿಃ ಶೃಂಗಿಭಿರ್ವಾಪಿ ತೇಭ್ಯಃ ಪಿಂಡಂ ದದಾಮ್ಯಹಂ ॥ ೩೮ ॥

ಉದ್ಬಂಧನಮೃತಾ ಯೇ ಚ ವಿಷಶಸ್ತ್ರಹತಾಶ್ಚ ಯೇ ।
ಆತ್ಮೋಪಘಾತಿನೋ ಯೇ ಚ ತೇಭ್ಯಃ ಪಿಂಡಂ ದದಾಮ್ಯಹಂ ॥ ೩೯ ॥

ಅರಣ್ಯೇ ವರ್ತ್ಮನಿ ವನೇ ಕ್ಷುಧಯಾ ತೃಷಯಾ ಹತಾಃ ।
ಭೂತಪ್ರೇತಪಿಶಾಚಾದ್ಯೈಸ್ತೇಭ್ಯಃ ಪಿಂಡಂ ದದಾಮ್ಯಹಂ ॥ ೪೦ ॥

---

೩೭. ಯಾರು ಅಗ್ನಿಯಿಂದ ದಗ್ಧರಾಗಿರುವರೋ, ಯಾರು ಅಗ್ನಿದಾಹವಿಲ್ಲದೇ ಮೃತರಾಗಿರುವರೋ, ಯಾವನು ಮಿಂಚು, ಸಿಡಿಲುಗಳಿಂದ ಮೃತರಾಗಿರುವರೋ, ಯಾರು ಚೋರರಿಂದ ಕೊಲ್ಲಲ್ಪಟ್ಟಿರುವರೋ, ಅವರಿಗೋಸ್ಕರ ಈ ಪಿಂಡವನ್ನು ಕೊಡುತ್ತೇನೆಂದು ಹೇಳಿ ದಾನಮಾಡಬೇಕು.

೩೮. ಯಾವ ಪುರುಷನು ದಾವಾಗ್ನಿಯಿಂದಲೂ, ಸಿಂಹವ್ಯಾಘ್ರಾದಿಗಳಿಂದಲೂ, ದಂಷ್ಟ್ರಾಯುಧವಿರುವ ಕಪಿಯೇ ಮೊದಲಾದವುಗಳಿಂದಲೂ, ಶೃಂಗಾಯುಧವುಳ್ಳ ಪಶ್ವಾದಿಗಳಿಂದಲೂ, ಮೃತರಾಗಿರುವರೋ ಅವರಿಗೋಸ್ಕರ ಈ ಪಿಂಡವನ್ನು ಕೊಡುವೆನು.

೩೯. ಯಾವ ಮನುಷ್ಯರು ನೇಣುಹಾಕಿಕೊಂಡು ಮೃತರಾಗಿರುವರೋ, ಯಾರು ವಿಷಶಸ್ತ್ರಾದಿಗಳಿಂದ ಮೃತರಾಗಿರುವರೋ, ಯಾರು ಆತ್ಮಹತ್ಯವನ್ನು ಮಾಡಿಕೊಂಡಿರುವರೋ ಅವರಿಗಾಗಿ ಪಿಂಡವನ್ನು ದಾನಮಾಡಬೇಕು.

೪೦. ಯಾವ ಪುರುಷರು ಘೋರಾರಣ್ಯದಲ್ಲಿಯೂ, ಮಾರ್ಗಮಧ್ಯದಲ್ಲಿಯೂ, ಉದ್ಯಾನವನದಲ್ಲಿಯೂ, ಮೃತರಾಗಿರುವರೋ ಮತ್ತು ಯಾರು ಭೂತಪ್ರೇತಪಿಶಾಚಾದಿಗಳಿಂದ ಮೃತರಾಗಿರುವರೋ ಅವರೆಲ್ಲರೂ ಈ ಪಿಂಡದಿಂದ ತೃಪ್ತರಾಗಲೆಂದು ಹೇಳಿಕೊಡಬೇಕು.

ರೌರವೇ ಚಾಂಧತಾಮಿಶ್ರೇ ಕಾಲಸೂತ್ರೇ ಚ ಯೇ ಗತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೪೧ ॥

ಅಸಿಪತ್ರವನೇ ಘೋರೇ ಕುಂಭೀಪಾಕೇಷು ಯೇ ಗತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೪೨ ॥

ಅನೇಕಯಾತನಾಸಂಸ್ಥಾಃ ಪ್ರೇತಲೋಕಂ ಚ ಯೇ ಗತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೪೩ ॥

ಅನೇಕಯಾತನಾಸಂಸ್ಥಾ ಯೇ ನೀತಾ ಯಮಕಿಂಕರೈಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೪೪ ॥

ನರಕೇಷು ಸಮಸ್ತೇಷು ಯಾತನಾಸು ಚ ಯೇ ಸ್ಥಿತಾಃ ।
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ ॥ ೪೫ ॥

---

೪೧. ಯಾವ ಪುರುಷರು ರೌರವ ಅಂಧತಾಮಿಸ್ರ ಕಾಲಸೂತ್ರಗಳೆಂಬ ನರಕಗಳಲ್ಲಿ ನಾನಾವಿಧ ದುಃಖಗಳನ್ನು ಅನುಭವಿಸುತ್ತಿರುವರೋ ಅವರನ್ನು ಉದ್ಧಾರ ಮಾಡುವುದಕ್ಕಾಗಿ ಈ ಪಿಂಡವು ಉಂಟಾಗಲೆಂದು ಹೇಳಿ ದಾನವನ್ನು ಕೊಡಬೇಕು.

೪೨. ಯಾವ ನಮ್ಮ ಬಂಧುಗಳು ಅಸಿಪತ್ರವನ ಘೋರವಾದ ಕುಂಭೀಪಾಕಗಳೆಂಬ ನರಕಗಳಲ್ಲಿ ನರಳುತ್ತಿರುವರೋ ಅವರು ಉದ್ಧಾರವಾಗುವುದಕ್ಕೋಸ್ಕರ ಈ ಪಿಂಡವನ್ನು ಕೊಡುತ್ತೇನೆ.

೪೩. ಯಾವ ಪುರುಷರು ಅನೇಕ ಯಾತನಾಸ್ಥಾನಗಳಲ್ಲಿ ನರಳುತ್ತಿರುವರೋ ಮತ್ತು ಯಮಲೋಕವನ್ನು ಹೊಂದಿರುವರೋ ಅವರು ಈ ಪಿಂಡದಿಂದ ಉದ್ಧೃತರಾಗಲೆಂದು ಹೇಳಿ ಪಿಂಡವನ್ನಿಡಬೇಕು.

೪೪. ಯಮಕಿಂಕರರು ಯಾರನ್ನು ಅನೇಕವಿಧವೂ, ಯಾತನಾರೂಪವೂ ಆದ ನರಕಗಳಿಗೆ ಒಯ್ದು ಪೀಡಿಸುತ್ತಿರುವರೋ ಅವರೆಲ್ಲರು ಈ ಪಿಂಡದಿಂದ ಉದ್ಧೃತರಾಗಲೆಂದು ಹೇಳಿ ದಾನ ಕೊಡಬೇಕು.

೪೫. ಯಾವ ಪುರುಷರು ಅನೇಕ ನರಕಗಳಲ್ಲಿಯೂ, ನಾನಾವಿಧ ಯಾತನಾಸ್ಥಾನಗಳಲ್ಲಿಯೂ ಇರುವರೋ ಅವರೆಲ್ಲರೂ ಈ ಪಿಂಡದಿಂದ ಉದ್ಧೃತರಾಗಲೆಂದು ಹೇಳಿ ಪಿಂಡದಾನವನ್ನು ಮಾಡಬೇಕು.

ಪಶುಯೋನಿಗತಾ ಯೇ ಚ ಪಕ್ಷಿಕೀಟಸರೀಸೃಪಾಃ ।
ಅಥವಾ ವೃಕ್ಷಯೋನಿಸ್ಥಾಸ್ತೇಭ್ಯಃ ಪಿಂಡಂ ದದಾಮ್ಯಹಂ ॥ ೪೬ ॥

ಜಾತ್ಯಂತರಸಹಸ್ರೇಷು ಭ್ರಮಂತಃ ಸ್ವೇನ ಕರ್ಮಣಾ ।
ಮಾನುಷ್ಯಂ ದುರ್ಲಭಂ ಯೇಷಾಂ ತೇಭ್ಯಃ ಪಿಂಡಂ ದದಾಮ್ಯಹಂ ॥ ೪೭ ॥

ದಿವ್ಯಂತರಿಕ್ಷಭೂಮಿಷ್ಠಾಃ ಪಿತರೋ ಬಾಂಧವಾದಯಃ ।
ಮೃತಾ ಅಸಂಸ್ಕೃತಾ ಯೇ ಚ ತೇಭ್ಯಃ ಪಿಂಡಂ ದದಾಮ್ಯಹಂ ॥ ೪೮ ॥

ಯೇ ಕೇಚಿತ್ಪ್ರೇತರೂಪೇಣ ವರ್ತಂತೇ ಪಿತರೋ ಮಮ ।
ತೇ ಸರ್ವೇ ತೃಪ್ತಿಮಾಯಾಂತು ಪಿಂಡೇನಾನೇನ ಸರ್ವದಾ ॥ ೪೯ ॥

---

೪೬. ಯಾವ ಪುರುಷರು ಪಶುಗಳಾಗಿ ಜನಿಸಿರುವರೋ, ಯಾರು ಪಕ್ಷಿಗಳು, ಕೀಟಗಳು, ಸರ್ಪಗಳು ಅಥವಾ ವೃಕ್ಷಲತಾಗುಲ್ಮಾದಿಗಳು ಇವುಗಳಾಗಿ ಜನಿಸಿರುವರೋ, ಅವರನ್ನು ಉದ್ಧರಿಸುವುದಕ್ಕಾಗಿ ಈ ಪಿಂಡವನ್ನು ಕೊಡುತ್ತೇವೆಂದು ಹೇಳಿ ದಾನ ಕೊಡಬೇಕು.

೪೭. ಯಾವ ಪುರುಷರು ತಮ್ಮ ಪೂರ್ವಾರ್ಜಿತಕರ್ಮಶೇಷದಿಂದ ಅನೇಕ ಸಹಸ್ರ ಪಶುಪಕ್ಷ್ಯಾದಿಪ್ರಾಣಿಗಳಲ್ಲಿ ಜನನಮರಣಗಳನ್ನು ಹೊಂದಿ ಕೊನೆಗೆ ಪುಣ್ಯ ವಿಶೇಷಗಳಿಂದ ಮನುಷ್ಯಜನ್ಮವು ಸಂಭವಿಸುತ್ತದೆಯೋ ಅಂತಹವರ ಉದ್ಧಾರಕ್ಕಾಗಿ ಈ ಪಿಂಡವು ಉಂಟಾಗಲೆಂದು ಹೇಳಿಕೊಡಬೇಕು.

೪೮. ಯಾವ ಪಿತೃಗಳು ಮತ್ತು ಬಂಧುಗಳು ಸ್ವರ್ಗ, ಅಂತರಿಕ್ಷ, ಭೂಮಿ ಇವುಗಳಲ್ಲಿ ಸತತವಾಗಿರುವರೋ, ಸಂಸ್ಕಾರವಿಲ್ಲದೇ ಮೃತರಾಗಿರುವರೋ ಅವರಿಗೆ ಈ ಪಿಂಡದಿಂದ ಉದ್ಧಾರವು ಉಂಟಾಗಲಿ.

೪೯. ಯಾವ ನನ್ನ ಪಿತೃಗಳು ಸಂಸ್ಕಾರವಿಲ್ಲದೇ ಪ್ರೇತರೂಪರಾಗಿರುವರೋ, ಅವರೆಲ್ಲರೂ ಈ ಪಿಂಡದಾನದಿಂದ ನಿತ್ಯತೃಪ್ತರಾಗಲೆಂದು ಹೇಳಿ ಪಿಂಡದಾನ ಮಾಡಬೇಕು.

ಯೇಽಬಾಂಧವಾ ಬಾಂಧವಾ ವಾ ಯೇಽನ್ಯಜನ್ಮನಿ ಬಾಂಧವಾಃ ।
ತೇಷಾಂ ಪಿಂಡೋ ಮಯಾ ದತ್ತೋ ಹ್ಯಕ್ಷಯ್ಯಮುಪತಿಷ್ಠತಾಂ ॥ ೫೦ ॥

ಪಿತೃವಂಶಮೃತಾ ಯೇ ಚ ಮಾತೃವಂಶೇ ಚ ಯೇ ಮೃತಾಃ ।
ಗುರುಶ್ವಶುರಬಂಧೂನಾಂ ಯೇ ಚಾನ್ಯೇ ಬಾಂಧವಾಃ ಮೃತಾಃ ॥ ೫೧ ॥

ಯೇ ಮೇ ಕುಲೇ ಲುಪ್ತಪಿಂಡಾಃ ಪುತ್ರದಾರವಿವರ್ಜಿತಾಃ ।
ಕ್ರಿಯಾಲೋಪಗತಾ ಯೇ ಚ ಜಾತ್ಯಂಧಾಃ ಪಂಗವಸ್ತಥಾ ॥ ೫೨ ॥

ವಿರೂಪಾ ಆಮಗರ್ಭಾಶ್ಚ ಜ್ಞಾತಾಜ್ಞಾತಾಃ ಕುಲೇ ಮಮ ।
ತೇಷಾಂ ಪಿಂಡೋ ಮಯಾ ದತೋ ಹ್ಯಕ್ಷಯ್ಯಮುಪತಿಷ್ಠತಾಂ ॥ ೫೩ ॥

ಆ ಬ್ರಹ್ಮಣೋ ಯೇ ಪಿತೃವಂಶಜಾತಾ ।
ಮಾತುಸ್ತಥಾ ವಂಶಭವಾ ಮದೀಯಾಃ ॥
ಕುಲದ್ವಯೇ ಯೇ ಮಮ ದಾಸಭೂತಾ ।
ಭೃತ್ಯಾಸ್ತಥೈವಾಶ್ರಿತಸೇವಕಾಶ್ಚ ॥ ೫೪ ॥

---

೫೦. ಯಾರು ಈ ಜನ್ಮದಲ್ಲಿ ಬಂಧುಗಳಾಗಿಯೂ, ಜನ್ಮಾಂತರಗಳಲ್ಲಿ ಅಬಂಧುಗಳಾಗಿಯೂ ಅಥವಾ ಅನ್ಯಜನ್ಮಗಳಲ್ಲಿ ಬಂಧುಗಳಾಗಿಯೂ ಇರುವರೋ ಅವರಿಗೋಸ್ಕರ ಕೊಟ್ಟಿರುವ ಈ ಪಿಂಡದಾನವು ಅಕ್ಷಯವಾಗಲೆಂದು ಹೇಳಿ ಪಿಂಡದಾನವನ್ನು ಮಾಡಬೇಕು.

೫೧–೫೩. ಯಾರು ಪಿತೃವಂಶದಲ್ಲಿಯೂ, ಮಾತೃವಂಶದಲ್ಲಿಯೂ, ಜನಿಸಿ ಮೃತರಾಗಿರುವರೋ ಮತ್ತು ಗುರುಗಳು, ಮಾವಂದಿರು, ಬಂಧುಗಳು ಇವರ ವಂಶಗಳಲ್ಲಿ ಜನಿಸಿ ಮೃತರಾಗುವರೋ ಮತ್ತು ಬಂಧುಗಳಾಗಿ ಮೃತರಾಗಿರುವರೋ, ಯಾರು ನಮ್ಮ ವಂಶದಲ್ಲಿ ಜನಿಸಿ ಲುಪ್ತಪಿಂಡವುಳ್ಳವರಾಗಿಯೂ, ಪತ್ನೀಪುತ್ರರಹಿತರಾಗಿಯೂ, ಕ್ರಿಯಾಲೋಪವುಳ್ಳವರಾಗಿಯೂ, ಜಾತ್ಯಂಧರಾಗಿಯೂ, ಕುಂಟರಾಗಿಯೂ, ವಿರೂಪಿಗಳಾಗಿಯೂ, ಗರ್ಭಮೃತರಾಗಿಯೂ, ಜ್ಞಾತಾಜ್ಞಾತರಾಗಿಯೂ, ಇರುವರೋ ಅವರಿಗೋಸ್ಕರ ನಾನು ಕೊಟ್ಟ ಈ ಪಿಂಡವು ಅಕ್ಷಯವಾಗಲೆಂದು ಹೇಳಿ ಪಿಂಡದಾನ ಮಾಡಬೇಕು.

೫೪–೫೫. ಬ್ರಹ್ಮಾದಿಯಾಗಿ ಪಿತೃವಂಶ, ಮಾತೃವಂಶ ಮತ್ತು ನನ್ನವಂಶ ಇವುಗಳಲ್ಲಿ ಯಾರು ಜನಿಸಿ, ಮೃತರಾಗಿರುವರೋ ನಮ್ಮ ಕುಲದ್ವಯಗಳಿಗೂ ಯಾರು

ಮಿತ್ರಾಣಿ ಶಿಷ್ಯಾಃ ಪಶವಶ್ಚ ವೃಕ್ಷಾ ।
ದೃಷ್ಟಾ ಹ್ಯದೃಷ್ಟಾಶ್ಚ ಕೃತೋಪಕಾರಾಃ ॥
ಜನ್ಮಾಂತರೇ ಯೇ ಮಮ ಸಂಗತಾಶ್ಚ ।
ತೇಭ್ಯಃ ಸ್ವಧಾ ಪಿಂಡಮಹಂ ದದಾಮಿ ॥ ೫೫ ॥

ಏತೈಶ್ಚ ಸರ್ವಮಂತ್ರೈಸ್ತು ಸ್ತ್ರೀಲಿಂಗಾಂತಂ ಸಮೂಹ್ಯ ಚ ।
ಪಿಂಡಾನ್ ದದ್ಯಾದ್ಯಥಾಪೂರ್ವಂ ಸ್ತ್ರೀಣಾಂ ಮಾತ್ರಾದಿಕಕ್ರಮಾತ್ ॥ ೫೬ ॥

ಸ್ವಗೋತ್ರೇ ಪರಗೋತ್ರೇ ವಾ ದಂಪತ್ಯೋಃ ಪಿಂಡಪಾತನಂ ।
ಅಪೃಥಂಙ್ ನಿಷ್ಫಲಂ ಶ್ರಾದ್ಧಂ ಪಿಂಡಂ ಚೋದಕತರ್ಪಣಂ ॥ ೫೭ ॥

ಪಿಂಡಪಾತ್ರೇ ತಿಲಾನ್ ಕ್ಷಿಪ್ತ್ವಾ ಪೂರಯಿತ್ವಾ ಶುಭೋದಕೈಃ ।
ಪರಿಷಿಚ್ಯ ತ್ರಿಧಾ ಸರ್ವಾನ್ ಪ್ರಣಿಪತ್ಯ ಸಮಾಪಯೇತ್ ॥ ೫೮ ॥

---

ದಾಸರೂ, ಭೃತ್ಯರೂ, ಆಶ್ರಿತರೂ, ಸೇವಕರೂ, ಮಿತ್ರರೂ, ಶಿಷ್ಯರೂ, ಪಶುಗಳೂ, ವೃಕ್ಷಗಳೂ, ಅಜ್ಞಾತೋಪಕಾರಿಗಳೂ ಜನ್ಮಾಂತರಗಳಲ್ಲಿ ಬಂಧುಗಳೂ, ಸಂಬಂಧಿಗಳೂ, ಆಗಿ ಜನಿಸಿ ಮೃತರಾಗಿರುವರೋ ಅವರೆಲ್ಲರಿಗೂ ಸ್ವಧಾಕಾರಪುರಸ್ಸರವಾಗಿ ಪಿಂಡವನ್ನು ದಾನಮಾಡಬೇಕು.

೫೬. ಪೂರ್ವೋಕ್ತವಾದ ಸರ್ವಮಂತ್ರಗಳಿಂದಲೂ, ಸಮಸ್ತಪಿತೃಗಳನ್ನೂ ಕರೆದು ಸ್ತ್ರೀಯನ್ನು ಸ್ತ್ರೀಲಿಂಗಾಂತಗಳಾದ ಶಬ್ದಗಳಿಂದ ಕರೆದು ಮಂತ್ರೋಚ್ಚಾರಪೂರ್ವಕವಾಗಿಯೂ, ಕ್ರಮವಾಗಿಯೂ ಪಿಂಡದಾನವನ್ನು ಮಾಡಬೇಕು.

೫೭. ಸ್ವಗೋತ್ರ ಪರಗೋತ್ರಗಳಲ್ಲಿ ಜನಿಸಿದ ದಂಪತಿಗಳಿಗೆ ಶ್ರಾದ್ಧ, ಪಿಂಡದಾನ, ತಿಲೋದಕ ಇವುಗಳನ್ನು ಒಟ್ಟಿಗೆ ಏಕಕಾಲದಲ್ಲಿ ಮಾಡಿದರೆ ನಿಷ್ಫಲವಾಗುವುದು. ಆದುದರಿಂದ ಪ್ರತ್ಯೇಕಪ್ರತ್ಯೇಕವಾಗಿ ಪಿಂಡಾದಿಗಳನ್ನು ದಾನಮಾಡಿದರೆ ಸಫಲವಾಗುವುದು.

೫೮. ಪಿಂಡಗಳನ್ನು ಮಾಡಿದ ಪಾತ್ರೆಯಲ್ಲಿ ಎಳ್ಳನ್ನು ಎರಚಿ ಶುದ್ಧಜಲವನ್ನು ತುಂಬಿ, ಸರ್ವಪಿಂಡಗಳಿಗೂ ಮೂರಾವರ್ತಿ ಪರಿಷೇಚನಮಾಡಿ ನಮಸ್ಕರಿಸಿ, ಭಕ್ಷ್ಯಭೋಜ್ಯಾದಿಗಳನ್ನು ಸಮರ್ಪಿಸಬೇಕು.

ಪಿತ್ರ್ಯಾನ್ ವಿಸೃಜ್ಯ ಚಾಚಮ್ಯ ಸಾಕ್ಷಿಣಃ ಶ್ರಾವಯೇತ್ಸುರಾನ್ ।
ಸಾಕ್ಷಿಣಃ ಸಂತು ಮೇ ದೇವಾ ಬ್ರಹ್ಮೇಶಾನಾದಯಸ್ತಥಾ ॥
ಮಯಾ ಗಯಾಂ ಸಮಾಸಾದ್ಯ ಪಿತೄಣಾಂ ನಿಷ್ಕೃತಿಃ ಕೃತಾ ॥ ೫೯ ॥

ಆಗತೋಽಸ್ಮಿ ಗಯಾಂ ದೇವ ಪಿತೃಕಾರ್ಯೇ ಗದಾಧರ ।
ತ್ವಮೇವ ಸಾಕ್ಷೀ ಭಗವನ್ನನೃಣೋಽಹಮೃಣತ್ರಯಾತ್ ॥ ೬೦ ॥

ಸರ್ವಸ್ಥಾನೇಷು ಚೈವಂ ಸ್ಯಾತ್ಪಿಂಡದಾನಂ ತು ನಾರದ ।
ಪ್ರೇತಪರ್ವತಮಾರಭ್ಯ ಕುರ್ಯಾತ್ತೀರ್ಥೇಷು ಚ ಕ್ರಮಾತ್ ॥ ೬೧ ॥

ತಿಲಮಿಶ್ರಾಂಸ್ತತಃ ಸಕ್ತೂನ್ನಿಃಕ್ಷಿಪೇತ್ಪ್ರೇತಪರ್ವತೇ ।
ಅಪಸವ್ಯೇನ ದೇವರ್ಷೇ ದಕ್ಷಿಣಾಭಿಮುಖೇ ನ ಚ ॥ ೬೨ ॥

---

೫೯. ಹೀಗೆ ಶ್ರದ್ಧೆಯಿಂದ ಪಿತೃಕಾರ್ಯಗಳನ್ನು ಮಾಡಿ ಪಿತೃಗಳನ್ನು ವಿಸರ್ಜಿಸಿ, ಆಚಮನವನ್ನು ಮಾಡಿ ಓ ದೇವತೆಗಳಿರಾ, ನೀವು ನಾನು ಮಾಡಿದ ಈ ಕಾರ್ಯಗಳಲ್ಲಿ ಸಾಕ್ಷಿಗಳಾಗಿರಬೇಕೆಂದು ದೇವತೆಗಳನ್ನು ಪ್ರಾರ್ಥಿಸಬೇಕು. ಬ್ರಹ್ಮನೇ ಮೊದಲಾದ ದೇವತೆಗಳು ನನಗೆ ಸಾಕ್ಷಿಯಾಗಿರಲಿ, ನಾನು ಈ ಗಯಾ ಕ್ಷೇತ್ರಕ್ಕೆ ಬಂದು ಪಿತೃಕಾರ್ಯವನ್ನು ಮಾಡಿರುವುದರಿಂದ ಋಣತ್ರಯಗಳಿಂದ ಮುಕ್ತನಾಗಿರುವೆನೆಂದು ಹೇಳಬೇಕು.

೬೦. ಭಗವಂತನೂ, ಸ್ವಾಮಿಯೂ ಆದ ಗದಾಧರನೇ, ನಾನು ಈ ಗಯಾ ಕ್ಷೇತ್ರಕ್ಕೆ ಬಂದು ಪಿತೃಕಾರ್ಯವನ್ನು ಮಾಡಿರುತ್ತೇನೆ. ಈ ವಿಷಯದಲ್ಲಿ ನೀನೇ ಸಾಕ್ಷಿಯಾಗಿರುತ್ತೀಯೆ, ಆದುದರಿಂದ ನನ್ನನ್ನು ಋಣತ್ರಯಗಳಿಂದ ಮೋಚನೆಮಾಡಿಸೆಂದು ಶ್ರೀಗದಾಧರನನ್ನು ಪ್ರಾರ್ಥಿಸಬೇಕು.

೬೧. ಎಲೈ ನಾರದಮುನಿಯೇ, ಪ್ರೇತಪರ್ವತ ಮೊದಲುಗೊಂಡು ಸರ್ವ ತೀರ್ಥಕ್ಷೇತ್ರಗಳಲ್ಲಿಯೂ ನಾನು ನಿರೂಪಿಸಿರುವ ಕ್ರಮದಿಂದಲೇ ಪಿತೃಕಾರ್ಯವನ್ನು ಮಾಡಿದರೆ ಸಂಪೂರ್ಣ ಫಲವು ಪ್ರಾಪ್ತವಾಗುವುದು.

೬೨. ಎಲೈ ದೇವರ್ಷಿಯಾದ ನಾರದನೇ, ಪ್ರೇತಪರ್ವತಾದಿಗಳಲ್ಲಿ ಎಳ್ಳಿನಿಂದ ಮಿಶ್ರವಾದ ಹಿಟ್ಟನ್ನು ದಕ್ಷಿಣಾಭಿಮುಖನಾಗಿ ಕುಳಿತು ಅಪಸವ್ಯದಿಂದ ಎರಚಬೇಕು.

ಯೇ ಕೇಚಿತ್ಪ್ರೇತರೂಪೇಣ ವರ್ತಂತೇ ಪಿತರೋ ಮಮ ।
ತೇ ಸರ್ವೇ ತೃಪ್ತಿಮಾಯಾಂತು ಶುಭಿಸ್ತಿಲಮಿಶ್ರಿತೈಃ ॥ ೬೩ ॥

ಆಬ್ರಹ್ಮಸ್ತಂಬಪರ್ಯಂತಂ ಯತ್ಕಿಂಚಿತ್ಸಚರಾಚರಂ ।
ಮಯಾ ದತ್ತೇನ ತೋಯೇನ ತೃಪ್ತಿಮಾಯಾಂತು ಸರ್ವಶಃ ॥ ೬೪ ॥

ಪ್ರೇತತ್ವಾಚ್ಚ ವಿಮುಕ್ತಾಃ ಸ್ಯುಃ ಪಿತರಸ್ತಸ್ಯ ನಾರದ ।
ಪ್ರೇತತ್ವಂ ತಸ್ಯ ಮಾಹಾತ್ಮ್ಯಾತ್ಕುಲೇ ಚಾಪಿ ನ ಜಾಯತೇ ॥ ೬೫ ॥

ನಾಮ್ನಾ ಪ್ರೇತಶಿಲಾ ಖ್ಯಾತಾ ಗಯಾಶಿರಸಿ ಮುಕ್ತಯೇ ।
ತೀರ್ಥಮಂತ್ರಾದಿರೂಪೇಣ ಸ್ಥಿತಶ್ಚಾದಿಗದಾಧರಃ ॥ ೬೬ ॥

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ " ಗಯಾಮಾಹಾತ್ಮ್ಯಂ "**
**ನಾಮಾಷ್ಟಚತ್ವಾರಿಂಶೋಽಧ್ಯಾಯಃ**

---

೬೩. ಯಾವ ನನ್ನ ಪಿತೃಗಳು ಪ್ರೇತರಾಗಿರುವರೋ, ಅವರೆಲ್ಲರೂ ಈ ತಿಲ ಮಿಶ್ರವಾದ ಹಿಟ್ಟಿನಿಂದ ತೃಪ್ತಿಯನ್ನು ಹೊಂದಲೆಂದು ಪ್ರಾರ್ಥಿಸಬೇಕು.

೬೪. ಬ್ರಹ್ಮಾದಿಯಾಗಿ ಸ್ತಂಬ ಪರ್ಯಂತಗಳೂ, ಚರಾಚರಾತ್ಮಕಗಳೂ ಆದ ಯಾವ ಸರ್ವಪ್ರಾಣಿಗಳಿವೆಯೋ, ಅವುಗಳೆಲ್ಲವೂ ಈ ನನ್ನ ತಿಲೋದಕದಿಂದ ಸಂಪೂರ್ಣವಾಗಿ ತೃಪ್ತಿಯನ್ನು ಹೊಂದಲೆಂದು ಬೇಡಿಕೊಳ್ಳಬೇಕು,

೬೫. ಎಲೈ ನಾರದನೇ, ಯಾವ ಪುರುಷನು ಈ ರೀತಿಯಾಗಿ ಗಯಾ ಶ್ರಾದ್ಧಾದಿಗಳನ್ನು ಮಾಡುವನೋ ಅವನ ಪಿತೃಗಳು ಪ್ರೇತತ್ವದಿಂದ ಮುಕ್ತರಾಗುವರು. ಈ ಗಯಾಕ್ಷೇತ್ರದ ಮಹಿಮೆಯಿಂದ ಅವನ ವಂಶದವರಿಗೆ ಪ್ರೇತತನವು ಉಂಟಾಗುವುದಿಲ್ಲ

೬೬. ಪ್ರಜೆಗಳಿಗೆ ಮುಕ್ತಿಯನ್ನು ಕೊಡುವುದಕ್ಕಾಗಿ ಪ್ರೇತಶಿಲೆಯು ಗಯಾಸುರನ ಶಿರಸ್ಸಿನಲ್ಲಿ ಹೀಗೆ ಪ್ರಖ್ಯಾತವಾಗಿದೆ. ಅದರಲ್ಲಿ ಶ್ರೀಹರಿಯು ತೀರ್ಥಮಂತ್ರಾದಿ ರೂಪದಿಂದಲೂ, ಗದಾಧರನ ರೂಪದಿಂದಲೂ, ಸನ್ನಿಹಿತವಾಗಿ ಸಕಲೇಷ್ಟಾರ್ಥಗಳನ್ನೂ ಕೊಡುವನೆಂದು ಸನತ್ಕುಮಾರನು ನಾರದನಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಗಯಾಮಹಿಮೆ "ಯೆಂಬ
ನಲವತ್ತೆಂಟನೆಯ ಅಧ್ಯಾಯವು ಸಮಾಪ್ತವಾದುದು.



## ನಲವತ್ತೆಂಟನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿಯೂ ಕೂಡ, ಗಯಾಮಹಿಮೆಗಳೇ ವಿಶೇಷವಾಗಿ ವರ್ಣಿತವಾಗಿವೆ.

ಪುರುಷರು ಸ್ಥಿರಮನಸ್ಕರೂ, ಜಿತೇಂದ್ರಿಯರೂ, ಶುದ್ಧರೂ, ನಿಯಮವಂತರೂ ಆಗಿ ಗಯಾಕ್ಷೇತ್ರದಲ್ಲಿ ಪಿತೃಕಾರ್ಯಗಳನ್ನು ಮಾಡಿದರೆ ಸಂಪೂರ್ಣಫಲಗಳನ್ನು ಹೊಂದುವರು. ಗಯೆಯಲ್ಲಿ ಮೊದಲು ಕವ್ಯವಾಹ, ಅನಲ, ಸೋಮ, ಯಮ, ಅರ್ಯಮಾ, ಅಗ್ನಿಷ್ವಾತ್ತ, ಬರ್ಹಿಷದ, ಸೋಮಪ, ಪಿತೃದೇವತೆಗಳು ಮತ್ತು ಗದಾಧರ ಇವರನ್ನು ಪ್ರಾರ್ಥಿಸಬೇಕು. ತಿಲವನ್ನು ಎರಚುವುದರಿಂದ ಶ್ರಾದ್ಧಕಾಲದಲ್ಲಿ ರಾಕ್ಷಸರು ಓಡಿಹೋಗುವರು. ಬ್ರಹ್ಮಾದಿಯಾಗಿ ಸಮಸ್ತದೇವತೆಗಳೂ ಈ ಪಿತೃಕಾರ್ಯದಿಂದ ತೃಪ್ತಿಹೊಂದಲಿ ಮತ್ತು ಈ ಪಿತೃಕಾರ್ಯವು ಅಕ್ಷಯವಾಗಲೆಂದು ಪ್ರಾರ್ಥಿಸಬೇಕು. ಪಿತೃಪಿತಾಮಹಾದಿ ಸಮಸ್ತ ಪಿತೃಗಳಿಗೂ ಕೊಟ್ಟ ತಿಲೋದಕಾದಿಗಳು ಅಕ್ಷಯವಾಗಲೆಂದು ಬೇಡಬೇಕು. ನಮ್ಮ ವಂಶದಲ್ಲಿ ಜನಿಸಿ ಅಗ್ನಿ, ಜಲ, ಚೋರ, ಪಿಶಾಚ, ರಾಕ್ಷಸ, ಭೂತಪ್ರೇತಾದಿಗಳೂ ಇವುಗಳಿಂದ ಮೃತರಾದವರೂ, ರೌರವಾದಿ ನರಕಗಳಲ್ಲಿ ನರಳುತ್ತಿರುವವರೂ, ಜಾತ್ಯಂಧರೂ, ಪಶು, ಪಕ್ಷಿ, ಸರ್ಪ, ಮೃಗಾದಿ ನಾನಾ ಜಾತಿಗಳಲ್ಲಿ ಜನಿಸಿ, ದುಃಖಿಸುವವರೂ, ಭೂಮ್ಯಂತರಿಕ್ಷಾದಿಗಳಲ್ಲಿ ಮೃತರಾಗಿ ದಿಕ್ಕಿಲ್ಲದವರೂ ಈ ನಾನು ಕೊಟ್ಟ ಪಿಂಡೋದಕಗಳಿಂದ ತೃಪ್ತರಾಗಲೆಂದು ಗದಾಧರಮೂರ್ತಿಯನ್ನು ಪ್ರಾರ್ಥಿಸಬೇಕು. ಬ್ರಹ್ಮಾದಿಯಾಗಿ ಕ್ರಿಮಿಕೀಟಾದಿಗಳವರೆಗೂ ಇರುವ ಸರ್ವಪ್ರಾಣಿಗಳೂ ಈ ತಿಲೋದಕಾದಿಗಳಿಂದ ತೃಪ್ತಿಯನ್ನು ಹೊಂದಲೆಂದು ಗದಾಧರನನ್ನು ಪ್ರಾರ್ಥಿಸಿದರೆ ಅನಂತಫಲವು ಲಭಿಸುವುದೆಂಬ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.



—: ಹರಿಃ ಓಂ :—

— ಶ್ರೀ ವೇದವ್ಯಾಸಾಯ ನಮಃ —

# ಶ್ರೀಮದ್ವಾಯುಮಹಾಪುರಾಣಂ

## ಏಕೋನಪಂಚಾಶದಧ್ಯಾಯಃ

॥ ಸನತ್ಕುಮಾರ ಉವಾಚ ॥

ಆದೌ ತು ಪಂಚತೀರ್ಥೇಷು ಚೋತ್ತರೇ ಮಾನಸೇ ವಿಧಿಃ ।
ಆಚಮ್ಯ ಕುಶಹಸ್ತೇನ ಶಿರಶ್ಚಾಭ್ಯುಕ್ಷ್ಯ ವಾರಿಣಾ ॥ ೧ ॥

ಉತ್ತರಂ ಮಾನಸಂ ಗಚ್ಛೇನ್ಮಂತ್ರೇಣ ಸ್ನಾನಮಾಚರೇತ್ ।
ಉತ್ತರೇ ಮಾನಸೇ ಸ್ನಾನಂ ಕರೋಮ್ಯಾತ್ಮವಿಶುದ್ಧಯೇ ॥ ೨ ॥

---

## ನಲವತ್ತೊಂಭತ್ತನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಪುರುಷನು ಆದಿಯಲ್ಲಿ ಪಂಚತೀರ್ಥಗಳಲ್ಲಿಯೂ ಶ್ರೇಷ್ಠವಾದ ಉತ್ತರಮಾನಸ ತೀರ್ಥದಲ್ಲಿಯೂ ಸ್ನಾನ, ಜಪ, ತಪ, ತಪಸ್ಸುಗಳನ್ನೂ ಮಾಡಿ, ಪವಿತ್ರವನ್ನು ಧರಿಸಿಕೊಂಡು, ಆಚಮನ ಶಿರಸ್ಸಿಗೆ ಪ್ರೋಕ್ಷಣಾದಿಗಳನ್ನೂ ಪಿತೃಕಾರ್ಯವನ್ನೂ ಮಾಡಬೇಕು.

೨. ಹೀಗೆ ಪುರುಷನು ಉತ್ತರಮಾನಸಸರೋವರಕ್ಕೆ ಹೋಗಬೇಕು, ತರುವಾಯ ಮಂತ್ರಪೂರ್ವಕವಾಗಿ ಸ್ನಾನವನ್ನು ಮಾಡಬೇಕು: ಆತ್ಮಶುದ್ಧಿಗಾಗಿ ಉತ್ತರಮಾನಸ ಸರಸ್ಸಿನಲ್ಲಿ ಸ್ನಾನವನ್ನು ಮಾಡುತ್ತೇನೆಂದು ಸಂಕಲ್ಪವನ್ನು ಮಾಡಬೇಕು.

ಸೂರ್ಯಲೋಕಾದಿಸಂಸಿದ್ಧಿಸಿದ್ಧಯೇ ಪಿತೃಮುಕ್ತಯೇ ।
ದೇವಾದೀಂಸ್ತರ್ಪಯಿತ್ವಾಥ ಶ್ರಾದ್ಧಂ ಕುರ್ಯಾತ್ಸಪಿಂಡಕಂ ॥ ೩ ॥

ಮಾನಸಂ ಹಿ ಸರೋ ಹ್ಯತ್ರ ತಸ್ಮಾದುತ್ತರಮಾನಸಂ ।
ಸೂರ್ಯಂ ನತ್ವಾರ್ಚಯಿತ್ವಾಥ ಸೂರ್ಯಲೋಕಂ ನಯೇತ್ಪಿತೄನ್ ॥ ೪ ॥

ನಮೋ ಭಗವತೇ ಭರ್ತ್ರೇ ಸೋಮಭೌಮಜ್ಞರೂಪಿಣೇ ।
ಜೀವಭಾರ್ಗವಸೌರೇಯ ರಾಹುಕೇತುಸ್ವರೂಪಿಣೇ ॥ ೫ ॥

ಉತ್ತರಾನ್ಮಾನಸಾನ್ಮೌನೀ ವ್ರಜೇದ್ದಕ್ಷಿಣಮಾನಸಂ ।
ಉದೀಚೀ ತೀರ್ಥಮಿತ್ಯುಕ್ತಂ ತತ್ರೌದೀಚ್ಯಂ ವಿಮುಕ್ತಿದಂ ॥
ಅತ್ರ ಸ್ನಾತೋ ದಿವಂ ಯಾತಿ ಸ್ವಶರೀರೇಣ ಮಾನವಃ ॥ ೬ ॥

---

೩. ಹೀಗೆ ಮಾಡಿದರೆ ಸೂರ್ಯನ ಲೋಕವೇ ಮೊದಲಾದ ಲೋಕಪ್ರಾಪ್ತಿಗಾಗಿಯೂ, ಪಿತೃಗಳಿಗೆ ಮುಕ್ತಿಗಾಗಿಯೂ, ದೇವಋಷ್ಯಾದಿಗಳಿಗೆ ತರ್ಪಣವನ್ನು ಕೊಟ್ಟನಂತರ ಪಿಂಡದಾನಪೂರ್ವಕವಾಗಿ ಶ್ರಾದ್ಧಕ್ರಿಯೆಯನ್ನು ಮಾಡಬೇಕು.

೪. ಎಲ್ಲಿ ಮಾನಸಸರೋವರವಿರುತ್ತದೆಯೋ ಅದಕ್ಕೆ ಉತ್ತರದಿಗ್ಭಾಗದಲ್ಲಿ ಉತ್ತರಮಾನಸ ಸರಸ್ಸು ಇದೆ. ಅಲ್ಲಿ ಸೂರ್ಯನನ್ನು ನಮಸ್ಕರಿಸಿ, ಅರ್ಚನೆಯನ್ನು ಮಾಡಿದರೆ ಪಿತೃಗಳಿಗೆ ಸೂರ್ಯಲೋಕಪ್ರಾಪ್ತಿಯಾಗುವುದು.

೫. ಷಡ್ಗುಣ್ಯೈಶ್ವರ್ಯಸಂಪನ್ನನೂ, ಸ್ವಾಮಿಯೂ, ಚಂದ್ರ, ಮಂಗಳ, ರಾಹು, ಕೇತುಗಳೇ ಮೊದಲಾದ ನವಗ್ರಹಗಳ ಸ್ವರೂಪಿಯೂ ಆದ ಸೂರ್ಯದೇವನಿಗೆ ಅನಂತ ವಂದನೆಗಳನ್ನು ಸಮರ್ಪಿಸಬೇಕು.

೬. ಪುರುಷರು ಉತ್ತರಮಾನಸಸರೋವರದಕಾರ್ಯಗಳನ್ನು ಮುಗಿಸಿಕೊಂಡು ಮೌನದಿಂದ ದಕ್ಷಿಣಸರೋವರಕ್ಕೆ ಹೋಗಬೇಕು. ಅಲ್ಲಿ ಉದೀಚೀತೀರ್ಥವೆಂದು ಪ್ರಖ್ಯಾತವೂ, ಪಿತೃಗಳಿಗೆ ಮುಕ್ತಿದಾಯಕವೂ ಆದ ತೀರ್ಥವಿರುತ್ತದೆ. ಅದರಲ್ಲಿ ಸ್ನಾನಪಾನಾದಿಗಳನ್ನು ಮಾಡಿದವರು ಸಶರೀರರಾಗಿ ಸ್ವರ್ಗಕ್ಕೆ ಹೋಗುವರು.

ಮಧ್ಯೇ ಕನಖಲಂ ತೀರ್ಥಂ ತ್ರಿಷು ಲೋಕೇಷು ವಿಶ್ರುತಂ ।
ಸ್ನಾತಃ ಕನಕವದ್ಭಾತಿ ನರೋ ಯಾತಿ ಪ್ರವಿತ್ರತಾಂ ॥ ೭ ॥

ತಸ್ಯ ದಕ್ಷಿಣಭಾಗೇ ಚ ತೀರ್ಥಂ ದಕ್ಷಿಣಮಾನಸಂ ।
ಅತಃ ಕನಖಲಂ ಲೋಕೇ ಖ್ಯಾತಂ ತೀರ್ಥಮನುತ್ತಮಂ ॥ ೮ ॥

ದಕ್ಷಿಣೇ ಮಾನಸೇ ಚೈವ ತೀರ್ಥತ್ರಯಮುದಾಹೃತಂ ।
ಸ್ನಾತ್ವಾ ತೇಷು ವಿಧಾನೇನ ಕುರ್ಯಾಚ್ಛ್ರಾದ್ಧಂ ಪೃಥಕ್ ಪೃಥಕ್ ॥ ೯ ॥

ದಕ್ಷಿಣೇ ಮಾನಸೇ ಸ್ನಾನಂ ಕರೋಮ್ಯಾತ್ಮವಿಶುದ್ಧಯೇ ।
ಸೂರ್ಯಲೋಕಾದಿಸಂಸಿದ್ಧಿಸಿದ್ಧಯೇ ಪಿತೃಮುಕ್ತಯೇ ॥ ೧೦ ॥

೭. ಇವುಗಳ ಮಧ್ಯದಲ್ಲಿ ಮೂರುಲೋಕಗಳಲ್ಲಿ ಪ್ರಖ್ಯಾತವಾದ ಕನಖಲವೆಂಬ ತೀರ್ಥವು ಅತಿಪ್ರಖ್ಯಾತವಾಗಿಯೂ, ಉತ್ತಮವಾಗಿಯೂ ಇರುತ್ತದೆ. ಆ ತೀರ್ಥಗಳಲ್ಲಿ ಸ್ನಾನಮಾಡಿದ ಪುರುಷನು ಸುವರ್ಣದಂತೆ ಕಾಂತಿಯುಕ್ತನಾಗುವನು.

೮. ಆ ಕನಖಲತೀರ್ಥದ ದಕ್ಷಿಣದಿಗ್ಭಾಗದಲ್ಲಿ ದಕ್ಷಿಣಮಾನಸಸರಸ್ಸು ಸುಪ್ರಸಿದ್ಧವಾಗಿದೆ. ಅದಕ್ಕಿಂತಲೂ ಕನಖಲವೆಂಬ ತೀರ್ಥವು ಲೋಕದಲ್ಲಿ ಪ್ರಖ್ಯಾತವಾಗಿಯೂ, ಅತ್ಯುತ್ತಮವಾಗಿಯೂ, ಇರುತ್ತದೆ.

೯. ದಕ್ಷಿಣಮಾನಸಸರೋವರವು ಯಾತ್ರಾಸ್ಥಳವೆಂದು ಪ್ರಖ್ಯಾತವಾಗಿದೆ. ಹೀಗೆ ಮೂರು ಸರೋವರಗಳೂ ಪ್ರಸಿದ್ಧಗಳೇ ಆಗಿವೆ. ಅವುಗಳಲ್ಲಿ ಸ್ನಾನವನ್ನು ಮಾಡಿ ಶಾಸ್ತ್ರೋಕ್ತಕ್ರಮವಾಗಿಯೂ, ಪ್ರತ್ಯೇಕಪ್ರತ್ಯೇಕವಾಗಿಯೂ ಶ್ರಾದ್ಧವನ್ನು ಮಾಡಬೇಕು.

೧೦. ಆ ದಕ್ಷಿಣಮಾನಸಸರೋವರದಲ್ಲಿ ಆತ್ಮಶುದ್ಧಿಗಾಗಿಯೂ, ಸೂರ್ಯಲೋಕಪ್ರಾಪ್ತಿಗಾಗಿಯೂ, ಪಿತೃಗಳಿಗೆ ಮುಕ್ತಿಯನ್ನು ಕೊಡುವುದಕ್ಕಾಗಿಯೂ ಸ್ನಾನವನ್ನು ಮಾಡುತ್ತೇನೆಂದು ಸಂಕಲ್ಪವನ್ನು ಮಾಡಿ ಕಾರ್ಯವನ್ನು ಮಾಡಬೇಕು.

ಬ್ರಹ್ಮಹತ್ಯಾದಿಪಾಪೌಘಯಾತನಾಯಾ ವಿಮುಕ್ತಯೇ ।
ದಿವಾಕರ ಕರೋಮೀಹ ಸ್ನಾನಂ ದಕ್ಷಿಣಮಾನಸೇ ॥ ೧೧ ॥

ನಮಾಮಿ ಸೂರ್ಯಂ ತೃಪ್ತ್ಯರ್ಥಂ ಪಿತೄಣಾಂ ತಾರಣಾಯ ಚ ।
ಪುತ್ರಪೌತ್ರಧನೈಶ್ವರ್ಯಾಯುರಾರೋಗ್ಯವೃದ್ಧಯೇ ॥ ೧೨ ॥

ಅನೇನ ಸ್ನಾನಪೂಜಾದಿ ಕೃತ್ವಾ ಶ್ರಾದ್ಧಂ ಸಪಿಂಡಕಂ ।
ಕೃತ್ವಾ ನತ್ವಾ ಚ ಮೌನ್ಯರ್ಕಮಿಮಂ ಮಂತ್ರಮುದೀರಯೇತ್ ॥ ೧೩ ॥

ಫಲ್ಗುತೀರ್ಥಂ ವ್ರಜೇತ್ತತ್ರ ಸ್ನಾತ್ವಾ ಸರ್ವತೀರ್ಥೋತ್ತಮೋತ್ತಮಂ ।
ಮುಕ್ತಿರ್ಭವತಿ ಕರ್ತೄಣಾಂ ಪಿತೄಣಾಂ ಶ್ರಾದ್ಧತಃ ಸದಾ ॥ ೧೪ ॥

---

೧೧. ಎಲೈ ಸೂರ್ಯದೇವನೇ, ಬ್ರಹ್ಮಹತ್ಯಾದಿ ಸಕಲಪಾಪಪರಿಹಾರಕ್ಕಾಗಿಯೂ, ಸಕಲಯಾತನಾಪರಿಹಾರಕ್ಕಾಗಿಯೂ, ಈ ದಕ್ಷಿಣಮಾನಸಸರೋವರದಲ್ಲಿ ಸ್ನಾನವನ್ನು ಮಾಡುತ್ತೇನೆಂದು ಅವನನ್ನು ಪ್ರಾರ್ಥಿಸಿ, ಸ್ನಾನಾದಿಗಳನ್ನು ಮಾಡಬೇಕು.

೧೨. ಪಿತೃಗಳಿಗೆ ತೃಪ್ತಿಗಾಗಿಯೂ, ಉದ್ಧಾರಕ್ಕಾಗಿಯೂ, ಪುತ್ರರು, ಪೌತ್ರರು, ಧನ, ಐಶ್ವರ್ಯ, ಆಯುಷ್ಯ, ಆರೋಗ್ಯ ಇವುಗಳ ಸಿದ್ಧಿಗಾಗಿಯೂ ಸ್ನಾನವನ್ನು ಮಾಡುತ್ತೇನೆಂದು ಹೇಳಿ ಪ್ರಾರ್ಥಿಸಬೇಕು.

೧೩. ಹೀಗೆ ಸೂರ್ಯನಿಗೆ ನಮಸ್ಕರಿಸಿ, ಮೌನದಿಂದ ಸ್ನಾನ, ಜಪ, ತಪ, ಪೂಜೆ, ಶ್ರಾದ್ಧ, ಪಿಂಡದಾನ ಇವುಗಳನ್ನು ಮಾಡಿ ಮೇಲೆ ಹೇಳಿದ ಮಂತ್ರಗಳನ್ನು ಜಪಿಸಬೇಕು.

೧೪. ತರುವಾಯ ಸರ್ವತೀರ್ಥೋತ್ತಮವಾದ ಫಲ್ಗುತೀರ್ಥಕ್ಕೆ ಹೋಗಿ ಸ್ನಾನವನ್ನು ಮಾಡಿ ಶ್ರಾದ್ಧಾದಿಗಳನ್ನು ಮಾಡಬೇಕು. ಅದರಿಂದ ಪುರುಷರಿಗೂ ಪಿತೃಗಳಿಗೂ ಶಾಶ್ವತವಾದ ಮುಕ್ತಿಯು ದೊರೆಯುವುದು.

ಬ್ರಹ್ಮಣಾ ಪ್ರಾರ್ಥಿತೋ ವಿಷ್ಣುಃ ಫಲ್ಗುಕೋ ಹ್ಯಭವತ್ಪುರಾ ।
ದಕ್ಷಿಣಾಗ್ನೌ ಹುತಂ ತತ್ರ ತದ್ರಜಃ ಫಲ್ಗುತೀರ್ಥಕಂ ॥ ೧೫ ॥

ತಸ್ಮಿನ್ಫಲತಿ ಫಲ್ಗ್ವಾಂ ಗೌಃ ಕಾಮಧೇನುರ್ಜಲಂ ಮಹೀ ।
ದೃಷ್ಟೇರಂತರ್ಗತಂ ಯಸ್ಮಾತ್ಫಲ್ಗುತೀರ್ಥಂ ನ ನಿಷ್ಫಲಂ ॥ ೧೬ ॥

ತೀರ್ಥಾನಿ ಯಾನಿ ಸರ್ವಾಣಿ ಭುವನೇಷ್ವಖಿಲೇಷ್ವಪಿ ।
ತಾನಿ ಸ್ನಾತುಂ ಸಮಾಯಾಂತಿ ಫಲ್ಗುತೀರ್ಥಂ ಸುರೈಃ ಸಹ ॥ ೧೭ ॥

ಗಂಗಾ ಪಾದೋದಕಂ ವಿಷ್ಣೋಃ ಫಲ್ಗುರ್ಹ್ಯಾದಿ ಗದಾಧರಃ ।
ಸ್ವಯಂ ಹಿ ದ್ರವರೂಪೇಣ ತಸ್ಮಾದ್ಗಂಗಾಧಿಕಂ ವಿದುಃ ॥ ೧೮ ॥

---

೧೫. ಪೂರ್ವದಲ್ಲಿ ಬ್ರಹ್ಮದೇವನು ಶ್ರೀಮಹಾವಿಷ್ಣುವನ್ನು ಪ್ರಾರ್ಥಿಸಿಕೊಳ್ಳಲಾಗಿ ಶ್ರೀಹರಿಯು ಸೂಕ್ಷ್ಮರೂಪದಿಂದ ಆ ತೀರ್ಥಕ್ಕೆ ಬಂದನು. ಬ್ರಹ್ಮದೇವನು ದಕ್ಷಿಣಾಗ್ನಿಯಲ್ಲಿ ಹೋಮಮಾಡಲಾಗಿ ಆ ಧೂಳುಗಳೆಲ್ಲರೂ ಫಲ್ಗುತೀರ್ಥದಲ್ಲಿ ಬಿದ್ದು ಮಿಶ್ರವಾಗಿದೆ

೧೬. ಆ ಫಲ್ಗುತೀರ್ಥದಲ್ಲಿ ಕಾಮಧೇನು ಕಲ್ಪವೃಕ್ಷಗಳು ಅಂತರ್ಗತವಾಗಿರುವುದರಿಂದ ಅದರ ಮಹಿಮೆಯು ಅಪರಮಿತವಾಗಿದೆ. ಅದರಲ್ಲಿ ಮಾಡಿದ ಪಿತೃಕಾರ್ಯಾದಿಗಳು ಮಹಾಫಲಪ್ರದವಾಗಿವೆ. ಅವು ಎಂದಿಗೂ ವ್ಯರ್ಥವಾಗುವುದಿಲ್ಲ.

೧೭. ಈ ಭೂಮಂಡಲದಲ್ಲಿ ಯಾವ ಯಾವ ಪ್ರಖ್ಯಾತವಾದ ತೀರ್ಥಗಳಿವೆಯೋ ಅವುಗಳೆಲ್ಲಾ ಈ ಫಲ್ಗುತೀರ್ಥದಲ್ಲಿ ಸನ್ನಿಹಿತವಾಗಿವೆ. ಆದುದರಿಂದ ಸಮಸ್ತದೇವತೆಗಳೂ ಸ್ನಾನಮಾಡುವುದಕ್ಕಾಗಿ ಈ ಫಲ್ಗುತೀರ್ಥಕ್ಕೆ ಬರುತ್ತಾರೆ.

೧೮. ಗಂಗೆಯು ಶ್ರೀವಿಷ್ಣುವಿನ ಪಾದೋದಕವಾಗಿದೆ. ಆದಿಗದಾಧರನಾದ ಶ್ರೀಹರಿಯು ದ್ರವರೂಪವಾದ ಫಲ್ಗುತೀರ್ಥಸ್ವರೂಪನಾಗಿರುವನು. ಆದುದರಿಂದ ಫಲ್ಗುತೀರ್ಥವು ಗಂಗಾದಿ ತೀರ್ಥಗಳಿಗಿಂತಲೂ ಉತ್ತಮವಾಗಿದೆಯೆಂದು ಜ್ಞಾನಿಗಳು ಹೇಳುವರು.

ಅಶ್ವಮೇಧಸಹಸ್ರಾಣಾಂ ಸಹಸ್ರಂ ಯಂ ಸಮಾಚರೇತ್ ।
ನಾಸೌ ತತ್ಫಲಮಾಪ್ನೋತಿ ಫಲ್ಗುತೀರ್ಥೇ ಯದಾಪ್ನುಯಾತ್ ॥ ೧೯ ॥

ಫಲ್ಗುತೀರ್ಥೇ ವಿಷ್ಣುಜಲೇ ಕರೋಮಿ ಸ್ನಾನಮಾದೃತಃ ।
ಪಿತೄಣಾಂ ವಿಷ್ಣುಲೋಕಾಯ ಭುಕ್ತಿಮುಕ್ತಿಪ್ರಸಿದ್ಧಯೇ ॥ ೨೦ ॥

ಫಲ್ಗುತೀರ್ಥೇ ನರಃ ಸ್ನಾತ್ವಾ ತರ್ಪಣಂ ಶ್ರಾದ್ಧಮಾಚರೇತ್ ।
ಸಪಿಂಡಕಂ ಸ್ವಸೂತ್ರೋಕ್ತಂ ನಮೇದಥ ಪಿತಾಮಹಂ ॥ ೨೧ ॥

ನಮಃ ಶಿವಾಯ ದೇವಾಯ ಈಶಾಯ ಪುರುಷಾಯ ವೈ ।
ಅಘೋರವಾಮದೇವಾಯ ಸದ್ಯೋಜಾತಾಯ ಶಂಭವೇ ॥ ೨೨ ॥

---

೧೯. ಇಂತಹ ಫಲ್ಗುತೀರ್ಥದ ಸ್ನಾನಪಾನಾದಿಗಳಿಂದ ಯಾವ ಮಹಾಫಲವು ಸಂಭವಿಸುವುದೋ ಅದು ಸಾವಿರಾರು ಅಶ್ವಮೇಧಯಾಗವೇ ಮೊದಲಾದವುಗಳಿಂದಲೂ ಕೂಡ ಉಂಟಾಗುವುದಿಲ್ಲ.

೨೦. ಆದುದರಿಂದ ವಿಷ್ಣುಸ್ವರೂಪವಾದ ಈ ಫಲ್ಗುತೀರ್ಥದಲ್ಲಿ ಶ್ರದ್ಧೆಯಿಂದ ಸ್ನಾನಜಪತಪಾದಿಗಳನ್ನು ಮಾಡುತ್ತೇನೆ ಇದರಿಂದ ಪಿತೃಗಳಿಗೆ ವಿಷ್ಣುಲೋಕಪ್ರಾಪ್ತಿಯೂ, ಮಾಡಿದ ಪುರುಷನಿಗೆ ಭುಕ್ತಿಮುಕ್ತಿಯೇ ಮೊದಲಾದ ಸಕಲ ಮನೋರಥಗಳೂ ಉಂಟಾಗುತ್ತವೆ.

೨೧. ಪುರುಷರು ಫಲ್ಗುತೀರ್ಥದಲ್ಲಿ ಸ್ನಾನವನ್ನು ಮಾಡಿ ತರ್ಪಣಶ್ರಾದ್ಧಗಳನ್ನು ಮಾಡಬೇಕು. ಮತ್ತು ಸ್ವಶಾಖೋಕ್ತರೀತಿಯಲ್ಲಿ ಪಿಂಡದಾನಪೂರ್ವಕವಾಗಿ ಪಿತೃಕಾರ್ಯವನ್ನು ಮಾಡಿ ಬ್ರಹ್ಮದೇವನಿಗೆ ವಂದನೆಗಳನ್ನು ಅರ್ಪಿಸಬೇಕು.

೨೨. ಮಂಗಳಪ್ರದನೂ, ದೇವನೂ, ಈಶಾನನೂ, ಪುರುಷೋತ್ತಮನೂ, ಅಘೋರವಾಮದೇವಸ್ವರೂಪನೂ, ಸದ್ಯೋಜಾತನೂ ಆದ ಪರಮೇಶ್ವರನಿಗೆ ವಂದನೆಗಳೆಂದು ಪ್ರಾರ್ಥಿಸಬೇಕು.

ಫಲ್ಗುತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ದೇವಂ ಗದಾಧರಂ।
ಆತ್ಮಾನಂ ತಾರಯೇತ್ಸದ್ಯೋ ದಶ ಪೂರ್ವಾನ್ ದಶಾಪರಾನ್ ॥ ೨೩ ॥

ನತ್ವಾ ಗದಾಧರಂ ದೇವಂ ಮಂತ್ರೇಣಾನೇನ ಪೂಜಯೇತ್ ।
ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ ॥ ೨೪ ॥

ಪ್ರದ್ಯುಮ್ನಾಯಾನಿರುದ್ಧಾಯ ಶ್ರೀಧರಾಯ ಚ ವಿಷ್ಣವೇ ।
ಪಂಚತೀರ್ಥೇ ನರಃ ಸ್ನಾತ್ವಾ ಬ್ರಹ್ಮಲೋಕಂ ನಯೇತ್ಪಿತೄನ್ ॥ ೨೫ ॥

ಅಮೃತೈಃ ಪಂಚಭಿಃ ಸ್ನಾನಂ ಪುಷ್ಪವಸ್ತ್ರಾದ್ಯಲಂಕೃತಂ ।
ನ ಕುರ್ಯಾದ್ಯೋ ಗದಾಪಾಣೇಸ್ತಸ್ಯ ಶ್ರಾದ್ಧಮನರ್ಥಕಂ ॥ ೨೬ ॥

---

೨೩. ಮನುಷ್ಯನು ಫಲ್ಗುತೀರ್ಥದಲ್ಲಿ ಸ್ನಾನವನ್ನು ಮಾಡಿ ಆ ಗದಾಧರ ಸ್ವಾಮಿಗೆ ನಮಸ್ಕರಿಸಬೇಕು. ಇದರಿಂದ ತಾನೂ ಪೂರ್ವಾಪರದ ಹತ್ತು ಕುಲದವರೂ ಉದ್ಧೃತರಾಗುವರು.

೨೪. ಗುಣಪೂರ್ಣನೂ, ವಾಸುದೇವನೂ, ಸಂಕರ್ಷಣನೂ, ಅನಿರುದ್ಧನೂ, ಶ್ರೀಧರನೂ, ಗದಾಧರನೂ ಆದ ಶ್ರೀಮನ್ನಾರಾಯಣನಿಗೆ ನಮಸ್ಕಾರಗಳೆಂದು ಹೇಳಿ ಪೂಜಿಸಬೇಕು.

೨೫. ಮನಷ್ಯರು ಪಂಚತೀರ್ಥದಲ್ಲಿ ಸ್ನಾನವನ್ನು ಮಾಡಿ ಜಪ, ತಪ, ಹೋಮ, ಶ್ರಾದ್ಧಾದಿಗಳನ್ನು ಭಕ್ತಿಯಿಂದ ನೆರವೇರಿಸಿದರೆ ಪಿತೃಗಳಿಗೂ, ತಮಗೂ, ಬ್ರಹ್ಮಲೋಕವು ದೊರೆಯುವುದು.

೨೬. ಪುರುಷರು ಗದಾಧರನಾದ ಶ್ರೀ ಹರಿಗೆ ಪಂಚಾಮೃತಾಭಿಷೇಕವನ್ನೂ ವಸ್ತ್ರಪುಷ್ಪಾದಿಗಳಿಂದ ಅಲಂಕಾರವನ್ನೂ ಮಾಡಿಸಿ ತರುವಾಯ ಪಿತೃಕಾರ್ಯವನ್ನು ಮಾಡಬೇಕು. ಹಾಗೆ ಭಗವಂತನಿಗೆ ಪೂಜೆಯನ್ನು ಮಾಡದೇ ಪಿತೃಕಾರ್ಯವನ್ನು ಮಾಡಿದರೆ ಅದು ವ್ಯರ್ಥವಾಗುವುದು.

ನಾಗಕೂಟಾದ್ಗೃಧ್ರಕೂಟಾದ್ಯೂಪಾದುತ್ತರಮಾನಸಾತ್ ।
ಏತದ್ಗಯಾಶಿರಃ ಪ್ರೋಕ್ತಂ ಫಲ್ಗುತೀರ್ಥಂತ ದುಚ್ಯತೇ ॥ ೨೭ ॥

ಮುಂಡಪೃಷ್ಠನಗಾಧಸ್ತಾತ್ಫಲ್ಗುತೀರ್ಥಮನುತ್ತಮಂ ।
ಅತ್ರ ಶ್ರಾದ್ಧಾದಿನಾ ಸರ್ವೇ ಪಿತರೋ ಮೋಕ್ಷಮಾಪ್ನುಯುಃ ॥ ೨೮ ॥

ಪ್ರಥಮೇಽಹ್ನಿ ವಿಧಿಃ ಪ್ರೋಕ್ತೋ ದ್ವಿತೀಯೇ ದಿವಸೇ ವ್ರಜೇತ್ ।
ಧರ್ಮಾರಣ್ಯಂ ತತ್ರ ಧರ್ಮೋ ಯಸ್ಮಾದ್ಯಜ್ಞಮಕಾರಯೇತ್ ॥ ೨೯ ॥

ಗಮನಾದ್ಬ್ರಹ್ಮಲೋಕಾಪ್ತಿರ್ಭವತ್ಯೇವ ಹಿ ನಾರದ ।
ಮತಂಗವಾಪ್ಯಾಂ ಯಃ ಸ್ನಾತ್ವಾ ತರ್ಪಣಂ ಶ್ರಾದ್ಧಮಾಚರೇತ್ ॥ ೩೦ ॥

---

೨೭. ನಾಗಕೂಟ, ಗೃಧ್ರಕೂಟ, ಉತ್ತರಮಾನಸತೀರ್ಥ ಇವುಗಳಿಂದ ಸಹಿತವಾದ ಫಲ್ಗುತೀರ್ಥವೇ ಗಯಾಕ್ಷೇತ್ರವಾಗಿ ಇದೆ. ಅದರಲ್ಲಿ ಮಾಡಿದ ಪಿತೃಕಾರ್ಯವು ಅನಂತ ಫಲಪ್ರದವಾಗುವುದು.

೨೮. ಮುಂಡಪೃಷ್ಠ ತೀರ್ಥಕ್ಕಿಂತಲೂ, ಫಲ್ಗುತೀರ್ಥವು ಅತ್ಯುತ್ತಮವಾಗಿದೆ. ಆದುದರಿಂದ ಅದರಲ್ಲಿ ಶ್ರಾದ್ಧಾದಿಗಳನ್ನು ಮಾಡುವುದರಿಂದ ಸಮಸ್ತಪಿತೃಗಳೂ, ಮೋಕ್ಷವನ್ನು ಹೊಂದುವರು.

೨೯. ಎಲೈ ನಾರದನೇ, ಮೊದಲನೆಯ ದಿವಸದಲ್ಲಿ ಗಯಾಕ್ಷೇತ್ರದಲ್ಲಿ ಸಮಸ್ತಕಾರ್ಯಗಳನ್ನೂ ಪೂರೈಸಿಕೊಂಡು ಮಾರನೆಯ ದಿವಸ ಧರ್ಮಾರಣ್ಯಕ್ಕೆ ಹೋಗಬೇಕು. ಆ ಧರ್ಮಾರಣ್ಯದಲ್ಲಿ ಧರ್ಮರಾಯನು ಪೂರ್ವದಲ್ಲಿ ಅಶ್ವಮೇಧಾದಿ ಯಜ್ಞಯಾಗಾದಿಗಳನ್ನು ಮಾಡಿ ದೇವತೆಗಳಿಗೆ ತೃಪ್ತಿಗೊಳಿಸಿರುವನು.

೩೦. ಎಲೈ ನಾರದ ಮುನೀಶ್ವರನೇ, ಧರ್ಮಾರಣ್ಯಕ್ಕೆ ಹೋಗುವ ಮಾತ್ರದಿಂದಲೇ, ಪಿತೃಗಳಿಗೆ ಬ್ರಹ್ಮಲೋಕಪ್ರಾಪ್ತಿಯಾಗುವುದು. ತರುವಾಯ ಮತಂಗಾಶ್ರಮಕ್ಕೆ ಹೋಗಿ ಮತಂಗತೀರ್ಥಸ್ನಾನವನ್ನು ಮಾಡಿ ಜಪತಪಾದಿಗಳನ್ನು ಶ್ರಾದ್ಧತರ್ಪಣಗಳನ್ನೂ, ಯಾವನು ಮಾಡುವನೋ ಅವನೂ ಅವನ ಪಿತೃಗಳೂ, ಮುಕ್ತಿಯನ್ನು ಪಡೆಯುವರು.

ಗತ್ವಾ ನತ್ವಾ ಮತಂಗೇಶಮಿಮಂ ಮಂತ್ರಮುದೀರಯೇತ್ ।
ಪ್ರಮಾಣಂ ದೇವತಾಃ ಸಂತು ಲೋಕಪಾಲಾಶ್ಚ ಸಾಕ್ಷಿಣಃ ॥ ೩೦ ॥

ಮಯಾಗತ್ಯ ಮತಂಗೇಸ್ಮಿನ್ ಪಿತೄಣಾಂ ನಿಷ್ಕೃತಿಃ ಕೃತಾ ।
ಪೂರ್ವಂ ಹಿ ಬ್ರಹ್ಮತೀರ್ಥೇ ಚ ಕೂಪೇ ಶ್ರಾದ್ಧಾದಿ ಕಾರಯೇತ್ ॥ ೩೧ ॥

ತತ್ಕೂಪಯೂಪಯೋರ್ಮಧ್ಯೇ ಸರ್ವಾಂಸ್ತಾರಯತೇ ಪಿತೄನ್ ।
ಧರ್ಮಂ ಧರ್ಮೇಶ್ವರಂ ನತ್ವಾ ಮಹಾಬೋಧಿತರುಂ ನಮೇತ್ ॥ ೩೨ ॥

ನಮಸ್ತೇಶ್ವತ್ಥರಾಜಾಯ ಬ್ರಹ್ಮವಿಷ್ಣುಶಿವಾತ್ಮನೇ ।
ಬೋಧಿದ್ರುಮಾಯ ಕರ್ತ್ರೂಣಾಂ ಪಿತೄಣಾಂ ತಾರಣಾಯ ಚ ॥ ೩೪ ॥

---

೩೦. ಮತಂಗಾಶ್ರಮಕ್ಕೆ ಹೋಗಿ ಮತಂಗೇಶ್ವರನಿಗೆ ನಮಸ್ಕರಿಸಿ ಈ ಮಂತ್ರವನ್ನು ಹೇಳಬೇಕು. ಅವನು ಮುಕ್ತನಾಗುವನು. ಈ ವಿಷಯದಲ್ಲಿ ದೇವತೆಗಳೂ ಲೋಕಪಾಲಕರೂ ಕೂಡ ಸಾಕ್ಷಿಗಳಾಗಿಯೂ, ಪ್ರಮಾಣರಾಗಿಯೂ ಇರಲೆಂದು ಪ್ರಾರ್ಥಿಸಬೇಕು.

೩೧. ಎಲೈ ಲೋಕಪಾಲಕರೇ ನಾನು ಈ ಮತಂಗಾಶ್ರಮಕ್ಕೆ ಬಂದು ಈ ತೀರ್ಥದಲ್ಲಿ ಪಿತೃಕಾರ್ಯವನ್ನು ಮಾಡಿರುವೆನು. ಇದಕ್ಕೆ ನೀವೇ ಸಾಕ್ಷಿಗಳು. ಮೊದಲು ಬ್ರಹ್ಮತೀರ್ಥದಲ್ಲಿಯೂ, ಬ್ರಹ್ಮಕೂಪದಲ್ಲಿಯೂ ಶ್ರಾದ್ಧಾದಿಗಳನ್ನು ಮಾಡಬೇಕು.

೩೨. ಆ ಬ್ರಹ್ಮಕೂಪ ಯೂಪಸ್ತಂಭಗಳ ಮಧ್ಯದಲ್ಲಿ ಪಿತೃಕಾರ್ಯಾದಿಗಳನ್ನು ಮಾಡಿದರೆ ಪಿತೃಗಳು ನರಕಗಳಿಂದ ಉದ್ಧೃತರಾಗುವರು. ತರುವಾಯ ಧರ್ಮದೇವನನ್ನೂ ಧರ್ಮೇಶ್ವರನನ್ನೂ ಮಹಾಬೋಧತರುವನ್ನೂ, ನಮಸ್ಕಾರ ಮಾಡಬೇಕು.

೩೪. ಬ್ರಹ್ಮ, ವಿಷ್ಣು ಮಹೇಶ್ವರ ಸ್ವರೂಪಿಯೂ, ಜ್ಞಾನಸ್ವರೂಪಿಯೂ ಪಿತೃಕಾರ್ಯವನ್ನು ಮಾಡಿದವನಿಗೂ ಪಿತೃಗಳಿಗೂ ಮುಕ್ತಿಪ್ರದವೂ ಅಶ್ವನಾಮಕವೂ ಆದ ವೃಕ್ಷರಾಜನಿಗೆ ಅನಂತ ವಂದನೆಗಳು ಎಂದು ಹೇಳಬೇಕು.

ಯೇಸ್ಮತ್ಕುಲೇ ಮಾತೃವಂಶೇ ಬಾಂಧವಾ ದುರ್ಗತಿಂ ಗತಾಃ ।
ತ್ವದ್ದರ್ಶನಾತ್ ಸ್ಪರ್ಶನಾಚ್ಚ ಸ್ವರ್ಗತಿಂ ಯಾಂತು ಶಾಶ್ವತಂ ॥ ೩೫ ॥

ಋಣತ್ರಯಂ ಮಯಾ ದತ್ತಂ ಗಯಾಮಾಗತ್ಯ ವೃಕ್ಷರಾಟ್ ।
ತ್ವತ್ಪ್ರಸಾದಾನ್ಮಹಾಪಾಪಾದ್ವಿಮುಕ್ತೋಽಹಂ ಭವಾರ್ಣವಾತ್ ॥ ೩೬ ॥

ತೃತೀಯೇ ಬ್ರಹ್ಮಶಿರಸಿ ಸ್ನಾತ್ವಾ ಶ್ರಾದ್ಧಂ ಸಪಿಂಡಕಂ ।
ಕೃತ್ವಾ ಸರ್ವಪ್ರಮಾಣೇನ ಮಂತ್ರೇಣ ವಿಧಿವತ್ಸುತಃ ॥ ೩೭ ॥

ಸ್ನಾನಂ ಕರೋಮಿ ತೀರ್ಥೇಸ್ಮಿನ್ನೃಣತ್ರಯ ವಿಮುಕ್ತಯೇ ।
ತತ್ಕೂಪಯೂಪಯೋರ್ಮಧ್ಯೇ ಬ್ರಹ್ಮಲೋಕಂ ನಯೇತ್ಪಿತ್ನ್ ॥ ೩೮ ॥

---

೩೫. ಎಲೈ ವೃಕ್ಷರಾಜನೇ ಯಾವ ಪುರುಷರು ಮಾತೃವಂಶದಲ್ಲಿಯೂ ನನ್ನ ಕುಲದಲ್ಲಿಯೂ ಜನಿಸಿದ ಬಂಧುಗಳಾಗಿ ದುರ್ಗತಿಯನ್ನು ಹೊಂದಿರುವರೋ ಅವರು ಈ ನಿನ್ನ ದರ್ಶನ ಸ್ಪರ್ಶನ ವಂದನಾದಿಗಳಿಂದಲೂ, ಸ್ವರ್ಗಲೋಕವನ್ನು ಹೊಂದ ಲೆಂದು ಪ್ರಾರ್ಥಿಸಬೇಕು.

೩೬. ಎಲೈ ವೃಕ್ಷರಾಜನೇ, ನಾನು ಗಯೆಗೆ ಬಂದು ಪಿತೃಕಾರ್ಯಾದಿಗಳನ್ನು ಮಾಡಿ ಋಣತ್ರಯಗಳಿಂದ ಮುಕ್ತನಾಗಿರುವೆನು. ಓ ವೃಕ್ಷರಾಜನೇ ನಿನ್ನ ಅನುಗ್ರಹ ದಿಂದ ನಾನು ಮಹಾಪಾತಕಗಳಿಂದಲೂ, ಸಂಸಾರಾರ್ಣವದಿಂದಲೂ ಮುಕ್ತನಾಗಿ ರುವನು ಎಂದು ಪ್ರಾರ್ಥಿಸಬೇಕು.

೩೭. ಕುಮಾರನು ಮೂರನೆಯ ದಿನ ಬ್ರಹ್ಮಸರೋವರದಲ್ಲಿ ಸ್ನಾನಮಾಡಿ ಪಿಂಡದಾನಪೂರ್ವಕವಾಗಿ ಶ್ರಾದ್ಧವನ್ನು ವಿಧಿಪೂರ್ವಕವಾಗಿ ಮಾಡಿ, ಸಮಸ್ತ ಪ್ರಮಾಣವಚನಗಳನ್ನೂ, ಮಂತ್ರಗಳನ್ನೂ ಉಚ್ಚರಿಸಬೇಕು.

೩೮. ನಾನು ಈ ತೀರ್ಥದಲ್ಲಿ ಋಣತ್ರಯಮೋಚನಕ್ಕಾಗಿ ಸ್ನಾನವನ್ನು ಮಾಡುವೆನು. ಆ ಬ್ರಹ್ಮಕೂಪ ಯೂಪಸ್ತಂಭಗಳ ಮಧ್ಯದಲ್ಲಿ ಯಾವನು ಶ್ರಾದ್ಧಾದಿ ಪಿತೃ ಕ್ರಿಯೆಗಳನ್ನು ಮಾಡುವನೋ, ಅವನ ಪಿತೃಗಳು ಖಂಡಿತವಾಗಿಯೂ ಬ್ರಹ್ಮ ಲೋಕಕ್ಕೆ ಹೋಗುವರು.

ಯೋಗಂ ಕೃತ್ವೋತ್ಥಿತೋ ಯೂಪೋ ಬ್ರಹ್ಮಣಾ ಯೂಪ ಇತ್ಯಸೌ ।
ಕೃತ್ವಾ ಬ್ರಹ್ಮಸರಃ ಶ್ರಾದ್ಧಂ ಸರ್ವಾಂಸ್ತಾರಯತೇ ಪಿತೄನ್ ॥ ೩೯ ॥

ಯೂಪಂ ಪ್ರದಕ್ಷಿಣೀಕೃತ್ಯ ವಾಜಪೇಯಫಲಂ ಲಭೇತ್ ।
ಬ್ರಹ್ಮಾಣಂ ಚ ನಮಸ್ಕೃತ್ಯ ಬ್ರಹ್ಮಲೋಕಂ ನಯೇತ್ಪಿತೄನ್ ॥ ೪೦ ॥

ನಮೋಸ್ತು ಬ್ರಹ್ಮಣೇಽಜಾಯ ಜಗಜ್ಜನ್ಮಾದಿರೂಪಿಣೇ ।
ಭಕ್ತಾನಾಂ ಚ ಪಿತೄಣಾಂ ಚ ತಾರಕಾಯ ನಮೋ ನಮಃ ॥ ೪೧ ॥

ಗೋಪ್ರಚಾರಸಮೀಪಸ್ಥಾ ಆಮ್ರಾ ಬ್ರಹ್ಮಪ್ರಕಲ್ಪಿತಾಃ ।
ತೇಷಾಂ ಸೇಚನಮಾತ್ರೇಣ ಪಿತರೋ ಮೋಕ್ಷಗಾಮಿನಃ ॥ ೪೨ ॥

೩೯. ಬ್ರಹ್ಮದೇವನು ಯಾಗವನ್ನು ಮಾಡುವಾಗ ಈ ಯೂಪ ಸ್ತಂಭವು ಆವಿರ್ಭೂತವಾಯಿತು. ಅದರಿಂದ ಈ ಕ್ಷೇತ್ರಕ್ಕೆ ಯೂಪಕ್ಷೇತ್ರವೆಂದು ನಾಮವು ಬಂದಿದೆ. ಈ ಬ್ರಹ್ಮಸರೋವರದಲ್ಲಿ ಸ್ನಾನ, ಶ್ರಾದ್ಧಾದಿಗಳನ್ನು ಮಾಡಿದರೆ ಸಮಸ್ತ ಪಿತೃಗಳೂ ಮುಕ್ತರಾಗುವರು.

೪೦. ಬ್ರಹ್ಮತೀರ್ಥದಲ್ಲಿರುವ ಯೂಪಸ್ತಂಭದ ಪ್ರದಕ್ಷಿಣೆ, ನಮಸ್ಕಾರಗಳನ್ನು ಮಾಡಿದರ ವಾಜಪೇಯ ಯಾಗಮಾಡಿದ ಫಲವು ಲಭಿಸುವುದು. ಆ ಕ್ಷೇತ್ರದಲ್ಲಿ ಬ್ರಹ್ಮದೇವನಿಗೆ ನಮಸ್ಕಾರ ಮಾಡಿದರೆ ಪಿತೃಗಳಿಗೆ ಬ್ರಹ್ಮಲೋಕ ಪ್ರಾಪ್ತಿಯಾಗುವುದು.

೪೧. ಉತ್ಪತ್ತಿರಹಿತನೂ, ಜಗಜ್ಜನ್ಮಾದಿಕಾರಣನೂ ಆದ ಬ್ರಹ್ಮದೇವನಿಗೆ ವಂದನೆಗಳು. ಆ ಬ್ರಹ್ಮದೇವನು ಭಕ್ತಜನತಾರಕನೂ, ಪಿತೃಗಳಿಗೆ ಮೋಕ್ಷದಾತನೂ ಆಗಿರುವನು. ಆದುದರಿಂದ ಅಂತಹ ದೇವನಿಗೆ ವಂದನೆಗಳು.

೪೨. ಗೋಕುಲದ ಸಮೀಪಗತವಾದ ಆಮ್ರವೃಕ್ಷಗಳು ಬ್ರಹ್ಮದೇವನಿಂದ ನಿರ್ಮಿತವಾಗಿವೆ. ಅದರ ಮೇಲೆ ಜಲವನ್ನು ಸೇಚನೆಮಾಡಿದ ಮಾತ್ರದಿಂದ ಪಿತೃಗಳು ಮುಕ್ತರಾಗುವರು.

ಆಮ್ರಂ ಬ್ರಹ್ಮಸರೋದ್ಭೂತಂ ಬ್ರಹ್ಮದೇವಮಯಂ ತರುಂ ।
ವಿಷ್ಣುರೂಪಂ ಪ್ರಸಿಂಚಾಮಿ ಪಿತೄಣಾಂ ಮುಕ್ತಿಹೇತವೇ ॥ ೪೩ ॥

ಏಕೋ ಮುನಿಃ ಕುಂಭಕುಶಾಗ್ರಹಸ್ತ ।
ಆಮ್ರಸ್ಯ ಮೂಲೇ ಸಲಿಲಂ ದದಾಮಿ ॥
ಆಮ್ರಶ್ಚ ಸಿಕ್ತಃ ಪಿತರಶ್ಚ ತೃಪ್ತಾ ।
ಏಕಾ ಕ್ರಿಯಾ ದ್ವ್ಯರ್ಥಕರೀ ಪ್ರಸಿದ್ಧಾ: ॥ ೪೪ ॥

ತತೋ ಯಮಬಲಿಂ ದದ್ಯಾನ್ಮಂತ್ರೇಣಾನೇನ ಸಂಯುತಃ ।
ಯಮರಾಜಧರ್ಮರಾಜೌ ನಿಶ್ಚಲಾರ್ಥಂ ವ್ಯವಸ್ಥಿತೌ ॥ ೪೫ ॥

ತಾಭ್ಯಾಂ ಬಲಿಂ ಪ್ರಯಚ್ಛಾಮಿ ಪಿತೄಣಾಂ ಮುಕ್ತಿಹೇತವೇ ।
ತತಃ ಶ್ವಾನಬಲಿಂ ದದ್ಯಾನ್ಮಂತ್ರೇಣಾನೇನ ನಾರದ ॥ ೪೬ ॥

---

೪೩. ಆ ಆಮ್ರವೃಕ್ಷವು ಬ್ರಹ್ಮಸರಸ್ಸಿನಲ್ಲಿ ಉದ್ಭೂತವೂ, ದೇವಸ್ವರೂಪವೂ, ಬ್ರಹ್ಮಸ್ವರೂಪವೂ, ವಿಷ್ಣುರೂಪಿಯೂ ಆಗಿರುತ್ತದೆ. ಇಂತಹ ವೃಕ್ಷವನ್ನು ಜಲದಿಂದ ಸೇಚನೆಮಾಡುವುದರಿಂದ ಪಿತೃಗಳಿಗೆ ಮುಕ್ತಿಯುಂಟಾಗುವುದು.

೪೪. ಜಲಕುಂಭವನ್ನೂ, ಪವಿತ್ರವನ್ನೂ ಕೈಗಳಲ್ಲಿ ಧರಿಸಿಕೊಂಡು ಮುನಿಯಾದ ನಾನು ಮಾವಿನ ಮರದ ಬುಡದಲ್ಲಿ ತರ್ಪಣವನ್ನು ಕೊಡುವೆನು. ಇದರಿಂದ ಆಮ್ರವೃಕ್ಷಕ್ಕೆ ಜಲಸೇಚನೆಯನ್ನೂ, ಪಿತೃಗಳಿಗೆ ತರ್ಪಣವನ್ನೂ ಕೊಟ್ಟಂತೆ ಆಗುವುದು. ಹೀಗೆ ಒಂದು ಕಾರ್ಯದಿಂದ ಎರಡು ವಿಧವಾದ ಸಿದ್ಧಿಯನ್ನು ಹೊಂದಬಹುದೆಂದು ವಿದಿತವಾಗಿದೆ.

೪೫-೪೬. ಅನಂತರ ಈ ಮಂತ್ರವನ್ನು ಉಚ್ಚರಿಸಿ ನಿಯಮಿತನಾಗಿ ಯಮಬಲಿಯನ್ನು ಕೊಡಬೇಕು. ಯಮರಾಜ ಧರ್ಮರಾಜರಿಬ್ಬರೂ ಪಿತೃಗಳಿಗೆ ಶಾಶ್ವತವಾದ ಮೋಕ್ಷವನ್ನು ಕೊಡುವುದಕ್ಕಾಗಿ ಈ ಕ್ಷೇತ್ರದಲ್ಲಿ ಸಿದ್ಧರಾಗಿರುವರು. ಅಂತಹ ಯಮರಾಜಧರ್ಮರಾಜರಿಗೆ ಬಲಿಯನ್ನು ಕೊಡುತ್ತೇನೆ. ಇದರಿಂದ ಪಿತೃಗಳಿಗೆ ಮುಕ್ತಿಯಾಗುವುದು. ಎಲೈ ನಾರದಮುನಿಯೇ, ತರುವಾಯ ಮುಂದೆ ತಿಳಿಸುವ ಮಂತ್ರದಿಂದ ಶ್ವಾನಬಲಿಯನ್ನು ಕೊಡಬೇಕು.

ದ್ವೌ ಶ್ವಾನೌ ಶ್ಯಾಮಶಬಲೌ ವೈವಸ್ವತಕುಲೋದ್ಭವೌ ।
ತಾಭ್ಯಾಂ ಬಲಿಂ ಪ್ರಯಚ್ಛಾಮಿ ಪಿತೄಣಾಂ ಮುಕ್ತಿಹೇತವೇ || ೪೭ ||

ತತಃ ಕಾಕಬಲಿಂ ದದ್ಯಾನ್ಮಂತ್ರೇಣಾನೇನ ನಾರದ ।
ಐಂದ್ರವಾರುಣವಾಯವ್ಯಯಾಮ್ಯಾ ವೈ ನೈಋತಸ್ತಥಾ || ೪೮ ||

ವಾಯಸಾಃ ಪ್ರತಿಗೃಹ್ಣಂತು ಭೂಮೌ ಪಿಂಡಂ ಸಮರ್ಪಿತಂ ।
ಫಲ್ಗುತೀರ್ಥೇ ಚತುರ್ಥೇಽಹ್ನಿ ಸ್ನಾನಾದಿಮಥಾಚರೇತಃ || ೪೯ ||

ಗಯಾಶಿರಸ್ಯಥ ಶ್ರಾದ್ಧಂ ಪಾದೇ ಕುರ್ಯಾತ್ಸಪಿಂಡಕಂ ।
ಸಾಕ್ಷಾದ್ಗಯಾಶಿರಸ್ತತ್ರ ಫಲ್ಗುತೀರ್ಥಾಶ್ರಿತಂ ಕೃತಂ || ೫೦ ||

ನಾಗಾಜ್ಜನಾರ್ದನಾದ್ಬ್ರಹ್ಮಯೂಪಾಚೋತ್ತರಮಾನಸಾತ್ ।
ಏತದ್ಗಯಾಶಿರಃ ಪ್ರೋಕ್ತಂ ಫಲ್ಗುತೀರ್ಥಂ ತದುಚ್ಯತೇ || ೫೧ ||

---

೪೭. ವೈವಸ್ವತಮನುವಿನ ಕುಲಸಂಭೂತಗಳೂ, ಕರಿ ಮತ್ತು ವಿಚಿತ್ರ ವರ್ಣಗಳೂ ಆದ ಎರಡು ನಾಯಿಗಳಿಗೆ ಬಲಿಯನ್ನು ಕೊಡುವೆನು. ಆ ಎರಡು ಶ್ವಾನಗಳೂ, ಮೋಕ್ಷಮಾರ್ಗಗಳಲ್ಲಿ ಪಿತೃಗಳಿಗೆ ಸಹಾಯವನ್ನು ಸದಾ ಮಾಡಲೆಂದು ಪ್ರಾರ್ಥಿಸಬೇಕು

೪೮-೪೯. ತರುವಾಯ ಎಲೈ ನಾರದನೇ, ಪೂರ್ವ, ದಕ್ಷಿಣ, ಪಶ್ಚಿಮ, ವಾಯವ್ಯ, ನೈಋತ್ಯ ಈ ದಿಕ್ಕುಗಳಲ್ಲಿರುವ ಕಾಗೆಗಳಿಗೆ ಬಲಿಯನ್ನು ಕೊಡಬೇಕು. ನಾನು ಭೂಮಿಯಲ್ಲಿ ಕೊಟ್ಟ ಪಿಂಡದಿಂದ ಈ ಕಾಗೆಗಳು ತೃಪ್ತಿಯನ್ನು ಹೊಂದಲಿ. ತರುವಾಯ ನಾಲ್ಕನೆಯ ದಿವಸದಲ್ಲಿ ಫಲ್ಗುತೀರ್ಥದಲ್ಲಿ ಸ್ನಾನತರ್ಪಣಾದಿಗಳನ್ನು ಮಾಡಬೇಕು.

೫೦. ಗಯಾಶಿರಸ್ಸಿನಲ್ಲಿ ಶ್ರಾದ್ಧವನ್ನು ಮಾಡಿದ ಬಳಿಕ ಗಯಾಪಾದದಲ್ಲಿ ಶ್ರಾದ್ಧಪಿಂಡದಾನಗಳನ್ನು ಮಾಡಬೇಕು. ಗಯಾಶಿರಸ್ಸಿನಲ್ಲಿ ಫಲ್ಗುತೀರ್ಥವು ಸಂಪೂರ್ಣ ವ್ಯಾಪ್ತವಾಗಿದೆ. ಆದುದರಿಂದ ಸರ್ವತ್ರ ಕ್ರಿಯೆಗಳನ್ನು ಮಾಡಬೇಕು.

೫೧. ನಾಗತೀರ್ಥ, ಜನಾರ್ದನ, ಬ್ರಹ್ಮಯೂಪ, ಉತ್ತಮಾನಸ ಸರಸ್ಸು ಇವೆಲ್ಲವೂ ಗಯಾಶಿರಸ್ಸಿನಲ್ಲಿವೆ. ಇದಕ್ಕೆ ಫಲ್ಗುತೀರ್ಥವೆಂಬ ಸಂಜ್ಞೆಯು ಪ್ರಾಪ್ತವಾಗಿದೆ. ಅದರಲ್ಲಿ ಮಾಡಿದ ಕಾರ್ಯವು ಮಹಾಫಲದಾಯಕವಾಗಿದೆ.

ಪಿತಾಮಹಂ ಸಮಾಸಾದ್ಯ ಯಾವದುತ್ತರಮಾನಸಂ ।
ಫಲ್ಗುತೀರ್ಥಂ ತು ವಿಜ್ಞೇಯಂ ದೇವಾನಾಮಪಿ ದುರ್ಲಭಂ ॥ ೫೨ ॥

ಕ್ರೌಂಚಪಾದಾತ್ಫಲ್ಗುತೀರ್ಥಂ ಯಾವತ್ಸಾಕ್ಷಾದ್ಗಯಾಶಿರಃ ।
ಮುಖಂ ಗಯಾಸುರಸ್ಯೈತತ್ತಸ್ಮಾಚ್ಛ್ರಾದ್ಧಮಿಹಾಕ್ಷಯಂ ॥ ೫೩ ॥

ಮುಂಡಪೃಷ್ಠಾನ್ನಗಾಧಸ್ತಾತ್ಸಾಕ್ಷಾತ್ತತ್ಫಲ್ಗುತೀರ್ಥಕಂ ।
ಆದ್ಯೋ ಗದಾಧರೋ ದೇವೋ ವ್ಯಕ್ತಾವ್ಯಕ್ತಾತ್ಮನಾ ಸ್ಥಿತಃ ॥ ೫೪ ॥

ವಿಷ್ಣ್ವಾದಿಪದರೂಪೇಣ ಪಿತೄಣಾಂ ಮುಕ್ತಿಹೇತವೇ ।
ಏತದ್ವಿಷ್ಣುಪದಂ ದಿವ್ಯಂ ದರ್ಶನಾತ್ಪಾಪನಾಶನಂ ॥ ೫೫ ॥

---

೫೨. ಬ್ರಹ್ಮದೇವನಿರುವ ಕ್ಷೇತ್ರದಿಂದಲೂ, ಕ್ಷೇತ್ರಕ್ಕಿಂತಲೂ ಉತ್ತರದಲ್ಲಿರುವ ಮಾನಸಸರೋವರವು ಇರುವ ಪ್ರದೇಶಗಳೆಲ್ಲವೂ ಫಲ್ಗುತೀರ್ಥವಾಗಿರುತ್ತದೆ. ಅದು ದೇವತೆಗಳಿಗೂ ದುರ್ಲಭವಾಗಿರುವುದು

೫೩. ಕ್ರೌಂಚಗಿರಿಯ ಪಾದದಿಂದ ಫಲ್ಗುತೀರ್ಥದ ವರೆಗೂ ಇರುವ ಕ್ಷೇತ್ರವೆಲ್ಲವೂ ಗಯಾಶಿರಸ್ಸಾಗಿದೆ. ಈ ಫಲ್ಗುತೀರ್ಥವು ಗಯಾಸುರನ ಶಿರೋಭಾಗವಾಗಿದೆ. ಆದುದರಿಂದ ಅಲ್ಲಿ ಮಾಡಿದ ಶ್ರಾದ್ಧವು ಅಕ್ಷಯಫಲದಾಯಕವಾಗುವುದು.

೫೪. ಮುಂಡಪೃಷ್ಠಪರ್ವತದ ಕೆಳಭಾಗವೆಲ್ಲಾ ಫಲ್ಗುತೀರ್ಥವಾಗಿದೆ. ಆ ತೀರ್ಥದಲ್ಲಿ ಸ್ವಾಮಿಯಾದ ಗದಾಧರನು ಸಾಕ್ಷಾತ್ತಾಗಿ ವ್ಯಕ್ತಾವ್ಯಕ್ತರೂಪಗಳಿಂದ ಸನ್ನಿಹಿತನಾಗಿರುವನು.

೫೫. ಶ್ರೀ ಭಗವಂತನಾದ ಮಹಾವಿಷ್ಣುವು ಪಾದರೂಪದಿಂದ ಅಲ್ಲಿ ಸನ್ನಿಹಿತರಾಗಿರುವರು. ಇದೇ ವಿಷ್ಣುಪದಕ್ಷೇತ್ರವು ಪಿತೃಗಳಿಗೆ ಮುಕ್ತಿಯನ್ನು ಕೊಡುವುದಕ್ಕಾಗಿ ಶ್ರೀಹರಿಯು ಅಲ್ಲಿ ಪ್ರತ್ಯಕ್ಷನಾಗಿ ನಿಂತಿರುವನು. ದರ್ಶನಮಾತ್ರದಿಂದಲೇ ಇದು ಸಕಲಪಾಪನಾಶಕವಾಗಿದೆ.

**ಸ್ಪರ್ಶನಾತ್ಪೂಜನಾದ್ವಾಪಿ ಪಿತೄಣಾಂ ದತ್ತಮಕ್ಷಯಂ ।**
**ಶ್ರಾದ್ಧಂ ಸಪಿಂಡಕಂ ಕೃತ್ವಾ ಕುಲಸಾಹಸ್ರಮಾತ್ಮನಾ ॥ ೩೬ ॥**

**ನಯೇದ್ವಿಷ್ಣು ಪದಂ ದಿವ್ಯಮನಂತಂ ಶಿವಮವ್ಯಯಂ ।**
**ಶ್ರಾದ್ಧಂ ಕೃತ್ವಾ ರುದ್ರಪದೇ ನಯೇತ್ಕುಲಶತಂ ನರಃ ॥ ೩೭ ॥**

**ಸಹಾತ್ಮನಾ ಶಿವಪುರಂ ತಥಾ ಬ್ರಹ್ಮಪದೇ ನರಃ ।**
**ಬ್ರಹ್ಮಲೋಕಂ ಕುಲಶತಂ ಸಮುದ್ಧೃತ್ಯ ನಯೇತ್ಪಿತೄನ್ ॥ ೩೮ ॥**

**ಕಶ್ಯಪಸ್ಯ ಪದೇ ಶ್ರಾದ್ಧೀ ಬ್ರಹ್ಮಲೋಕಂ ನಯೇತ್ಪಿತೄನ್ ।**
**ದಕ್ಷಿಣಾಗ್ನಿಪದೇ ಶ್ರಾದ್ಧೀ ಪಿತೄನ್ಬ್ರಹ್ಮಪುರಂ ನಯೇತ್ ॥ ೩೯ ॥**

---

೩೬. ಈ ಕ್ಷೇತ್ರವು ದರ್ಶನ, ಸ್ಪರ್ಶನ, ಪೂಜನ. ಶ್ರಾದ್ಧಕರಣ, ಪಿಂಡಾರ್ಪಣ, ಇವುಗಳಿಂದ ಪಿತೃಗಳಿಗೆ ಅಕ್ಷಯಫಲಪ್ರದವಾಗುವುದು. ಮತ್ತು ಯಜಮಾನನ ಸಾವಿರಾರು ವಂಶಗಳು ಉದ್ಧೃತವಾಗುವುವು.

೩೭. ಈ ವಿಷ್ಣುಪದವು ದಿವ್ಯವೂ, ಅನಂತವೂ ಆದ ಮೋಕ್ಷವನ್ನು ಪಿತೃಗಳಿಗೆ ಕೊಡತಕ್ಕದ್ದಾಗಿದೆ. ದಿವ್ಯವಾದ ಶಿವಸ್ಥಳವಾದರೋ ಶ್ರಾದ್ಧವನ್ನು ಮಾಡಿದ ಪುರುಷರ ನೂರಾರು ವಂಶದವರಿಗೆ ಶಿವಪದವನ್ನು ದಾಯಕವಾಗಿದೆ.

೩೮. ಶಿವಪದದಲ್ಲಿ ಶ್ರಾದ್ಧವನ್ನು ಮಾಡಿದವನಿಗೂ ಅವನ ನೂರಾರು ವಂಶದವರಿಗೂ ಶಿವಪದವಿಯು ಸಿಕ್ಕುವುದು. ಬ್ರಹ್ಮಪದದಲ್ಲಿ ಶ್ರಾದ್ಧಾದಿಗಳನ್ನು ಮಾಡಿದರೆ ಪಿತೃಗಳೂ, ನೂರಾರು ವಂಶದವರೂ, ಉದ್ಧೃತರಾಗಿ ಬ್ರಹ್ಮಪದವಿಯನ್ನು ಹೊಂದುವರು.

೩೯. ಕಶ್ಯಪರ ಆಶ್ರಮದಲ್ಲಿ ಶ್ರಾದ್ಧವನ್ನು ಮಾಡಿದ ಪುರುಷನು ಪಿತೃಗಳಿಗೆ ಸ್ವರ್ಗಪದವಿಯನ್ನು ದೊರಕಿಸುವನು. ದಕ್ಷಿಣಾಗ್ನಿಪದದಲ್ಲಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಬ್ರಹ್ಮಪದವಿಯು ದೊರೆಯುವುದು.

ಗಾರ್ಹಪತ್ಯಪದೇ ಶ್ರಾದ್ಧೀ ವಾಜಪೇಯಫಲಂ ಲಭೇತ್ ।
ಶ್ರಾದ್ಧಂ ಕೃತ್ವಾಹವನೀಯೇ ಅಶ್ವಮೇಧಫಲಂ ಲಭೇತ್ ॥ ೬೦ ॥

ಶ್ರಾದ್ಧಂ ಕೃತ್ವಾ ಸಭ್ಯಪದೇ ಜ್ಯೋತಿಷ್ಟೋಮಫಲಂ ಲಭೇತ್ ।
ಆವಸಥ್ಯಪದೇ ಶ್ರಾದ್ಧೀ ಪಿತೄನ್ ಬ್ರಹ್ಮಪುರಂ ನ ಯೇತ್ ॥ ೬೧ ॥

ಶ್ರಾದ್ಧಂ ಕೃತ್ವಾ ಶಕ್ರಪದೇ ಇಂದ್ರಲೋಕಂ ನಯೇತ್ಪಿತೄನ್ ।
ಅಗಸ್ತ್ಯಸ್ಯ ಪದೇ ಶ್ರಾದ್ಧೀ ಪಿತೄನ್ ಬ್ರಹ್ಮಪುರಂ ನಯೇತ್ ॥ ೬೨ ॥

ಕ್ರೌಂಚಮಾತಂಗಯೋಃ ಶ್ರಾದ್ಧೀ ಬ್ರಹ್ಮಲೋಕಂ ನಯೇತ್ಪಿತೄನ್ ।
ಶ್ರಾದ್ಧೀ ಸೂರ್ಯಪದೇ ಪಂಚ ಪಾಪಿನೋಽರ್ಕಪುರಂ ನಯೇತ್ ॥ ೬೩ ॥

ಕಾರ್ತಿಕೇಯಪದೇ ಶ್ರಾದ್ಧೀ ಶಿವಲೋಕಂ ನಯೇತ್ಪಿತೄನ್ ।
ಗಣೇಶಸ್ಯ ಪದೇ ಶ್ರಾದ್ಧೀ ರುದ್ರಲೋಕಂ ನಯೇತ್ಪಿತೄನ್ ॥ ೬೪ ॥

---

೬೦. ಗಾರ್ಹಪತ್ಯಪದದಲ್ಲಿ ಶ್ರಾದ್ಧವನ್ನು ಮಾಡಿದರೆ ವಾಜಪೇಯಯಾಗದ ಮಹಾಫಲವೂ, ಆಹವನೀಯಪದದಲ್ಲಿ ಪಿತೃಕಾರ್ಯವನ್ನು ಮಾಡಿದರೆ ಅಶ್ವಮೇಧ ಯಾಗದ ಫಲವೂ ಲಭಿಸುವುದು.

೬೧. ಸಭ್ಯಪದದಲ್ಲಿ ಶ್ರಾದ್ಧವನ್ನು ಮಾಡಿದರೆ ಜ್ಯೋತಿಷ್ಟೋಮ ಯಾಗದ ಫಲವು ಲಭಿಸುವುದು. ಆ ವಸಥ್ಯಪದದಲ್ಲಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಬ್ರಹ್ಮಪದವಿಯು ಪ್ರಾಪ್ತವಾಗುವುದು.

೬೨. ಶುಕ್ರಪದದಲ್ಲಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಇಂದ್ರ ಪದವಿಯೂ, ಅಗಸ್ತ್ಯಾಶ್ರಮದಲ್ಲಿ ಪಿತೃಕಾರ್ಯವನ್ನು ಮಾಡಿದರೆ ಬ್ರಹ್ಮಪದವಿಯೂ ದೊರೆಯುವುವು.

೬೩. ಕ್ರೌಂಚಪದ ಮಾತಂಗಪದಗಳಲ್ಲಿ ಶ್ರಾದ್ಧವನ್ನು ಮಾಡುವವನು ತಮ್ಮ ಪಿತೃಗಳಿಗೆ ಮೋಕ್ಷವನ್ನು ಕೊಡಿಸುವನು. ಸೂರ್ಯಪದದಲ್ಲಿ ಶ್ರಾದ್ಧವನ್ನು ಮಾಡಿದವನು ಪಿತೃಗಳು ಪಂಚಪಾತಕರಾಗಿದ್ದರೂ ಅವರನ್ನು ಸೂರ್ಯಲೋಕವನ್ನು ಹೊಂದಿಸುವನು.

೬೪. ಕಾರ್ತಿಕೇಯಾಶ್ರಮಕ್ಕೆ ಹೋಗಿ ಶ್ರಾದ್ಧವನ್ನು ಮಾಡಿದವನು ಪಿತೃಗಳಿಗೆ ಶಿವಪದವಿಯನ್ನು ಕೊಡಿಸುವನು. ಗಣೇಶಾಶ್ರಮದಲ್ಲಿ ಶ್ರಾದ್ಧವನ್ನು ಮಾಡಿದವನ ಪಿತೃಗಳು ರುದ್ರಲೋಕವನ್ನು ಹೊಂದುವರು.

ಗಜಕರ್ಣತರ್ಪಣಕೃನ್ನಿರ್ಮಲಂ ಸ್ವರ್ಗಯೇತ್ಪಿತೄನ್ ।
ಅನ್ಯೇಷಾಂ ಚ ಪದೇ ಶ್ರಾದ್ಧೀ ಪಿತೄನ್ ಬ್ರಹ್ಮಪುರಂ ನಯೇತ್ ॥ ೬೫ ॥

ಸರ್ವೇಷಾಂ ಕಾಶ್ಯಪಂ ಶ್ರೇಷ್ಠಂ ವಿಷ್ಣೋಃ ರುದ್ರಸ್ಯ ವೈ ಪದಂ ।
ಬ್ರಹ್ಮಣಶ್ಚ ಪದಂ ಚಾಪಿ ಶ್ರೇಷ್ಠಂ ತತ್ರ ಪ್ರಕೀರ್ತಿತಂ ॥ ೬೬ ॥

ಪ್ರಾರಂಭೇ ಚ ಸಮಾಪ್ತೌ ಚ ತೇಷಾಮನ್ಯತಮಂ ಸ್ಮೃತಂ ।
ಶ್ರೇಯಸ್ಕರಂ ಭವೇತ್ತತ್ರ ಶ್ರಾದ್ಧಕರ್ತುಶ್ಚ ನಾರದ ॥ ೬೭ ॥

ಕಶ್ಯಪಸ್ಯ ಪದೇ ದಿವ್ಯೇ ಭಾರದ್ವಾಜೋ ಮುನಿಃ ಪುರಾ ।
ಶ್ರಾದ್ಧಂ ಕೃತ್ವೋದ್ಯತೋ ದಾತುಂ ಪಿತ್ರಾದಿಭ್ಯಶ್ಚ ಪಿಂಡಕಂ ॥ ೬೮ ॥

೬೫. ಗಜಕರ್ಣಾದಿಸ್ಥಾನಗಳಲ್ಲಿ ತರ್ಪಣಾದಿಗಳನ್ನು ಮಾಡಿದರೆ ಪಿತೃಗಳಿಗೆ ಸ್ವರ್ಗಲೋಕವೂ, ಇತರಾಶ್ರಮಗಳಲ್ಲಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಬ್ರಹ್ಮಪದ ಪ್ರಾಪ್ತಿಯೂ ಉಂಟಾಗುವುದು.

೬೬. ಸಮಸ್ತವಾದ ಆಶ್ರಮಸ್ಥಾನಕ್ಕಿಂತಲೂ, ಕಾಶ್ಯಪಸ್ಥಾನವು ಉತ್ತಮವಾಗಿರುವುದು. ಆ ಸ್ಥಾನಕ್ಕಿಂತಲೂ ವಿಷ್ಣುಪದ, ರುದ್ರಪದ, ಬ್ರಹ್ಮಪದ ಇವು ಅತ್ಯಂತೋತ್ತಮವಾಗಿವೆಯೆಂದು ಮಹಾತ್ಮರು ಹೇಳಿರುವರು

೬೭. ಎಲೈ ನಾರದಮುನಿಯೇ, ಆರಂಭದಲ್ಲಿಯೂ, ಸಮಾಪ್ತಿಯಲ್ಲಿಯೂ ಈ ಮೇಲೆ ಹೇಳಿದ ಕ್ಷೇತ್ರಗಳಲ್ಲಿ ಯಾವುದಾದರೂ ಒಂದು ಕ್ಷೇತ್ರವು ಉತ್ತಮವೂ, ಶ್ರೇಯಸ್ಕರವೂ ಆಗಿರುವುದು. ಅದರಲ್ಲಿ ಶ್ರಾದ್ಧಮಾಡಿದರೆ ಅನಂತಫಲವು ಉಂಟಾಗುವುದು.

೬೮–೭೧. ಎಲೈ ನಾರದನೇ, ಪೂರ್ವದಲ್ಲಿ ಭರದ್ವಾಜಮುನಿಯು ದಿವ್ಯವಾದ ಕಶ್ಯಪದೇಶದಲ್ಲಿ ಶ್ರಾದ್ಧವನ್ನು ಮಾಡಿ ಪಿತೃಗಳಿಗೆ ಪಿಂಡದಾನವನ್ನು ಮಾಡಲು ಉದ್ಯುಕ್ತನಾದನು. ಆಗ ಬಿಳುಪು, ಕಪ್ಪು ಆದ ಎರಡು ಕೈಗಳು ಭೂಮಿಯನ್ನು ಭೇದಿಸಿಕೊಂಡು ಆವಿರ್ಭವಿಸಿದುವು. ಆ ಎರಡು ಹಸ್ತಗಳನ್ನು ನೋಡಿ ಮುನಿಯು ಸಂಶಯಗ್ರಸ್ಥನಾದನು. ಅನಂತರ ಆ ಮುನಿಯು ತನ್ನ ತಾಯಿಯಾದ ಶಾಂತಾ

ಶುಕ್ಲಕೃಷ್ಣೌ ತತೋ ಹಸ್ತೌ ಪದಮುದ್ಭಿದ್ಯ ನಿರ್ಗತೌ ।
ದೃಷ್ಟ್ವಾ ಹಸ್ತದ್ವಯಂ ತತ್ರ ಮುನಿಃ ಸಂಶಯಮಾಗತಃ ॥ ೬೯ ॥

ತತಃ ಸ್ವಮಾತರಂ ಶಾಂತಾಂ ಪಪ್ರಚ್ಛ ಸ ಮಹಾಮುನಿಃ ।
ಕಶ್ಯಪಸ್ಯ ಪದೇ ದಿವ್ಯೇ ಶುಕ್ಲೇ ಕೃಷ್ಣೇಽಥ ವಾ ಕರೇ ॥ ೭೦ ॥

॥ ಶಾಂತೋವಾಚ ॥

ಪಿಂಡೋ ದೇಯೋ ಮಯಾ ಮಾತರ್ಜಾನಾಸಿ ಪಿತರಂ ವದ ।
ಭಾರದ್ವಾಜ ಮಹಾಪ್ರಾಜ್ಞ ದೇಹಿ ಕೃಷ್ಣಾಯ ಪಿಂಡಕಂ ॥ ೭೧ ॥

ಭಾರದ್ವಾಜಸ್ತತಃ ಪಿಂಡಂ ದಾತುಂ ಕೃಷ್ಣಾಯ ಚೋದ್ಯತಃ ।
ಶ್ವೇತೋಽದೃಶ್ಯೋಽಬ್ರವೀತ್ತತ್ರ ಪುತ್ರಸ್ತ್ವಂ ಹಿ ಮಮೌರಸಃ ॥ ೭೨ ॥

ಕೃಷ್ಣೋಽಬ್ರವೀನ್ಮಮ ಕ್ಷೇತ್ರಂ ತತೋ ಮೇ ದೇಹಿ ಪಿಂಡಕಂ ।
ಸ್ವೈರಿಣ್ಯಥಾಬ್ರವೀದ್ದಾತುಂ ಕ್ಷೇತ್ರಿಣೇ ಬೀಜಿನೇ ತತಃ ॥ ೭೩ ॥

ದೇವಿಯನ್ನು ಕೇಳಿದನು. ಈ ಕಶ್ಯಪಾತ್ರಮದಲ್ಲಿ ಪಿಂಡದಾನ ಮಾಡುವಾಗ ಎರಡು ಕರಗಳು ಆವಿರ್ಭವಿಸಿವೆ. ಇವುಗಳಲ್ಲಿ ತಂದೆಯ ಹಸ್ತವು ಯಾವುದು ? ಯಾವ ಕರದಲ್ಲಿ ಪಿಂಡದಾನಮಾಡಲೆಂದು ಕೇಳಿದನು. ಆಗ ಶಾಂತೆಯು ಹೇಳಿದಳು :— ಎಲೈ ಜ್ಞಾನಿಯಾದ ಭರದ್ವಾಜನೇ, ನೀನು ಕೃಷ್ಣವರ್ಣವಾದ ಕರದಲ್ಲಿ ದಾನವನ್ನು ಮಾಡು, ಅದು ನಿನ್ನ ತಂದೆಯ ಹಸ್ತವಾಗಿದೆಯೆಂದು ಹೇಳಿದಳು.

೭೨. ಅನಂತರ ಭರದ್ವಾಜಮುನಿಯು ಕೃಷ್ಣಹಸ್ತದಲ್ಲಿ ಮಾತೆಯ ಮಾತಿನಂತೆ ಪಿಂಡದಾನವನ್ನು ಮಾಡಲು ಯತ್ನಿಸಿದನು. ಆಗ ಶುಭ್ರಹಸ್ತವು ಮಾಯವಾಗಿ ಎಲೈ ಭರದ್ವಾಜನೇ, ನೀನು ನನ್ನ ಔರಸಕುಮಾರನಾಗಿರುತ್ತಿ. ನನ್ನ ಹಸ್ತದಲ್ಲಿ ಪಿಂಡವನ್ನು ದಾನಮಾಡಬೇಕಲ್ಲವೇ ಎಂದು ತಂದೆಯು ಹೇಳಿದನು.

೭೩. ಅನಂತರ ಕೃಷ್ಣಕರವು ಎಲೈ ಮುನಿಯೇ, ಇದು ನನ್ನ ಕ್ಷೇತ್ರವಾಗಿದೆ. ಆದುದರಿಂದ ಮೊದಲು ನನಗೆ ದಾನಮಾಡಬೇಕೆಂದು ತಿಳಿಸಿತು. ಹೀಗಿರುವಲ್ಲಿ ತಾಯಿಯು ಮೊದಲು ಕ್ಷೇತ್ರಾಭಿಮಾನಿದೇವತೆಗೂ ಅನಂತರ ತಂದೆಗೂ ದಾನವನ್ನು ಕೊಡಬೇಕೆಂದು ಹೇಳಿದಳು.

ಭಾರದ್ವಾಜಸ್ತತಃ ಪಿಂಡಂ ಕಶ್ಯಪಸ್ಯ ಪದೇ ಪದೇ ।
ಹಂಸಯುಕ್ತವಿಮಾನೇನ ಬ್ರಹ್ಮಲೋಕಮುಭೌ ಗತೌ ॥ ೭೪ ॥

ರಾಮೋ ರುದ್ರಪದೇ ಶ್ರಾದ್ಧೇ ಪಿಂಡದಾನಾಯ ಚೋದ್ಯತಃ ।
ಪಿತಾ ದಶರಥಃ ಸ್ವರ್ಗಾತ್ಪ್ರಸಾರ್ಯ ಕರಮಾಗತಃ ॥ ೭೫ ॥

ನಾದಾತ್ಪಿಂಡಂ ಕರೇ ರಾಮೋ ದದೌ ರುದ್ರಪದೇ ತತಃ ।
ಶಾಸ್ತ್ರಾರ್ಥಾತಿಕ್ರಮಾದ್ಭೀತಂ ರಾಮಂ ದಶರಥೋಽಬ್ರವೀತ್ ॥ ೭೬ ॥

ತಾರಿತೋಽಹಂ ತ್ವಯಾ ಪುತ್ರ ರುದ್ರಲೋಕಮವಾಪ್ನುಯಾಂ ।
ಹಸ್ತೇ ಪಿಂಡಪ್ರದಾನೇನ ಸ್ವರ್ಗತಿರ್ನ ಹಿ ಮೇ ಭವೇತ್ ॥ ೭೭ ॥

---

೭೪. ಅನಂತರ ಭರದ್ವಾಜಮುನಿಯು ಕ್ಷೇತ್ರಾಭಿಮಾನಿಯಾದ ಕಶ್ಯಪರ ಹಸ್ತದಲ್ಲಿ ಮೊದಲು ಪಿಂಡದಾನವನ್ನು ಮಾಡಿದನು. ತರುವಾಯ ಅವರಿಬ್ಬರೂ ಹಂಸಗಳಿಂದ ಯುಕ್ತವಾದ ದಿವ್ಯವಿಮಾನದಲ್ಲಿ ಕೂತು ಬ್ರಹ್ಮಲೋಕಕ್ಕೆ ಹೋದರು.

೭೫. ಪೂರ್ವದಲ್ಲಿ ಶ್ರೀರಾಮಚಂದ್ರನು ರುದ್ರಪದದಲ್ಲಿ ಶ್ರಾದ್ಧವನ್ನು ಮಾಡಿ ಪಿಂಡದಾನಮಾಡಲು ಪ್ರಯತ್ನಿಸಿದನು. ಅನಂತರ ದಶರಥಮಹಾರಾಜನು ಕೈಗಳನ್ನು ನೀಡಿಕೊಂಡು ಅಲ್ಲಿಗೆ ಬಂದು ನಿಂತನು.

೭೬. ಆ ಶ್ರೀರಾಮನು ದಶರಥರಾಯನ ಹಸ್ತದಲ್ಲಿ ಪಿಂಡದಾನವನ್ನು ಮಾಡದೆಯೇ ರುದ್ರಪದದಲ್ಲಿಯೇ ಮೊದಲು ಪಿಂಡವನ್ನು ಕೊಟ್ಟನು. ಅನಂತರ ಇದು ಶಾಸ್ತ್ರಾತಿಕ್ರಮವೆಂದು ಭೀತನಾದ ಶ್ರೀರಾಮನಿಗೆ ದಶರಥನು ಹೀಗೆ ಹೇಳಿದನು.

೭೭. ಎಲೈ ಕುಮಾರನಾದ ಶ್ರೀರಾಮಚಂದ್ರನೇ, ನೀನು ರುದ್ರಪದದಲ್ಲಿ ಪಿಂಡದಾನ ಮಾಡಿದ್ದರಿಂದ ನಾನು ರುದ್ರದೇವನ ಲೋಕಕ್ಕೆ ಹೋಗುವೆನು. ನೀನು ರುದ್ರಕರದಲ್ಲಿ ಪಿಂಡದಾನಮಾಡದೇ ನನ್ನ ಹಸ್ತದಲ್ಲಿ ದಾನಮಾಡಿದ್ದರೆ ನನಗೆ ಸ್ವರ್ಗ ಪದವಿಯು ಸಿಕ್ಕುತ್ತಿರಲಿಲ್ಲವೆಂದು ಹೇಳಿದನು.

ತ್ವಂ ಚ ರಾಜ್ಯಂ ಚಿರಂ ಕೃತ್ವಾ ಪಾಲಯಿತ್ವಾ ದ್ವಿಜಾನ್ಪ್ರಜಾಃ ।
ಯಜ್ಞಾನ್ ಸದಕ್ಷಿಣಾನ್ ಕೃತ್ವಾ ವಿಷ್ಣುಲೋಕಂ ವ್ರಜಿಷ್ಯತಿ ॥ ೭೮ ॥

ಪುರ್ಯಯೋಧ್ಯಾಜನೈಃ ಸಾರ್ಧ್ಧಂ ಕೃಮಿಕೀಟಾದಿಭಿಃ ಸಹಃ ।
ಇತ್ಯುಕ್ತ್ವಾಸೌ ದಶರಥೋ ರುದ್ರಲೋಕಂ ಪರಂ ಯಯೌ ॥ ೭೯ ॥

ಭೀಷ್ಮೋ ವಿಷ್ಣುಪದೇ ಶ್ರೇಷ್ಠೇ ಆಹೂಯ ಪಿತರಂ ಸ್ವಕಂ ।
ಶ್ರಾದ್ಧಂ ಕೃತ್ವೋದ್ಯತೋ ದಾತುಂ ಪಿತ್ರಾದಿಭ್ಯಶ್ಚ ಪಿಂಡಕಂ ॥ ೮೦ ॥

ಪಿತುರ್ವಿನಿರ್ಗತೌ ಹಸ್ತೌ ಗಯಾಶಿರಸಿ ಶಂತನೋಃ ।
ನಾದಾತ್ಪಿಂಡಂ ಕರೇ ಭೀಷ್ಮೋ ದದೌ ವಿಷ್ಣುಪದೇ ತತಃ ॥ ೮೧ ॥

೭೯. ಎಲೈ ಕುಮಾರನೇ. ಅಯೋಧ್ಯಾಪುರವಾಸಿಗಳಾದ ಸ್ತ್ರೀಪುರುಷರೇ ಆದಿಯಾಗಿ ಕ್ರಿಮಿಕೀಟಾದಿಗಳಿಂದ ಕೂಡಿ ವಿಷ್ಣುಪದವಿಯನ್ನು ಪಡೆಯುವನಾಗೆಂದು ಹೇಳಿ ದಶರಥರಾಯನು ಉತ್ತಮವಾದ ರುದ್ರಪದವಿಯನ್ನು ಹೊಂದಿದನು.

೭೮. ಎಲೈ ಕುಮಾರನೇ, ನೀನು ಬಹುಕಾಲ ರಾಜ್ಯವನ್ನಾಳಿ ಬ್ರಾಹ್ಮಣರೇ ಮೊದಲಾದ ಪ್ರಜೆಗಳನ್ನು ಧರ್ಮದಿಂದ ಪಾಲಿಸಿ ದಕ್ಷಿಣಾಸಹಿತವಾದ ಯಾಗವನ್ನು ಮಾಡಿ ವಿಷ್ಣುಲೋಕವನ್ನು ಹೊಂದು ಎಂದನು.

೮೦. ಪೂರ್ವದಲ್ಲಿ ಭೀಷ್ಮನು ಉತ್ತಮವಾದ ವಿಷ್ಣುಪಾದದಲ್ಲಿ ತಮ್ಮ ಪಿತೃಗಳನ್ನು ಕರೆದು ಶ್ರಾದ್ಧವನ್ನು ಮಾಡಿ ಪಿತ್ರಾದಿಗಳಿಗೆ ಪಿಂಡದಾನವನ್ನು ಮಾಡಲು ಉದ್ಯುಕ್ತನಾದನು.

೮೧. ಆಗ ಗಯಾಶಿರಸ್ಸಿನಲ್ಲಿ ತಂದೆಯ ಎರಡು ಕೈಗಳೂ ದೃಷ್ಟವಾದುವು. ಆಗ ಭೀಷ್ಮನು ತನ್ನ ತಂದೆಯಾದ ಶಂತನುಚಕ್ರವರ್ತಿಯ ಕೈಗಳಲ್ಲಿ ಪಿಂಡವನ್ನು ಕೊಡದೆ ವಿಷ್ಣುಪದದಲ್ಲಿಯೇ ದಾನಮಾಡಿದನು.

ಶಂತನುಃ ಪ್ರಾಹ ಸಂತುಷ್ಟಃ ಶಾಸ್ತ್ರಾರ್ಥೇ ನಿಶ್ಚಲೋ ಭವಾನ್ ।
ತ್ರಿಕಾಲದೃಷ್ಟಿರ್ಭವತು ಚಾಂತೇ ವಿಷ್ಣುಶ್ಚ ತೇ ಗತಿಃ ॥ ೮೨ ॥

ಸ್ವೇಚ್ಛಯಾ ಮರಣಂ ಚಾಸ್ತು ಇತ್ಯುಕ್ತ್ವಾ ಮುಕ್ತಿಮಾಗತಃ ।
ಕನಕೇಶಂ ಚ ಕೇದಾರಂ ನಾರಸಿಂಹಂ ಚ ವಾಮನಂ ॥ ೮೩ ॥

ಉದಙ್ಮಾರ್ಗೇ ಸಮಭ್ಯರ್ಚ್ಯ ಪಿತೄನ್ ಸರ್ವಾಂಶ್ಚ ತಾರಯೇತ್ ।
ಗಯಾಶಿರಸಿ ಯಃ ಪಿಂಡಾನ್ಯೇಷಾಂ ನಾಮ್ನಾ ತು ನಿರ್ವಪೇತ್ ॥ ೮೪ ॥

ನರಕಸ್ಥಾ ದಿವಂ ಯಾಂತಿ ಸ್ವರ್ಗಸ್ಥಾ ಮೋಕ್ಷಮಾಪ್ನುಯುಃ ।
ಗಯಾಶಿರಸಿ ಯಃ ಪಿಂಡಂ ಶಮೀಪತ್ರಪ್ರಮಾಣತಃ ॥ ೮೫ ॥

---

೮೨–೮೩. ಅನಂತರ ಚಕ್ರವರ್ತಿಯು ಸಂತುಷ್ಟನಾಗಿ ಕುಮಾರನಾದ ಭೀಷ್ಮನನ್ನು ಕುರಿತು, ಎಲೈ ಕುಮಾರನೇ ನೀನು ಶಾಸ್ತ್ರಗಳಲ್ಲಿ ಅತ್ಯಂತ ನಿಪುಣನಾಗಿರುತ್ತೀಯೆ. ಆದುದರಿಂದ ನಿನಗೆ ತ್ರಿಕಾಲಜ್ಞಾನವು ಸಂಭವಿಸಲಿ. ಅಂತ್ಯದಲ್ಲಿ ಪರಮಪದವಿಯಾದ ಮುಕ್ತಿಯು ಉಂಟಾಗಲಿ, ಮತ್ತು ನಿನ್ನ ಇಷ್ಟಾನುಸಾರವಾಗಿ ಮರಣವು ಸಂಭವಿಸಲೆಂದು ವರವನ್ನು ಕೊಟ್ಟು ತಾನೂ ಮುಕ್ತಿಯನ್ನು ಪಡೆದನು. ಇದರಂತೆ ಕನಕೇಶ್ವರ, ಕೇದಾರೇಶ, ನಾರಸಿಂಹ ಮತ್ತು ವಾಮನ ಇವರನ್ನು ಪೂಜಿಸಿ ಆಯಾ ಸ್ಥಳಗಳಲ್ಲಿ ಶ್ರಾದ್ಧ ಪಿಂಡದಾನಗಳನ್ನು ಮಾಡಿದರೆ ಪಿತೃಗಳು ಮೋಕ್ಷವನ್ನು ಹೊಂದುವರು.

೮೪–೮೫. ಉತ್ತರಮಾರ್ಗದಲ್ಲಿರುವ ದೇವತೆಗಳನ್ನು ಪೂಜಿಸಿ, ಉತ್ತರಕ್ರಿಯೆಗಳನ್ನು ಮಾಡಿದರೆ ಸರ್ವಪಿತೃಗಳೂ, ಉದ್ಧೃತರಾಗುವರು. ಗಯಾಶಿರಸ್ಸಿನಲ್ಲಿ ನಾಮೋಚ್ಚಾರಪೂರ್ವಕವಾಗಿ ಯಾರಿಗೋಸ್ಕರ ಪಿಂಡದಾನವನ್ನು ಮಾಡುವರೋ ಅವರು ನರಕದಲ್ಲಿದ್ದರೆ ಅಲ್ಲಿಂದ ಸ್ವರ್ಗಕ್ಕೂ, ಸ್ವರ್ಗದಲ್ಲಿದ್ದರೆ ಮುಕ್ತಿಗೂ, ಹೋಗುವರು. ಆ ಗಯೆಯಲ್ಲಿ ಕೊಡತಕ್ಕ ಪಿಂಡಗಳು ಶಮೀವೃಕ್ಷದ ಎಲೆಯಷ್ಟು ಪ್ರಮಾಣವಾಗಿದ್ದರೂ ಸಾಕು. ಅದರಿಂದಲೇ ಮಹಾಫಲಗಳು ಲಭಿಸುವುವು.

ಕಂದಮೂಲ ಫಲಾದ್ಯೈರ್ವಾ ದದ್ಯಾತ್ ಸ್ವರ್ಗಂ ನಯೇತ್ಪಿತೄನ್ ।
ಪದಾನಿ ಯತ್ರ ದೃಶ್ಯಂತೇ ವಿಷ್ಣ್ವಾದೀನಾಂ ತದಗ್ರತಃ ॥ ೮೬ ॥

ಶ್ರಾದ್ಧಂ ಕೃತ್ವಾ ಸಪಿಂಡಂ ಚ ತೇಷಾಂ ಲೋಕಾನಯೇತ್ಪಿತೄನ್ ।
ಸರ್ವತ್ರ ಮುಂಡಪೃಷ್ಠಾದ್ರಿಃ ಪದೈರೇಭಿಃ ಸುಲಕ್ಷಿತಃ ॥ ೮೭ ॥

ಪ್ರಯಾಂತಿ ಪಿತರಃ ಸರ್ವೇ ಬ್ರಹ್ಮಲೋಕಮನಾಮಯಂ ।
ಹೇತ್ಯಸುರಸ್ಯ ಯಚ್ಛೀರ್ಷಂ ಗದಯಾ ತದ್ದ್ವಿಧಾಕೃತಂ ॥ ೮೮ ॥

ತತಃ ಪ್ರಕ್ಷಾಲಿತಾ ಯಸ್ಮಾತ್ತೀರ್ಥಂ ತಚ್ಚ ವಿಮುಕ್ತಯೇ ।
ಗದಾಲೋಲಮಿತಿಖ್ಯಾತಂ ಸರ್ವೇಷಾಮುತ್ತಮೋತ್ತಮಂ ॥ ೮೯ ॥

ಗದಾಲೋಲೇ ಮಹಾತೀರ್ಥೇ ಗದಾಪ್ರಕ್ಷಾಲನಾದ್ಧರೇಃ ।
ಸ್ನಾನಂ ಕರೋಮಿ ಸಿದ್ಧ್ಯರ್ಥಮಕ್ಷಯಂ ಪದಮಾಪ್ನುಯಾಂ ॥ ೯೦ ॥

೮೬. ಗಯಾದಿಕ್ಷೇತ್ರಗಳಲ್ಲಿ ಕಂದಮೂಲ ಫಲಾದಿಗಳನ್ನು ದಾನಮಾಡಿದರೂ ಪಿತೃಗಳು ಸ್ವರ್ಗಕ್ಕೆ ಹೋಗುವರು. ವಿಷ್ಣುವೇ ಮೊದಲಾದವರ ಪಾದದರ್ಶನವೂ ಕೂಡ ಮುಕ್ತಿದಾಯಕವಾಗಿರುತ್ತದೆ.

೮೭ ಮೇಲೆ ಹೇಳಿದ ಸ್ಥಳಗಳಲ್ಲಿ ಪಿತೃಕಾರ್ಯವನ್ನು ಮಾಡಿ ಪಿಂಡದಾನವನ್ನು ಮಾಡಿದರೆ ಪಿತೃಗಳಿಗೆ ಮುಕ್ತಿಯು ದೊರೆಯುವುದು. ಎಲ್ಲಕ್ಕಿಂತಲೂ ಮುಂಡಪೃಷ್ಠಾದ್ರಿಯಲ್ಲಿ ದೇವತೆಗಳ ಪಾದಗಳು ಸ್ಪಷ್ಟವಾಗಿ ಕಾಣುತ್ತಿರುವುವು.

೮೮–೯೦. ಅವುಗಳಲ್ಲಿ ಜಪತಪಾದಿಗಳನ್ನೂ, ಪಿತೃಕಾರ್ಯವನ್ನೂ, ಮಾಡಿದರೆ ಸಮಸ್ತ ಪಿತೃಗಳೂ ಮೋಕ್ಷರೂಪವಾದ ಬ್ರಹ್ಮಲೋಕವನ್ನು ಹೊಂದುವರು. ಹೇತಿ ನಾಮಕಾಸುರನ ಶಿರಸ್ಸು ಯಾವ ಗದಾಯುಧದಿಂದ ಎರಡು ಭಾಗವಾಗಿ ಮಾಡಲ್ಪಟ್ಟಿತೋ, ಅವು ಯಾವ ಯಾವ ಕ್ಷೇತ್ರಗಳಲ್ಲಿ ತೊಳೆಯಲ್ಪಟ್ಟುವೋ, ಆ ತೀರ್ಥಗಳು ಮುಕ್ತಿದಾಯಕವಾಗಿವೆ. ಗದಾಲೋಲವೆಂಬ ಕ್ಷೇತ್ರವು ಎಲ್ಲಾ ಕ್ಷೇತ್ರಕ್ಕಿಂತಲೂ ಉತ್ತಮವಾಗಿದೆ. ಅಂತಹ ಗದಾಲೋಲ ಮಹಾಕ್ಷೇತ್ರದಲ್ಲಿ ಶ್ರೀಹರಿಯು ಗದೆಯನ್ನು ತೊಳೆದುದರಿಂದ ಅದು ಪವಿತ್ರವಾಗಿದೆ. ಅಲ್ಲಿ ಸ್ನಾನ ಕರ್ಮಾದಿಗಳನ್ನು ಮಾಡಿದರೆ ಅಕ್ಷಯವಾದ ವಿಷ್ಣುಪದವಿಯು ಪ್ರಾಪ್ತಿಯಾಗುವುದು.

ಪಂಚಮೇಽಹ್ನಿ ಗದಾಲೋಲೇ ಸ್ನಾತ್ವಾ ಕುರ್ಯಾತ್ಸಪಿಂಡಕಂ ।
ಶ್ರಾದ್ಧಂ ಪಿತ್ರ್ಯಾ ಬ್ರಹ್ಮಲೋಕಂ ನಯೇದಾತ್ಮಾನಮೇವ ಚ ॥ ೯೧

ಬ್ರಹ್ಮಪ್ರಕಲ್ಪಿತಾನ್ವಿಪ್ರಾನ್ ಹವ್ಯಕವ್ಯಾದಿನಾರ್ಚಯೇತ್ ।
ತೈಸ್ತುಷ್ಟೈಸ್ತೋಷಿತಾಃ ಸರ್ವಾಃ ಪಿತೃಭಿಃ ಸಹ ದೇವತಾಃ ॥ ೯೨ ॥

ಕೃತೇ ಶ್ರಾದ್ಧೇಽಕ್ಷಯವಟೇ ಅನ್ನೇನೈವ ಪ್ರಯತ್ನತಃ ।
ಪಿತೄನ್ನಯೇದ್ಬ್ರಹ್ಮಲೋಕಮಕ್ಷಯಂ ತು ಸನಾತನಂ ॥ ೯೩ ॥

ವಟವೃಕ್ಷಸಮೀಪೇ ತು ಶಾಕೇನಾಪ್ಯುದಕೇನ ವಾ ।
ಏಕಸ್ಮಿನ್ ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ॥ ೯೪ ॥

---

೯೧. ಐದನೆಯ ದಿವಸದಲ್ಲಿ ಗದಾಲೋಲತೀರ್ಥದಲ್ಲಿ ಸ್ನಾನವನ್ನು ಮಾಡಿ ಶ್ರಾದ್ಧಪಿಂಡದಾನಗಳನ್ನು ಮಾಡಿದರೆ ತನಗೂ, ಪಿತೃಗಳಿಗೂ, ಬ್ರಹ್ಮಲೋಕ ಪ್ರಾಪ್ತಿಯಾಗುವುದು.

೯೨. ಬ್ರಹ್ಮದೇವನಿಂದ ಕಲ್ಪಿತರಾದ ಬ್ರಾಹ್ಮಣರನ್ನು ಹವ್ಯಕಾವ್ಯಾದಿಗಳಲ್ಲಿ ಪೂಜಿಸಬೇಕು. ಅವರು ಸಂತುಷ್ಟರಾದರೆ ಸಮಸ್ತ ಪಿತೃಗಳೂ ಮತ್ತು ದೇವತೆಗಳೂ ತೃಪ್ತರಾಗುವರು.

೯೩. ಪುರುಷನು ಅಕ್ಷಯವಟದಲ್ಲಿ ಶ್ರಾದ್ಧವನ್ನು ಮಾಡಿ ಪ್ರಯತ್ನಪೂರ್ವಕ ವಾಗಿ ಅನ್ನದಾನವನ್ನು ಮಾಡಿದರೆ ಪಿತೃಗಳು ಅಕ್ಷಯವೂ, ಸನಾತನವೂ ಆದ ಬ್ರಹ್ಮಲೋಕವನ್ನು ಹೊಂದುವರು.

೯೪. ಆ ವಟವೃಕ್ಷದ ಸಮೀಪದಲ್ಲಿ ಶಾಕ ಮತ್ತು ಉದಕಾದಿಗಳಿಂದ ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಿದರೆ ಕೋಟಿಸಂಖ್ಯಾಕರಾದ ಬ್ರಾಹ್ಮಣರಿಗೆ ಭೋಜನಮಾಡಿಸಿದ ಫಲವು ಪ್ರಾಪ್ತವಾಗುವುದು.

ದೇಯಂ ದಾನಂ ಷೋಡಶಕಂ ಗಯಾತೀರ್ಥಪುರೋಧಸೇ ।
ವಸ್ತ್ರಂ ಗಂಧಾದಿಭಿಃ ಪುತ್ರೈಃ ಸಮ್ಯಕ್ಸಂಪೂಜ್ಯ ಯತ್ನತಃ ॥ ೯೫ ॥

ಗಯಾತೀರ್ಥವಟೇ ಚೈವ ಪಿತ್ರೂಣಾಂ ದತ್ತಮಕ್ಷಯಂ ।
ದೃಷ್ಟ್ವಾ ನತ್ವಾ ಚ ಸಂಪೂಜ್ಯ ವಟೇಶಂ ಸುಸಮಾಹಿತಃ ॥ ೯೬ ॥

ಪಿತೄನ್ನಯೇದ್ಬ್ರಹ್ಮಲೋಕಮಕ್ಷಯಂ ತು ಸನಾತನಂ ।
ಗಯಾಯಾಂ ಧರ್ಮಪೃಷ್ಠೇ ಚ ಸರಸಿ ಬ್ರಹ್ಮಣಸ್ತಥಾ ॥ ೯೭ ॥

ಗಯಾಶೀರ್ಷೇ ವಟೇ ಚೈವ ಪಿತ್ರೂಣಾಂ ದತ್ತಮಕ್ಷಯಂ ।
ಏಕಾರ್ಣವೇ ವಟಸ್ಯಾಗ್ರೇ ಯಃ ಶೇತೇ ಯೋಗನಿದ್ರಯಾ ॥ ೯೮ ॥

ಬಾಲರೂಪಧರಸ್ತಸ್ಮೈ ನಮಸ್ತೇ ಯೋಗಶಾಯಿನೇ ।
ಸಂಸಾರವೃಕ್ಷ ಶಸ್ತ್ರಾಯಾಶೇಷಪಾಪಹರಾಯ ಚ ॥ ೯೯ ॥

---

೯೫. ಗಯಾಕ್ಷೇತ್ರದಲ್ಲಿ ಪುತ್ರರು ಪಿತೃಗಳ ಉದ್ದೇಶ್ಯವಾಗಿ ಆ ಕ್ಷೇತ್ರ ಪುರೋಹಿತರಿಗೆ ವಸ್ತ್ರಗಂಧಾದಿಗಳಿಂದ ಉಪಚರಿಸಿ ಶೋಡಶೋಪಚಾರಗಳನ್ನು ಮಾಡಬೇಕು.

೯೬. ಗಯಾತೀರ್ಥದಲ್ಲಿಯೂ, ಅಕ್ಷಯವಟದಲ್ಲಿಯೂ, ಪಿತೃಗಳಿಗೆ ಕೊಟ್ಟ ದಾನವು ಅಕ್ಷಯವಾಗುವುದು. ಆದುದರಿಂದ ಆ ವಟೇಶನನ್ನು ದರ್ಶನ, ಸ್ಪರ್ಶನ, ಪೂಜನ ನಮನಾದಿಗಳನ್ನು ಮಾಡಿದರೆ ಅನಂತಫಲವು ದೊರೆಯುವುದು.

೯೭. ಗಯೆಯಲ್ಲಿಯೂ, ಧರ್ಮಪೃಷ್ಠದಲ್ಲಿಯೂ, ಬ್ರಹ್ಮಸರಸ್ಸಿನಲ್ಲಿಯೂ ಶ್ರಾದ್ಧವನ್ನು ಮಾಡಿದರೆ ಅಕ್ಷಯವೂ, ಸನಾತನವೂ ಆದ ಬ್ರಹ್ಮಪದವಿಯು ಅವರವರ ಪಿತೃಗಳಿಗೆ ದೊರೆಯುವುದು.

೯೮–೯೯. ಗಯಾಶಿರಸ್ಸಿನಲ್ಲಿಯೂ, ಅಕ್ಷಯವಟದಲ್ಲಿಯೂ, ಪಿತೃಗಳಿಗೆ ಕೊಟ್ಟ ದಾನವು ಅಕ್ಷಯವಾಗುವುದು. ಪ್ರಳಯೋದಕದಲ್ಲಿರುವ ವಟಪತ್ರದಲ್ಲಿ ಯಾವನು ಯೋಗನಿದ್ರೆಯನ್ನು ಮಾಡುವನೋ ಅಂತಹ ಬಾಲರೂಪಿಯೂ, ಯೋಗಶಾಯಿಯೂ, ಸಂಸಾರವೃಕ್ಷಚ್ಛೇದಕನೂ, ಸಮಸ್ತಪಾಪಪರಿಹಾರಕನೂ ಆದ ಶ್ರೀ ಭಗವಂತನಿಗೆ ಅನಂತ ವಂದನೆಗಳು.

**ಅಕ್ಷಯಬ್ರಹ್ಮದಾತ್ರೇ ಚ ನಮೋಽಕ್ಷಯವಟಾಯ ಚ ।**
**ಕಲೌ ಮಾಹೇಶ್ವರಾ ಲೋಕಾ ಯೇನ ತಸ್ಮಾದ್ಗದಾಧರಃ ॥**
**ಲಿಂಗರೂಪೋಽಭವತ್ತಂ ಚ ವಂದೇ ಶ್ರೀಪ್ರಪಿತಾಮಹಂ ॥ ೧೦೦ ॥**

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ "ಗಯಾಮಾಹಾತ್ಮ್ಯಂ" ನಾಮೋನಪಂಚಾಶತ್ತಮೋಽಧ್ಯಾಯಃ**

---

೧೦೦. ಅಕ್ಷಯವಾದ ಬ್ರಹ್ಮಪದವಿಯನ್ನು ಕೊಡುವ ಗದಾಧರನಿಗೂ ಅಕ್ಷಯ ವಟವೃಕ್ಷಕ್ಕೂ ಅನಂತ ವಂದನೆಗಳು, ಈ ಕಲಿಯುಗದಲ್ಲಿಯೂ ಯಾವನು ಜನರಿಗೆ ಮಾಹೇಶ್ವರ ಪದವಿಯನ್ನು ಕೊಡುವನೋ ಅಂತಹ ಗದಾಧರನಿಗೂ, ಲಿಂಗರೂಪಿಯಾದ ಈಶ್ವರನಿಗೂ, ಬ್ರಹ್ಮನಿಗೂ, ಶ್ರೀಮನ್ನಾರಾಯಣನಿಗೂ ಅನಂತಾನಂತ ವಂದನೆಗಳೆಂದು ಸೂತನು ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಗಯಾಮಾಹಾತ್ಮ್ಯ"ವೆಂಬ ನಲವತ್ತೊಂಭತ್ತನೆಯ ಅಧ್ಯಾಯವು ಸಮಾಪ್ತವಾದುದು.



## ನಲವತ್ತೊಂಭತ್ತನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಗಯಾಕ್ಷೇತ್ರಮಾಹಾತ್ಮ್ಯಗಳೂ, ಶಿಲಾಮಹಿಮೆಗಳೂ, ವಿಶೇಷವಾಗಿ ವರ್ಣಿತಗಳಾಗಿವೆ. ಉತ್ತರ, ದಕ್ಷಿಣ, ಪಶ್ಚಿಮ ಮಾನಸಸರೋವರಗಳಲ್ಲಿ ಸ್ನಾನ ತರ್ಪಣಾದಿಗಳನ್ನು ಮಾಡಿದರೆ ಪಿತೃಗಳು ಮುಕ್ತರಾಗುವರು. ಅಲ್ಲಿರುವ ಖನಕತೀರ್ಥದಲ್ಲಿ ಸ್ನಾನಮಾಡಿದರೆ ಸುವರ್ಣಕಾಂತಿಯುಂಟಾಗುವುದು. ಫಲ್ಗು ತೀರ್ಥ, ನಾಗಕೂಟ, ಗೃಧ್ರಕೂಟ, ಮುಂಡಪೃಷ್ಠ ಇವುಗಳಲ್ಲಿ ಮಾಡಿದ ಕಾರ್ಯವು ಅನಂತಫಲದಾಯಕವಾಗುವುದು. ಅಕ್ಷಯವಟ, ಆಮ್ರಕೂಟ, ಶುಕತೀರ್ಥ ಇವುಗಳಲ್ಲಿ ಶ್ರಾದ್ಧಾದಿಗಳನ್ನು ಮಾಡಿದರೆ ಪಿತೃಗಳು ಮುಕ್ತರಾಗುವರು. ಪೂರ್ವದಲ್ಲಿ ಶ್ರೀರಾಮನು ಗಯಾಶಿರಸ್ಸಿನಲ್ಲಿ ಶ್ರಾದ್ಧಮಾಡಲು ದಶರಥನು ಪಿಂಡವನ್ನು ಸ್ವೀಕರಿಸಲು ಕೈಗಳನ್ನು ನೀಡಿದನು. ಆಗ ರಾಮನು ಆ ದಶರಥನ ಕೈಗಳಲ್ಲಿ ದಾನಮಾಡದೇ ವಿಷ್ಣುಪದದಲ್ಲಿಯೇ ದಾನಮಾಡಿದನು. ಅದರಿಂದ ದಶರಥನು ಮುಕ್ತನಾದನು. ಭೀಷ್ಮನೂ ಕೂಡ ಹಾಗೆ ಮಾಡಿದನು. ಅಕ್ಷಯವಟದಲ್ಲಿ ಒಬ್ಬರಿಗೆ ಅನ್ನೋದಕಗಳನ್ನು ಕೊಟ್ಟರೆ ಕೋಟಿಜನಗಳಿಗೆ ದಾನಮಾಡಿದಂತಾಗುವುದು. ಗಯೆಯಲ್ಲಿಯೂ ಅಕ್ಷಯವಟದಲ್ಲಿಯೂ ಕೂಡ ಪಿತೃಗಳಿಗೆ ಕೊಟ್ಟ ದಾನವು ಅಕ್ಷಯವಾಗುವುದು. ಕರ್ತೃಗಳಿಗೂ ಪಿತೃಗಳಿಗೂ ಅಕ್ಷಯವಾದ ಮೋಕ್ಷವು ಉಂಟಾಗುವುದೆಂಬ ವಿಷಯಗಳು ವರ್ಣಿತವಾಗಿವೆ.



—: ಹರಿಃ ಓಂ : --

— ಶ್ರೀ ವೇದವ್ಯಾಸಾಯ ನಮಃ —

# ಶ್ರೀಮದ್ವಾಯು ಮಹಾ ಪುರಾಣಂ

## ಪಂಚಾಶತ್ತಮೋಽಧ್ಯಾಯಃ

|| ಸನತ್ಕುಮಾರ ಉವಾಚ ||

ಯಜ್ಞಂ ಚಕ್ರೇ ಗಯೋ ರಾಜಾ ಬಹ್ವನ್ನಂ ಬಹುದಕ್ಷಿಣಂ |
ಯತ್ರ ದ್ರವ್ಯಸಮೂಹಾನಾಂ ಸಂಖ್ಯಾ ಕರ್ತುಂ ನ ಶಕ್ಯತೇ || ೧ ||

ಸ್ಥಿತಾ ಗಯೋಯೋಮನ್ನಾದಿಪರ್ವತಾಃ ಪಂಚವಿಂಶತಿಃ |
ಪ್ರಶಂಸಂತಿ ದ್ವಿಜಾಸ್ತತ್ರ ದೇಶೇ ದೇಶೇ ಸುಪೂಜಿತಾಃ || ೨ ||

---

## ಐವತ್ತನೆಯ ಅಧ್ಯಾಯವು

೧. ಪೂರ್ವಕಾಲದಲ್ಲಿ ಗಯಾರಾಜನು ಗಯಾಕ್ಷೇತ್ರದಲ್ಲಿ ಬಹ್ವನ್ನ ಅನೇಕ ದಕ್ಷಿಣೆಗಳು ಉಳ್ಳ ಮಹಾಯಾಗವನ್ನು ಮಾಡಿದನು. ಆ ಯಾಗಕ್ಕಾಗಿ ಸಿದ್ಧವಾದ ದ್ರವ್ಯರಾಶಿಯನ್ನು ಗಣಿಸಲು ಸಹಸ್ರಮುಖಿಯಾದ ಆದಿಶೇಷನಿಗೂ ಅಸಾಧ್ಯವಾಗಿತ್ತು.

೨. ಆ ಗಯಾಯಾಗದಲ್ಲಿ ಇಪ್ಪತ್ತೈದು ಅನ್ನರಾಶಿಯ ಪರ್ವತಗಳಿದ್ದವು. ದೇಶದೇಶಗಳಿಂದ ಯಾಗಕ್ಕೆ ಬಂದು ಸತ್ಕೃತರಾದ ದ್ವಿಜರು ಆ ಯಜ್ಞವನ್ನು ಮುಂದೆ ಹೇಳುವಂತೆ ವರ್ಣಿಸಿದರು.

ನ್ನೈವ ಪೂರ್ವಂ ಕೇಪ್ಯಕುರ್ವನ್ನ ಕರಿಷ್ಯಂತಿ ಚಾಪರೇ ।
ಸಿಕತಾ ವಾ ಯಥಾ ಲೋಕೇ ಯಥಾ ಚ ದಿವಿ ತಾರಕಾಃ ॥ ೩ ॥

ತಥಾ ಬಹುಸುವರ್ಣಾದ್ಯೈರಸಂಖ್ಯಾತಾಸ್ತು ದಕ್ಷಿಣಾಃ ।
ನೈವೇಹ ಪೂರ್ವೇ ಯೇ ಕೇಚಿನ್ನ ಕರಿಷ್ಯಂತಿ ಚಾಪರೇ ॥ ೪ ॥

ಪ್ರಶಂಸಂತಿ ದ್ವಿಜಾಸ್ತೃಪ್ತಾ ದೇಶೇ ದೇಶೇ ಸುಪೂಜಿತಾಃ ।
ಗಯಂ ವಿಷ್ಣ್ವಾದಯಸ್ತುಷ್ಟಾ ವರಂ ಬ್ರೂಹೀತಿ ದಕ್ಷಿಣಾಃ ॥ ೫ ॥

ಗಯಸ್ತಾನ್ಪ್ರಾರ್ಥಯಾಮಾಸ ಹ್ಯಭಿಶಪ್ತಾಶ್ಚ ಯೇ ಪುರಾ ।
ಬ್ರಹ್ಮಣಾಂ ತೇ ದ್ವಿಜಾಃ ಪೂತಾ ಭವಂತು ಕ್ರತುಪೂಜಿತಾಃ ॥ ೬ ॥

ಗಯಾಶ್ರಾದ್ಧವಿಧಾನಾಯ ದ್ವಿಜಾ ಮೂರ್ತಾಶ್ಚತುರ್ದಶ ।
ತೇಷಾಂ ವಾಕ್ಯಂ ಪ್ರಕುರ್ವೀತ ಯದಿ ಬ್ರಹ್ಮಾಸ್ವಯಂ ಭವೇತ್ ॥ ೭ ॥

---

೩–೪. ಈ ರೀತಿಯಾದ ಯಾಗವನ್ನು ಪುರ್ವದಲ್ಲಿ ಯಾರೂ ಮಾಡಿರಲಿಲ್ಲ. ಮುಂದೆಯೂ ಯಾರೂ ಮಾಡಲಾರರು. ಸುರಳದಿಣ್ಣೆಗಳಲ್ಲಿ ಮರಳುಗಳು, ಆಕಾಶದಲ್ಲಿ ನಕ್ಷತ್ರಗಳು ಇವುಗಳು ಇರುವಂತೆ ಆ ಯಾಗದಲ್ಲಿ ಬಹುಸುವರ್ಣಗಳೂ, ಅಸಂಖ್ಯಾತವಾದ ದಕ್ಷಿಣೆಗಳೂ ಇದ್ದುವು. ಈ ರೀತಿಯಾದ ದ್ರವ್ಯವಸ್ತುಗಳ ರಾಶಿಗಳಿಂದ ಪೂರ್ವದಲ್ಲಿ ಯಾರೂ ಯಾಗವನ್ನು ಮಾಡಿರಲಿಲ್ಲ ಮುಂದೆಯೂ ಮಾಡಲು ಸಾಧ್ಯವಿಲ್ಲವೆಂದು ಹೊಗಳಿದರು.

೫. ಆ ಯಾಗಕ್ಕಾಗಿ ನಾನಾದೇಶಗಳಿಂದ ಬಂದಿದ್ದ ಬ್ರಾಹ್ಮಣರು ತೃಪ್ತರೂ, ಪೂಜಿತರೂ ಆಗಿ ವಿಶೇಷವಾಗಿ ವರ್ಣಿಸಿದರು. ಇದರಿಂದ ಸಂತುಷ್ಟರಾದ ವಿಷ್ಣ್ವಾದಿ ದೇವತೆಗಳು ಗಯಾರಾಜನನ್ನು ಕುರಿತು ಎಲೈ ರಾಜನೇ ನಿನಗೆ ಯಾವ ವರಗಳು ಬೇಕು ಬೇಡಿಕೋ ಎಂದು ಹೇಳಿದರು.

೬. ಆಗ ಗಯಾರಾಜನು ಪೂರ್ವದಲ್ಲಿ ಬ್ರಹ್ಮನಿಂದ ಶಪ್ತರಾದ ಬ್ರಾಹ್ಮಣರೆಲ್ಲರೂ ಪವಿತ್ರರೂ, ಪೂಜ್ಯರೂ ಆಗಲೆಂದು ದೇವತೆಗಳಿಂದ ವರವನ್ನು ಬೇಡಿದನು.

೭. ಗಯಾಶ್ರಾದ್ಧವನ್ನು ಮಾಡುವುದಕೋಸ್ಕರ ಹದಿನಾಲ್ಕು ಜನ ಬ್ರಾಹ್ಮಣರು ಮೂರ್ತಿಮತ್ತಾಗಿರುವರು. ಯಾರು ಬ್ರಹ್ಮಲೋಕಕ್ಕೆ ಹೋಗಲಿಚ್ಛಿಸುವರೋ ಅವರು ಈ ಬ್ರಾಹ್ಮಣರ ವಾಕ್ಯಗಳನ್ನು ನಡಿಸಬೇಕು.

ಗೌತಮಂ ಕಾಶ್ಯಪಂ ಕೌತ್ಸಂ ಕೌಶಿಕಂ ಕಣ್ವಮೇವ ಚ ।
ಭಾರದ್ವಾಜಂ ಹ್ಯೌಶಸನಂ ವಾತ್ಸ್ಯಂ ಪರಾಶರಂ ತಥಾ ॥ ೮ ॥

ಹರಿತ್ಕುಮಾರಮಾಂಡವ್ಯಂ ಲೋಕಾಕ್ಷಿಂ ಲೋಕಸಂ ಮಹತ್ ।
ವಾಸಿಷ್ಠಂ ಚ ತಥಾತ್ರೇಯಂ ಗೋತ್ರಾಣ್ಯೇಷಾಂ ಚತುರ್ದಶ ॥ ೯ ॥

ಗಯೋಪುರೀತಿ ಮನ್ನಾಮ್ನಾ ಖ್ಯಾತಾ ಬ್ರಹ್ಮಪುರೀ ಯಥಾ ।
ಏವಮಸ್ತು ವರಂ ದ್ವತ್ವಾ ತಥಾ ಚಾಂತರ್ದಧುಃ ಸುರಾಃ ॥ ೧೦ ॥

ಗಯೇಶ್ಚ ಭೋಗಾನ್ ಸಂಭುಜ್ಯ ವಿಷ್ಣುಲೋಕಂ ಪರಂ ಯಯೌ ।
ವಿಶಾಲಾಯಾಂ ವಿಶಾಲೋಽಭೂದ್ರಾಜಾಽಪುತ್ರೋಽಬ್ರವೀದ್ದ್ವಿಜಾನ್ ॥೧೧॥

ಕಥಂ ಪುತ್ರಾದಯೋ ಮೇ ಸ್ಯುರ್ವಿಶಾಲಂ ಚಾಬ್ರುವನ್ ದ್ವಿಜಾಃ ।
ಗಯಾಯಾಂ ಪಿಂಡದಾನೇನ ತವ ಸ್ಸರ್ವಂ ಭವಿಷ್ಯತಿ ॥ ೧೨ ॥

೮–೯. ಅವರು ಯಾರಂದರೇ ಗೌತಮ, ಕಾಶ್ಯಪ, ಕೌತ್ಸ, ಕೌಶಿಕ, ಕಣ್ವ, ಭರದ್ವಾಜ, ಔಶನಸ, ವಾತ್ಸ್ಯ, ಪಾರಾಶರ, ಹರಿತ್ಕುಮಾರ, ಮಾಂಡವ್ಯ, ಲೋಕಾಕ್ಷಿ, ವಾಸಿಷ್ಠ, ಆತ್ರೇಯ ಇವರೇ ಮೊದಲಾದವರಾಗಿರುವರು. ಮತ್ತು ಇವರ ವಂಶೀಕರೂ ಸಹ ಈ ನಿಯಮಕ್ಕೆ ಒಳಪಟ್ಟವರಾಗಿರಬೇಕೆಂದು ಬೇಡಿದನು.

೧೦. ಈ ನಗರಿಯು ನನ್ನ ನಾಮದಿಂದ ಗಯಾಪುರಿಯೆಂದು ಬ್ರಹ್ಮಪುರದಂತೆ ಪ್ರಖ್ಯಾತವಾಗಿರಲಿ ಎಂದು ಬೇಡಿದನು ಅದನ್ನ ಕೇಳಿದ ದೇವತೆಗಳು ಹಾಗೆಯೇ ಆಗಲೆಂದು ಹೇಳಿ ವರಗಳನ್ನು ಕೊಟ್ಟು ಮಾಯವಾದರು.

೧೧. ತರುವಾಯ ಗಯಾಮಹಾರಾಜನು ಮಹಾಭೋಗಗಳನ್ನು ಅನುಭವಿಸಿ ಕೊನೆಗೆ ಅತ್ಯುತ್ತಮವಾದ ವಿಷ್ಣುಲೋಕವನ್ನು ಹೊಂದಿದನು. ಹೀಗಿರುವಲ್ಲಿ ವಿಶಾಲದೇಶದ ರಾಜನಾದ ವಿಶಾಲನಿಗೆ ಸಂತಾನವಿಲ್ಲದೇ ಬ್ರಾಹ್ಮಣರನ್ನು ಕುರಿತು ಇಂತೆಂದನು.

೧೨. ಎಲೈ ವಿಪ್ರವರ್ಯರೇ, ನನಗೆ ಸಂತಾನವು ಏತರಿಂದುಂಟಾಗುವುದೆಂದು ಪ್ರಾರ್ಥಿಸಲು ಆಗ ಬ್ರಾಹ್ಮಣರು ಎಲೈ ರಾಜನೇ ಗಯಾಕ್ಷೇತ್ರದಲ್ಲಿ ಪಿತೃಗಳಿಗೋಸ್ಕರ ಪಿಂಡದಾನಾದಿಗಳನ್ನು ಮಾಡು ಇದರಿಂದ ನಿನ್ನ ಮನೋರಥಗಳೆಲ್ಲವೂ ಸಫಲವಾಗುವುವೆಂದು ರಾಜನಿಗೆ ಹೇಳಿದರು.

ವಿಶಾಲೋಽಪಿ ಗಯಾಶೀರ್ಷೇ ಪಿಂಡದಃ ಪಿತೃವಾನಭೂತ್ ।
ದೃಷ್ಟ್ವಾಽಽಕಾಶೇ ಸಿತಂ ರಕ್ತಂ ಕೃಷ್ಣಂ ಪುರುಷಮಬ್ರವೀತ್ ॥ ೧೩ ॥

ಕೇ ಯೂಯಂ ತೇಷು ಚೈವೈಕಃ ಸಿತಃ ಪ್ರೋಚೇ ವಿಶಾಲಕಂ ।
ಅಹಂ ಸಿತಸ್ತೇ ಜನಕ ಇಂದ್ರಲೋಕಾದಿಹಾಗತಃ ॥ ೧೪ ॥

ಮಮ ಪುತ್ರ ಪಿತಾ ರಕ್ತೋ ಬ್ರಹ್ಮಹಾ ಪಾಪಕೃತ್ತಮಃ ।
ಅಯಂ ಪಿತಾಮಹಃ ಕೃಷ್ಣ ಋಷಯೋ ಯೇನ ಘಾತಿತಾಃ ॥ ೧೫ ॥

ಅವೀಚಿ ನರಕಂ ಪ್ರಾಪ್ತಾ ಮುಕ್ತಾ ತ್ವತ್ಪಿಂಡದಾನತಃ ।
ಪಿತೄನ್ ಪಿತಾಮಹಾಂಶ್ಚೈವ ತಥೈವ ಪ್ರಪಿತಾಮಹಾನ್ ॥ ೧೬ ॥

ಪ್ರೀಣಯಾಮೀತಿ ಯೇನೋಕ್ತೋಽಯಂ ತ್ವಯಾ ದತ್ತಮರಿಂದಮಃ ।
ತೇನಾಸ್ಮದ್ಯುಗಪದ್ಯೋಗೋ ಜಾತೋ ವಾಕ್ಯೇನ ಸತ್ತಮ ॥ ೧೭ ॥

---

೧೩. ವಿಪ್ರರ ಉಪದೇಶದಂತೆ ವಿಶಾಲಮಹಾರಾಜನು ಗಯಾಶಿರಸ್ಸಿನಲ್ಲಿ ಶ್ರಾದ್ಧ ಪಿಂಡದಾನವನ್ನು ಮಾಡಿದನು. ತರುವಾಯ ಸಂತಾನವನ್ನು ಪಡೆದನು. ತರುವಾಯ ಆಕಾಶದಲ್ಲಿ ಕಂಡ ಕಪ್ಪು, ಕೆಂಪು, ಬಿಳುಪು ಬಣ್ಣವುಳ್ಳ ಪುರುಷರನ್ನು ನೋಡಿ ಇಂತೆಂದನು.

೧೪–೧೮. ಎಲೈ ಪುರುಷರೇ, ನೀವು ಯಾರು ? ಎಂದು ರಾಜನು ಕೇಳಿದನು. ಆಗ ಅವರಲ್ಲಿ ಬೆಳ್ಳಗಿರುವ ಪುರುಷನು ವಿಶಾಲರಾಜನಿಗೆ ಇಂತೆಂದನು—ಓ ರಾಜನೇ, ನಾನು ನಿನ್ನ ತಂದೆಯಾಗಿರುವೆನು. ಇಂದ್ರಲೋಕದಿಂದ ಇಲ್ಲಿಗೆ ಬಂದಿರುತ್ತೇನೆ. ಎಲೈ ಕುಮಾರನೇ, ಕೆಂಪಗೆ ಇರತಕ್ಕವನೇ ನನ್ನ ತಂದೆಯು ಅವನು ಬ್ರಹ್ಮಹತ್ಯಾ ರೂಪವಾದ ಮಹಾಪಾಪವನ್ನು ಮಾಡಿರುತ್ತಾನೆ. ಈ ಕಪ್ಪಗಿರುವವನೇ ನನ್ನ ತಾತನು ಇವನು ಋಷಿಗಳನ್ನು ಸಂಹರಿಸಿದ ಪಾಪಿಯಾಗಿರುವನು. ಇವರಿಬ್ಬರೂ ಅವೀಚಿ ಯೆಂಬ ನರಕವನ್ನು ಹೊಂದಿದ್ದರು. ನೀನು ಗಯೆಯಲ್ಲಿ ಶ್ರಾದ್ಧಪಿಂಡದಾನವನ್ನು ಮಾಡಿದ್ದರಿಂದ ಅವರಿಬ್ಬರೂ ಆ ನರಕದಿಂದ ಬಿಡುಗಡೆಯಾಗಿ ಬಂದಿರುವರು. ನೀನು ತಂದೆ, ತಾತ, ಮುತ್ತಾತ ಇವರನ್ನು ತೃಪ್ತಿಗೊಳಿಸುತ್ತೇನೆಂದು ಹೇಳಿ ಯಾವ

ಮುಕ್ತಾಃ ಕೃತಾ ಸ್ತ್ವಯಾ ಪುತ್ರ ವ್ರಜಾಮಃ ಸ್ವರ್ಗಮುತ್ತಮಂ ।
ಏವಂ ಪುತ್ರೈಃ ಪಿತೄಣಾಂ ಚ ಕರ್ತವ್ಯಾ ಮುಕ್ತಿರುತ್ತಮಾ ॥ ೧೮ ॥

ತ್ವಂ ಚ ರಾಜ್ಯಂ ಚಿರಂ ಕೃತ್ವಾ ಭುಕ್ತ್ವಾ ಭೋಗಾಂಶ್ಚ ದುರ್ಲಭಾನ್ ।
ಯಜ್ಞಾನ್ಸದಕ್ಷಿಣಾನ್ ಕೃತ್ವಾ ಯಾಯಾದ್ವಿಷ್ಣುಪುರಂ ತತಃ ॥ ೧೯ ॥

ಏವಂ ಲಬ್ಧವರೋ ರಾಜಾ ರಾಜ್ಯಂ ಕೃತ್ವಾ ದಿವಂ ಗತಃ ।
ಪ್ರೇತರಾಜಃ ಸಹ ಪ್ರೇತೈರ್ಗಯಾಶ್ರಾದ್ಧಾದ್ದಿವಂ ಗತಃ ॥ ೨೦ ॥

ಪ್ರೇತಃ ಕಶ್ಚಿದ್ವಿಮುಕ್ತ್ಯರ್ಥಂ ವಣಿಜಂ ಕಂಚಿದಬ್ರವೀತ್ ।
ಮಮ ನಾಮ್ನಾ ಗಯಾಶೀರ್ಷೇ ಪಿಂಡನಿರ್ವಾಪಣಂ ಕುರು ॥ ೨೧ ॥

---

ತಿಲತರ್ಪಣವನ್ನು ಕೊಟ್ಟಿರುವಿಯೋ ಅದರಿಂದ ತೃಪ್ತರಾಗಿ ಒಟ್ಟಿಗೆ ಸೇರಿ ಇಲ್ಲಿಗೆ ಬಂದಿರುತ್ತೇವೆ ಎಲೈ ಕುಮಾರನೇ, ನರಕಗತರಾದ ನಮ್ಮನ್ನುದ್ಧರಿಸಿ ಮುಕ್ತಿಯನ್ನು ಕೊಟ್ಟಿರುತ್ತೀಯೋ ನಾವು ಉತ್ತಮವಾದ ಸ್ವರ್ಗಕ್ಕೆ ಈಗ ಹೋಗುತ್ತೇವೆಂದು ಹೇಳಿ ಹೊರಟರು. ಆದುದರಿಂದ ಪುತ್ರರು ಹೀಗೆ ಪಿತೃಗಳಿಗೆ ಮುಕ್ತಿದಾಯಕವಾದ ಪಿತೃ ಕಾರ್ಯವನ್ನು ಮಾಡಬೇಕು. ಅದರಿಂದ ಅವರು ಮುಕ್ತರಾಗುವರು.

೧೯. ಎಲೈ ಕುಮಾರನೇ, ನೀನೂ ಕೂಡ ಬಹುಕಾಲ ರಾಜ್ಯಸುಖವನ್ನನುಭವಿಸಿ ಅನಂತರ ಅತಿದುರ್ಲಭವಾದ ಪದವಿಯನ್ನು ಪಡೆಯುವನಾಗು ಮತ್ತು ದಕ್ಷಿಣೆಯಿಂದ ಸಹಿತವಾದ ಯಜ್ಞಯಾಗಾದಿಗಳನ್ನು ಮಾಡಿ ವಿಷ್ಣುವಿನ ಪದವಿಯಾದ ಮೋಕ್ಷವನ್ನು ಪಡೆಯುವನಾಗೆಂದು ಪಿತೃಗಳು ಆಶೀರ್ವದಿಸಿದರು.

೨೦. ಹೀಗೆ ಪಿತೃಗಳಿಂದ ವರಗಳನ್ನು ಪಡೆದ ವಿಶಾಲರಾಜನು ರಾಜ್ಯವನ್ನು ಸುಖದಿಂದ ಪಾಲಿಸಿ, ಕೊನೆಗೆ ಸ್ವರ್ಗಕ್ಕೆ ಹೋದನು. ಪ್ರೇತರಾಜನೂ ಸಹ ಗಯಾಶ್ರಾದ್ಧದಿಂದ ಪ್ರೇತಗಣಗಳ ಸಂಗಡ ಸ್ವರ್ಗಕ್ಕೆ ಹೋದನು.

೨೧–೨೨. ಹೀಗಿರುವಲ್ಲಿ ಒಂದು ದಿವಸ ಒಬ್ಬ ಪ್ರೇತನು ಒಬ್ಬ ವರ್ತಕನನ್ನು ನೋಡಿ ಎಲೈ ವ್ಯಾಪಾರಿಯೇ ನನ್ನ ನಾಮೋಚ್ಚಾರದಿಂದ ಗಯಾಶ್ರಾದ್ಧ ಪಿಂಡ ದಾನಾದಿಗಳನ್ನು ಮಾಡೆಂದು ಹೇಳಿದನು. ನೀನು ಗಯಾಶ್ರಾದ್ಧವನ್ನು ಮಾಡಿದರೆ

**ಪ್ರೇತಭಾವವಿಮುಕ್ತ್ಯರ್ಥಂ ತ್ವಂ ಗೃಹಾಣ ಧನಂ ಮಮ ।**
**ತದ್ಧನಂ ಸರ್ವಮಾದಾಯ ಗಯಾಶ್ರಾದ್ಧವ್ಯಯಂ ಕುರು ॥ ೨೨ ॥**

**ಷೋಡಶಪಂಚಭಾಗಾಂಶ್ಚ ತುಭ್ಯಂ ವೈ ದತ್ತವಾನಹಂ ।**
**ಸ್ವನಾಮಾನಿ ಯಥಾನ್ಯಾಯಂ ಸಮ್ಯಗಾಖ್ಯಾತವಾನಹಂ ॥ ೨೩ ॥**

**ಗತ್ವಾ ಗಯಾಂ ಗಯಾಶೀರ್ಷೇ ಪ್ರೇತರಾಜಾಯ ಪಿಂಡಕಂ ।**
**ಸಮುದಾದ್ಬಂಧುಭಿಃ ಸಾರ್ಧಂ ಸ್ವಪಿತೃಭ್ಯಸ್ತತೋ ದದೌ ॥ ೨೪ ॥**

**ಪ್ರೇತಃ ಪ್ರೇತತ್ವನಿರ್ಮುಕ್ತೋ ವಣಿಕ್ ಸ್ವಗೃಹಮಾಗತಃ ।**
**ಏವಂ ಗಯಸ್ಯ ಶಂಭೋಶ್ಚ ಕ್ಷೇತ್ರಂ ವಿಷ್ಣೋಃ ರವೇಸ್ತಥಾ ॥ ೨೫ ॥**

---

ನನ್ನ ಪ್ರೇತತನವು ಪರಿಹೃತವಾಗುವುದು. ಇದಕ್ಕಾಗಿ ನಾನು ಕೊಡುವ ಈ ಧನವನ್ನು ತೆಗೆದುಕೋ, ಇದೆಲ್ಲವನ್ನು ಖರ್ಚುಮಾಡಿ ಗಯಾಶ್ರಾದ್ಧವನ್ನು ಮಾಡು ಎಂದು ಹೇಳಿ ಹಣವನ್ನು ಕೊಟ್ಟನು.

೨೩. ಹದಿನಾರರಲ್ಲಿ ಐದು ಭಾಗದಷ್ಟು ಮಾತ್ರ ಕೊಟ್ಟಿರುವೆನು. ಅದರಲ್ಲಿ ಕೆಲವಂಶವನ್ನು ವ್ಯಯಮಾಡು, ನಾನು ನೀನು ಮಾಡಿದ ಮಹೋಪಕಾರವನ್ನು ಹೊಗಳುವೆನು ಎಂದು ಪ್ರಾರ್ಥಿಸಿದನು

೨೪. ಅದರಂತೆ ಆ ವ್ಯಾಪಾರಿಯು ಗಯೆಗೆ ಹೋಗಿ ಗಯಾಶಿರಸ್ಸಿನಲ್ಲಿ ಪ್ರೇತ ರಾಜನಿಗಾಗಿ ಪಿಂಡದಾನವನ್ನು ಮಾಡಿದನು. ತರುವಾಯ ಬಂಧುಗಳೊಡನೆ ತನ್ನ ಪಿತೃಗಳಿಗೂ ಪಿಂಡದಾನವನ್ನು ಅರ್ಪಿಸಿದನು.

೨೫. ತರುವಾಯ ಆ ಪ್ರೇತನಿಗೆ ಪ್ರೇತಭಾವವು ಪರಿಹಾರವಾಯಿತು. ಆ ವರ್ತಕನು ತನ್ನೂರಿಗೆ ಹಿಂತಿರುಗಿ ಬಂದನು. ಹೀಗೆ ಗಯಾಕ್ಷೇತ್ರ ಪರಮೇಶ್ವರನ ಕ್ಷೇತ್ರ, ವಿಷ್ಣುಕ್ಷೇತ್ರ ಇವುಗಳ ಮಹಿಮೆಗಳು ವರ್ಣಿಸಲಶಕ್ಯವಾಗಿವೆ.

ಉಪೋಷಿತೋಽಥ ಗಾಯತ್ರೀ ತೀರ್ಥೇ ಮಹಾನದೀಸ್ಥಿತೇ ।
ಗಾಯತ್ರ್ಯಾಃ ಪುರತಃ ಸ್ನಾತ್ವಾ ಪ್ರಾತಃಸಂಧ್ಯಾಮುಪಾಸಯೇತ್ ॥ ೨೬ ॥

ಶ್ರಾದ್ಧಂ ಸಪಿಂಡಕಂ ಕೃತ್ವಾ ನಯೇದ್ಬ್ರಹ್ಮಣ್ಯತಾಂ ಕುಲಂ ।
ತೀರ್ಥೇ ಸಮುದಿತೇ ಸ್ನಾತ್ವಾ ಸಾವಿತ್ರ್ಯಾಃ ಪುರತೋ ನರಃ ॥ ೨೭ ॥

ಸಂಧ್ಯಾಮುಪಾಸ್ಯ ಮಧ್ಯಾಹ್ನೇ ನಯೇತ್ಕುಲಶತಂ ದಿವಂ ।
ಪಿಂಡದಾನಂ ತತಃ ಕುರ್ಯಾತ್ಪಿತೄಣಾಂ ಮುಕ್ತಿಕಾಮ್ಯಯಾ ॥ ೨೮ ॥

ಪ್ರಾಚೀಸರಸ್ವತೀ ತೀರ್ಥೇ ಸ್ನಾತ್ವಾ ಚಾಪಿ ಯಥಾವಿಧಿ ।
ಸಂಧ್ಯಾಮುಪಾಸ್ಯ ಸಾಯಾಹ್ನೇ ವಿಷ್ಣುಲೋಕಂ ನಯೇತ್ಪಿತೄನ್ ॥ ೨೯ ॥

---

೨೬. ಮಹಾನದಿಯ ತೀರದಲ್ಲಿರುವ ಗಾಯತ್ರೀ ತೀರ್ಥದಲ್ಲಿ ಉಪವಾಸದಿಂದ ಸ್ನಾನ ಜಪತಪಾದಿಗಳನ್ನೂ, ಪ್ರಾತಃಸಂಧ್ಯಾವಂದನೆಯನ್ನೂ ಮಾಡಬೇಕು. ಮತ್ತು ಶ್ರಾದ್ಧಪಿಂಡದಾನಗಳನ್ನು ಮಾಡಿದರೆ ತಮ್ಮ ಪಿತೃಗಳು ಬ್ರಾಹ್ಮಣವಂಶದಲ್ಲಿ ಜನಿಸುವರು.

೨೭. ಹೀಗೆ ಪುರುಷನು ಸಾವಿತ್ರೀದೇವಿಯ ಮುಂದುಗಡೆ ಇರುವ ತೀರ್ಥರಾಶಿಗಳಲ್ಲಿ ಸ್ನಾನವನ್ನು ಮಾಡಿ, ಶ್ರಾದ್ಧಪಿಂಡದಾನವನ್ನು ಮಾಡಿದರೆ ತಮ್ಮ ವಂಶದವರು ಮುಕ್ತರಾಗುವರು.

೨೮. ಸರಸ್ವತೀತೀರ್ಥದಲ್ಲಿ ಸ್ನಾನವನ್ನು ಮಾಡಿ ಮಾಧ್ಯಾಹ್ನಿಕಕ್ರಿಯೆಯನ್ನೂ ಮಾಡಿದರೆ, ಪಿತೃಗಳ ನೂರಾರು ವಂಶದವರು ಮುಕ್ತರಾಗುವರು. ತರುವಾಯ ಪಿತೃಗಳಿಗೆ ಮುಕ್ತಿಯಾಗುವುದಕ್ಕಾಗಿ ಶ್ರಾದ್ಧವನ್ನೂ ಮಾಡಬೇಕು.

೨೯. ಪೂರ್ವದ ಸರಸ್ವತೀತೀರ್ಥದಲ್ಲಿ ಸ್ನಾನವನ್ನೂ ಶಾಸ್ತ್ರೋಕ್ತಕ್ರಮದಲ್ಲಿ ಸಾಯಂಕಾಲದ ಸಂಧ್ಯಾವಂದನೆಯನ್ನೂ ಮಾಡಿದರೆ ಪಿತೃಗಳು ವಿಷ್ಣುಲೋಕವನ್ನು ಹೊಂದುವರು

ಬಹುಜನ್ಮಕೃತಾತ್ಸಂಧ್ಯಾಲೋಪಾತ್ ಮುಕ್ತಸ್ತ್ರಿಸಂಧ್ಯಕೃತ್ ।
ವಿಶಾಲಾಯಾಂ ಲೇಲಿಹಾನೇ ತೀರ್ಥೇ ಚ ಭರತಾಶ್ರಮೇ ॥ ೩೦ ॥

ಪಾದಾಂಕಿತೇ ಮುಂಡಪೃಷ್ಠೇ ಗದಾಧರ ಸಮೀಪತಃ ।
ತೀರ್ಥೇ ಚಾಕಾಶಗಂಗಾಯಾಂ ಗಿರಿಕರ್ಣ ಮುಖೇಷು ಚ ॥ ೩೧ ॥

ಸ್ನಾತೋಽಥ ಪಿಂಡದೋ ಬ್ರಹ್ಮಲೋಕಂ ಕುಲಶತಂ ನಯೇತ್ ।
ದೇವನದ್ಯಾಂ ವೈತರಿಣ್ಯಾಂ ಸ್ನಾತಃ ಸ್ವರ್ಗಂ ನಯೇತ್ಪಿತೄನ್ ॥ ೩೨ ॥

ಸ್ನಾತೋ ಗೋದೋ ವೈತರಣ್ಯಾಂ ತ್ರಿಃಸಪ್ತಕುಲಮುದ್ಧರೇತ್ ।
ಸತ್ಯಂ ಸತ್ಯಂ ಪುನಃ ಸತ್ಯಂ ವೈತರಣ್ಯಾಂ ತು ನಾರದ ॥ ೩೩ ॥

---

೩೦. ಪುರುಷರು ವಿಶಾಲತೀರ್ಥದಲ್ಲಿಯೂ, ಲೇಲಿಹಾನತೀರ್ಥದಲ್ಲಿಯೂ, ಭರತಾಶ್ರಮದಲ್ಲಿಯೂ ಸ್ನಾನ ಮತ್ತು ತ್ರಿಕಾಲಸಂಧ್ಯಾವಂದನೆಗಳನ್ನು ಮಾಡಿದರೆ, ಅನೇಕ ಜನ್ಮಗಳಲ್ಲಿ ಸಂಧ್ಯಾವಂದನೆಗಳು ಮಾಡದಿರುವ ಪಾಪಗಳು ಪರಿಹೃತವಾಗಿ ಮುಕ್ತರಾಗುವರು.

೩೧–೩೨. ಗದಾಧರಸಮೀಪದಲ್ಲಿರುವ ವಿಷ್ಣುಪಾದಾಂಕಿತವಾದ ಮುಂಡಪೃಷ್ಠದಲ್ಲಿಯೂ, ಆಕಾಶಗಂಗಾತೀರ್ಥದಲ್ಲಿಯೂ, ಗಿರಿಕರ್ಣಮುಖಗಳಲ್ಲಿಯೂ ಸ್ನಾನ ಮಾಡಿ ಪಿಂಡದಾನಮಾಡಿದರೆ, ತಮ್ಮ ನೂರಾರು ಕುಲದವರು ಬ್ರಹ್ಮಲೋಕಕ್ಕೆ ಹೋಗುವರು. ದೇವನದಿಯಲ್ಲಿಯೂ, ವೈತರಣಿಯಲ್ಲಿಯೂ, ಸ್ನಾನಮಾಡಿದ ಪುರುಷರ ಪಿತೃಗಳು ಸ್ವರ್ಗಲೋಕವನ್ನು ಪಡೆಯುವರು.

೩೩. ಎಲೈ ನಾರದಮುನಿಯೇ, ವೈತರಣೀನಧಿಯಲ್ಲಿ ಸ್ನಾನಮಾಡಿ ಗೋದಾನವನ್ನು ಮಾಡಿದರೆ ಇಪ್ಪತ್ತೊಂದು ಕುಲದವರೂ ಉದ್ಧೃತರಾಗುವರು. ವೈತರಣಿಯಲ್ಲಿ ಮಾಡಿದ ಕಾರ್ಯಗಳು ಸತ್ಯವಾಗಿಯೂ ಸಫಲವಾಗುವುವು. ಇದು ನಿಜವು ಮತ್ತು ಸತ್ಯವು.

ಏಕವಿಂಶತಿಕುಲಾನ್ಯಾಹುಸ್ತಾರಯೇನ್ನಾತ್ರ ಸಂಶಯಃ ।
ಯಾ ಸಾ ವೈತರಣೀ ನಾಮ ನದೀ ತ್ರೈಲೋಕ್ಯವಿಶ್ರುತಾ ॥ ೩೪ ॥

ಸಾವತೀರ್ಣಾ ಗಯಾಕ್ಷೇತ್ರೇ ಪಿತೄಣಾಂ ತರಣಾಯ ವೈ ।
ಗೋದಾವರ್ಯಾಂ ವೈತರಣ್ಯಾಂ ಯಮುನಾಯಾಂ ತಥೈವ ಚ ॥ ೩೫ ॥

ದೇವನದ್ಯಾಂ ಗೋಪ್ರಚಾರೇ ಶ್ರಾದ್ಧದಃ ಸ್ವರ್ಗಯೇತ್ಪಿತೄನ್ ।
ಪುಷ್ಕರಿಣ್ಯಾಂ ಘೃತಕುಲ್ಯಾಂ ಮಧುಕುಲ್ಯಾಂ ತಥೈವ ಚ ॥ ೩೬ ॥

ಕೋಟಿತೀರ್ಥೇ ರುಕ್ಮಿಣೀಯೇ ಪಿಂಡದಃ ಸ್ವರ್ಗಯೇತ್ಪಿತೄನ್ ।
ತ್ರಿರಾತ್ರೋಪೋಷಣೇನೈವ ತೀರ್ಥಾಭಿಗಮನೇ ನ ಚ ॥ ೩೭ ॥

---

೩೪. ಈ ಲೋಕದಲ್ಲಿ ಯಾವ ನದಿಯು ತನ್ನಲ್ಲಿ ಸ್ನಾನಮಾಡಿದ ಪುರುಷನ ಇಪ್ಪತ್ತೊಂದು ಕುಲವನ್ನು ಉದ್ಧಾರಮಾಡುವುದೋ ಅಂತಹ ವೈತರಣೀಯು ಮೂರು ಲೋಕದಲ್ಲಿಯೂ ಪ್ರಖ್ಯಾತವಾಗಿರುವುದು.

೩೫. ಅಂತಹ ವೈತರಣಿಯು ಪಿತೃಗಳನ್ನುದ್ಧರಿಸುವುದಕ್ಕಾಗಿ ಗಯಾಕ್ಷೇತ್ರದಲ್ಲಿ ಅವತರಿಸಿರುವುದು. ಮತ್ತು ಆ ನದಿಯು ದೇವನದಿಯಲ್ಲಿಯೂ, ಗೋದಾವರಿಯಲ್ಲಿಯೂ, ಯಮುನೆಯಲ್ಲಿಯೂ ಸನ್ನಿಹಿತಳಾಗಿರುವುದು.

೩೬. ದೇವನದಿಯಲ್ಲಿಯೂ, ಗೋಕುಲದಲ್ಲಿಯೂ, ಪುಷ್ಕರಿಣಿಯಲ್ಲಿಯೂ, ಘೃತಕುಲ್ಯೆಯಲ್ಲಿಯೂ, ಮಧುಕುಲ್ಯೆಯಲ್ಲಿಯೂ ಶ್ರಾದ್ಧವನ್ನು ಮಾಡಿದರೆ ಪಿತೃಗಳು ಸ್ವರ್ಗಲೋಕಕ್ಕೆ ಹೋಗುವರು.

೩೭. ಕೋಟಿತೀರ್ಥ, ರುಕ್ಮಿಣೀತೀರ್ಥ ಇವುಗಳಲ್ಲಿ ಪಿಂಡದಾನವನ್ನು ಮಾಡಿ ತ್ರಿರಾತ್ರೋಪವಾಸಮಾಡುವುದರಿಂದ ಪಿತೃಗಳು ಸ್ವರ್ಗಕ್ಕೆ ಹೋಗುವರು. ಮತ್ತು ಈ ತೀರ್ಥಯಾತ್ರೆಯಿಂದ ಪಿತೃಗಳು ಮುಕ್ತರಾಗುವರು.

**ಅದತ್ವಾ ಕಾಂಚನಂ ಗಾಶ್ಚ ದರಿದ್ರೋ ಜಾಯತೇ ನರಃ |**
**ಘೃತಕುಲ್ಯಾ ಮಧುಕುಲ್ಯಾ ದೇವಿಕಾ ಚ ಮಹಾನದೀ || ೩೮ ||**

**ಶಿಲಾಯೋಃ ಸಂಗಮೋ ಯತ್ರ ಮಧುಸ್ರವಾ ಪ್ರಕೀರ್ತಿತಾ |**
**ಅಯುತಂ ಚಾಶ್ವಮೇಧಾನಾಂ ಸ್ನಾನಕೃಲ್ಲಭತೇ ನರಃ | ೩೯ ||**

**ಶ್ರಾದ್ಧಂ ಸಪಿಂಡಕಂ ಕೃತ್ವಾ ಪಿಂಡದಾನಂ ತಥೈವ ಚ |**
**ಕುಲಾನಾಂ ಶತಮುದ್ಧೃತ್ಯ ವಿಷ್ಣುಲೋಕಂ ನಯೇನ್ನರಃ || ೪೦ ||**

**ದಶಾಶ್ವಮೇಧಿಕೇ ಹಂಸತೀರ್ಥೇ ಚಾಮರಕಂಕಟೇ |**
**ಕೋಟಿತೀರ್ಥೇ ರುಕ್ಮಕುಂಡೇ ಪಿಂಡದಃ ಸ್ವರ್ಗಯೇತ್ಪಿತೃನ್ || ೪೧ ||**

---

೩೮. ಇಂತಹ ಕ್ಷೇತ್ರಗಳಲ್ಲಿ ಸುವರ್ಣದಾನ ಮತ್ತು ಗೋದಾನಗಳನ್ನು ಮಾಡದ ಪುರುಷರು ದರಿದ್ರರಾಗಿ ಜನಿಸುವರು. ಘೃತಕುಲ್ಯಾ, ಮಧುಕುಲ್ಯಾ, ದೇವಿಕಾ ಎಂಬ ನದಿಗಳು ಮಹಾನದಿಗಳಾಗಿವೆ. ಇವುಗಳಲ್ಲಿ ಮಾಡಿದ ಕಾರ್ಯಗಳು ಸಫಲ ವಾಗುವುವು.

೩೯. ಶಿಲಾನದಿಯ ಸಂಗಮದಲ್ಲಿ ಮಧುಸ್ರವವೆಂಬ ಕ್ಷೇತ್ರವಿರುವುದು. ಅದರಲ್ಲಿ ಸ್ನಾನಾದಿಗಳನ್ನು ಮಾಡಿದ ಪುರುಷನು ಸಾವಿರಾರು ಅಶ್ವಮೇಧ ಯಾಗ ಗಳನ್ನು ಮಾಡಿದ ಫಲವನ್ನು ಹೊಂದುವನು.

೪೦. ಮೇಲೆ ಹೇಳಿದ ಕ್ಷೇತ್ರಗಳಲ್ಲಿ ಶ್ರಾದ್ಧಪಿಂಡದಾನ, ದೇವಪೂಜೆ, ಇವುಗಳನ್ನು ಮಾಡಿದ ಪುರುಷನ ನೂರಾರು ಕುಲದವರು ಉದ್ಧೃತವಾಗಿ, ವಿಷ್ಣುಲೋಕವಾದ ಮುಕ್ತಿಯನ್ನು ಹೊಂದುವರು.

೪೧. ದಶಾಶ್ವಮೇಧಿಕೆಯಲ್ಲಿಯೂ, ಹಂಸತೀರ್ಥದಲ್ಲಿಯೂ ಅಮರಕಟಕ ದಲ್ಲಿಯೂ, ಕೋಟಿತೀರ್ಥದಲ್ಲಿಯೂ, ರುಕ್ಮಕುಂಡದಲ್ಲಿಯೂ ಪಿತೃಗಳಿಗೆ ಪಿಂಡದಾನ ವನ್ನು ಮಾಡಿದವನು, ಪಿತೃಗಳನ್ನು ಸ್ವರ್ಗಕ್ಕೆ ಕಳುಹಿಸುವನು.

ವೈತರಣ್ಯಾಂ ಘೃತಕುಲ್ಯಾಂ ಮಧುಕುಲ್ಯಾಂ ತಥೈವ ಚ ।
ಕೋಟಿತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಕೋಟೀಶ್ವರಂ ಚ ಯಃ ॥ ೪೨ ॥

ಕೋಟಿಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ।
ಮಾರ್ಕಂಡೇಯೇಶಕೋಟೀಶೌ ನತ್ವಾ ಸ್ಯಾತ್ಪಿತೃತಾರಕಃ ॥ ೪೩ ॥

ರುಕ್ಮಪಾರಿಜಾತವನೇ ಪಾರ್ವತ್ಯಾ ಸಹ ಶಂಕರಃ ।
ರಹಸ್ಯೇ ಸಂಸ್ಥಿತೋ ರೇಮೇ ಯುಗಾನಾಮಯುತಂ ಪುರಾ ॥ ೪೪ ॥

ಮರೀಚಿಃ ಫಲಪುಷ್ಪಾರ್ಥಂ ಪಾರಿಜಾತವನಂ ಗತಃ ।
ದೃಷ್ಟ್ವಾ ಶಪ್ತೋ ಮಹೇಶೇನ ಯಸ್ಮಾತ್ಸುಖವಿಘಾತಕಃ ॥ ೪೫ ॥

ದುಃಖೀ ಭವೇತಿ ತದ್ಭೀತೋ ಮರೀಚಿಸ್ತುಷ್ಟುವೇ ಶಿವಂ ।
ತುಷ್ಟಃ ಪ್ರೋವಾಚ ತಂ ಶಂಭುರ್ವೃಣೀಷ್ವ ವರಮುತ್ತಮಂ ॥ ೪೬ ॥

---

೪೨–೪೩. ಯಾವ ಪುರುಷನು ವೈತರಣೀ, ಘೃತಕುಲ್ಯಾ, ಮಧುಕುಲ್ಯಾ, ಕೋಟಿತೀರ್ಥ ಇವುಗಳಲ್ಲಿ ಸ್ನಾನಮಾಡಿ ಕೋಟೀಶ್ವರನ ದರ್ಶನವನ್ನು ಮಾಡುವನೋ ಅವನು ಕೋಟಿಜನ್ಮಗಳಲ್ಲಿ ಜನಿಸಿ, ಬ್ರಾಹ್ಮಣನಾಗಿಯೂ, ಶ್ರೀಮಂತನಾಗಿಯೂ, ವೇದಪಾರಂಗತನಾಗಿಯೂ, ಆಗುವನು. ಹಾಗೆಯೇ ಮಾರ್ಕಂಡೇಶ ಕೋಟೀಶರಿಗೆ ನಮಸ್ಕಾರಮಾಡಿದರೆ ಪಿತೃಗಳು ಉದ್ಧೃತರಾಗುವರು.

೪೪. ಪೂರ್ವದಲ್ಲಿ ಈಶ್ವರನು ಯಮುನೆಯ ದಡದಲ್ಲಿರುವ ರುಕ್ಮಪಾರಿಜಾತ ವನದಲ್ಲಿ ಪಾರ್ವತಿಯ ಸಂಗಡ ಅನೇಕ ಸಹಸ್ರವರ್ಷಗಳವರೆಗೂ ರಹಸ್ಯವಾಗಿ ಕ್ರೀಡಿಸಿದನು.

೪೫. ಆಗ ಮರೀಚಿಮುನಿಯು ಫಲಪುಷ್ಪಗಳಿಗೋಸ್ಕರ ಆ ಪಾರಿಜಾತ ವನಕ್ಕೆ ಹೋಗಿ ಅಲ್ಲಿರುವ ಪಾರ್ವತೀ ಪರಮೇಶ್ವರರ ವಿಹಾರಕ್ಕೆ ವಿಘ್ನಕಾರಿಯಾದನು. ಆಗ ಪರಮೇಶ್ವರನು ಕುಪಿತನಾಗಿ ಮರೀಚಿಮುನಿಗೆ ಶಾಪವನ್ನು ಕೊಟ್ಟನು.

೪೬. ಎಲೈ ಮರೀಚಿಯೇ, ನೀನು ನನ್ನ ವಿಹಾರಕ್ಕೆ ವಿಘ್ನವನ್ನು ಮಾಡಿರುವುದರಿಂದ ದುಃಖಿಯಾಗು ಎಂದು ಈಶ್ವರನು ಶಾಪವನ್ನು ಕೊಡಲು, ಮರೀಚಿ ಮುನಿಯು ಈಶ್ವರನನ್ನು ಪ್ರಾರ್ಥಿಸಿದನು. ಅದರಿಂದ ಪ್ರೀತನಾದ ಭವನು ವರಗಳು ಬೇಕಾದರೆ ಬೇಡಿಕೋ ಎಂದನು.

ಶಾಪಾದ್ಭವತು ಮುಕ್ತಿರ್ಮೇ ಮರೀಚಿಃ ಪ್ರಾಹ ಶಂಕರಂ ।
ಭವೇದ್ಗಯಾಯಾಂ ಮುಕ್ತಿಸ್ತೇ ಶಿವೋಕ್ತಃ ಪ್ರಯಯೌ ಗಯಾಂ || ೪೭ ||

ಶಿಲಾಸ್ಥಿತಸ್ತಪಸ್ತೇಪೇ ಸರ್ವೇಷಾಂ ದುಷ್ಕರಂ ಚ ಯತ್ ।
ಮರೀಚಿರೀಶ್ವರಾಚ್ಛಪ್ತಃ ಕೃಷ್ಣತ್ವಮಗಮತ್ಪುರಾ || ೪೮ ||

ತಪಸಾ ದಾರುಣೇನೇಹ ಸ ವಿಪ್ರಃ ಶುಕ್ಲತಾಂ ಗತಃ ।
ಹರಿರೂಚೇ ಮರೀಚಿಂ ಚ ವರಂ ವೃಣುಹಿ ಪುತ್ರಕ || ೪೯ ||

ಕಿಮಲಭ್ಯಂ ತ್ವಯಿ ತುಷ್ಟೇ ಮರೀಚಿಃ ಪ್ರಾಹ ಮಾಧವಂ ।
ಹರಶಾಪಾದ್ವಿಮುಕ್ತೋಽಹಂ ಶಿಲಾ ಭವತು ಪಾವನೀ || ೫೦ ||

---

೪೭. ಆಗ ಮರೀಚಿಯು, ಈಶನೇ ನಿನ್ನ ಶಾಪದಿಂದ ನಾನು ಮುಕ್ತನಾಗಬೇಕೆಂದು ಈಶ್ವರನನ್ನು ಬೇಡಿದನು. ಆಗ ಈಶನು ಎಲೈ ಮರೀಚಿಯೇ, ನೀನು ಗಯಾಕ್ಷೇತ್ರಕ್ಕೆ ಹೋಗಿ ಸ್ನಾನಾದಿಗಳನ್ನು ಮಾಡಿದರೆ ಶಾಪಮೋಚನೆಯಾಗುವುದೆಂದು ಹೇಳಿದನು. ಅದರಂತೆ ಮರೀಚಿಯು ಗಯೆಗೆ ಹೋದನು.

೪೮. ತರುವಾಯ ಮರೀಚಿಮುನಿಯು ಗಯಾಕ್ಷೇತ್ರದಲ್ಲಿರುವ ಶಿಲೆಯಲ್ಲಿ ಘೋರವೂ ಇತರರಿಂದ ಮಾಡಲಶಕ್ಯವೂ, ಅತಿಭಯಂಕರವೂ, ಆದ ತಪಸ್ಸನ್ನು ಮಾಡಿ ಮುಕ್ತಿಯನ್ನು ಪಡೆದನು.

೪೯. ಮರೀಚಿಮುನಿಯು ಅತಿಕಠಿಣವಾದ ತಪಸ್ಸನ್ನು ಮಾಡಿ ಕೃಶನೂ ಶುಭ್ರರೂಪನೂ ಆದನು. ಆಗ ಶ್ರೀಹರಿಯು ಎಲೈ ಪ್ರಿಯಕುಮಾರನಾದ ಮರೀಚಿಯೇ ವರವನ್ನು ಕೊಡುವೆನು ಬೇಡಿಕೋ ಎಂದು ಹೇಳಿದನು.

೫೦. ಎಲೈ ಸ್ವಾಮಿಯಾದ ಮಾಧವನೇ ನೀನು ಪ್ರೀತನಾದರೆ ಲೋಕಗಳಲ್ಲಿ ದುರ್ಲಭವಾದುದು ಯಾವುದಿರುತ್ತದೆ. ನಾನು ಶಿವನ ಶಾಪದಿಂದ ಮುಕ್ತನಾದೆನು ಈ ಶಿಲೆಯೂ ಸಹ ಪವಿತ್ರವಾಗಲೆಂದನು.

ಪಿತೃಮುಕ್ತಿಕರೀ ಚ ಸ್ಯಾತ್ತಥೇತ್ಯುಕ್ತ್ವಾ ದಿವಂ ಗತಃ ।
ದಿವೌಕಸಾಂ ಪುಷ್ಕರಿಣೀಂ ಸಮಾಸಾದ್ಯ ನರಃ ಶುಚಿಃ ॥ ೫೧ ॥

ಯತ್ರ ದತ್ತಂ ಪಿತೃಭ್ಯಸ್ತು ಭವತ್ಯಕ್ಷಯಮಿತ್ಯುತ ।
ತತ್ರ ಸ್ನಾತೋ ದಿವಂ ಯಾತಿ ಸ್ವಶರೀರೇಣ ಮಾನವಾಃ ॥ ೫೨ ॥

ಪಾಪ್ಮಾನಂ ಪ್ರಜಹಾತ್ಯೇಷಃ ಜೀರ್ಣತ್ವಚಮಿವೋರಗಃ ।
ತತ್ಪಂಕಜವನಂ ಪುಣ್ಯಂ ಪುಣ್ಯಕೃದ್ಭಿರ್ನಿಷೇವಿತಂ ॥ ೫೩ ॥

ಪಾಂಡುಶಿಲಾ ವೈ ತತ್ರಾಸ್ತೇ ಶ್ರಾದ್ಧಂ ಯತ್ರಾಕ್ಷಯಂ ಭವೇತ್ ।
ಯುಧಿಷ್ಠಿರಸ್ತು ತಸ್ಯಾಂ ಹಿ ಶ್ರಾದ್ಧಂ ಕರ್ತುಂ ಯಯೌ ಮುನೇ ॥ ೫೪ ॥

ತತ್ರ ಕಾಲೇ ಪಾಂಡುನೋಕ್ತಂ ಮದ್ಧಸ್ತೇ ದೇಹಿ ಪಿಂಡಕಂ ।
ಹಸ್ತಂ ತ್ಯಕ್ತ್ವಾ ಶಿಲಾಯಾಂ ಚ ಪಿಂಡದಾನಂ ಚಕಾರ ಸಃ ॥ ೫೫ ॥

---

೫೧-೫೨. ಈ ಶಿಲೆಯು ಪಿತೃಗಳಿಗೆ ಮುಕ್ತಿದಾಯಕವಾಗಲೆಂದು ಬೇಡಿ ಸ್ವರ್ಗಲೋಕಕ್ಕೆ ಹೋದನು. ಪುರುಷನು ದೇವತೆಗಳ ಪುಷ್ಕರಿಣಿಯನ್ನು ಹೊಂದಿ ಪಿತೃಗಳಿಗೆ ಕೊಟ್ಟ ದಾನಾದಿಗಳು ಅಕ್ಷಯಫಲಪ್ರದವಾಗುವುವು. ಆ ದೇವ ಪುಷ್ಕರಿಣಿಯಲ್ಲಿ ಸ್ನಾನಾದಿಗಳನ್ನು ಮಾಡಿದ ಪುರುಷನು ಸಶರೀರನಾಗಿ ಸ್ವರ್ಗಕ್ಕೆ ಹೋಗುವನು.

೫೩. ಮತ್ತು ಸರ್ಪವು ಜೀರ್ಣವಾದ ಪರೆಯನ್ನು ಬಿಡುವಂತೆ ಸಕಲ ಪಾಪಗಳಿಂದ ಮುಕ್ತನಾಗುವನು. ಪುಣ್ಯಪುರುಷರಿಂದ ಸೇವ್ಯವಾದ ಆ ಕಮಲವನವು ಅತ್ಯಂತ ಪುಣ್ಯಪ್ರದವಾಗಿದೆ.

೫೪. ಆ ಕಮಲವನದಲ್ಲಿ ಪಾಂಡುಶಿಲೆಯು ಇರುವುದು. ಅದರಲ್ಲಿ ಶ್ರಾದ್ಧವನ್ನು ಮಾಡಿದರೆ ಅಕ್ಷಯಫಲಪ್ರಾಪ್ತಿಯಾಗುವುದು. ಪೂರ್ವದಲ್ಲಿ ಧರ್ಮರಾಯನು ಅದರಲ್ಲಿ ಶ್ರಾದ್ಧವನ್ನು ಮಾಡಲು ಅಲ್ಲಿಗೆ ಹೋದನು

೫೫. ಅಲ್ಲಿ ಯುಧಿಷ್ಠಿರನು ಪಿಂಡದಾನವನ್ನು ಮಾಡಿದಾಗ ಪಾಂಡುರಾಯನು ನನ್ನ ಹಸ್ತದಲ್ಲಿ ಪಿಂಡವನ್ನು ಕೊಡೆಂದು ಕೇಳಿದನು. ಆಗ ಧರ್ಮರಾಯನು ಪಿಂಡವನ್ನು ಕೈಯಲ್ಲಿ ಕೊಡದೇ ಆ ಶಿಲೆಯಲ್ಲಿಯೇ ಪಿಂಡದಾನವನ್ನು ಮಾಡಿದನು.

ಲಾಶಿಯೋಂ ಪಿಂಡದಾನೇನ ಪ್ರಹೃಷ್ಟೋ ವ್ಯಾಸನಂದನಃ ।
ವರಂ ದದೌ ಸ್ವಪುತ್ರಾಯ ರಾಜ್ಯಂ ಕುರು ಮಹೀತಲೇ ॥ ೫೬ ॥

ಅಕಂಟಕಂತು ಸಂಪೂರ್ಣಂ ತ್ವಂ ಮೇ ತ್ರಾತ ಹಿ ಪುತ್ರಕ ।
ಸ್ವರ್ಗಂ ವ್ರಜ ಶರೀರೇಣ ಭ್ರಾತೃಭಿಃ ಪರಿವಾರಿತಃ ॥ ೫೭ ॥

ದೃಷ್ಟಿಮಾತ್ರೇಣ ಸಂಪೂತಾನ್ನರಕಸ್ಥಾ ದಿವಂ ನಯ ।
ಇತ್ಯುಕ್ತ್ವಾ ಪ್ರಯಯೌ ಪಾಂಡುಃ ಶಾಶ್ವತಂ ಪದಮವ್ಯಯಂ ॥ ೫೮ ॥

ಉದ್ಭಿಜ್ಜಾಃ ಸ್ವೇದಜಾ ವಾಪಿ ಹ್ಯಂಡಜಾ ಯೇ ಜರಾಯುಜಾಃ ।
ಮಧುಸ್ರವಾಂ ಸಮಾಸಾದ್ಯ ಮೃತಾಃ ಸ್ವರ್ಗಪುರಂ ಯಯುಃ ॥ ೫೯ ॥

---

೫೬. ಗಯಾಶಿಲೆಯಲ್ಲಿ ಪಿಂಡದಾನ ಮಾಡಿದ್ದರಿಂದ ಸಂತುಷ್ಟನೂ, ವ್ಯಾಸಪುತ್ರನೂ ಆದ ಪಾಂಡುರಾಯನು ತನ್ನ ಕುಮಾರನಾದ ಧರ್ಮರಾಯನಿಗೆ ನಿಷ್ಕಂಟಕವಾಗಿ ರಾಜ್ಯವಾಳುವಂತೆ ವರವನ್ನು ಕೊಟ್ಟನು

೫೭ ಎಲೈ ಕುಮಾರನೇ, ನೀನು ನನ್ನನ್ನು ಗಯಾಪಿಂಡದಾನದಿಂದ ಉದ್ಧಾರಮಾಡಿರುತ್ತೀಯೆ. ಇದರಿಂದ ನೀನು ಭ್ರಾತೃಗಳಿಂದ ಸಹಿತನಾಗಿ ಬಹುಕಾಲ ರಾಜ್ಯವನ್ನು ಪಾಲಿಸಿ, ಸಶರೀರನಾಗಿ ಇಷ್ಟಮಿತ್ರಪರಿವಾರ ಸಮೇತನಾಗಿ ಸ್ವರ್ಗಕ್ಕೆ ಹೋಗಿ ದಿವ್ಯಸುಖವನ್ನು ಅನುಭವಿಸೆಂದು ವರವನ್ನು ಕೊಟ್ಟನು.

೫೮. ಎಲೈ ಪುತ್ರನೇ, ನೀನು ದರ್ಶನಮಾತ್ರದಿಂದ ಪವಿತ್ರರಾದ ನರಕದಲ್ಲಿದ್ದವರನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗು. ಹೀಗೆ ಪಾಂಡುರಾಯನು ಪುತ್ರನಿಗೆ ವರವನ್ನು ಕೊಟ್ಟು ಶಾಶ್ವತವಾದ ಮುಕ್ತಿಯನ್ನು ಹೊಂದಿದನು.

೫೯. ಮಾತೃಗರ್ಭದಿಂದ ಜನ್ಯರಾದವರು, ಸ್ವೇದದಿಂದ ಉತ್ಪನ್ನವಾದ ಪ್ರಾಣಿಗಳು, ಅಂಡಜಗಳಾದ ಪಕ್ಷ್ಯಾದಿಗಳು ಇವುಗಳಲ್ಲಿ ಯಾವುದೇ ಆಗಲಿ, ಮಧುಸ್ರವವನ್ನು ಹೊಂದಿದ ಮೇಲೆ ಮೃತರಾದರೆ ಅಮರಾವತೀ ನಗರಿಗೆ ಹೋಗುವರು.

ದಶಾಶ್ವಮೇಧಿಕೇ ಹಂಸತೀರ್ಥೇ ಶ್ರಾದ್ಧಾದ್ದಿವಂ ವ್ರಜೇತ್ ।
ದಶಾಶ್ವಮೇಧಹಂಸೌ ಚ ನತ್ವಾ ಶಿವಪುರಂ ವ್ರಜೇತ್ ॥ ೬೦ ॥

ಭರತಸ್ಯಾಶ್ರಮೇ ಶ್ರಾದ್ಧಾನ್ನಯೇದ್ಬ್ರಹ್ಮಾಲಯಂ ಪಿತೄನ್ ।
ಮತಂಗಸ್ಯ ಪದೇ ಶ್ರಾದ್ಧೀ ಬ್ರಹ್ಮಲೋಕಂ ನಯೇತ್ಪಿತೄನ್ ॥ ೬೧ ॥

ನಿರ್ಮಥ್ಯಾಗ್ನಿಂ ಶಮೀಗರ್ಭೇ ವಿಧಿರ್ವಿಷ್ಣ್ವಾದಿಭಿಃ ಸಹ ।
ಲೇಭೇ ತೀರ್ಥಂತು ಯಜ್ಞಾರ್ಥಂ ತ್ರಿಷು ಲೋಕೇಷು ವಿಶ್ರುತಂ ॥ ೬೨ ॥

ಮುಖಸಂಜ್ಞಂ ತು ತತ್ತೀರ್ಥಂ ಪಿತೄಣಾಂ ಮುಕ್ತಿದಾಯಕಂ ।
ಸ್ನಾತ್ವಾ ಚ ತರ್ಪಣಂ ಕೃತ್ವಾ ಪಿಂಡದೋ ಮುಕ್ತಿಮಾಪ್ನುಯಾತ್ ॥ ೬೩ ॥

---

೬೦. ದಶಾಶ್ವಮೇಧದಲ್ಲಿಯೂ, ಅತಿಪವಿತ್ರವಾದ ಹಂಸತೀರ್ಥದಲ್ಲಿಯೂ, ಶ್ರಾದ್ಧವನ್ನು ಮಾಡಿದರೆ ಪಿತೃಗಳು ಸ್ವರ್ಗಕ್ಕೆ ಹೋಗುವರು. ದಶಾಶ್ವಮೇಧ ಹಂಸ ತೀರ್ಥಗಳಿಗೆ ನಮಸ್ಕರಿಸಿದರೆ ಕೈಲಾಸಲೋಕವು ದೊರೆಯುವುದು.

೬೧ ಭರತಾಶ್ರಮದಲ್ಲಿ ಶ್ರಾದ್ಧಪಿಂಡದಾನವನ್ನು ಮಾಡಿದರೆ ಪಿತೃಗಳು ಬ್ರಹ್ಮಲೋಕಕ್ಕೆ ಹೋಗುವರು. ಮತಂಗಾಶ್ರಮದಲ್ಲಿ ಶ್ರಾದ್ಧಮಾಡಿದವನು ತನ್ನ ಪಿತೃಗಳಿಗೆ ಸತ್ಯಲೋಕವನ್ನು ಕೊಡಿಸುವನು.

೬೨. ಪೂರ್ವದಲ್ಲಿ ಬ್ರಹ್ಮದೇವನು ವಿಷ್ಣುವೇ ಮೊದಲಾದ ದೇವತೆಗಳ ಸಂಗಡ ಯಾಗವನ್ನು ಮಾಡುವುದಕ್ಕಾಗಿ ಶಮೀವೃಕ್ಷದ ಅರಣಿಯಲ್ಲಿ ಅಗ್ನಿಯನ್ನು ಮಥಿಸಿದನು. ಯಾಗವನ್ನು ಮಾಡಲು ಮಥಿಸಲು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಮುಖನಾಮಕ ತೀರ್ಥವು ಉತ್ಪನ್ನವಾಯಿತು.

೬೩. ಅಂತಹ ಮುಖತೀರ್ಥವು ಮೂರುಲೋಕವಿಖ್ಯಾತವೂ, ಪಿತೃಗಳಿಗೆ ಮುಕ್ತಿಪ್ರದವೂ ಆಗಿದೆ. ಅದರಲ್ಲಿ ಸ್ನಾನವನ್ನು ಮಾಡಿ ಜಪತಪಾದಿಗಳನ್ನು ಶ್ರಾದ್ಧ ಪಿಂಡದಾನವನ್ನು ಮಾಡಿದವನು ಮುಕ್ತನಾಗುವನು.

ಪಿತೄನ್ ಸ್ವರ್ಗಂ ನಯೇನ್ನತ್ವಾ ಸಂಗಮೇಽಂಗಾರಕೇಶ್ವರಮ್ ।
ಗಯಾಕೂಟೇ ಪಿಂಡದಾನಾದಶ್ವಮೇಧಫಲಂ ಲಭೇತ್ ॥ ೬೪ ॥

ಭಸ್ಮಕೂಟೇ ಭಸ್ಮನಾಥಂ ನತ್ವಾ ಚ ತಾರಯೇತ್ಪಿತೄನ್ ।
ತ್ಯಕ್ತಪಾಪೋ ಭವೇನ್ಮುಕ್ತಃ ಸಂಗಮೇ ಸ್ನಾನಮಾಚರೇತ್ ॥ ೬೫ ॥

ಇಷ್ಟಿಂ ಚಕ್ರೇಶ್ವಮೇಧಾಖ್ಯಾಂ ವಸಿಷ್ಠೋ ಮುನಿಸತ್ತಮಃ ।
ಇಷ್ಟಿತೋ ನಿರ್ಗತಃ ಶಂಭುರ್ವರಂ ವೃಣು ವಸಿಷ್ಠಕಂ ॥ ೬೬ ॥

ಪ್ರಾಹೇತಿ ತಂ ವಸಿಷ್ಠೋಽಪಿ ಶಿವ ತುಷ್ಟೋಽಸಿ ಮೇ ಯದಿ ।
ವಸ್ತವ್ಯಂ ಚಾತ್ರ ದೇವೇಶ ತಥೇತ್ಯುಕ್ತ್ವಾ ಶಿವಃ ಸ್ಥಿತಃ ॥ ೬೭ ॥

---

೬೪. ಸಂಗಮಸ್ಥಳದಲ್ಲಿ ಸ್ನಾನಮಾಡಿ ಅಂಗಾರಕೇಶ್ವರನಿಗೆ ನಮಸ್ಕಾರ ಮಾಡಿದರೆ ಪಿತೃಗಳಿಗೆ ಮುಕ್ತಿಯು ಉಂಟಾಗುವುದು. ಗಯಾಕೂಟಕ್ಷೇತ್ರದಲ್ಲಿ ಪಿಂಡದಾನಮಾಡಿದರೆ ಅಶ್ವಮೇಧಯಾಗದ ಫಲವನ್ನು ಹೊಂದುವನು.

೬೫. ಭಸ್ಮಕೂಟದಲ್ಲಿ ಪಿಂಡದಾನಮಾಡಿ ಭಸ್ಮನಾಥನಿಗೆ ನಮಸ್ಕಾರ ಮಾಡಿದರೆ ಪಿತೃಗಳನ್ನು ಉದ್ಧರಿಸುವನು. ಸಂಗಮಸ್ಥಳದಲ್ಲಿ ಸ್ನಾನವನ್ನು ಮಾಡಿದರೆ ಪಾಪಗಳಿಂದ ಮುಕ್ತನಾಗಿ ಮೋಕ್ಷವನ್ನು ಹೊಂದುವನು.

೬೬. ಈ ಸಂಗಮದಲ್ಲಿ ಮುನೀಶ್ವರನಾದ ವಸಿಷ್ಠನು ಅಶ್ವಮೇಧವೆಂಬ ಯಾಗವನ್ನು ಮಾಡಿದನು. ಆಗ ಪ್ರೀತನಾದ ಪರಮೇಶ್ವರನು ಯಜ್ಞದಲ್ಲಿ ಆವಿರ್ಭವಿಸಿ ಎಲೈ ಮುನೀಶ್ವರನೇ, ವರವನ್ನು ಕೊಡುವೆನು ಬೇಡಿಕೊಳ್ಳೆಂದು ಹೇಳಿದನು.

೬೭. ಆಗ ವಸಿಷ್ಠಮುನಿಯು ಎಲೈ ಪರಮೇಶ್ವರನೇ, ನೀನು ನಿಜವಾಗಿಯೂ ಪ್ರೀತನಾದರೆ ನೀನು ಈ ಕ್ಷೇತ್ರಲ್ಲಿ ಸ್ಥಿರವಾಗಿ ವಾಸಿಸಬೇಕೆಂದು ಬೇಡಿದನು. ಆಗ ಈಶನು ಹಾಗೆಯೇ ಆಗಲೆಂದು ಹೇಳಿ ಅಲ್ಲಿಯೇ ಸ್ಥಿರವಾಗಿ ನಿಂತನು.

ಪಿಂಡದೋ ಧೇನುಕಾರಣ್ಯೇ ಕಾಮಧೇನುಪದೇಷು ಚ ।
ಸ್ನಾತ್ವಾ ನತ್ವಾಥ ಸಂಪೂಜ್ಯ ಬ್ರಹ್ಮಲೋಕಂ ನಯೇತ್ಪಿತೄನ್ ॥ ೬೮ ॥

ಕರ್ದಮಾಲೇ ಗಯಾನಾಭೌ ಮುಂಡಪೃಷ್ಠಸಮೀಪತಃ ।
ಸ್ನಾತ್ವಾ ಶ್ರಾದ್ಧಾದಿಕಂ ಕೃತ್ವಾ ಪಿತೄಣಾಮನೃಣೋ ಭವೇತ್ ॥ ೬೯ ॥

ಫಲ್ಗುಚಂಡೀಶ್ಮಶಾನಾಕ್ಷೀ ಮಂಗಲಾದ್ಯಾಃ ಸಮರ್ಚಯೇತ್ ।
ಗಯಾಯಾಂ ಚ ವೃಷೋತ್ಸರ್ಗಾತ್ತ್ರಿಃಸಪ್ತಕುಲಮುದ್ಧರೇತ್ ॥ ೭೦ ॥

ಯತ್ರ ತತ್ರ ಸ್ಥಿತಾ ದೇವಾ ಋಷಯೋಽಪಿ ಜಿತೇಂದ್ರಿಯಾಃ ।
ಆದ್ಯಂ ಗದಾಧರಂ ಧ್ಯಾಯೇಚ್ಛ್ರಾದ್ಧಪಿಂಡಾದಿದಾನತಃ ॥ ೭೧ ॥

---

೬೮. ಧೇನುಕಾರಣ್ಯದಲ್ಲಿಯೂ. ಕಾಮಧೇನು ಪದಗಳಲ್ಲಿಯೂ, ಸ್ನಾನವನ್ನು ಮಾಡಿ ವಂದನೆ, ಪೂಜೆ ಮೊದಲಾದುವುಗಳನ್ನು ಮಾಡಿದರೆ, ಅವನು ಪಿತೃಗಳಿಗೆ ಬ್ರಹ್ಮಲೋಕವನ್ನು ಕೊಡಿಸುವನು.

೬೯. ಕರ್ದಮಾಲೆಯಲ್ಲಿಯೂ ಗಯಾನಾಭಿಯಲ್ಲಿಯೂ ಮುಂಡಪೃಷ್ಠದ ಸಮೀಪದಲ್ಲಿಯೂ ಸ್ನಾನವನ್ನು ಮಾಡಿ ಶ್ರಾದ್ಧಾದಿಗಳನ್ನು ಮಾಡಿದರೆ ಪಿತೃಗಳ ಋಣದಿಂದ ಮುಕ್ತರಾಗುವರು.

೭೦. ಫಲ್ಗು. ಚಂಡೀ, ಸ್ಮಶಾನಾಕ್ಷೀ, ಮಂಗಳೆ ಇವರೇ ಮೊದಲಾದವರನ್ನು ಅರ್ಚಿಸುವುದರಿಂದಲೂ ಗಯಾಕ್ಷೇತ್ರದಲ್ಲಿ ವೃಷೋತ್ಸರ್ಗ ಮಾಡುವುದರಿಂದಲೂ, ಇಪ್ಪತ್ತೊಂದು ವಂಶದವರು ಉದ್ಧೃತರಾಗಿ ಮುಕ್ತರಾಗುವರು.

೭೧. ಯಾವಯಾವ ಕ್ಷೇತ್ರಗಳಲ್ಲಿ ಜಿತೇಂದ್ರಿಯರಾದ ಮಹರ್ಷಿಗಳೂ, ಮತ್ತು ದೇವತೆಗಳೂ, ವಾಸಮಾಡುವರೋ ಅವರೆಲ್ಲರೂ ಈ ಗಯಾ ಕ್ಷೇತ್ರದಲ್ಲಿ ಸದಾಕಾಲದಲ್ಲಿಯೂ ಸನ್ನಿಹಿತರಾಗಿರುವರು. ಯಾವ ಪುರುಷನು ಆದಿ ಗದಾಧರಸ್ವಾಮಿಯನ್ನು ಧ್ಯಾನಮಾಡಿ ಶ್ರಾದ್ಧವನ್ನೂ ಪಿಂಡದಾನವನ್ನೂ, ಮಾಡುತ್ತಾನೋ ಅವನು ತನ್ನ ನೂರಾರು ಕುಲದವರನ್ನು ಉದ್ಧರಿಸಿ ಪಿತೃಗಳನ್ನು ಬ್ರಹ್ಮಲೋಕಕ್ಕೆ ಹೊಂದಿಸುವನು (ಅವನ ಪಿತೃಗಳು ಬ್ರಹ್ಮಲೋಕಕ್ಕೆ ಹೋಗುವರು.)

ಕುಲಾನಾಂ ಶತಮುದ್ಧೃತ್ಯ ಬ್ರಹ್ಮಲೋಕಂ ನಯೇತ್ಪಿತೄನ್ ।
ಗಯಾ ಗಯೋ ಗಯಾದಿತ್ಯೋ ಗಾಯತ್ರೀ ಚ ಗದಾಧರಃ ॥ ೭೨ ॥

ಗಯಾ ಗಯಾಸುರಶ್ಚೈವ ಷಡ್ಗಯಾ ಮುಕ್ತಿದಾಯಕಾಃ ।
ಗಯಾಖ್ಯಾನಮಿದಂ ಪುಣ್ಯಂ ಯಃ ಪಠೇತ್ಸತತಂ ನರಃ ॥ ೭೩ ॥

ಶೃಣುಯಾಚ್ಛ್ರದ್ಧಯಾ ಯಸ್ತು ಸ ಯಾತಿ ಪರಮಾಂ ಗತಿಂ ।
ಪಾಠಯೇದ್ವಾ ಗಯಾಖ್ಯಾನಂ ವಿಪ್ರೇಭ್ಯಃ ಪುಣ್ಯಕೃನ್ನರಃ ॥ ೭೪ ॥

ಗಯಾಶ್ರಾದ್ಧಂ ಕೃತಂ ತೇನ ಕೃತಂ ತೇನ ಸುನಿಶ್ಚಿತಂ ।
ಗಯಾಯಾ ಮಹಿಮಾನಂ ಚ ಹ್ಯಭ್ಯಸೇದ್ಯಃ ಸಮಾಹಿತಃ ॥ ೭೫ ॥

---

೭೨-೭೪. ಗಯಾಕ್ಷೇತ್ರ, ಗಯಾಸುರ, ಗಯಾದಿತ್ಯ, ಗಾಯತ್ರೀ, ಗದಾಧರ, (ಗಯಾಶಿಲಾ) ಗಯಾರಾಜ ಈ ಆರು ಗಯೆಗಳೂ ಮುಕ್ತಿದಾಯಕಗಳಾಗಿವೆ. ಯಾವ ಪುರುಷನು ಗಯಾಖ್ಯಾನವನ್ನು ಸರ್ವದಾ ಪಠಿಸುತ್ತಾನೆಯೋ, ಶ್ರದ್ಧೆಯಿಂದ ಕೇಳುತ್ತಾನೋ ಅವನು ಪರಮ ಪದವಿಯನ್ನು ಹೊಂದುವನು. ಯಾವನು ಗಯಾ ಪುರಾಣವನ್ನು ಶಿಷ್ಯರಿಗೆ ಉಪದೇಶಮಾಡುವನೋ, ಅವನೇ ಪುಣ್ಯಪುರುಷನು ಅವನು ಉತ್ತಮಗತಿಯನ್ನು ಪಡೆಯುವನು.

೭೫. ಯಾವ ಪುರುಷನು ಗಯಾಶ್ರಾದ್ಧವನ್ನು ಮಾಡುವನೋ ಅವನು ತನ್ನ ಸಮಸ್ತವಾದ ಕರ್ತವ್ಯಗಳನ್ನೂ ನ್ಯಾಯವಾಗಿಯೂ ಮಾಡಿದಂತೆ ಆಗುವುದು. ಯಾವನು ಗಯಾಮಾಹಾತ್ಮ್ಯಗಳನ್ನು ಸಾವಧಾನಚಿತ್ತದಿಂದ ಅಭ್ಯಾಸವನ್ನು ಮಾಡುವನೋ, ಎಲೈ ನಾರದಮುನಿಯೇ, ಅವನು ರಾಜಸೂಯಯಾಗವನ್ನು ಮಾಡಿದ ಸಂಪೂರ್ಣ ಫಲವನ್ನು ಪಡೆಯುವನು. ಇದರಲ್ಲಿ ಸಂಶಯವಿಲ್ಲ ವೆಂದನು.

ತೇನೇಷ್ಟಂ ರಾಜಸೂಯೇನ ಅಶ್ವಮೇಧೇನ ನಾರದ ।
ಲಿಖೇದ್ವಾ ಲೇಖಯೇದ್ವಾಪಿ ಪೂಜಯೇದ್ವಾಪಿ ಪುಸ್ತಕಂ ॥ ೭೬ ॥

ತಸ್ಯ ಗೃಹೇ ಸ್ಥಿರಾ ಲಕ್ಷ್ಮೀಃ ಸುಪ್ರಸನ್ನಾ ಭವಿಷ್ಯತಿ ।
ಉಪಾಖ್ಯಾನಮಿದಂ ಪುಣ್ಯಂ ಗೃಹೇ ತಿಷ್ಠತಿ ಪುಸ್ತಕಂ ॥ ೭೭ ॥

ಸರ್ಪಾಗ್ನಿಚೌರಜನಿತಂ ಭಯಂ ತತ್ರ ನ ವಿದ್ಯತೇ ।
ಶ್ರಾದ್ಧಕಾಲೇ ಪಠೇದ್ಯಸ್ತು ಗಯಾಮಾಹಾತ್ಮ್ಯಮುತ್ತಮಂ ॥ ೭೮ ॥

ವಿಧಿಹೀನಂ ತು ತತ್ಸರ್ವಂ ಪಿತೄಣಾಂತು ಗಯಾಸಮಂ ।
ಯಾನಿ ತೀರ್ಥಾನಿ ತ್ರೈಲೋಕ್ಯೇ ತಾನಿ ದೃಷ್ಟಾನಿ ತತ್ರ ವೈ ॥
ಯೇನ ಜ್ಞಾತಂ ಗಯಾಖ್ಯಾನಂ ಶ್ರುತಂ ವಾ ಪಠಿತಂ ಮುನೇ ॥ ೭೯ ॥

---

೭೬. ಈ ವಾಯುಮಹಾಪುರಾಣವನ್ನು ಯಾವನು ಬರೆಯುವನೋ ಅಥವಾ ಮತ್ತೊಬ್ಬರಿಂದ ಬರೆಸುವನೋ ಮತ್ತು ಭಕ್ತಿಯಿಂದ ಪೂಜಿಸುವನೋ ಅವರ ಗೃಹಗಳಲ್ಲಿ ಮಹಾಲಕ್ಷ್ಮಿಯು ಪ್ರಸನ್ನಳಾಗಿಯೂ, ಸನ್ನಿಹಿತಳಾಗಿಯೂ ಸದಾ ವಾಸಿಸುವಳು.

೭೭-೭೮. ಈ ವಾಯುಮಹಾಪುರಾಣಪುಸ್ತಕವು ಯಾರ ಮನೆಯಲ್ಲಿ ಇರುವುದೋ ಅವರ ಮನೆಯವರಿಗೆ ಯಾವಾಗಲೂ ಸರ್ಪ, ಅಗ್ನಿ, ಚೋರ, ಭೂತ, ಪ್ರೇತ, ಪಿಶಾಚ ಇವುಗಳಿಂದ ಬಾಧೆಗಳು ಎಂದಿಗೂ ಸಂಭವಿಸುವುದಿಲ್ಲ. ಯಾವನು ಶ್ರಾದ್ಧಕಾಲದಲ್ಲಿ ಉತ್ತಮವಾದ ಗಯಾಮಾಹಾತ್ಮ್ಯವನ್ನು ಪಠನಮಾಡುವನೋ ಅವನು ಶ್ರಾದ್ಧಮಾಡಿದ ಸಂಪೂರ್ಣಫಲವನ್ನು ಪಡೆಯುವನು. ಪಿತೃಗಳೂ ಮುಕ್ತರಾಗುವರು.

೭೯. ಅದೃಷ್ಟಹೀನರಾದ ಪುರುಷರಿಗೆ ಗಯಾಕ್ಷೇತ್ರವು ದೊರೆಯುವುದಿಲ್ಲ. ಮತ್ತು ಪಿತೃಗಳನ್ನು ಉದ್ಧರಿಸುವುದರಲ್ಲಿ ಇದಕ್ಕೆ ಸಮವಾದ ಬೇರೊಂದು ಕ್ಷೇತ್ರವು ಮೂರುಲೋಕಗಳಲ್ಲಿಯೂ ಇಲ್ಲ. ಮೂರುಲೋಕಗಳಲ್ಲಿ ಯಾವ ಯಾವ ತೀರ್ಥಗಳಿರುವುವೋ ಅವುಗಳೆಲ್ಲಾ ಈ ಗಯಾಕ್ಷೇತ್ರದಲ್ಲಿ ಸರ್ವದಾ ಸನ್ನಿಹಿತವಾಗಿರುತ್ತವೆ. ಯಾವನು ಗಯಾಖ್ಯಾನವನ್ನು ಕೇಳುವನೋ ಅವನು ಸರ್ವಶಾಸ್ತ್ರಶ್ರುತಿಸ್ಮೃತ್ಯಾದಿಗಳನ್ನು ಶ್ರವಣಮಾಡಿದ ಮಹಾಫಲವನ್ನು ಪಡೆಯುವನು. ಇದರಲ್ಲಿ ಸಂದೇಹವಿಲ್ಲವೆಂದು ಸನತ್ಕುಮಾರನು ನಾರದನಿಗೆ ಹೇಳಿದನು.

॥ ಸೂತ ಉವಾಚ ॥

ಸನತ್ಕುಮಾರೋ ಮುನಿಪುಂಗವಾಯ
ಪುಣ್ಯಾಂ ಕಥಾಂಚಾಥ ನಿವೇದ್ಯ ಭಕ್ತ್ಯಾ ।
ಸ್ವಮಾಶ್ರಮಂ ಪುಣ್ಯವನೈರುಪೇತಂ
ವಿಸೃಜ್ಯ ಸಂಗೀತಗುರುಂ ಜಗಾಮ ॥ ೮೦ ॥

ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ " ಗಯಾಮಾಹಾತ್ಮ್ಯಂ "
ನಾಮ ಪಂಚಾಶತ್ತಮೋಽಧ್ಯಾಯಃ

॥ ಸಮಾಪ್ತಮಿದಂ ವಾಯುಪುರಾಣಂ ॥

॥ ಸಂಪೂರ್ಣಂ ॥

---

೮೦. ಸೂತಮುನಿಯು ಹೇಳಿದನು :—ಈರೀತಿಯಾಗಿ ಮಹಾನುಭಾವರಾದ ಸನತ್ಕುಮಾರರು, ಮಹಾತ್ಮರೂ, ಮುನೀಶ್ವರರೂ ಆದ ನಾರದಮಹರ್ಷಿಗಳಿಗೆ ಬಹಳ ಪ್ರೀತಿಯಿಂದ ಪುಣ್ಯಪ್ರದವಾದ ಈ ದಿವ್ಯಕಥೆಯನ್ನು ಹೇಳಿ ಆ ನಾರದರನ್ನು ಬೀಳ್ಕೊಟ್ಟು ಪವಿತ್ರವಾದ ವನಗಳಿಂದ ಕೂಡಿರುವ ತಮ್ಮ ಪುಣ್ಯಾಶ್ರಮವನ್ನು ಹೊಂದಿ, ಸುಖವಾಗಿ ವಾಸಮಾಡಿದರೆಂದು ಸೂತಮುನಿಯು ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳಿಗೆ ಹೇಳಿದರೆಂಬಲ್ಲಿಗೆ ಶ್ರೀವಾಯುಮಹಾಪುರಾಣವು ಸಮಾಪ್ತವಾದುದು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಗಯಾಮಹಾತ್ಮ್ಯ "
ವೆಂಬ ಐವತ್ತನೆಯ ಅಧ್ಯಾಯವು ಸಮಾಪ್ತವಾದುದು.

॥ ಶ್ರೀ ವಾಯುಮಹಾಪುರಾಣವು ಸಂಪೂರ್ಣವಾದುದು ॥

॥ ಶ್ರೀ ಕೃಷ್ಣಾರ್ಪಣಮಸ್ತು ॥



## ಐವತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿಯೂ, ಗಯಾಮಹಿಮೆಯು, ವಿಶೇಷವಾಗಿ ಉಕ್ತವಾಗಿದೆ. ಪೂರ್ವದಲ್ಲಿ ಗಯಾನಾಮಕನಾದ ಒಬ್ಬ ರಾಜನು ಬಹುದಕ್ಷಿಣೆ, ಪರ್ವತಾಕಾರಗಳಾದ ಅನ್ನದ ರಾಶಿಗಳು, ದ್ರವ್ಯಗಳ ರಾಶಿಗಳು ಇವುಗಳಿಂದ ಕೂಡಿ ಬಹು ಸಂಭ್ರಮ ಗಳಿಂದ ಯಾಗವನ್ನು ಮಾಡಿದನು. ನಾನಾದೇಶಗಳಿಂದ ಬಂದ ಬ್ರಾಹ್ಮಣರು ತೃಪ್ತರಾಗಿ ಬಹಳವಾಗಿ ರಾಜನನ್ನು ಹೊಗಳಿದರು. ಈ ಯಾಗದಿಂದ ವಿಷ್ಣ್ವಾದಿ ದೇವತೆಗಳು ತೃಪ್ತರಾಗಿ ವರಗಳನ್ನು ಬೇಡಿಕೊಳ್ಳುವಂತೆ ರಾಜನಿಗೆ ಹೇಳಿದನು. ಆಗ ಮಹಾರಾಜನು ಪೂರ್ವದಲ್ಲಿ ಬ್ರಹ್ಮನಿಂದ ಶಪ್ತರಾದ ಬ್ರಾಹ್ಮಣರು ಪವಿತ್ರ ರಾಗಿಯೂ, ಯಾಗಾರ್ಹರಾಗಿಯೂ ಆಗಲೆಂದು ಬೇಡಿಕೊಂಡನು. ಅದರಂತೆ ಬ್ರಹ್ಮಾದಿದೇವತೆಗಳು ವರವನ್ನು ಕೊಟ್ಟರು. ಆಗ ಕಶ್ಯಪಾದಿ ಚತುರ್ದಶಮುನಿಗಳೂ ಅವರ ವಂಶದವರೂ ಸಹ ಬಹಳ ಪ್ರಖ್ಯಾತರಾದರು.

ಪೂರ್ವಕಾಲದಲ್ಲಿ ವಿಶಾಲನೆಂಬ ರಾಜನು ಸಂತಾನವಿಲ್ಲದೇ ಗಯೆಯಲ್ಲಿ ಶ್ರಾದ್ಧ ಪಿಂಡದಾನಮಾಡಿದ್ದರಿಂದ ಅವನಿಗೆ ಪುತ್ರಸಂತಾನವು ಉಂಟಾಯಿತು. ಮತ್ತು ಅವನು ಪಿಂಡದಾನವನ್ನು ಮಾಡಲು ಯುತ್ನಿಸಿದಾಗ ಅಂತರಿಕ್ಷದಲ್ಲಿ ಮೂವರು ಪುರುಷರು ದೃಷ್ಟಿಗೆ ಗೋಚರರಾದರು. ಅವರನ್ನು ನೋಡಿ ನೀವು ಯಾರೆಂದು ಕೇಳಿದನು. ಅವರು ನಾವು ನಿನ್ನ ತಂದೆ, ತಾತ, ಮುತ್ತಾತರಾಗಿರುತ್ತೇವೆ. ನಾವು ನಮ್ಮ ದುಷ್ಕರ್ಮಗಳಿಂದ ಮಹಾ ನರಕಯಾತನೆಯನ್ನು ಅನುಭವಿಸುತ್ತಿದ್ದೆವು ಎಲೈ ಕುಮಾರನೇ, ನೀನು ಗಯೆಯಲ್ಲಿ ಮಾಡಿದ ಶ್ರಾದ್ಧಪಿಂಡದಾನದಿಂದ ಮುಕ್ತ ರಾಗಿರುವೆವು. ಒಟ್ಟಿಗೂಡಿ ನಿನ್ನ ಬಳಿಗೆ ಬಂದಿರುತ್ತೇವೆಯೆಂದು ಹೇಳಿ ಮುಕ್ತಿ ಯನ್ನು ಹೊಂದಿದರು ಇಂತಹ ಗಯೆಯಲ್ಲಿ ಸಕಲತೀರ್ಥಗಳೂ, ವೈತರಣಿಯೇ ಮೊದಲಾದ ಮಹಾನದಿಗಳೂ, ಸಕಲದೇವತೆಗಳೂ, ಮಹರ್ಷಿಗಳೂ, ಸನ್ನಿಹಿತ ರಾಗಿರುವರು.

ಪೂರ್ವದಲ್ಲಿ ಧರ್ಮರಾಯನು ಪಾಂಡುಶಿಲೆಯಲ್ಲಿ ಪಿಂಡದಾನವನ್ನು ಮಾಡಿ ದಾಗ ಪಾಂಡುಮಹಾರಾಜನು ಪ್ರತ್ಯಕ್ಷನಾಗಿ ಕೈಗಳನ್ನು ನೀಡಲಾಗಿ ಧರ್ಮರಾಯನು ಆ ಕೈಗಳಲ್ಲಿ ಪಿಂಡವನ್ನು ಕೊಡದೇ ಕ್ಷೇತ್ರದಲ್ಲಿಯೇ ಅರ್ಪಿಸಿದನು. ಅದರಿಂದ ಪ್ರೀತನಾದ ಪಾಂಡುರಾಯನು ವರಗಳನ್ನು ಕೊಟ್ಟು ಮುಕ್ತಿಯನ್ನು ಪಡೆದನು.

ಅದರಂತೆ ಭರತಾಶ್ರಮ, ಮತಂಗಾಶ್ರಮ, ಭಸ್ಮಕೂಟ, ಧೇನುಕಾರಣ್ಯ ಇವುಗಳಲ್ಲಿ ಪಿತೃಕ್ರಿಯೆಗಳನ್ನು ಮಾಡಿದರೆ ಮಹಾಫಲವು ಪ್ರಾಪ್ತಿಯಾಗುವುದು. ಗಯಾಕ್ಷೇತ್ರ, ಗಯಾಸುರ, ಗಯಾರಾಜ, ಗಯಾದಿತ್ಯ, ಗಾಯಿತ್ರೀ, ಗದಾಧರ ಈ ಷಡ್ಗಯೆಯಲ್ಲಿ ಶ್ರಾದ್ಧಮಾಡಿದರೆ ಮಹಾಫಲವು ಲಭಿಸುವುದು. ಈ ಗಯಾ ಮಹಾತ್ಮ್ಯಗಳನ್ನು ಜ್ಞಾನಿಗಳಾದ ಸನತ್ಕುಮಾರರು ಮಹಾನುಭಾವರಾದ ನಾರದರಿಗೆ ಹೇಳಿ ತಮ್ಮ ಆಶ್ರಮಕ್ಕೆ ಹೋದರು. ಈ ಗಯಾಮಹಿಮೆಗಳನ್ನು ಯಾರು ಕೇಳುವರೋ ಅವರಿಗೆ ಸಕಲ ಮನೋರಥಗಳೂ ಪೂರ್ಣವಾಗಿ, ಕೊನೆಗೆ ಅವರು ಶಾಶ್ವತವಾದ ಪರಮಪದವಿ ಯನ್ನು ಹೊಂದುವರು.

ಈ ಶ್ರೀಮದ್ವಾಯುಮಹಾಪುರಾಣವನ್ನು ಯಾವನು ಬರೆಯುವನೋ, ಯಾವನು ಶ್ರವಣ ಮನನ ಪಠನಾದಿಗಳನ್ನು ಮಾಡುವನೋ ಯಾವನು ಗೃಹದಲ್ಲಿ ಈ ಮಹಾಪುರಾಣದ ಪುಸ್ತಕವಿರುತ್ತದೆಯೋ ಅವರಿಗೆ ಸರ್ಪ, ಅಗ್ನಿ, ಜಲ, ಚೋರ, ಭೂತ, ಪ್ರೇತ ಪಿಶಾಚಾದಿಗಳಿಂದ ಯಾವವಿಧವಾದ ಭಯವೂ ಉಂಟಾಗುವುದಿಲ್ಲ. ಮತ್ತು ಅವರು ಸಕಲ ವಿಧವಾದ ಪಾಪಗಳಿಂದಲೂ ಮುಕ್ತರಾಗಿ ಸಕಲ ವಿಧಗಳಾದ ಸುಖಗಳನ್ನೂ ಅನುಭವಿಸಿ, ಶಾಶ್ವತವಾದ ಪರಮಪದವಿಯನ್ನು ಪಡೆಯುವರೆಂದು ಸೂತಮುನಿಯು ಮಹರ್ಷಿಗಳಿಗೆ ನಿರೂಪಿಸಿದನು. ಇವೇ ಮೊದಲಾದ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.

ಶ್ರೀಮದ್ವಾಯುಮಹಾಪುರಾಣವು ಸಂಪೂರ್ಣವಾದುದು.

|| ಶ್ರೀಕೃಷ್ಣಾರ್ಪಣಮಸ್ತು ||

ಸಂಪೂರ್ಣಂ.